ರಾಷ್ಟ್ರೀಯ ಜೀವನಚರಿತ್ರೆ ಮಾಲೆ

# ಮಹಾಪಂಡಿತ
# ರಾಹುಲ ಸಾಂಕೃತ್ಯಾಯನ

(ಜೀವನ ಮತ್ತು ಕೃತಿತ್ವ)

**ಗುಣಾಕರ ಮುಳೇ**

ಅನುವಾದ

**ವೈದೇಹಿ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಅನುಕ್ರಮಣಿಕೆ

# ಮುನ್ನುಡಿ

ರಾಹುಲಜೀ ಅವರಂತಹ ವಿರಾಟ ವ್ಯಕ್ತಿತ್ವವನ್ನು, ಅವರ ಜೀವನ ಮತ್ತು ಕೃತಿತ್ವವನ್ನು ಸರ್ವಾಂಗೀಣವಾಗಿ ಪ್ರಸ್ತುತಪಡಿಸುವುದು ಸುಲಭವಲ್ಲ–ಅವರ ಅತಿ ನಿಕಟವರ್ತಿಗಳಿಗೂ ಕೂಡ. ನಾನು ರಾಹುಲಜೀಯವರ ನಿಕಟವರ್ತಿಯಲ್ಲ. ಅವರನ್ನು ಸಮೀಪದಿಂದ ನೋಡುವ ಅರಿಯುವ ಸಂದರ್ಭ ನನಗೆ ಒದಗಿದ್ದು ನಾಲ್ಕೈದು ಸಲ ಮಾತ್ರ. ಆದರೆ ಅವರನ್ನು ಸಮಗ್ರವಾಗಿ ಗುರುತಿಸಿ ತಿಳಿದುಕೊಳ್ಳಲು ನನಗೆ ದೊರೆತಷ್ಟು ಸಾಧನ ಹಾಗೂ ಅವಕಾಶಗಳು ನನ್ನ ಪೀಳಿಗೆಯ ಕೆಲವರಿಗಷ್ಟೇ ದೊರೆತಿವೆ ಎಂದು ಖಂಡಿತವಾಗಿ ಹೇಳಬಲ್ಲೆ.

1949ರ ಬೇಸಗೆಯ ಒಂದು ದಿನ, ಆಗಿನ್ನೂ ನಾನು ಹದಿನಾಲ್ಕು ವರ್ಷದ ಹುಡುಗ. ನಮ್ಮ ಹಳ್ಳಿಯಿಂದ ವರ್ಧಾಕ್ಕೆ ಹೋದಾಗ ಮೊದಲ ದಿನವೇ ನನಗೆ ಒಟ್ಟಿಗೇ ಮೂವರು ವಿಭೂತಿಗಳ ದರ್ಶನವಾಯಿತು. ಇಬ್ಬರನ್ನು ಭಾವಚಿತ್ರದ ರೂಪದಲ್ಲಿ ನೋಡಿದೆ. ಒಬ್ಬರನ್ನು ಪ್ರತ್ಯಕ್ಷವಾಗಿ ನೋಡಿದೆ. ನಾನು ಭಿಕ್ಷು ಆನಂದ ಕೌಸಲ್ಯಾಯನರ ಮುಂದೆ ನಿಂತಿದ್ದೆ. ಅವರ ಎಡಬದಿಯ ಗೋಡೆಯ ಮೇಲೆ ಆಚಾರ್ಯ ಧರ್ಮಾನಂದ ಕೋಸುಂಬೀಯವರ 'ಅಂತ್ಯ ದರ್ಶನ' ಫೋಟೋ ನೇತು ಹಾಕಿದ್ದರು. ಮತ್ತು ಬಲಬದಿಯ ಗೋಡೆಯಲ್ಲಿ ಮಹಾಪಂಡಿತ ರಾಹುಲ ಸಾಂಕೃತ್ಯಾಯನವರ ಫೋಟೋ ಇತ್ತು. ಪ್ರಾಯೋಪವೇಶ ಮಾಡಿ ಕಾಷ್ಠದಂತಾಗಿದ್ದ ಕೌಸಂಬೀಯವರ ಆ ನಿರ್ಜೀವ ಶರೀರ ನನ್ನಲ್ಲಿ ಭಯಾನಕ 'ಮೃತ್ಯುದರ್ಶನ'ದ ಸಂಚಾರ ಮಾಡಿಸಿದರೆ, ಪ್ರಸಿದ್ಧ ಫೋಟೋಗ್ರಾಫರ ಸುನಿಲ್ ಜಾನಾ ಅವರ ಕೆಮೆರಾ ಸೆರೆ ಹಿಡಿದ ರಾಹುಲಜೀ ಅವರ ಆ ಭವ್ಯ ಉತ್ಸಾಹೀ ಕಾಂತಿಯುತ ಚಿತ್ರ 'ಜೀವನ ದರ್ಶನ' ಮಾಡಿಸುತ್ತಿತ್ತು.

ಆ ದಿನದಿಂದಲೇ ನನಗೆ ರಾಹುಲ–ಪಂಥದ ಶಿಕ್ಷಣ ಆರಂಭವಾಯಿತು. ಅಲ್ಲಿಂದ ಸುಮಾರು ಎರಡು ವರ್ಷಗಳವರೆಗೆ ಉಪದೇಶ ಅಥವಾ ಶಿಕ್ಷಣದ ನೆಪದಲ್ಲಿ ಜಾತಕದ ಯಾವುದಾದರೂ ಕಥೆ ಅಥವಾ ರಾಹುಲಜೀಯವರ ಜೀವನದ ಏನಾದರೊಂದು ಘಟನೆ ಕೇಳದೆ ಇದ್ದ ದಿನವೇ ಇರಲಿಕ್ಕಿಲ್ಲ. ಪ್ರಾಯಶಃ ಅವತ್ತಿನವರೆಗೆ ಮುದ್ರಣಗೊಂಡ ಅವರ ಎಲ್ಲ ಪುಸ್ತಕಗಳೂ ಅಲ್ಲಿದ್ದುವು. ನಾನವನ್ನು ಓದುತ್ತಾ ಹೋದೆ. ಅವುಗಳನ್ನು ಚೆನ್ನಾಗಿ ಗ್ರಹಿಸಲು ಬೇಕಾದ ಹಿಂದೀ ಭಾಷೆ ಅಥವಾ ವಿವಿಧ ವಿಷಯಗಳಲ್ಲಿ ಇರಬೇಕಾದ ಜ್ಞಾನ ಆಗ ನನ್ನಲ್ಲಿರಲಿಲ್ಲ. ಆದರೆ ಅವರ ಪುಸ್ತಕಗಳು ನನ್ನ ಮನಸ್ಸನ್ನು

ಎಷ್ಟು ಸೆಳೆದಿತ್ತು ಎಂಬುದಕ್ಕೆ ಸಾಕ್ಷಿಯಾಗಿ ಮಾನವ ಸಮಾಜ ಎಂಬ ಪುಸ್ತಕವನ್ನು ಮಡಿಲಲ್ಲಿಟ್ಟುಕೊಂಡು ತೆಗೆಸಿಕೊಂಡ ನನ್ನದೊಂದು ಫೋಟೋ ಈಗಲೂ ನನ್ನ ಬಳಿ ಇದೆ.

ಅದೇ 1949ರ ಡಿಸೆಂಬರ್ ತಿಂಗಳ ಕೊನೆಯ ದಿನಗಳಲ್ಲಿ ರಾಹುಲಜೀ ಅವರನ್ನು ಪ್ರಥಮ ಬಾರಿಗೆ ನೋಡುವ ಸಂದರ್ಭವೂ ಒದಗಿತು. ಮೊದಲು ಹಿಂದೀ ಸಾಹಿತ್ಯ ಸಮ್ಮೇಳನದ ಹೈದರಾಬಾದ್ ಅಧಿವೇಶನದಲ್ಲಿ, ಬಳಿಕ ವರ್ಧಾದಲ್ಲಿ. ಕೊನೆಯ ಬಾರಿಗೆ ನನಾವರನ್ನು ಕಂಡದ್ದು 1957ರಲ್ಲಿ, ಅವರು ಅಲಹಾಬಾದಿಗೆ ಬಂದಿದ್ದಾಗ, ಅವರು ಉಳಿದುಕೊಂಡಿದ್ದ ತನ್ನ ಗಣಿತಜ್ಞ ಮಿತ್ರ ಡಾ.ಬದರಿನಾಥ ಪ್ರಸಾದರ ಮನೆಯಲ್ಲಿ. ನಾನಾಗ ಅಲಹಾಬಾದ್ ವಿಶ್ವವಿದ್ಯಾಲಯದಲ್ಲಿ ಗಣಿತದ ವಿದ್ಯಾರ್ಥಿಯಾಗಿದ್ದೆ. 1951ನೇ ಇಸವಿಯಲ್ಲಾಗಲೇ ನಾನು ಮುಂದಿನ ವಿದ್ಯಾಭ್ಯಾಸಕ್ಕಾಗಿ ಅಲಹಾಬಾದಿಗೆ ಬಂದಿದ್ದೆ. ಅದಕ್ಕೂ ಮುಂಚೆ ನಾಗಾರ್ಜುನರು ವರ್ಧಾಕ್ಕೆ ಬಂದಿದ್ದರು. ನನ್ನನ್ನು ವರ್ಧಾದ ಪುಟ್ಟ ಪ್ರಪಂಚದಿಂದ ಅಲಹಾಬಾದಿನ ದೊಡ್ಡ ಪ್ರಪಂಚಕ್ಕೆ ತಲುಪಿಸುವ ಪಾತ್ರ ವಹಿಸಿದವರು. ಅದು ಹೇಗೇ ಇರಲಿ, ನಾಗಾರ್ಜುನರೇ ಆ ಪಾತ್ರ ನಿರ್ವಹಿಸಿದರು.

ಆನಂದಜೀ ಹೇಳುತ್ತಿದ್ದರು, 1928ರಲ್ಲಿ ಅವರು ವಿದ್ಯಾಲಂಕಾರ ವಿಹಾರ (ಶ್ರೀಲಂಕೆ)ದಲ್ಲಿದ್ದಾಗ ಪ್ರತೀ ಸಂಜೆ ರಾಹುಲಜೀಯವರ ಜೊತೆ ತಿರುಗಾಡಲು ಹೋಗುತ್ತಿದ್ದರಂತೆ. ಆಗ ಇಬ್ಬರಲ್ಲಿಯೂ ಈಶ್ವರ ಮತ್ತು ಆತ್ಮದ ಅಸ್ತಿತ್ವದ ವಿಚಾರವಾಗಿ ಜೋರಾಗಿ ಚರ್ಚೆಯಾಗುತ್ತಿತ್ತಂತೆ. ಆದರೆ ವರ್ಧಾಕ್ಕೆ ಹೋದ ಮೇಲೆ ಅನೀಶ್ವರವಾದಿ, ಅನಾತ್ಮವಾದಿ, ಅಪುನರ್ಜನ್ಮವಾದಿ, ಸಾಮ್ಯವಾದಿ ಹಾಗೂ ಬೌದ್ಧ ಅನುರಾಗಿಯಾಗಲು ನನಗೆ ಹೆಚ್ಚು ಸಮಯ ಬೇಕಾಗಲಿಲ್ಲ. ದ್ವಂದ್ವಾತ್ಮಕ ಭೌತಿಕವಾದ ಮತ್ತು ಪ್ರತೀತ್ಯಸಮುತ್ಪಾದದಂತಹ ಸಿದ್ಧಾಂತ ಆ ಕಾಲದ ನನ್ನ ತಿಳುವಳಿಕೆಗೆ ಮೀರಿದ ಸಂಗತಿಯಾಗಿದ್ದವು.

ನಾನು ಸ್ವಯಂ ರಾಹುಲಜೀಯವರ ಸಮೀಪ ಇದ್ದವನಲ್ಲವಾದರೂ ಅವರ ಹಲವು ಮಂದಿ ನಿಕಟವರ್ತಿಗಳೊಡನೆ ಸಾಕಷ್ಟು ಗಾಢ ಸಂಬಂಧ ಇಟ್ಟುಕೊಂಡಿದ್ದವನು. ಅದರಲ್ಲೂ ಕೆಲವರೊಡನೆ ಬಹಳ ಆತ್ಮೀಯವಾಗಿ ಕೂಡ. ರಾಹುಲಜೀಯವರು ತೀವ್ರ ನಂಟಿರಿಸಿಕೊಂಡಿದ್ದ ಕಾಠ್ಮಂಡೂ, ಕಾಲಿಂಪೋಂಗ ಮತ್ತು ಕೆಲೋನಿಯಾ (ಶ್ರೀಲಂಕೆ)ದಂತಹ ಹತ್ತು ಹಲವಾರು ಸ್ಥಳಗಳನ್ನೂ ನೋಡುವ ಅವಕಾಶ ನನಗೆ ದೊರಕಿತ್ತು. ಆದರೆ ನನಗೆ ಅವರ ವ್ಯಕ್ತಿತ್ವವನ್ನು ಸರಿಯಾಗಿ ಅರಿಯಲು ಸಾಧ್ಯವಾದದ್ದು ಅವರ ನಿಧನದ ನಂತರವೇ; ಅವರು ಹಿಂದೆ ಬಿಟ್ಟು ಹೋದ 'ರಾಹುಲ ಸಂಗ್ರಹಾಲಯ'ದ ಸಾಮಗ್ರಿಗಳನ್ನು ನೋಡಿದ ಹಾಗೂ ಓದಿದ ಬಳಿಕ. 1967ರಲ್ಲಿ ನಾನು ಶ್ರೀಲಂಕೆಗೆ ಹೋಗಿದ್ದಾಗ ಆನಂದಜೀಯವರು ರಾಹುಲರು ತನಗೆ ಬರೆದ (1943ರಿಂದ ನವೆಂಬರ್ 1961ರ ವರೆಗಿನ) ಎಲ್ಲಾ ಪತ್ರಗಳನ್ನೂ ಕೆಲ ಚಿತ್ರಗಳನ್ನೂ ನನಗೊಪ್ಪಿಸಿದ್ದರು.

ಸುಮಾರು ಈ ಎರಡು ದಶಕಗಳಿಂದ ನಾನು ನನ್ನ ಇತರ ಅಧ್ಯಯನ–ಬರವಣಿಗೆಗಳಲ್ಲಿ ಮಗ್ನನಾಗಿದ್ದೆ. ಆದರೆ ರಾಹುಲಜೀಯವರ ಜನ್ಮಶತಾಬ್ಧಿಯ ಸಂದರ್ಭ ಬಂತು. ಮಿತ್ರರ ಹಾಗೂ ಪರಿಚಿತರ ಒತ್ತಾಯದಿಂದ ರಾಹುಲಜೀಯವರ ಜೀವನ ಹಾಗೂ ಕೃತಿತ್ವದ ವಿವಿಧ ಮುಖಗಳ ಮೇಲೆ ಲೇಖನಗಳನ್ನು ಮತ್ತು ಕೊನೆಗೆ ಈ ಪುಸ್ತಕವನ್ನೂ ಬರೆಯಬೇಕಾಯಿತು. ಇದು ಹೇಗಾಗಿದೆಯೋ, ನಿಮ್ಮ ಮುಂದಿದೆ. ಆ ಸ್ವಯಂಭೂ ಮಹಾಪಂಡಿತರ ಜೀವನ ಹಾಗೂ ಕೃತಿತ್ವವನ್ನು ಸಮಗ್ರ ರೂಪದಲ್ಲಿ ಪ್ರಸ್ತುತಪಡಿಸಲು ಯಥಾಸಾಮರ್ಥ್ಯ ಪ್ರಯತ್ನಿಸಿದ್ದೇನೆ ಎಂದಷ್ಟೇ ಹೇಳಬಲ್ಲೆ.

‘ಅಮರಾವತೀ’ ಗುಣಾಕರ ಮುಳೇ
ಸಿ–210, ಪಾಂಡವ ನಗರ
ದೆಹಲಿ–110 092

ರಾಹುಲರ ಗುರುಬಂಧು ಹಾಗೂ ಅನನ್ಯ ಮಿತ್ರ

ಭಧಂತ ಆನಂದ ಕೌಸಲ್ಯಾಯನ

(1905-1988)

ಅವರ ಪುಣ್ಯ ಸ್ಮೃತಿಗೆ

ಸಮರ್ಪಿತ

# ವಿರಾಟ ವ್ಯಕ್ತಿತ್ವ

1937ರ ಮಾತು. ರಾಹುಲರು ಎರಡನೇ ಬಾರಿ ರಷ್ಯಾಕ್ಕೆ ಹೋಗುವ ತಯಾರಿಯಲ್ಲಿದ್ದರು. ಅದಕ್ಕಾಗಿ ಅಲಹಾಬಾದ್ ತಲುಪಿದ್ದರು. ಅಲಹಾಬಾದಿನಲ್ಲಿ ಡಿಸೆಂಬರ್ ಆರನೇ ತಾರೀಕು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳೆದುರು ಅವರ ಭಾಷಣದ ಏರ್ಪಾಟಾಗಿತ್ತು.ವಿಷಯ: 'ನಮ್ಮ ದೌರ್ಬಲ್ಯಗಳು.' ಪಂಡಿತ್ ಜವಾಹರಲಾಲ್ ಅವರ ಅಧ್ಯಕ್ಷತೆ.

ಆ ದಿನಗಳಲ್ಲಿ ರಾಹುಲರು ಬೌದ್ಧ ಭಿಕ್ಷುವಿನ ಕಾಷಾಯ ವಸ್ತ್ರ ಧರಿಸುತ್ತಿದ್ದರು. ಮೂರು ಬಾರಿ ಟಿಬೆಟ್ ಯಾತ್ರೆ, ಇಂಗ್ಲೆಂಡ್ ಮತ್ತು ಯುರೋಪ್ ಸಂಚಾರ, ಜಪಾನ್, ಕೊರಿಯ್ಯಾ, ಮಂಚೂರಿಯಾ, ಸೋವಿಯತ್ ದೇಶ ಪ್ರವಾಸ ಮಾಡಿ ಬಂದಿದ್ದರು. ಇರಾನನ್ನೂ ಸಂದರ್ಶಿಸಿದ್ದರು. ಅಷ್ಟರವರೆಗೆ ಅವರ ಇಪ್ಪತ್ತೈದಕ್ಕೂ ಹೆಚ್ಚು ಪುಸ್ತಕಗಳು ಪ್ರಕಟಗೊಂಡಿದ್ದುವು. ಟಿಬೇಟಿನ ಬೌದ್ಧ ಮಠಗಳಲ್ಲಿ ಮರೆಯಾಗಿ ಹೋದ ಅನೇಕಾನೇಕ ಭಾರತೀಯ ಗ್ರಂಥಗಳನ್ನು ಹುಡುಕಿ ಬೆಳಕಿಗೆ ತಂದಿದ್ದರು. ಹೀಗಾಗಿ ವಿದ್ವಜ್ಜನರಲ್ಲಿ ಅವರ ಬಗ್ಗೆ ಅಪಾರ ಗೌರವವಿತ್ತು.

ತಮ್ಮ ಸಾಮಾನ್ಯ ನಡೆನುಡಿಯಲ್ಲಿ ಅತ್ಯಂತ ಸೌಮ್ಯ ಹಾಗೂ ಸಹೃದಯರಾಗಿದ್ದ ರಾಹುಲರು ತಮ್ಮ ಕೃತಿ, ಲೇಖನ ಹಾಗೂ ಭಾಷಣಗಳಲ್ಲಿ–ವಿಶೇಷತಃ ಆ ದಿನಗಳಲ್ಲಿ ತಮ್ಮ ವಿಚಾರಗಳನ್ನು ಪ್ರಖರವಾಗಿ ಮಂಡಿಸುತ್ತಿದ್ದರು. "ತುಮ್ಹಾರಿ ಕ್ಷಯ್", "ಭಾಗೋ ನಹೀಂ ದುನಿಯಾಂ ಕೋ ಬದಲೋ", "ಘುಮಕ್ಕಡ್ ಶಾಸ್ತ್ರ" ಮುಂತಾದ ಪುಸ್ತಕಗಳು ಈ ವರ್ಗದವು.

ಆ ದಿನ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳೆದುರು ಮಾಡಿದ ಭಾಷಣದಲ್ಲಿ ಅವರು ಪುರಾತನ ಗ್ರಂಥಗಳಲ್ಲೇ ಎಲ್ಲಾ ಜ್ಞಾನ ವಿಜ್ಞಾನವನ್ನು ಶೋಧಿಸಲು ಹೊರಟವರನ್ನು ತರಾಟೆಗೆ ತೆಗೆದುಕೊಂಡರು. "ಹೆಚ್ಚಿನ ಪುರಾತನ ಗ್ರಂಥಗಳಲ್ಲಿ ತುಂಬಿರುವುದು ಶೇಕಡಾ ಎಪ್ಪತ್ತೈದರಷ್ಟು ಅಂಶ ದಡ್ಡ ವಿಚಾರಗಳು. ಅಲ್ಲಲ್ಲಿ ಜಾಣ ಮಾತುಗಳೂ ಇವೆ....."

ರಾಹುಲರ ಭಾಷಣ ಮುಗಿದ ಮೇಲೆ ಅಧ್ಯಕ್ಷ ಸ್ಥಾನದಿಂದ ನೆಹರೂ ಮಾತಾಡಲಾರಂಭಿಸಿದರು: "ಇವತ್ತು ನಾನು ಎರಡು ವಿಚಾರಗಳ ಕುರಿತು ಯೋಚಿಸುತ್ತಿದ್ದೇನೆ. ರಾಹುಲಜೀ ಅಂತಹ ಚಿಂತಕರು ನಮ್ಮ ವಿಶ್ವವಿದ್ಯಾಲಯಗಳಲ್ಲಿ ಏಕೆ ಹುಟ್ಟುವುದಿಲ್ಲ ? ಇನ್ನೊಂದು, ಒಂದು ವೇಳೆ ನನ್ನಂತಹವ ಹೀಗೆಲ್ಲ ಹೇಳಿದ್ದರೆ ಪುರಾತನ ಗ್ರಂಥಗಳ ವಿಚಾರ ನಿನಗೇನು ಗೊತ್ತು ಎನ್ನುತ್ತಿದ್ದಿರಿ. ಆದರೆ ಆ ಗ್ರಂಥಗಳಲ್ಲಿ ಈಜುತ್ತಿರುವವರೇ ಇವತ್ತು ಇದೆಲ್ಲವನ್ನು ಹೇಳುತ್ತಿದ್ದಾನೆ".

ರಾಹುಲರ ಪ್ರಖರ ಭಾಷಣದಿಂದ ಕೆಲವು ವಿದ್ಯಾರ್ಥಿಗಳಂತೂ ಕೆರಳಿರಲೇ ಬೇಕು. ನೆಹರೂ ಭಾಷಣ ಇದಕ್ಕೆ ಆಜ್ಯ ಸುರಿದಂತಾಯಿತು. ಒಬ್ಬ ವಿದ್ಯಾರ್ಥಿ ನುಡಿದೇ ಬಿಟ್ಟ: ಇನ್ನೂ ಈಜುತ್ತಲೇ ಇದ್ದಾರೆ. ಸರಿ ದಡ ಮುಟ್ಟಿಲ್ಲ.

ನೆಹರೂ ತನ್ನ ಪ್ರತ್ಯುತ್ಪನ್ನಮತಿಗಾಗಿ ಪ್ರಸಿದ್ಧರು. ತಟಕ್ಕನೆ ಉತ್ತರಿಸಿದರು: "ಹಾಂ, ಬಾವಿಯಲ್ಲಿ ಈಜುವ ಜನ ಕಪ್ಪೆಗಳಂತೆ ಈ ದಡದಿಂದ ಆ ದಡಕ್ಕೆ ಚಲಿಸುತ್ತಿರುತ್ತಾರೆ. ಆದರೆ ಸಾಗರದಲ್ಲಿ ಈಜುವವರು ಈಜುತ್ತಲೇ ಇರುತ್ತಾರೆ. ತೀರ ಗೀರದ ಗೊಡವೆಯೇ ಇಲ್ಲದೆ."

ನಿಜಕ್ಕೂ ರಾಹುಲರು ಸತತವಾಗಿ ಈಜುತ್ತಲೇ ಇದ್ದರು. ಒಂದು ಜ್ಞಾನ ಸಾಗರದಿಂದ ಇನ್ನೊಂದು ಜ್ಞಾನ ಸಾಗರಕ್ಕೆ. ಅಲ್ಲಿಂದ ಮತ್ತೊಂದಕ್ಕೆ. ಸಂಸ್ಕೃತ ಮತ್ತು ಅಪಭ್ರಂಶದ, ಟಿಬೇಟಿ ಮತ್ತು ಜಾನಪದ ಆಡು ಭಾಷೆಯ, ಬೌದ್ಧ ಧರ್ಮಕ್ಕೆ ಸಂಬಂಧಪಟ್ಟ ಪಾಲಿ ಮತ್ತು ಸಂಸ್ಕೃತ ಭಾಷೆಯ, ಇತಿಹಾಸ ಹಾಗೂ ಪುರಾತತ್ವದ, ಪಾರಿಭಾಷಿಕ ಶಬ್ದಾವಳಿಯ ಸಾಗರವೇ ಅವರಾಗಿದ್ದರು. ಒಮ್ಮೆ ದುರ್ಗಮ ಪ್ರದೇಶಗಳಲ್ಲಿ ಸಂಚರಿಸುತ್ತಿದ್ದರೆ, ಒಮ್ಮೆ ಜೈಲು ಕೋಣೆಯೊಳಗೆ ಬಂಧಿ.

ಬದುಕು ಇದ್ದ ಸ್ಥಿತಿಯಲ್ಲೇ ಇರುವುದೆಂದರೆ ಅವರಿಗೆ ಆಗದು. ಅವರು ತನ್ನ ವಿಚಾರಗಳನ್ನು ಬದಲಿಸುತ್ತ ನಡೆದರು. ವೇಷ ಬದಲಿಸುತ್ತ ಹೋದರು. ಎರಡು ಸಲ ಹೆಸರನ್ನೂ ಬದಲಾಯಿಸಿಕೊಂಡರು. "ನೌಕೆಯಂತೆ ತೀರದಲ್ಲಿ ಇಳಿಸಲಿಕ್ಕಾಗಿ ನಾನು ವಿಚಾರಗಳನ್ನು ಸ್ವೀಕರಿಸುವವನು. ತಲೆಯ ಮೇಲೇರಿಸಿಕೊಂಡು ತಿರುಗಲಿಕ್ಕಲ್ಲ"–ಎಂಬ ಬುದ್ಧ ವಚನ ಅವರಿಗೆ ಬಹಳ ಪ್ರಿಯವಾಗಿತ್ತು. ಎಂತಲೇ ಅವರು ವಿರಾಗಿಯಾಗಿದ್ದವರು ಆರ್ಯ ಸಮಾಜದ ಪ್ರಚಾರಕರಾದರು, ಬೌದ್ಧ ಭಿಕ್ಷುವಾದರು, ಬೌದ್ಧ ಭಿಕ್ಷುವಿನ ಕಾಷಾಯವನ್ನು ಯಾವ ಕಷ್ಟವೂ ಇಲ್ಲದೆ ಕಳಚಿ ಗೃಹಸ್ಥರಾದರು. ಬೌದ್ಧ ಸಂಸ್ಕೃತಿಯಲ್ಲಿ ಶಾಶ್ವತ ಶ್ರದ್ಧೆಯನ್ನು ನೆಟ್ಟುಕೊಂಡೂ ಸಾಮ್ಯವಾದದ ಅಗ್ರ ಸಮರ್ಥಕರೂ ಆದರು.

ರಾಹುಲರ ಜೀವನವೆಂದರೆ ಒಬ್ಬ ಅಲೆಮಾರಿಯ ದೀರ್ಘ ಮಹಾಗಾಥ. ಅವರ ಸಮಗ್ರ ಜೀವನವೆಂದರೆ ಒಬ್ಬ ಮಹಾಯಾತ್ರಿಯ ಜೀವನ ಕಥೆ. ಎಂತಲೇ ಅವರು ತನ್ನ ಆತ್ಮಕತೆಗೆ "ನನ್ನ ಜೀವನ ಯಾತ್ರೆ" ಎಂದು ಹೆಸರಿಟ್ಟರು. ವಾಸ್ತವವಾಗಿ ರಾಹುಲರ ಸಮಸ್ತ ಕೃತಿತ್ವಕ್ಕೆ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಉಸಿರು ತುಂಬಿಸಿದ ಪ್ರಮುಖ ತತ್ವವೇ ಸಂಚಾರ ತತ್ವ.

ರಾಹುಲರು ಸ್ವಯಂ ಒಂದು ಸಂಸ್ಥೆಯಾಗಿದ್ದರು. ನಡೆದಾಡುವ ವಿಶ್ವಕೋಶವಾಗಿದ್ದರು. ಇತಿಹಾಸ ಮತ್ತು ಪುರಾತತ್ವ, ರಾಜನೀತಿ ಮತ್ತು ಸಮಾಜ ಶಾಸ್ತ್ರ, ದರ್ಶನ ಮತ್ತು ವಿಜ್ಞಾನ, ಧರ್ಮ ಮತ್ತು ಸಂಸ್ಕೃತಿ, ಜೀವನ ಚರಿತ್ರೆ ಮತ್ತು ಪ್ರವಾಸ ವೃತ್ತಾಂತ, ಚಿಂತನೆ ಮತ್ತು ಸಾಹಿತ್ಯ ಇತಿಹಾಸ, ಸ್ವಯಂಶಿಕ್ಷಕ ಮತ್ತು ಕೋಶ, ಅನುವಾದ ಮತ್ತು ಸಂಪಾದನ ಕಾರ್ಯ–ಅವರ ಬರೆಹದ ಹರಹು ಹೀಗೆ ವಿಸ್ತಾರದ್ದು.

ರಾಹುಲರ ಸಣ್ಣ ದೊಡ್ಡ ಗ್ರಂಥಗಳ ಸಂಖ್ಯೆ ನೂರ ನಲ್ವತ್ತರ ಹತ್ತಿರ ಹತ್ತಿರ. ಅವರ ಬಹು ಆಯಾಮವುಳ್ಳ ವ್ಯಕ್ತಿತ್ವ ಹಾಗೂ ಕೃತಿತ್ವಗಳನ್ನು ಕಂಡು ನಾವು ಚಕಿತರಾಗುತ್ತೇವೆ. ಒಬ್ಬ ವ್ಯಕ್ತಿಯಿಂದ ಇಷ್ಟೆಲ್ಲ ಯಾತ್ರೆ, ಪ್ರವಾಸ, ಇಷ್ಟೆಲ್ಲ ಆಳ ಅಧ್ಯಯನ ಅನ್ವೇಷಣೆ ಮತ್ತು ವಿವಿಧ ವಿಷಯಗಳ ಮೇಲೆ ಇಷ್ಟೆಲ್ಲ ವ್ಯಾಪಕವಾದ ಬರವಣಿಗೆ ಹೇಗೆ ಸಾಧ್ಯವಾಯಿತು ? ಹೇಗೋ ಮಾಧ್ಯಮಿಕ ಶಾಲಾ ಮಟ್ಟದವರೆಗೆ ಮಾತ್ರ ನಿಯಮಿತ ಶಿಕ್ಷಣ ಹೊಂದಿದ ಹುಡುಗನೊಬ್ಬ ಪಾಂಡಿತ್ಯದ ಈ ಔನ್ನತ್ಯವನ್ನು ಹೇಗೆ ತಲುಪಿದ?

ತಿಳಿಯಲು ಅಷ್ಟೇನೂ ಕಷ್ಟವಿಲ್ಲ. ಯಾಕೆಂದರೆ ರಾಹುಲರ ಜೀವನದಲ್ಲಿ ಗೋಪ್ಯವಾದುದು

ಯಾವುದೂ ಇರಲಿಲ್ಲ. ಅವರಲ್ಲಿ ಪ್ರತಿಭೆ ಇತ್ತು, ಜ್ಞಾನ ಪಿಪಾಸೆಯಿತ್ತು, ಎಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ದಣಿವರಿಯದೆ ದುಡಿಯುವ ಅಪೂರ್ವ ಸಾಮರ್ಥ್ಯವಿತ್ತು. ಚೆನ್ನಾಗಿ ಚುರುಕಾಗಿ ಕೆಲಸ ಮಾಡಲು ಇಷ್ಟಪಡುತ್ತಿದ್ದ ಅವರು: "ನಾನು ಸೆಕೆಂಡುಗಳದ್ದಲ್ಲವಾದರೂ, ನಿಮಿಷಗಳ ಲೆಕ್ಕ ಖಂಡಿತ ಕೊಡಬಲ್ಲೆ." ಎಂದು ತಮ್ಮ ತಾರುಣ್ಯದ ದಿನಗಳಲ್ಲಿ ಹೇಳುತ್ತಿದ್ದುದುಂಟು.

ಎಪ್ಪತ್ತು ವರ್ಷ ವಯಸ್ಸಿನಲ್ಲಿ ರಾಹುಲರು ನಿಧನರಾದರು. ನಿಧನಕ್ಕೆ ಹದಿನೇಳು ತಿಂಗಳ ಮೊದಲು ಅವರಿಗೆ ಸ್ಮೃತಿ ಲೋಪದ ಆಘಾತವಾಯಿತು. ಆಘಾತವಾಗುವ ದಿನದವರೆಗೂ ಅವರು ಸಕ್ರಿಯರಾಗಿದ್ದರು. ತೀರಾ ಅಸ್ವಸ್ಥ ಸ್ಥಿತಿಯಲ್ಲಿಯೂ ತಮ್ಮ ಲೇಖನ ಕಾರ್ಯಕ್ಕೆ ಬಿಡದೆ ಅಂಟಿಕೊಂಡಿದ್ದರು. "ಪುನರ್ಜನ್ಮದಲ್ಲಿ ನನಗೆ ನಂಬಿಕೆ ಇಲ್ಲ. ಏನು ಮಾಡಬೇಕೆಂದಿರುವೆನೋ ಅದನ್ನು ಈ ಜನ್ಮದಲ್ಲಿಯೇ ಮಾಡಿ ಬಿಡಬೇಕು" ಎಂದು ಅವರು ಆಗಾಗ ಹೇಳುತ್ತಲೂ ಇದ್ದರು.

ಹೀಗಿದ್ದರೂ 1993ರಲ್ಲಿ ರಾಹುಲ ಸಾಂಕೃತ್ಯಾಯನ ಅವರ ಜನ್ಮಶತಾಬ್ದಿ ಆಚರಿಸಲಾಯಿತು.

ತಮ್ಮ ಅರ್ವತ್ತೊಂಬತ್ತನೇ ವರ್ಷದ ವರೆಗಿನ ಆತ್ಮಕಥೆಯನ್ನು ಸ್ವಯಂ ರಾಹುಲರೇ ಬರೆದಿದ್ದಾರೆ; ಎರಡೂವರೆ ಸಾವಿರಕ್ಕೂ ಹೆಚ್ಚು ಪುಟಗಳಲ್ಲಿ. ಅದು ಅವರ "ಜೀವನ ಯಾತ್ರೆ". ಅದರಲ್ಲಿ, "ನಮ್ಮ ಮುಂದಿನ ಪೀಳಿಗೆಗೆ ಕಲ್ಪಿಸಲು ಕಷ್ಟವಾಗುವಂತಹ ಜಗತ್ತಿನ ಭಿನ್ನಭಿನ್ನ ಗತಿಗಳನ್ನು ಹಾಗೂ ವೈಚಿತ್ರ್ಯಗಳನ್ನು ಅಂಕಿತಗೊಳಿಸಲು ಪ್ರಯತ್ನಿಸಿದ್ದೇನೆ" ಎಂದು ಅವರೇ ಹೇಳಿದ್ದಾರೆ.

ಮೂರನೇ ತಲೆಮಾರಿನ ಇಂದಿನ ಯುವ ಪೀಳಿಗೆಗಾಗಿ ಇಲ್ಲಿದೆ-ರಾಹುಲರ ಈ ಪರಿಚಯ.

ಒಂದು ವಿರಾಟ ವ್ಯಕ್ತಿತ್ವದ ಪರಿಚಯ

ಒಬ್ಬ ರಾಜಸಂಚಾರಿಯ ಪರಿಚಯ

ಒಬ್ಬ ಮಹಾಪಂಡಿತನ ಬುದ್ಧಿವೈಭವದ ಪರಿಚಯ

# ಅಜ್ಜನ ಕಥೆಗಳು

ಉತ್ತರ ಪ್ರದೇಶದ ಪೂರ್ವದಲ್ಲಿರುವ ಆಜಮಗಢ ಜಿಲ್ಲೆ. ಆಜಮಗಢ ಪಟ್ಟಣದಿಂದ ಸುಮಾರು ಹನ್ನೆರಡು ಕಿಲೋ ಮೀಟರ್ ದೂರದಲ್ಲಿದೆ ಪಂದಹಾ ಎಂಬ ಹಳ್ಳಿ. ಇವತ್ತಿಗೆ ಸುಮಾರು ತೊಂಭತ್ತೈದು ವರ್ಷಗಳಷ್ಟು ಹಿಂದಿನ ಕಾಲ. ಹಣ್ಣುಗೂದಲಿನ, ವಿಶಾಲ ಎದೆಯ, ನೀಳವಾದ ಚೂಪುಮೂಗಿನ, ದಷ್ಟಪುಷ್ಟ ಬಾಹುಗಳ, ಆರಡಿ ಎತ್ತರದ, ಗೋಧಿ ವರ್ಣದ ವ್ಯಕ್ತಿಯನ್ನು ಕಲ್ಪಿಸಿಕೊಳ್ಳಿ. ದೂರದಿಂದಲೇ ಅವರನ್ನು ಗುರುತಿಸಬಹುದು. ಪಂದಹಾದ ಯಾವುದೇ ತೋಟ ಅಥವಾ ಅಂಗಳದಲ್ಲಿ ಪಂಚೆ ಸುತ್ತಿಕೊಂಡು, ಸೊಂಟಕ್ಕೆ ಕೈಕೊಟ್ಟುಕೊಂಡು ನಾಲ್ಕಾರು ಜನರ ನಡುವೆ ಮಾತಾಡುತ್ತ ನಿಂತ ಒಬ್ಬ ಗುಜ್ಜುಗುಜ್ಜಾದ ಐವತ್ತೈದು ವರ್ಷ ಪ್ರಾಯದ ವ್ಯಕ್ತಿಯನ್ನು ಕಂಡಿರಾದರೆ ಅವರೇ ರಾಮಶರಣ ಪಾಠಕ ಎಂದು ಗುರುತು ಹಿಡಿದು ಬಿಡುತ್ತೀರಿ.

ಪಾಠಕರ ಕೆಲಸವೆಂದರೆ ಉಣ್ಣುವುದು, ಮಲಗುವುದು, ಹರಟೆ ಹೊಡೆಯುವುದು. ಈತ ಹದಿನೆಂಟು ವರ್ಷ ಪ್ರಾಯದಲ್ಲೇ ಮನೆಯಿಂದ ನೂರೈವತ್ತು ರೂಪಾಯಿ ಹಾರಿಸಿ ಮಾಯವಾಗಿ ಹೈದರಾಬಾದ್ ಸಮೀಪದ ಜಾಲ್ನಾ ದಂಡು ಪ್ರದೇಶ ತಲುಪಿ ಸೈನ್ಯಕ್ಕೆ ಸೇರಿಕೊಂಡವರು. ಮುಂದೆ ಅವರನ್ನು ಕರ್ನಲ್ ಸಾಹೇಬ ತನ್ನ ಬಂಟನನ್ನಾಗಿ ಮಾಡಿಕೊಂಡ. ಸಾಹೇಬರು ಕಾಡುಗಳಲ್ಲಿ ದೂರ ದೂರದವರೆಗೂ ಬೇಟೆಯಾಡಲು ಹೋಗುತ್ತಾರೆಂದರೆ ಪಾಠಕರು ಕೂಡ ಅವರ ಜೊತೆಯಲ್ಲಿ ಇರಬೇಕು. ಸಾಹೇಬರೊಂದಿಗೆ ದಿಲ್ಲಿ, ಸಿಮ್ಲಾ, ನಾಗಪುರ, ಅಮರಾವತಿ, ನಾಸಿಕ ಮುಂತಾದ ಅನೇಕ ಪಟ್ಟಣಗಳನ್ನು ನೋಡಿದರು. ಹನ್ನೆರಡು ವರ್ಷಗಳ ನಂತರ ಪಾಠಕರಿಗೆ ಪತ್ನಿಯ ಚಿಂತೆಯುಂಟಾಯಿತು. ಸೈನ್ಯದಲ್ಲಿ ತನ್ನ ಹೆಸರು ಹೊಡೆಸಿ ಮನೆಗೆ ಹಿಂದಿರುಗಿದರು.

ಮನೆಗೆ ಮರಳಿದ ಪಾಠಕರು ತಮ್ಮಿಬ್ಬರಿಗಾಗಿ ಬೇರೆ ಮನೆ ಹೂಡಿದರು. ಅವರದಾಗಿ ಐದು ಬೀಘಾ ಜೋಡಿ ಜಮೀನು, ಎರಡು ಎತ್ತು ಮತ್ತು ಒಂದು ಎಮ್ಮೆ ಮಾತ್ರ ಇದ್ದವು. ಪಾಠಕರು ಸ್ವತಃ ಕೈ ಕೆಸರು ಮಾಡಿಕೊಳ್ಳುವವರಲ್ಲ. ಗದ್ದೆ ಕೆಲಸಕ್ಕೆ ಆಳುಗಳು, ಮನೆಗೆಲಸಕ್ಕೆ ಪತ್ನಿಯರು.

ಸೇನೆಯಿಂದ ಮರಳಿದ ಬಳಿಕ ಸುಮಾರು 1876ರಲ್ಲಿ ಅವರಿಗೊಂದು ಹೆಣ್ಣು ಮಗು ಹುಟ್ಟಿತು. ಕುಲವಂತೀ ಎಂದು ಹೆಸರಿಟ್ಟರು. ಒಂದೇ ಮಗು, ಹಾಗಾಗಿ ಅದಕ್ಕೆ ಗಂಡು ಮಗುವಿನಂತೆ ಪ್ರೀತಿ ಮುದ್ದಾಟ ಸಿಕ್ಕಿತು. ಅವಳಿಗೆ ಒಂಭತ್ತು-ಹತ್ತು ವರ್ಷವಾಗುತ್ತಲೂ ಅಲ್ಲಿಂದ ಸುಮಾರು ಹದಿನೇಳು ಕಿಲೋಮೀಟರ್ ದೂರದ ಕನ್ಯೆಲಾ ಎಂಬ ಹಳ್ಳಿಯ ಜಾನಕೀ ಪಾಂಡೆ ಅವರ ಜ್ಯೇಷ್ಠ ಪುತ್ರ ಹನ್ನೆರಡು ವರ್ಷದ ಗೋವರ್ಧನ ಪಾಂಡೆಯ ಜೊತೆ ಮದುವೆ ಮಾಡಿದರು. ಕುಲವಂತೀ ಹೆಚ್ಚಾಗಿ ಅತ್ತೆ ಮನೆಯಲ್ಲಿಯೇ ಇರುತ್ತಿದ್ದಳು. ಏಪ್ರಿಲ್ 9, 1893ರಲ್ಲಿ ಪಂದಹಾದಲ್ಲಿಯೇ ಅವಳು ಗಂಡು ಮಗುವೊಂದನ್ನು ಹೆತ್ತಳು. ಮಗುವಿಗೆ ಕೇದಾರನಾಥ ಎಂದು ಹೆಸರಿಟ್ಟರು.

ತಾಯಿಯನ್ನು ಬಿಟ್ಟಿರುವಷ್ಟು ದೊಡ್ಡವನಾದ ಮೇಲೆ ಕೇದಾರನಾಥನನ್ನು 'ನಾನಾ-ನಾನೀ' ಯೇ (ತಾಯಿಯ ತಂದೆ ತಾಯಿ, ಅಜ್ಜ, ಅಜ್ಜಿ) ನೋಡಿಕೊಂಡರು. ಅಜ್ಜನ ಮನೆಯಲ್ಲಿ ಪುಟ್ಟ ಕೇದಾರನ ಲಾಲನೆ-ಪೋಷಣೆ ಬಹಳ ಮುದ್ದಿನಿಂದ ನಡೆಯಿತು. ಆತ 'ನಾನೀ' ಗೇ ಅಮ್ಮ ಎನ್ನುತ್ತಿದ್ದ. ಮೊಮ್ಮಗನೆಂದರೆ 'ನಾನಾ'ನಿಗಂತೂ ಬಹಳ ಮುದ್ದು. ಸಿಪಾಯಿ ನಾನಾ 'ಶಿಸ್ತಿನ ಸಿಪಾಯಿ' ಕೂಡ. ಕೇದಾರನ ಮೇಲೆ ಸದಾ ಒಂದು ಕಣ್ಣು ಇಟ್ಟುಕೊಂಡೇ ಇರುತ್ತಿದ್ದರು. ಅವರಿಗೆ ಆಟ-ಗೀಟವೆಂದರೆ ಆಗುತ್ತಿರಲಿಲ್ಲ. ಹಾಗಾಗಿ ಕೇದಾರ ಮರ ಹತ್ತಲು ಕಲಿಯಲಿಲ್ಲ. ಈಜು ಕಲಿತದ್ದು ಕೂಡ ತಂದೆಯ ಊರು 'ಕನ್ಶೆಲಾ'ಕ್ಕೆ ಹೋದಾಗ. ಕೇದಾರನಾಥ, ನಂತರದ ರಾಹುಲ ಸಾಂಕೃತ್ಯಾಯನ, ಬರೆದಿದ್ದಾನೆ: "ಅಜ್ಜ ಸಾಧ್ಯವಾದಷ್ಟೂ ನನ್ನ ಬದುಕನ್ನು ಜೈಲು ಮಾಡಿಟ್ಟಿದ್ದರು."

ಆದರೆ ಈ ಸೆರೆಯಿಂದ ಹೊರಬರುವ ಆರಂಭದ ಪ್ರೇರಣೆಗಳು ದೊರಕಿದ್ದು ಕೂಡ ನಾನಾನಿಂದಲೇ. ಈ ಸೈನಿಕ ನಾನಾ ತನ್ನ ಬೇಟೆ-ತಿರುಗಾಟದ ಕಥೆಗಳನ್ನು ರಾತ್ರಿಯಿಡೀ ತನ್ನ ಹೆಂಡತಿಗೆ ಹೇಳುತ್ತ ಇರುತ್ತಿದ್ದ. ಆಗ ಮಡಿಲಲ್ಲಿ ಒರಗಿಕೊಂಡಿರುವ ಏಳೆಂಟು ವರ್ಷದ ಮೊಮ್ಮಗ ಕೇದಾರ, ಕಥೆಗಳನ್ನು ಆಸಕ್ತಿಯಿಂದ ಕೇಳುತ್ತಿದ್ದ, ಚಕಿತನಾಗುತ್ತಿದ್ದ. ಅವೆಲ್ಲ ಕಾಮಡೀ, ಅಕೋಲಾ, ಅಮರಾವತಿ, ಬುಲಧಾನಾ, ಔರಂಗಾಬಾದ್ ಮುಂತಾದ ಕಡೆಯ ಅನೇಕ ಸಂಗತಿಗಳು. ಅಜಂತಾ ಎಲ್ಲೋರಾ ಗುಹೆಗಳ ಮತ್ತು ಅದರೊಳಗಿನ ಮೂರ್ತಿಗಳ ಕುರಿತು ಅಜ್ಜನ ವರ್ಣನೆ ಹೀಗಿತ್ತು: "ಶ್ರೀ ರಾಮ ವನವಾಸಕ್ಕೆ ಹೋಗುವನೆಂದು ವಿಶ್ವಕರ್ಮನು ಗುಡ್ಡ ಕೊರೆದು ದೊಡ್ಡ ದೊಡ್ಡ ಮಹಲುಗಳನ್ನು ನಿರ್ಮಿಸಿದ ದೇವತೆಗಳು ಇದರಲ್ಲಿ ನೆಲೆಸುತ್ತಾರೆ, ಆಗ ಶ್ರೀ ರಾಮನಿಗೆ ವನವಾಸದಲ್ಲಿ ಕಷ್ಟವಾಗದು ಅಂತೆಲ್ಲ ಭಾವಿಸಿ. ಆದರೆ ದೇವತೆಗಳು ಬರುವುದರೊಳಗೆ ರಾಕ್ಷಸರು ಆ ಗುಹೆಗಳಲ್ಲಿ ಹೊಕ್ಕು ಕುಳಿತರು. ವಿಶ್ವಕರ್ಮ ಕೋಪಗೊಂಡು 'ನೀವೆಲ್ಲ ಕಲ್ಲಾಗಿ ಹೋಗಿರಿ' ಎಂದು ಶಾಪ ಕೊಟ್ಟ." ಅಜ್ಜ ಭಾರೀ ಗಂಭೀರವಾಗಿ ಹುಬ್ಬು 'ಏರಿಳಿಸುತ್ತ' ಅಜ್ಜಿಗೆ ಹೇಳುತ್ತಿದ್ದರು: "ಆಗ ರಾಕ್ಷಸರು ಎಲ್ಲೆಲ್ಲಿ ಹೇಗೆ ಹೇಗೆ ಇದ್ದರೋ ಅಲ್ಲಲ್ಲೇ ಹಾಗೆ ಹಾಗೇ ಕಲ್ಲಾಗಿ ಬಿಟ್ಟರು. ಶರಾಬು ಕುಡಿಯುತ್ತಿರುವವರ ಬಾಯಿಗೆ ತಗಲಿಕೊಂಡಿದ್ದ ಬಾಟಲಿ ಅಲ್ಲಿಯೇ. ಕುಣಿಯುವವರು, ಕುಣಿಯುವಂತೆಯೇ. ನೋಡಿದರೆ ಈಗ ಎದ್ದು ಮಾತಿಗೆ ತೊಡಗುತ್ತಾರೋ ಅಂತನಿಸುತ್ತದೆ."

ಮೊಮ್ಮಗ ಕೇದಾರನಿಗೆ ಇಂಥ ಕಥೆಗಳನ್ನು ಕೇಳುವುದರಲ್ಲಿ ಬಹಳ ಮಜಾ ಅನಿಸುತ್ತಿತ್ತು. ಇಂತಹ ಕಥೆಗಳೇ ಆ ಕಿಶೋರ ಮನಸ್ಸಿನಲ್ಲಿ ಪ್ರಪಂಚ ನೋಡುವ ಆಸೆಯನ್ನು ಜಾಗೃತಗೊಳಿಸಿದುವು.

ಮೊಮ್ಮಗನ ಊಟ-ತಿಂಡಿಯ ಕಡೆ ಬಹಳ ಗಮನ ಕೊಡುತ್ತಿದ್ದ ನಾನಾನಿಗೆ ಸ್ವತಃ ಊಟ-ತಿಂಡಿಯ ಬಗ್ಗೆ ಭಾರಿ ಆಸಕ್ತಿ. ಹಾಲು, ಮಜ್ಜಿಗೆ ಇಲ್ಲದೆ ತುತ್ತು ಇಳಿಯುತ್ತಿರಲಿಲ್ಲ. ಹಿಂದೆಲ್ಲ ಮಾಂಸ ಮೀನಿನ ಚಟ ಜೋರಿತ್ತು. ಜಪಮಾಲೆ ಹಿಡಿದ ನಂತರ ತನ್ನ ಪ್ರಿಯ ಭೋಜನದಿಂದ ವಂಚಿತನಾದರೂ ಮೊಮ್ಮಗನಿಗಾಗಿ ಆಗ ಈಗ ಮೀನು ತಂದೇ ತರುತ್ತಿದ್ದ.

ಬಾಲಕ ಕೇದಾರ, ವರ್ಷದಲ್ಲಿ ಕೆಲ ದಿನ ಕನ್ಶೆಲಾದಲ್ಲಿರುವ ತಂದೆಯ ಮನೆಯಲ್ಲಿ ಇದ್ದು ಬರುತ್ತಿದ್ದ. ಕನ್ಶೆಲಾ ಒಂದು ಬಲು ಪುಟ್ಟ ಗ್ರಾಮ. ಈ ಗ್ರಾಮದಿಂದ ಹಲವು ಕಿಲೋಮೀಟರುಗಳವರೆಗೆ ಸರಿಯಾದ ಒಂದು ರಸ್ತೆ ಸಹ ಇರಲಿಲ್ಲ. ಹದಿನೈದು ಕಿಲೋ ಮೀಟರು ದೂರದಲ್ಲಿ ಪೋಸ್ಟ್ ಆಫೀಸು. ಶಾಲೆಯೂ ಅಷ್ಟೆ. ಕ್ರಿ.ಶ. 1897ರಲ್ಲಿ ಅಲ್ಲಿ ಭೀಕರ ಬರಗಾಲ ಬಂತು. ಆದರೆ ಕೇದಾರನ ತಂದೆ ಮನೆ

ಮತ್ತು ನಾನಾನ ಮನೆಗಳಿಗೆ ಅದರ ಪ್ರಭಾವ ಸೋಕಲಿಲ್ಲ. ತಂದೆ ಗೋವರ್ಧನ ಪಾಂಡೆ ಸಾಂಕೃತ್ಯ ಗೋತ್ರದ ಸರಯೂ ಪಾರೀಣ ಬ್ರಾಹ್ಮಣರು. ಪೂಜೆ-ಪಾಠಗಳಲ್ಲಿ ಅವರಿಗೆ ಬಹಳ ಶ್ರದ್ಧೆ. ಹಾಗಾಗಿ ಊರಿನಲ್ಲಿ ಅವರನ್ನು "ಪೂಜಾರೀ" ಎನ್ನುತ್ತಿದ್ದರು. "ಪೂಜಾರಿ" ಒಬ್ಬ ಮುನ್ಷಿಯ ಬಳಿ ಒಂದೂವರೆ ತಿಂಗಳ ತನಕ ಕಷ್ಟದಿಂದ ಓದು ನಡೆಸಿದ್ದರು. ಆದರೆ ಆತ ಮೇಧಾವಿ. ಸ್ವಪ್ರಯತ್ನದಿಂದಲೆ ಸಾಕಷ್ಟು ಜ್ಞಾನ ಸಂಪಾದಿಸಿದರು. ಪೂಜಾ-ಪಾಠದ ಪುಸ್ತಕಗಳನ್ನು ಸರಾಗವಾಗಿ ಓದುತ್ತಿದ್ದರು. ಲೆಕ್ಕದಲ್ಲಿ ನಿಷ್ಣಾತರು. ಅವರ ಪೂರ್ವಜರ ಮೂಲಸ್ಥಾನ ಗೋರಖಪುರ ಜಿಲ್ಲೆಯ ಮಲಾಂವ್ ಎಂಬ ಹಳ್ಳಿ. ಹೀಗಾಗಿ ಅವರು ಮಾಲಾಂವ್ ಪಾಂಡೇ ಎಂಬ ಹೆಸರಿನಿಂದಲೂ ಕರೆಸಿಕೊಳ್ಳುತ್ತಿದ್ದರು. ಅವರ ಪೂರ್ವಜರಲ್ಲಿ ಒಬ್ಬರಾದ ಇಚ್ಛಾ ಪಾಂಡೆ 1730ನೇ ಇಸವಿಯ ಆಚೀಚೆ ಕನ್ನೈಲಾಕ್ಕೆ ಬಂದು ನೆಲೆಸಿದ್ದರು. ತಂದೆ ಜಾನಕೀ ಪಾಂಡೆಯವರಿಗೆ ಆ ಹಳ್ಳಿಯಲ್ಲಿ ಅಲ್ಲದೆ ಆಸುಪಾಸಿನ ಹಳ್ಳಿಗಳಲ್ಲಿಯೂ ಬಹಳ ಮನ್ನಣೆ ಇತ್ತು. ಆದರೆ ನಲ್ವತ್ತೈದು ನಲ್ವತ್ತಾರನೇ ವಯಸ್ಸಿನಲ್ಲಿಯೇ ಅವರು ನಿಧನರಾದರು. ತಾಯಿ, ಕೇದಾರನ ಅಜ್ಜಿ, ಜಗಳಗಂಟಿ ಸ್ವಭಾವದವಳು. ತನ್ನ ಸಂಸಾರವನ್ನು ಬೇರೆ ಮಾಡಿಕೊಂಡಳು. ಮೂವರು ತಂಗಿಯರು ಮತ್ತು ಪ್ರತಾಪನೆಂಬ ಸಣ್ಣ ತಮ್ಮನಿರುವ ಈ ಸಂಸಾರವನ್ನು ಹದಿನೈದು ವರ್ಷ ಎಳೆ ವಯಸ್ಸಿನ ಗೋವರ್ಧನ ಪಾಂಡೆ ಸಂಭಾಳಿಸತೊಡಗಿದ. ಬೇಗನೇ ತನ್ನ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಂಡ. ಹತ್ತು ಹನ್ನೆರಡು ಎಕರೆ ಜಮೀನು ಹೊಂದಿ ಹಳ್ಳಿಯಲ್ಲಿ ಎಲ್ಲರಿಗಿಂತಲೂ ಶ್ರೀಮಂತನೆನಿಸಿಕೊಂಡ.

ಕೇದಾರನಾಥ ಕಿರಿಯವರಿದ್ದಾಗ ಕೃಶವಾಗಿ ಇದ್ದರೇನು, ರಾಹುಲ ಸಾಂಕೃತ್ಯಾಯನ ತಮ್ಮ ಎತ್ತರದ ನಿಲುವು ಮತ್ತು ತುಂಬು ಮೈಕಟ್ಟಿನಿಂದಾಗಿ ಬೇರೆಯೇ ಆದ ಒಂದು ಅಸ್ತಿತ್ವ ಹೊಂದಿದ್ದರು. ಇದು ಅವರಿಗೆ ಆನುವಂಶೀಯ ಕೊಡುಗೆ. ಸ್ವತಃ ರಾಹುಲರೇ ಬರೆದುಕೊಂಡಿದ್ದಾರೆ: "ನನ್ನ ತಂದೆಯ ವಂಶ ಅನೇಕ ಪೀಳಿಗೆಗಳಿಂದ ಬಲಿಷ್ಠ ಹಾಗೂ ಉನ್ನತಕಾಯದ ಯುವಕರಿಗಾಗಿ ಪ್ರಸಿದ್ಧವಾಗಿತ್ತು. ನಾನಾ, ಅವರ ತಂದೆ, ಸಹೋದರ ಸಂಬಂಧಿಗಳು ಎಲ್ಲರೂ ಹೀಗೆಯೇ. ಉದ್ದ-ಅಗಲ ದೃಢಕಾಯರು. ನನ್ನ ತಾಯಿ ತನ್ನ ತಂದೆಯನ್ನು ಹೋಲುತ್ತಿದ್ದಳು. ಅವರಂತೆಯೇ ಎತ್ತರದ ನಿಲುವು, ದಷ್ಟ-ಪುಷ್ಟ ಶರೀರ ಹಾಗೂ ಗೌರವರ್ಣ ಹೊಂದಿದ್ದಳು."

ಆದರೆ ವಿದ್ಯೆಯ ಮಟ್ಟಿಗೆ ಅನುವಂಶಿಕತೆಯ ಅಚ್ಚರಿಯೇನೂ ಇಲ್ಲ. ಸರಸ್ವತಿ ಕನ್ನೈಲಾದಲ್ಲಿ ಪ್ರಸನ್ನಳಾಗಿರಲಿಲ್ಲ. ಪಂದಹಾದಲ್ಲಿಯೂ ಅಷ್ಟೇ. ಕನ್ನೈಲಾಕ್ಕೆ ಬಂದು ನೆಲೆಸಿದ ಇಚ್ಛಾ ಪಾಂಡೆಯ ವಂಶಜರಲ್ಲಿ ಹೆಸರು ಗಳಿಸಿದ ಪಂಡಿತರು ಹಲವರು ಬಂದು ಹೋದರು. ಆದರೆ ಶಿಕ್ಷಣ -ಪಂಡಿತರು ಯಾರೂ ಇರಲಿಲ್ಲ. ತನ್ನ ವಂಶದಲ್ಲಿ ಸರಸ್ವತಿಯ ದಿಕ್ಕಿಗೆ ತಲೆ ಇಡುವ ಅಪರಾಧ ಮಾಡಿದ ಮೊದಲಿಗ ತಾನೇ ಎಂದು ರಾಹುಲರು ಬರೆದುಕೊಂಡಿದ್ದಾರೆ.

ರಾಮಶರಣ ಪಾಠಕ ಸ್ವತಃ ಓದು ಬರಹವಿಲ್ಲದವರಾದರೂ ಚೆನ್ನಾಗಿ ಸಂಚಾರ ಮಾಡಿದವರಾಗಿ, ವಿದ್ಯೆಯ ಪ್ರಾಮುಖ್ಯವನ್ನು ಅರಿತಿದ್ದರು. ಅವರು ಮೊಮ್ಮಗನಿಗಾಗಿ ದೊಡ್ಡದೊಂದು ಯೋಜನೆ ಹಾಕಿಟ್ಟಿದ್ದರು. ಹೆಂಡತಿಯೊಡನೆ ಹೇಳುತ್ತಿದ್ದರು: ಒಮ್ಮೆ ಮಿಡಲ್ ಪಾಸಾಗಲಿ ನೋಡು, ಕೇದಾರನನ್ನು ಇಂಗ್ಲಿಷ್ ಸ್ಕೂಲಿಗೆ ಭರ್ತಿ ಮಾಡಿಯೇ ತೀರುತ್ತೇನೆ.

# ಪ್ರಥಮ ಉಡ್ಡಯನ

ಕೇದಾರ ಐದೂವರೆ ವರ್ಷದವನಿದ್ದಾಗಿನ ಮಾತು. ಮಳೆಗಾಲದ ದಿನಗಳು ಅವು ಹಳ್ಳಗಳಲ್ಲಿ ನೀರು ತುಂಬಿತ್ತು. ಕೇದಾರ ಕೆಲ ಹುಡುಗರೊಂದಿಗೆ ಹೊರಗೆ ಆಟವಾಡುತ್ತ ಇದ್ದ. ಒಬ್ಬ ಹುಡುಗ ಒಂದು ಸಣ್ಣ ಹಳ್ಳದಲ್ಲಿ ಬಿದ್ದುಬಿಟ್ಟ. ಯಾರೋ ಧಾವಿಸಿ ಬಂದು ಅವನನ್ನು ಹೊರಗೆತ್ತಿ ಹಾಕಿದರು.

ಇದು ಕೇದಾರನದೇ ಕಿತಾಪತಿ ಎಂದು ನಾನಾ ಭಾವಿಸಿದ್ದರು. ಅವನನ್ನು ಶಾಲೆಯಲ್ಲಿ ಕೂಡಿಸಿ ಬಿಡಬೇಕು ಎಂದರು ಆಗ ನಾನೀ. ಪಂದಹಾದಿಂದ ರಾಣೀ-ಕೀ-ಸರಾಯ್ ಶಾಲೆಗೆ ಸುಮಾರು ಎರಡೂವರೆ ಕಿಲೋಮೀಟರ್ ದೂರ. ದನಕಾಯುವ ಸತಮೀಯ ಮಗ ಮದ್ದೂವನ್ನು ಜೊತೆ ಮಾಡುವುದೆಂದು ಯೋಚಿಸಿದರು. ಮದ್ದೂ, ಕೇದಾರನ ಸಮವಯಸ್ಕ ಹಾಗೂ ಗೆಳೆಯ. ಇನ್ನೂ ಸಣ್ಣವ, ಏನು ಕಲಿತಾನು ಎಂದು ನಾನೀ ಹೇಳಿದರೆ ಕಡೇ ಪಕ್ಷ ಶಾಲೆಯಲ್ಲಿ ಕುಳಿತುಕೊಳ್ಳುವುದನ್ನಾದರೂ ಕಲಿತಾನೋ-ಎಂದರು ನಾನಾ.

1898ನೇ ಇಸವಿ ನವೆಂಬರಿನಲ್ಲಿ ಒಂದು ದಿನ ಒಳ್ಳೆಯ ಮುಹೂರ್ತ ನೋಡಿ ನಾನಾನ ಅಣ್ಣನ ಕೊನೆಯ ಮಗ ರಾಮದೀನ, ಕೇದಾರನನ್ನು ರಾಣೀ-ಕೀ-ಸರಾಯ್ ಶಾಲೆಗೆ ಸೇರಿಸಿ ಬಂದ. ಆಗ ಉರ್ದು ಭಾಷೆಗೆ ಹಿಂದಿ ಭಾಷೆಗಿಂತಲೂ ಹೆಚ್ಚು ಆದರವಿತ್ತು. ಕೇದಾರನ ಹೆಸರು ಶಾಲೆಯಲ್ಲಿ ದಾಖಲಾಯಿತು.

ರಾಣೀ-ಕೀ-ಸರಾಯ್ ಒಂದು ಸಣ್ಣ ಗ್ರಾಮವಾಗಿದ್ದ ಕಾಲವದು. ಆ ತನಕ ಅಲ್ಲಿ ರೈಲು ಸಂಪರ್ಕವೂ ಇರಲಿಲ್ಲ. ಆಜಮ್‌ಗಢದಿಂದ ಜೌನ್‌ಪುರ ಮತ್ತು ವಾರಣಾಸಿ ಕಡೆ ಹೋಗುವ ಮುಖ್ಯ ಮಾರ್ಗದ ಹಾದಿಯಲ್ಲಿರುವ ಕಾರಣ ಅದಕ್ಕೆ ಸ್ವಲ್ಪ ಮಹತ್ವವಿತ್ತು. ಮೇಂಹ ನಗರದ ರಾಜನ ಪತ್ನಿ ಇಲ್ಲಿ ಧರ್ಮಶಾಲೆ-ಸರಾಯ್-ಕಟ್ಟಿಸಿದ್ದಳು. ಹೀಗಾಗಿ ಗ್ರಾಮದ ಹೆಸರು ರಾಣೀ-ಕೀ-ಸರಾಯ್ ಎಂದಾಯಿತು. ಅವಳೇ ಕಟ್ಟಿಸಿದ ಕೆರೆ-ರಾಣೀ ಸಾಗರದ ಮೂಲೆಯಲ್ಲಿ ನಾಲ್ಕು ಗೋಡೆಗಳಿಂದ ಸುತ್ತುವರಿದ ಶಾಲೆಯ ಪ್ರಾಂಗಣವಿತ್ತು. ಅಲ್ಲಿಯೇ ಬಿಸಿಲಿನ ಮೇಲೆ ಹಾಸಿದ ಗೋಣಿತಾಟಿನ ಮೇಲೆ ಕೇದಾರ ಮತ್ತು ಅವನ ಪಕ್ಕದಲ್ಲಿ ಮದ್ದೂ ಕುಳಿತುಕೊಳ್ಳುತ್ತಿದ್ದರು.

ಆದರೆ ಕೇದಾರ ರಾಣೀ-ಕೀ-ಸರಾಯ್‌ಗೆ ಹೆಚ್ಚು ದಿನ ಹೋಗಲು ಸಾಧ್ಯವಾಗಲಿಲ್ಲ. ಯಾರೋ ಯಾತಕ್ಕೋ ಅಧ್ಯಾಪಕರೊಂದಿಗೆ ಜಗಳವಾಡಿದರು. ಶಾಲೆ 'ಬಂದ್' ಆಯಿತು. ಮರುವರ್ಷದ ಚಳಿಗಾಲದಲ್ಲಿ ಪುನಃ ಅವನನ್ನು ಆ ಶಾಲೆಗೆ ಕಳಿಸಿದರು. ಆದರೆ ಈಗ ಮದ್ದೂವಿನ ಬದಲಿಗೆ ದಲಸಿಂಗಾರ ಹೊಸ ಸಹಪಾಠಿ ಆಗಿದ್ದ. ಹೊಸ ಅಧ್ಯಾಪಕರು, ಬಾಬೂ ದ್ವಾರಿಕಾ ಪ್ರಸಾದ ಸಿಂಹ. ಗಂಟು ಮುಖ, ಮಾತುಕತೆ ಪೋಷಾಕಿನಲ್ಲಿ ಶಹರೀ ಶೋಕಿನವರು. ವಿದ್ಯಾರ್ಥಿಗಳಿಗೆ ಅವರೆಂದರೆ ಭಯ.

ದಲಸಿಂಗಾರ ಮತ್ತು ಕೇದಾರ ಸುಮಾರು ಒಂದೇ ವಯಸ್ಸಿನವರು, ಒಂದೇ ಸ್ವಭಾವದವರು. ಸಂಬಂಧಿಕರೂ ಕೂಡ. ಹೀಗಾಗಿ ಪರಸ್ಪರ ಹಚ್ಚಿಕೊಂಡಿದ್ದರು. ಬೆಳ್ಳಂಬೆಳಗ್ಗೆಯೇ ತಂಗಳು ಉಂಡು ಮನೆಯಿಂದ ಹೊರಡುತ್ತಿದ್ದರು. ಮಧ್ಯಾಹ್ನಕ್ಕೆಂದು ಹುರಿಗಾಳು ಅಥವಾ ಬೆಲ್ಲದಲ್ಲಿ ಕಲಸಿದ ಹುರಿ ಹಿಟ್ಟಿನ ಬುತ್ತಿ ಕಟ್ಟಿಕೊಂಡು ಬರುತ್ತಿದ್ದರು. ಪಂದಹಾದಿಂದ ಶಾಲೆಗೆ ಬಂದು ಹೋಗಲು ಎರಡು ರಸ್ತೆಗಳಿದ್ದುವು. ಒಂದು ಕಾಲು ದಾರಿ. ಮತ್ತೊಂದು ಒರಟು ರಸ್ತೆ. ಕಾಲು ದಾರಿ ಕಾಡಿನ ಭೂತದ ಕೊಳದ ಹತ್ತಿರವಾಗಿ ಸಾಗಿದರೆ, ಒರಟು ರಸ್ತೆಯ ಬದಿಯಲ್ಲಿನ ಅರಳೀ ಮರದಡಿ 'ಬಾಬಾ ಸಾಹೇಬ'ನ ಸ್ಥಾನವಿತ್ತು. ಈ ಎರಡೂ ಹಾದಿಯಾಗಿ ಎಂತಹ ಜಾಣನೂ ಒಬ್ಬನೇ ಸಂಚರಿಸುವ ಸಾಹಸಕ್ಕೆ ಮುಂದಾಗುತ್ತಿರಲಿಲ್ಲ. ಶಾಲೆಗೆ ಹೋಗುವಾಗ ಕೇದಾರ ಮತ್ತು ದಲಸಿಂಗಾರ ಸಾಮಾನ್ಯವಾಗಿ ಕಾಲು ಹಾದಿಯ ಮಾರ್ಗವಾಗಿ ಸಾಗುತ್ತಿದ್ದರು. ಬರುವಾಗ ಚಿನ್ನೀ-ದಾಂಡು ಅಥವಾ ಇನ್ನೇನಾದರೂ ಆಟವಾಡುತ್ತ ಹೊತ್ತಾಗಿ ಬಿಡುತ್ತಿತ್ತು. ಹೀಗಾಗಿ ರಸ್ತೆಯನ್ನು ಆರಿಸಿಕೊಳ್ಳುತ್ತಿದ್ದರು.

ನಾನಾನ ಮುದ್ದು ಪ್ರೀತಿ ಹಾಗೂ ಶಿಸ್ತಿನಿಂದಾಗಿ ಕೇದಾರನಿಗೆ ಆಟೋಟಗಳಲ್ಲಿ ಹೆಚ್ಚು ಭಾಗವಹಿಸಲು ಆಗುತ್ತಿರಲಿಲ್ಲ. ಊಟಕ್ಕೂ, ಅವನ ರುಚಿಯೇ ಬೇರೆ. ಸಾರು-ಅನ್ನ ಕಂಡರಾಗುತ್ತಿರಲಿಲ್ಲ. ಹಾಲು, ಮೊಸರು, ಸಕ್ಕರೆ ತಿನಿಸು, ಮೀನು-ತರಕಾರಿ ಜೊತೆ ರೊಟ್ಟಿ ಎಂದರೆ ಬಹಳ ಪ್ರಿಯ. ಕೇದಾರನೇ ಅಂಗಳದಲ್ಲಿ ಮೀನಿನ ಪದಾರ್ಥ ಬೇಯಿಸುತ್ತಿದ್ದ. ನಾನೀ ಮಸಾಲೆ ಕುಟ್ಟಿ ಕೊಡುತ್ತಿದ್ದಳು. ಮತ್ತು ಮಾಡುವದು ಹೇಗೆಂದೂ ಹೇಳಿಕೊಡುತ್ತಿದ್ದಳು.

ನಾನಾ ಮೊಮ್ಮಗನ ಕಾಲು ಕೈಗೆ ಬೆಳ್ಳಿಯ ದಪ್ಪ ಕಡಗ, ಕಿವಿಗೆ ಬಂಗಾರದ ವಂಟಿ ತೊಡಿಸಿದ್ದ. ಉಡುಗೆಯೇನೋ ಸರಳ. ಎರಡು ಮಾಮೂಲಿ ಧೋತಿ, ಒಂದು ಅಂಗವಸ್ತ್ರ, ಬಿಸಿಲುಗಾಲದಲ್ಲಿ ಹತ್ತಿ ಬಟ್ಟೆಯ ಕುರ್ತಾ. ಚಳಿಗೆ ಉಣ್ಣೆಯ ನಿಲುವಂಗಿ. ಶಾಲೆಗೆ ಹೋಗುವಾಗ ಟೊಪ್ಪಿ ಹಾಕಿಕೊಳ್ಳಲೇ ಬೇಕಿತ್ತು. ಕೇದಾರನ ಟೊಪ್ಪಿ ಆಗಾಗ ಕಳೆದು ಹೋಗುತ್ತಿತ್ತು. ಹಾಗಾಗಿ ಕುರ್ತಾ ಜೊತೆಗೆ ಅದನ್ನು ಸೇರಿಸಿ ಟಾಕು ಹಾಕಿಡುವ ಉಪಾಯ ಮಾಡಬೇಕಾಯಿತು. ಹಳ್ಳಿ ಹುಡುಗರಿಗೆ ಚಪ್ಪಲಿ ಅನವಶ್ಯಕವೆನಿಸಿಕೊಂಡಿತ್ತು.

ಕೇದಾರ ಕಲಿಯುವುದರಲ್ಲಿ ಚುರುಕಾಗಿದ್ದ. ತುಂಬಾ ಹರಿತವಾದ ಸ್ಮರಣ ಶಕ್ತಿ. ಪಾಠ ಓದುವುದು ಅವನ ಮಟ್ಟಿಗೆ ಕೇವಲ ಮೂರು ನಾಲ್ಕು ತಿಂಗಳ ಕೆಲಸ. ರಾಹುಲರೇ ಬರೆದಿದ್ದಾರೆ: "ಓದುವುದು ನನಗೆ ಏನೇನೂ ಕಷ್ಟದ್ದಾಗಿರಲಿಲ್ಲ. ವಾಸ್ತವವಾಗಿ ನಾಲ್ಕು ತಿಂಗಳ ಓದಿಗಾಗಿ ನನ್ನ ಹನ್ನೆರಡು ತಿಂಗಳು ಸುಮ್ಮನೆ ದಂಡವಾಗುತ್ತಿತ್ತು."

ಡಿಸೆಂಬರ್‌ನಲ್ಲಿ ನಡೆಯುವ ವಾರ್ಷಿಕ ಪರೀಕ್ಷೆಗಾಗಿ ಕೇದಾರ ಅಸಹನೆಯಿಂದ ಕಾಯುತ್ತಿದ್ದ. ಪರೀಕ್ಷೆಯ ನಂತರದ ರಜೆಯಲ್ಲಿ ಒಂದೆರಡು ವಾರಗಳಿಗಾಗಿ ತಂದೆಯ ಊರು ಕನೈಲಾಗೆ ಹೋಗುತ್ತಿದ್ದ. ಪಂದಹಾದಲ್ಲಿ ಎಷ್ಟು ಬಿಗಿಯೋ, ಕನೈಲಾದಲ್ಲಿ ಅಷ್ಟೇ ಸ್ವಾತಂತ್ರ್ಯ. ವರ್ಷಕ್ಕೊಮ್ಮೆ ಕನೈಲಾಕ್ಕೆ ಹೋಗುತ್ತಿದ್ದುದರಿಂದ ಅಲ್ಲಿ ಆಸುಪಾಸಿನ ಮನೆಯವರೂ ತುಂಬ ಪ್ರೀತಿ ತೋರಿಸುತ್ತಿದ್ದರು. ಅಲ್ಲೆಂದರೆ ಕುಣಿದು ಕುಪ್ಪಳಿಸುವುದು, ಬಿಲ್ಲು ಬಾಣ ತಯಾರಿ ಮಾಡುವುದು, ಸಮವಯಸ್ಕರೊಂದಿಗೆ ಸೇರಿ ಆಗ ಈಗ ಕೊಳದಲ್ಲಿ ಮೀನು ಹಿಡಿಯಹೋಗುವುದು-ಹೀಗೇ. ಕನೈಲಾದ ಮುಸಲ್ಮಾನ

ಬಳೆಗಾರರ ಮನೆಯಲ್ಲಿ ತಿಂಗಳಿಗೊಮ್ಮೆ ಆಡು ಕೊಯ್ಯುತ್ತಿದ್ದರು. ಹೀಗಾಗಿ ಕೇದಾರನಿಗೆ ಆಗಾಗ ಅಲ್ಲಿಂದ ಮಾಂಸವೂ ಸಿಗುತ್ತಿತ್ತು.

ಪ್ರಾರಂಭದ ಶ್ರೇಣಿಯ ಪರೀಕ್ಷೆಗಳನ್ನು ಪಾಸು ಮಾಡಿದ ಮೇಲೆ ಒಂಭತ್ತು ವರ್ಷದ ಕೇದಾರ ಒಂದನೇ ದರ್ಜೆ ಮುಟ್ಟಿದ. ಆ ವರ್ಷ (1902 ಇಸವಿ) ಮಳೆ ಆರಂಭವಾಗುವುದಕ್ಕಿಂತಲೂ ಮುಂಚಿನ ಮಾತು. ಒಂದು ದಿನ ರಾಣೀ-ಕೀ-ಸರಾಯ್ ಶಾಲೆಯನ್ನು ಚೊಕ್ಕ ಮಾಡುತ್ತ ಇದ್ದರು. ದಲಸಿಂಗಾರ್ ಕೂಡಾ ಸೇರಿಕೊಂಡಿದ್ದ. ಮಧ್ಯಾಹ್ನ ಕೆಲಸ ನಿಲ್ಲಿಸಿ ಬಿಟ್ಟ. ಮೈ ಬಿಸಿಯಾಗಿತ್ತು. ಇಡೀ ದೇಹ ನೋವಿನಿಂದ ಸಿಡಿಯುತ್ತಿತ್ತು. ಕಣ್ಣು ಕೆಂಪಾಗಿತ್ತು. ಒಂದೆರಡು ಸಲ ವಾಂತಿಯೂ ಆಯಿತು. ಕೇದಾರ ದುರ್ಬಲನಾಗಿದ್ದರೂ ಸಹಪಾಠಿಯನ್ನು ಬೆನ್ನಿಗೇರಿಸಿಕೊಂಡು ಹತ್ತು ಹತ್ತು ಹೆಜ್ಜೆ ನಡೆಯುವುದು, ಕೂರುವುದು, ಏಳುವುದು ಮಾಡುತ್ತಾ ಅಂತೂ ರಾತ್ರಿಗೆ ಮೊದಲು ಪಂದಹಾಕ್ಕೆ ಕರೆತಂದ.

ಮಾರನೇ ದಿನ ನಾನೀ ಕಾಲೆರಾ ಹಬ್ಬುತ್ತಿದೆ, ಹುಡುಗನನ್ನು ಕನೈಲಾಕ್ಕೆ ಕಳಿಸಿಬಿಡಿ ಎಂದಳು.

ಕೇದಾರ ಕನೈಲಾಕ್ಕೆ, ತಂದೆತಾಯಿಯರಲ್ಲಿಗೆ ಹೋಗಿ ತಲುಪಿದ. ನೋಡಿದರೆ ಅಲ್ಲಿ ಶತಚಂಡಿಯ ಪಾಠ ನಡೆಯುತ್ತಿದೆ, ಕ್ರಮ ಪ್ರಕಾರ ಸಂಸ್ಕೃತದಲ್ಲಿ. ಪಾಠ ಮಾಡುತ್ತಿರುವವರು ಅವನ ಸೋದರತ್ತೆಯ ಗಂಡ, ಮಾವ, ಆಸುಪಾಸಿನಲ್ಲೆಲ್ಲ ತನ್ನ ಸಂಸ್ಕೃತ ಜ್ಞಾನಕ್ಕಾಗಿ ಹೆಸರುವಾಸಿಯಾದ ಮಹಾದೇವ ಪಂಡಿತ. ಒಂದು ತಿಂಗಳ ಬಳಿಕ ಶತಚಂಡೀ ಪಾಠ ಮುಗಿಯಿತು. ಮಾವ ತನ್ನ ಊರು ಬಛವಲ್‌ಗೆ ವಾಪಾಸಾಗುವಾಗ ಕೇದಾರನನ್ನೂ ಜೊತೆಗೆ ಕರೆದುಕೊಂಡು ಹೋದರು, ಅವನಿಗೆ ಸಂಸ್ಕೃತ ಕಲಿಸುವ ಉದ್ದೇಶದಿಂದ. ಕೇದಾರ ಮಾವನ ಜೊತೆ ಕುದುರೆ ಏರಿ ಕನೈಲಾದಿಂದ ಬಛವಲ್ ವರೆಗಿನ ಐದು ಕಿಲೊಮೀಟರ್ ಪ್ರಯಾಣ ಮಾಡಿದ. ಆತ ಬಛವಲ್‌ಗೆ ಹೋಗುತ್ತಿರುವುದು ಇದೇ ಮೊದಲ ಬಾರಿ.

ಸುಮಾರು ಒಂದು ವಾರದ ನಂತರ ಮಹಾದೇವ ಪಂಡಿತರು ಕೇದಾರನಿಗೆ "ನತ್ವಾ ಸರಸ್ವತೀ ದೇವೀ"ಯಿಂದ ತೊಡಗಿ ಸಾರಸ್ವತ ವ್ಯಾಕರಣ ಪಾಠ ಹೇಳಲು ಸುರು ಮಾಡಿದರು. ಬಛವಲ್‌ನಲ್ಲಿ ಆಟ ಕುಣಿತಕ್ಕೆಲ್ಲ ಸ್ವಾತಂತ್ರ್ಯವಿತ್ತು. ಕೇದಾರನಿಗೆ ಸಂಸ್ಕೃತ ಓದಿನಲ್ಲಿಯೂ ಮನಸ್ಸು ನೆಟ್ಟಿತು. ಆದರೆ ಒಂದು ತಿಂಗಳೂ ಕಳೆದಿಲ್ಲ, ಪಂದಹಾಕ್ಕೆ ಬರಬೇಕೆಂಬ ಒಸಗೆ ಬಂತು. ಪ್ರಥಮ ಸಲ ಸಂಸ್ಕೃತದೊಂದಿಗೆ ಜೋಡಿಕೊಂಡ ಸಂಬಂಧ ಬೇಗನೇ ಕಡಿದು ಹೋಯಿತು. ಆದರೆ ಅದೇ ಮೊದಲ ಬಛವಲ್ ಯಾತ್ರೆಯಲ್ಲಿಯೇ ದೀರ್ಘ ಕಾಲದ ಒಂದು ಸ್ಥಾಯೀ ಸಂಬಂಧವೂ ಸ್ಥಾಪನೆಗೊಂಡಿತು. ಮಾವ ಮಹಾದೇವ ಪಂಡಿತರ ಸೋದರನ ಮಗ ಯಾಗೇಶ ಕೇದಾರನ ಅತ್ಯಂತ ನಿಕಟ ಸ್ನೇಹಿತನಾದ. ಮುಂದಣ ದಿನಗಳಲ್ಲಿ ಕೇದಾರನ ಅನೇಕ ಪ್ರವಾಸಗಳಲ್ಲಿ ಯಾಗೇಶ ಅವನ ಜೊತೆಗಾರನಾಗಿದ್ದ.

ಕಾಲೆರಾದಲ್ಲಿ ಊರಿನ ಹತ್ತು ಹನ್ನೆರಡು ಮಂದಿ ತೀರಿಕೊಂಡಿದ್ದಾರೆಂದು ಪಂದಹಾ ತಲುಪಿದ ಮೇಲೆ ತಿಳಿಯಿತು. ದಲಸಿಂಗಾರ್ ಬಚಾವಾಗಿದ್ದ. ಆದರೆ ಅವನ ತಾಯಿ ಅವನ ಶಾಲೆ ಬಿಡಿಸಿದಳು. ಕೇದಾರನಿಗೆ ಕೆಲ ದಿನಗಳವರೆಗೆ ಶಾಲೆಗೆ ಹೋಗಲು ಒಬ್ಬಿಬ್ಬ ಜೊತೆಗಾರರು ಸಿಕ್ಕಿದರೂ ಕ್ರಮೇಣ ಒಬ್ಬನೇ ಹೋಗತೊಡಗಿದ. ಈಗ ರಾಣೀ-ಕೀ-ಸರಾಯ್ ಶಾಲೆ 'ಹೈಯರ್ ಪ್ರೈಮರಿ' ಆಗಿತ್ತು.

ಅದೇ ವರ್ಷ (1902) ಒಂಭತ್ತರ ಬಾಲಕ ಕೇದಾರನಿಗೆ ವಿಂಧ್ಯಾಚಲದಲ್ಲಿ ಉಪನಯನವಾಯಿತು, ಅಲ್ಲೇ ಉಪನಯನ ಮಾಡಲು ಅವರು ಹರಕೆ ಹೊತ್ತಿದ್ದರು. ಚಿಕ್ಕಪ್ಪ ಪ್ರತಾಪ ಪಾಂಡೇಯ ಜೊತೆ ಕೇದಾರ ಮೊದಲ ಸಲ ರೈಲು ಪ್ರಯಾಣ ಮಾಡಿದ. ಬನಾರಸಿನ ಮೊದಲ

ದರ್ಶನವೂ ಆಯಿತು. ಆತನ-ರಾಹುಲರ-ಮುಂದಣ ಸಾಹಸಪೂರ್ಣ ಯಾತ್ರೆಗಳಿಗೆ ಆಗಲೇ ಇದು ಶುಭಾರಂಭ. ವಿಂಧ್ಯಾಚಲಕ್ಕೆ ಹೋಗುತ್ತ ಚಿಕ್ಕಪ್ಪ-ಮಗ ಬನಾರಸಿ ಒಂದು ಮಠದಲ್ಲಿ ತಂಗಿದರು. ಗಂಗಾಸ್ನಾನದ ನಂತರ ವಿಶ್ವನಾಥನ ದರ್ಶನ ಮಾಡಿ ಹಿಂದಿರುಗುವಾಗ ಚಿಕ್ಕಪ್ಪ ಒಬ್ಬ ಮಣಿಸರಕಿನವನಿಂದ ತನಗೋಸ್ಕರ ಕೆಲ ವಸ್ತುಗಳನ್ನು ಖರೀದಿಸಿದರು. ಕೇದಾರನಿಗಾಗಿ ಎರಡೋ ಮೂರೋ ಕಾಸಿಗೆ ಒಂದೆರಡು ಉರ್ದು ಕಥೆ ಪುಸ್ತಕಗಳನ್ನು ಕೊಂಡರು.

ಕೇದಾರ ಅರ್ದೇ ದಿನ ಆ ಪುಸ್ತಕಗಳನ್ನು ಓದಿ ಮುಗಿಸಿದ. ಮರುದಿನ ಬೆಳಿಗ್ಗೆ ಚಿಕ್ಕಪ್ಪನಿಗೆ ಹೇಳದೇನೇ ಮೆಲ್ಲಗೆ ರಸ್ತೆಗಿಳಿದು ಹಲವು ತಿರುವುಗಳಲ್ಲಿ ತಿರುಗಿ ಚೌಕಕ್ಕೆ ಬಂದು ಮುಟ್ಟಿಕೊಂಡ. ಅದೇ ಸರಕಿನವನಿಂದ ಎರಡೆರಡು ಪೈಸೆಗೆ ಆರೇಳು ಪುಸ್ತಕಗಳನ್ನು ಕೊಂಡು ಹಿಂದಿರುಗುವಾಗ ದಾರಿಯಲ್ಲಿ ಕಂಗಾಲಾಗಿದ್ದ ಚಿಕ್ಕಪ್ಪ ಎದುರಾದರು. ಬನಾರಸಿನಂತಹ ಪಟ್ಟಣದಲ್ಲಿ ಹಳ್ಳಿ ಹುಡುಗನೊಬ್ಬ ತಿರುಗುವುದೆಂದರೆ ಭಯದ ಮಾತೇ ಸರಿ. ಕಳೆದು ಹೋದ ಹುಡುಗ ಸಿಕ್ಕಿದ, ಚಿಕ್ಕಪ್ಪ ನೆಮ್ಮದಿಯ ಉಸಿರು ಬಿಟ್ಟರು.

ಮುಂದಣ ಸಾಹಸಮಯ ಸಂಚಾರಗಳಿಗೆ ಪ್ರೇರಣಾಪ್ರದ ಗುರುಮಂತ್ರ ಕೂಡ ಕೇದಾರನಿಗೆ ಶೀಘ್ರವೇ ದೊರಕಿತು. ಎರಡನೇ ದರ್ಜೆ ಪಾಸಾಗಿ ಮೂರನೇ ದರ್ಜೆಗೆ ಬಂದಾಗ ಉರ್ದು ಹೊಸ ಪಠ್ಯದಲ್ಲಿ ಒಂದು ಪದ್ಯ ಓದಲು ಸಿಕ್ಕಿತು.

ಸೈರ್ ಕರ್ ದುನಿಯಾಂ ಕೀ ಗಾಫಿಲ್ ಜಿಂದಗಾನೀ ಫಿರ್ ಕಹಾಂ ?
ಜಿಂದಗೀ ಗರ್ ಕುಛ್ ರಹೀ ತೋ ನೌಜವಾನೀ ಫಿರ್ ಕಹಾಂ ?
(ಸಂಚರಿಸು ಲೋಕ, ಎಲೆ ಮೂರ್ಖ, ಇನ್ನೆಲ್ಲಿದೆ ಜೀವನ ?
ಇರುವುದಾದರೆ ಬದುಕು ಕೊಂಚ, ಎಲ್ಲಿ ? ಇಲ್ಲೇ ಯೌವನ)

"ಆ ಪದ್ಯ ನನ್ನ ಮನಸ್ಸು ಮತ್ತು ಭವಿಷ್ಯದ ಮೇಲೆ ಆಳವಾದ ಪ್ರಭಾವ ಬೀರಿತು" ಎಂದಿದ್ದಾರೆ ರಾಹುಲಜೀ.

ಹನ್ನೊಂದು ವರ್ಷದ ಕೇದಾರ (1904) ಈಗ ಮೂರನೇ ದರ್ಜೆಯ ವಿದ್ಯಾರ್ಥಿ. ಎರಡು ವರ್ಷದ ನಂತರ ದಲಸಿಂಗಾರ್‌ನನ್ನು ಪುನಃ ಶಾಲೆಗೆ ಸೇರಿಸಿದಾಗ ಕೇದಾರನಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಆದರೆ ಆ ಸಂತೋಷ ಬಹಳ ದಿನ ಉಳಿಯಲಿಲ್ಲ. ದಲಸಿಂಗಾರ್ ತೀವ್ರ ಕಾಹಿಲೆ ಬಿದ್ದು ತೀರಿಕೊಂಡ! ಕೇದಾರನ ಕಿಶೋರ ಮನಸ್ಸಿಗೆ ಸಾವಿನ ಮೊತ್ತಮೊದಲ ಆಘಾತದ ಅನುಭವ.

ಒಂದು ವರ್ಷದ ಹಿಂದೆಯೇ ರಾಣೀ-ಕೀ-ಸರಾಯ್‌ಗೆ ರೈಲು ಬಂದಿತ್ತು. ರೈಲು ಮತ್ತು ಪ್ಲೇಗಿನ ನಡುವೆ ಅಭೇದ್ಯ ಸಂಬಂಧವಿದೆ ಎಂದು ಜನ ಭಾವಿಸಿದ್ದರು. 1904ನೇ ಇಸವಿಯ ಕೊನೆಯ ತಿಂಗಳುಗಳಲ್ಲಿ ನಿಜಕ್ಕೂ ಇಲಿಗಳು ಬೀಳಲಾರಂಭಿಸಿದುವು. ಶಾಲೆಯನ್ನು ಮೂರು ಕಿಲೋಮೀಟರ್ ದೂರದ ಒಂದು ಹಳ್ಳಿಗೆ ಸ್ಥಳಾಂತರಿಸಿದರು. ಪಂದಹಾದಲ್ಲಿಯೂ ಪ್ಲೇಗು ಹಬ್ಬುತ್ತಿದ್ದ ಕಾರಣ ಕೇದಾರ ಶಾಲೆಯಲ್ಲಿಯೇ ಉಳಿಯಬೇಕಾಯಿತು. ಇದೇ ಮೊದಲಾಗಿ ಸ್ವತಃ ಅಡುಗೆ ಮಾಡಿಕೊಳ್ಳಬೇಕಾಗಿ ಬಂತು.

ಆ ವರ್ಷವೇ ಯೋಗೇಶನ ವಿವಾಹ ಸಂಭ್ರಮದಲ್ಲಿ ಪಾಲ್ಗೊಳ್ಳಲು ಕೇದಾರ ಬಛವಲ್‌ಗೆ ಹೋದ. ಹಿರಿಯಣ್ಣನಾದ್ದರಿಂದ ಮದುಮಗಳ ಕೊರಳಲ್ಲಿ ಕೆಂಪುದಾರ ಹಾಕುವ ಶಾಸ್ತ್ರವನ್ನು ಪೂರೈಸಿದ.

ಜೀವನದಲ್ಲಿ ಪ್ರಥಮ ಸಲ ಚಪ್ಪಲಿ ಮೆಟ್ಟಿದ್ದು ಆಗಲೇ. ಆತ ದಿಬ್ಬಣಿಗನಾಗಿ ಹೋಗಿದ್ದು ಕೂಡ ಇದೇ ಮೊದಲು.

ಆ ವರ್ಷವೇ ಕೇದಾರನ ವಿವಾಹವೂ ಆಯಿತು. ಪ್ಲೇಗು ಹಬ್ಬುತ್ತಲೇ ಇತ್ತು. ಬೇಸಗೆಯ ರಜೆಗೆ ಕೇದಾರ ಪಂದಹಾಕ್ಕೆ ಬಂದಿದ್ದ. ಒಂದು ದಿನ ನಾನಾನ ಮಾವನ ಮನೆಯ ಒಬ್ಬ ಸಜ್ಜನ, ಬಹುಶಃ ಮೊದಲೇ ಆರೆ ಒಪ್ಪಿಗೆಯ ಬಲದ ಮೇಲೆ, ತಿಲಕವಿರಿಸಲು ಏಕಾಏಕಿ ಬಂದುಬಿಟ್ಟರು. ನಾನಾ ಕೇದಾರನನ್ನು ರಹಸ್ಯವಾಗಿ ಕನ್ನೈಲಾಕ್ಕೆ ಕಳಿಸಿದರು. ತಿಲಕವಿಟ್ಟು ಹೋಗಲು ಬಂದ ಜನ, ಮರುದಿನ ಸ್ವತಃ ಕನ್ನೈಲಾಕ್ಕೆ ಧಾವಿಸಿದರು. ಸಾಕಷ್ಟು ವಾದ-ವಿವಾದದ ನಂತರ ಸರಿರಾತ್ರಿಯಲ್ಲಿ ತಿಲಕವೇರಿಸಿದರು. ಅದೇ ಬೇಸಿಗೆಯಲ್ಲಿ ಒಂದು ಸಣ್ಣ ದಿಬ್ಬಣ ಹೊರಟಿತು. ಕೇದಾರನ ಮದುವೆ ನಡೆದು ಬಿಟ್ಟಿತು.

"ಆಗ ಹನ್ನೊಂದು ವರ್ಷದವನಾಗಿದ್ದ ನನಗೆ ಎಲ್ಲವೂ ತಮಾಷೆಯಾಗಿ ಕಂಡಿತು. ಇಡೀ ಜೀವನದ ಬಗ್ಗೆ ಯೋಚಿಸಿದಾಗ ನನ್ನಲ್ಲಿ ಸಮಾಜದ ವಿರುದ್ಧ ವಿದ್ರೋಹದ ಪ್ರಥಮ ಅಂಕುರ ಮೊಳೆಯುವಂತೆ ಮಾಡಿದ ಮೊದಲ ಘಟನೆ ಇದು. ನಾನು ಹದಿನೈದು ವರ್ಷದವನಾಗಿದ್ದಾಗಲೇ ಅದನ್ನು ಸಂಶಯ ದೃಷ್ಟಿಯಿಂದ ನೋಡತೊಡಗಿದ್ದೆ. ಹನ್ನೊಂದು ವರ್ಷದ ಅಪ್ರಾಪ್ತ ವಯಸ್ಸಿನಲ್ಲಿ ನನ್ನ ಜೀವನವನ್ನೇ ಮಾರುವ ಅಧಿಕಾರ ಮನೆಯವರಿಗಿಲ್ಲ-ಎಂಬ ಉತ್ತರವನ್ನು ನಾನು ಅವತ್ತೇ ಆ ಹಿರಿಯರಿಗೆ ಕೊಟ್ಟು ಬಿಟ್ಟಿದ್ದರೆ? ನಾನು ಅದನ್ನು ಎಂದಿಗೂ ಮದುವೆ ಅಂತ ತಿಳಿಯಲಿಲ್ಲ, ಆ ಜವಾಬ್ದಾರಿ ನನ್ನ ಮೇಲಿದೆ ಎಂದೂ ಭಾವಿಸಲಿಲ್ಲ" ಎಂದಿದ್ದಾರೆ ರಾಹುಲಜೀ.

ಪ್ಲೇಗು ಇದ್ದರೂ, ರಾಣೀ-ಕೀ-ಸರಾಯ್ ಶಾಲೆಯಲ್ಲಿ ಕೇದಾರನ ಓದು ನಡೆಯುತ್ತಲೇ ಇತ್ತು. ಬಿಟ್ಟು ಬಿಟ್ಟು ಹೋಗುವ ಅಧ್ಯಾಪಕರಿಂದಾಗಿ ಓದು ಕುಂಟುತ್ತಲೇ ಸಾಗಿತ್ತು. ಹದಿಮೂರು ಹದಿನಾಲ್ಕು ಮಕ್ಕಳಿದ್ದ ನಾಲ್ಕನೇ ದರ್ಜೆಯಲ್ಲಿ ಕೇದಾರ ಉರ್ದು ಕಲಿಯುತ್ತಿದ್ದ ಏಕೈಕ ವಿದ್ಯಾರ್ಥಿಯಾಗಿದ್ದ. ವಾರ್ಷಿಕ ಪರೀಕ್ಷೆಯಲ್ಲಿ ಪಾಸಾದವರು ಇಬ್ಬರು ಮಾತ್ರ. ಒಬ್ಬ ಕೇದಾರ, ಮತ್ತೊಬ್ಬ ಗಿರಿಧಾರಿ.

ಕೇದಾರನ ತಾಯಿ ಕೆಲ ತಿಂಗಳಿಂದ ಕಾಹಿಲೆ ಮಲಗಿದ್ದಳು. ಹಿರಿಯ ಮಗ ಕೇದಾರನಲ್ಲದೆ ಈಗ ಮತ್ತೆ ಮೂವರು ಗಂಡುಮಕ್ಕಳಿದ್ದರು. ಅವರು ಶ್ಯಾಮಲಾಲ, ರಾಮಧಾರಿ ಮತ್ತು ಶ್ರೀನಾಥ. ರಾಮಪ್ಯಾರೀ ಎಂಬ ಒಬ್ಬ ಮಗಳು. ಶ್ರೀನಾಥ ಹುಟ್ಟಿದಂದಿನಿಂದ ತಾಯಿ ಹಾಸಿಗೆ ಹಿಡಿದಿದ್ದಳು. ಕೊನೆಗೆ, 1905ನೇ ಇಸವಿಯ ಅಂತ್ಯದಲ್ಲಿ ಆಕೆ ತೀರಿಕೊಂಡಳು. ಕೇದಾರನಿಗೆ ತಾಯಿ ಸತ್ತು ಸ್ವಲ್ಪ ಸಮಯದ ನಂತರ ಸುದ್ದಿ ಮುಟ್ಟಿತು. ಕೆಲ ದಿನಗಳ ಕಾಲ ಮನಸ್ಸು ವ್ಯಾಕುಲದಲ್ಲಿತ್ತು. ಆದರೆ ನಾನಿಯ ಧಾರಾಳ ಪ್ರೀತಿ ಅದನ್ನು ಮರೆಸಿತ್ತು. ನಾನೀಯನ್ನು ಆತ 'ಅಮ್ಮ' ಎಂದೇ ಕರೆಯುತ್ತಿದ್ದನಷ್ಟೆ.

ರಾಣೀ-ಕೀ-ಸರಾಯ್‌ನಲ್ಲಿ ಓದು ಮುಗಿಯುತ್ತಲೂ ಹದಿಮೂರು ವರ್ಷದ ಕೇದಾರನಾಥನನ್ನು ಪಂದಹಾದಿಂದ ಸುಮಾರು ಆರು ಕಿಲೋಮೀಟರ್ ದೂರದ ನಿಜಾಮಾಬಾದ್ ಕಸಬಾದಲ್ಲಿನ ಮಿಡ್ಲ್ ಸ್ಕೂಲಿಗೆ ಸೇರಿಸಿದರು. ಒಂದು ಠಾಕುರ್‌ವಾಡಿಯಲ್ಲಿ ಉಳಕೊಳ್ಳುವ ವ್ಯವಸ್ಥೆ ಮಾಡಿದರು ನಾನಾ. ಪ್ಲೇಗು ಹೊರಟು ಹೋದ ಮೇಲೆ,.1909ನೇ ಏಪ್ರಿಲ್‌ನಲ್ಲಿ ಓದು ಕ್ರಮವಾಗಿ ಸುರುವಾಯಿತು. ಕೇದಾರನಿಗಿಂತ ಹೆಚ್ಚು ಓದಿದವರು ಈಗ ನಾನಾನ ಹಳ್ಳಿಯಲ್ಲಾಗಲಿ ಅಥವಾ ಕನ್ನೈಲಾದಲ್ಲಿಯಾಗಲಿ ಯಾರೂ ಇರಲಿಲ್ಲ.

ನಿಜಾಮಾಬಾದ್‌ನಲ್ಲಿ ಕೇದಾರನಿಗೆ ಎಲ್ಲವೂ ಹೊಸತು. ಹೊಸ ಸ್ನೇಹಿತರು, ಜೊತೆಗಾರರು, ಹೊಸ ಅಧ್ಯಾಪಕರು, ಮನೋರಂಜನೆಗೂ ಹೊಸ ಸಾಧನಗಳು. ಓದುವುದರಲ್ಲಿ ಗಟ್ಟಿಗನಾದ ಕೇದಾರ ಮೂರು ನಾಲ್ಕು ತಿಂಗಳುಗಳಲ್ಲಿ ಕ್ಲಾಸಿನಲ್ಲಿ ಎಲ್ಲರಿಗಿಂತ ಮುಂದಿದ್ದ. ಗಣಿತವೆಂದರಂತೂ ಉಳಿದವರ ಜೀವ ನಡುಗುತ್ತಿದ್ದರೆ, ಅವನಿಗದು ಎಡಗೈ ಆಟ. ಪಂಡಿತ ಸೀತಾರಾಮ ಶ್ರೋತ್ರಿಯರು ಗಣಿತ ಮತ್ತು ಹಿಂದಿ ಕಲಿಸುತ್ತಿದ್ದರು. ಅವರು ಹಿಂದೀ ಕವಿ ಪಂಡಿತ ಅಯೋಧ್ಯಾ ಸಿಂಹ ಉಪಾಧ್ಯಾಯ 'ಹರಿ ಔಧ್'ರ ವಿದ್ಯಾರ್ಥಿ. 'ಹರಿ ಔಧ್' ಅವರು ಹುಟ್ಟಿದ್ದೂ ನಿಜಾಮಾಬಾದ್‌ನಲ್ಲಿಯೇ. ಅಲ್ಲಿ ಅವರು ಮುಖ್ಯ ಅಧ್ಯಾಪಕರಾಗಿದ್ದರು.

1907ರ ಮಾರ್ಚ್‌ನಲ್ಲಿ ಪರೀಕ್ಷೆ ಮುಗಿಸಿ ಕೇದಾರ ಪಂದಹಾಕ್ಕೆ ಬಂದರೆ ಅಲ್ಲಿ ಇನ್ನೂ ಪ್ಲೇಗ್ ಹರಡುತ್ತಲೇ ಇತ್ತು. ನಾನೀ ಅವನನ್ನು ಕನೈಲಾಗೆ ಕಳಿಸಿದಳು. ಅಲ್ಲಿ ಒಂದೆರಡು ದಿನವಿದ್ದು ಅಲ್ಲಿಂದ ಬಛವಲ್‌ಗೆ ಹೋದ. ಅಲ್ಲಿ ಹರಟೆಗೆ ಮತ್ತು ಕುಣಿತಕ್ಕೆ ಯಾಗೇಶ ಮತ್ತಿತರ ಓರಿಗೆಯ ಹುಡುಗರಿದ್ದರು. ಬಛವಲ್‌ನಲ್ಲಿದ್ದಾಗಲೇ ಕೇದಾರನ ನಾನೀ ಪ್ಲೇಗಿಗೆ ಬಲಿಯಾದಳೆಂಬ ಸುದ್ದಿ ಬಂತು.

ಪರೀಕ್ಷೆಯ ಫಲಿತಾಂಶ ಹೊರ ಬಿದ್ದ ಮೇಲೆ ಕೇದಾರ ನಿಜಾಮಾಬಾದ್‌ಗೆ ಹೋದ. ಮನಸ್ಸಿನಲ್ಲಿ ಸಂಚಾರದ ಆಸೆ ಗರಿಕೆದರಿತು. ಊಟಕ್ಕೆಂದು ಇಟ್ಟಿದ್ದ ಹಿಟ್ಟು, ಅಕ್ಕಿಯನ್ನು ಪೇಟೆಯಲ್ಲಿ ಮಾರಿ ಸಿಕ್ಕಿದ ಒಂದೂವರೆ-ಎರಡು ರೂಪಾಯಿ ಹಿಡಿದು, ಹತ್ತಿರದ ಒಂದು ಸ್ಟೇಶನ್ ತಲುಪಿ ಬನಾರಸಿನ ರೈಲು ಹಿಡಿದ. ಮನಸ್ಸಿನಲ್ಲಿ ಮತ್ತು ನಾಲಗೆಯಲ್ಲಿ ಪ್ರೇರಣೆಯ ಸಾಲುಗಳ ಗುನುಗು: "ಸೈರ್ ಕರ್ ದುನಿಯಾಂ ಕೀ ಗಾಫಿಲ್.....ನೌಜವಾನೀ ಫಿರ್ ಕಹಾಂ?"

ಬನಾರಸ್ ಸ್ಟೇಶನ್ ತಲುಪಿದ ಕೇದಾರ ಹಿಂದಿನ ಸಲ ಬಂದಾಗ ಪರಿಚಯವಾದ ಮಠದ ಹತ್ತಿರದ ಒಂದು ಗುಡಿಗೆ ಹೋಗಿ ರೊಟ್ಟಿ ಮಾಡಿಕೊಂಡು ತಿಂದ. ಸಂಜೆಯೊಳಗೆ ಪದ್ಯದ ಪ್ರಭಾವ ಸಾಕಷ್ಟು ಕರಗಿತು, ಮನೆಗೆ ಹಿಂದಿರುಗಲು ನಿರ್ಧರಿಸಿ ರಾತ್ರಿಯ ಗಾಡಿಗೆ, ನಾನಾನ ಭಯದಿಂದ ಪಂದಹಾಕ್ಕೆ ಹೋಗದೆ, ಕನೈಲಾದ ದಾರಿ ಹಿಡಿದ.

ಕೇದಾರನ ಈ ಪ್ರಥಮ ಉಡ್ಡಯನ ವಿಫಲವಾದರೇನಂತೆ ? ಮುಂದಿನ ದೀರ್ಘ ದೂರದ ಉಡಾವಣೆಗಳಿಗೆ ಇನ್ನು ಹೆಚ್ಚು ವಿಳಂಬವಿರಲಿಲ್ಲ.

# ಕಲ್ಕತ್ತಾ ಚಲೋ

ನಾನೀಯ ನಿಧನದ ನಂತರ ಕೇದಾರ ಮತ್ತು ಅವನ ತಂಗಿ ರಾಘುಪ್ಯಾರೀ ಇಬ್ಬರೂ ಸೇರಿ ಮನೆ ಸಂಭಾಳಿಸುತ್ತಿದ್ದರು. ಒಂದು ದಿನ ತಪ್ಪಲೆಯಲ್ಲಿ ಬೆಣ್ಣೆ ಕರಗಿಸಿ ತುಪ್ಪ ಮಾಡಿದರು. ಬೆಕ್ಕಿನ ಕಣ್ಣಿಗೆ ಬೀಳದಂತೆ ಮಣ್ಣಿನ ಪಾತ್ರೆಯನ್ನು ಅದರ ಮೇಲೆ ಬೋರಲು ಹಾಕಿದರು. ರಾತ್ರಿಯ ಕತ್ತಲಲ್ಲಿ ಬೋರಲು ಪಾತ್ರೆಯ ಅಂಚು ತಪಲೆಯ ಮೇಲೆ ಬಿದ್ದಿದೆ ಎಂದು ತಿಳಿಯಲಿಲ್ಲ. ಬೆಳಗೆದ್ದು ನೋಡಿದರೆ ಎಲ್ಲಾ ತುಪ್ಪ, ಸುಮಾರು ಎರಡು ಸೇರು, ನೆಲದ ಮೇಲೆ ಹರಡಿಕೊಂಡಿದೆ ! ನಾನಾ ಈಗ ಖಂಡಿತಾ ಸಿಟ್ಟಿಗೇಳುತ್ತಾರೆ ಎಂದುಕೊಂಡ ಕೇದಾರ, ಎತ್ತು ಮಾರಿ ಬಂದ ಇಪ್ಪತ್ತೆರಡು ರೂಪಾಯಿ ಎತ್ತಿಕೊಂಡು, ರಾಣೀ–ಕೀ–ಸರಾಯ್ ಸ್ಟೇಶನ್ನಿಗೆ ನಡೆದೇ ಬಿಟ್ಟ.

ಆಗ ಆತನಿಗೆ ಹದಿನಾಲ್ಕು ವರ್ಷ. ಬನಾರಸ್ ಮತ್ತು ವಿಂಧ್ಯಾಚಲದವರೆಗಿನ ಮಾರ್ಗ ಅವನಿಗೆ ಗೊತ್ತಿತ್ತು. ಕೆಲ ದಿನಗಳವರೆಗೆ ಬನಾರಸ್, ಮುಗಲ್ ಸರಾಯ್, ವಿಂಧ್ಯಾಚಲಗಳ ನಡುವೆ ಬರುವುದು, ಹೋಗುವುದು ನಡೆಯಿತು. ಹೀಗೆ ಸಾಕಷ್ಟು ಕಾಸೂ ಹುಡಿಯಾಯಿತು. ತುಪ್ಪ ದಂಡ ಮಾಡಿದ ತಪ್ಪಂತೂ ಆಗಿ ಹೋಗಿತ್ತು, ಈಗ ಅದರೊಂದಿಗೆ ದುಡ್ಡು ಕದ್ದು ಖರ್ಚು ಮಾಡಿದ ಅಪರಾಧವೂ ಸೇರಿಕೊಂಡಿತು. ಕೊನೆಗೆ ಕೇದಾರ ಮನಸ್ಸಿನಲ್ಲೇ ನಿರ್ಣಯಿಸಿದ–ಚಲೋ ಕಲ್ಕತ್ತಾ.

ಹೌರಾ ಸ್ಟೇಶನ್ನಿನಲ್ಲಿ ಇಳಿದರೆ ಅಲ್ಲಿಯ ಜನದಟ್ಟಣೆ ಅವನನ್ನು ದಂಗಾಗಿಸಿತು. ಸೇತುವೆ, ಘಾಟ್, ಎತ್ತರೆತ್ತರದ ಕಟ್ಟಡಗಳನ್ನು ನೋಡುತ್ತ ಹೋದಂತೆ ಮನಸ್ಸಿಗೆ ಆತಂಕ ಕವಿಯಿತು. ಸ್ಟೇಶನ್ನಿನ ಪ್ರಯಾಣಿಕರ ಕೋಣೆಗೆ ಹಿಂದಿರುಗಿ ಒಂದು ಕಂಬಕ್ಕೊರಗಿ ಕುಳಿತುಕೊಂಡ. ಈಗ ಎಲ್ಲಿಗೆ ಹೋಗಲಿ, ಯಾರ ಬಳಿಗೆ ಎಂಬ ಚಿಂತೆ ಹತ್ತಿತು.

ಬಹಳ ಹೊತ್ತಿನ ನಂತರ ಧೋತಿ, ಕುರ್ತಾ, ಟೊಪ್ಪಿ ಧರಿಸಿದ್ದ ಅವನದೇ ವಯಸ್ಸಿನ ತೆಳ್ಳಗೆ ಬೆಳ್ಳಗಿರುವ ಹುಡುಗನೊಬ್ಬ ಅವನ ಬಳಿಗೆ ಬಂದ. ಆತನಾಗಲೇ ಕೇದಾರನ ಸ್ಥಿತಿಯನ್ನು ಊಹಿಸಿದ್ದ. ಕಾರಣ, ಅವನೂ ಶಾಲೆ ಬಿಟ್ಟು ಕೇದಾರನಂತೆ ಕಲ್ಕತ್ತಾಕ್ಕೆ ಓಡಿ ಬಂದಿದ್ದ. ಆತ ಹಂಡಿಯಾ ತಹಸೀಲಿನವನು, ಹೆಸರು ಮಹಾದೇವ ಪ್ರಸಾದ, ಇಪ್ಪತ್ತು ಇಪ್ಪತ್ತೆರಡು ವರ್ಷದ ಒಬ್ಬ ತರುಣನೊಂದಿಗೆ ವಾಸ ಮಾಡುತ್ತಿದ್ದಾನೆ. ಚಪ್ಪರದ ಹಾಗಿನ ಒಂದು ವಸತಿಯಲ್ಲಿ, ತಿಂಗಳಿಗೆ ಎಂಟಾಣೆ ಬಾಡಿಗೆ ಅಂತೆಲ್ಲ ಮಾತಾಡುತ್ತ ಇದ್ದಂತೆ ತಿಳಿಯಿತು.

ಆತ ಕೇದಾರನನ್ನು ತಾನಿರುವಲ್ಲಿಗೆ ಕರೆದುಕೊಂಡು ಹೋಗಿ ತನ್ನ ತರುಣ ಜೊತೆಗಾರನ ಪರಿಚಯ ಮಾಡಿಸಿದ. ಕೆಲಸ ಹುಡುಕುತ್ತಾ ಇರೋಣ. ಏನು ಸಂಪಾದನೆಯಾಗುತ್ತದೋ ಅದನ್ನು ಒಟ್ಟು ಸಂಪಾದನೆ ಅಂತ ಗಣಿಸಿ ದಿನಗಳೆಯೋಣ ಎಂದು ಅವರೊಳಗೆ ಒಪ್ಪಂದವಾಯಿತು.

ಹೀಗೆ ಅನೇಕ ದಿನಗಳು ಕಳೆದವು. ಒಂದು ದಿನ ಕೇದಾರ ಅಂಗಡಿಗಳಲ್ಲಿ ಇಣಕು ಹಾಕುತ್ತಾ

ಹ್ಯಾರಿಸನ್ ರಸ್ತೆ (ಈಗಿನ ಮಹಾತ್ಮಾ ಗಾಂಧಿ ರಸ್ತೆ)ಯಲ್ಲಿ ಬರುತ್ತಿರುವಾಗ ಧೋತಿ, ಕೋಟು, ಚಪ್ಪಟೆ ಟೊಪ್ಪಿ ಧರಿಸಿ, ಛತ್ರಿ ಹಿಡಿದ ಒಬ್ಬ ಮುದುಕರು ಸಿಕ್ಕಿದರು. ಅವರ ಹೆಸರು ಬಿಂಧ್ಯಾಪ್ರಸಾದ ಪಾಠಕ್. ಅವರು ಮೂಲತಃ ಮುರಾದಾಬಾದಿನವರು. ಮೊದಲು ಕಲ್ಕತ್ತೆಯಲ್ಲಿ ಅವರಿಗೆ ಒಳ್ಳೆಯ ವಹಿವಾಟು ಇತ್ತು. ಆದರೆ ಈಗ ಸಣ್ಣ ಪುಟ್ಟ ದಲಾಲಿ ಮಾಡಿಕೊಂಡು ದಿನ ದೂಡುತ್ತಿದ್ದರು. ಬೇಕಾದರೆ ಕೇದಾರ ತನ್ನ ಜೊತೆ ಇರಬಹುದು ಎಂದು ಅವರು ಹೇಳಿದರು.

ಕೇದಾರ ಪಾಠಕರೊಂದಿಗೆ ಇರತೊಡಗಿದ. ಅವರ ತಿಂಗಳ ಆದಾಯ ಮೂವತ್ತು-ನಲ್ವತ್ತು ರೂಪಾಯಿ. ಅದರಲ್ಲಿ ತಿಂಗಳಿಗೆ ಐದು ರೂಪಾಯಿ ಮನೆ ಬಾಡಿಗೆ ಕೊಡುತ್ತಿದ್ದರು. ಉಳಿದ ಹಣ ಇಬ್ಬರ ಊಟ ತಿಂಡಿಗೆ ಸಾಕಾಗುತ್ತಿತ್ತು. ಮನೆ ಸ್ವಚ್ಛಗೊಳಿಸುವುದು, ಚಿಲುಮೆ ತುಂಬಿಸಿಡುವುದು, ನೀರು ತುಂಬಿಸುವುದು-ಎಲ್ಲ ಕೇದಾರನ ಕೆಲಸ. ದಲಾಲಿ ಕೆಲಸದಲ್ಲೂ ಅವನು ಅವರಿಗೆ ಸಹಾಯ ಮಾಡುತ್ತಿದ್ದ. ಕೆಲ ದಿನಗಳ ಬಳಿಕ ಪಾಠಕರು ಕೇದಾರನಿಗೆ ಇಂಗ್ಲಿಷ್ ಕಲಿಸಲಾರಂಭಿಸಿದರು. ಅವರು ಅವನನ್ನು ಒಂದು ಶಾಲೆಗೂ ಸೇರಿಸಿ ಬಿಟ್ಟರು !

ಮನೆಯಿಂದ ಕಾಗದ ಬರಲು ಶುರುವಾಗಿತ್ತು. ಊರಿಗೆ ವಾಪಸಾಗುವಂತೆ ಕೇಳಿ, ನಾನಾ ಪದೇ ಪದೇ ಅವನಿಗೆ ಪತ್ರ ಬರೆಯುತ್ತಿದ್ದರು. ಕೊನೆಗೆ ಕೇದಾರನ ಮನಸ್ಸೂ ಮನೆಗೆ ಹಿಂದಿರುಗಲು ಚಂಚಲಗೊಂಡಿತು. ಹಣವೂ ಬಂತು. ಒಂದು ದಿನ ಪಾಠಕರು ಕೇದಾರನನ್ನು ಹೌರಾ ಸ್ಟೇಷನ್ನಿನಲ್ಲಿ ಗಾಡಿಯಲ್ಲಿ ಕೂಡಿಸಿದರು.

ಹೀಗೆ ಕಲ್ಕತ್ತೆಯಲ್ಲಿ ನಾಲ್ಕು ತಿಂಗಳು ಇದ್ದು ಕೇದಾರ ಮನೆಗೆ ಹಿಂದಿರುಗಿದ. ಒಂದು ವರ್ಷದ ಓದು ವ್ಯರ್ಥವಾಗಿತ್ತು. ನಿಜಾಮಾಬಾದ್ ಶಾಲೆಯಲ್ಲಿ ಪುನಃ ಹೆಸರು ದಾಖಲಾಯಿತು, ಆರನೇ ದರ್ಜೆಗೆ. (ಮಿಡ್ಲ್ ಸ್ಕೂಲಿನ ಅಂತಿಮ ದರ್ಜೆ)-ಸಹಪಾಠಿಗಳೆಲ್ಲ ಬದಲಾಗಿದ್ದರು. ಪಠ್ಯಗಳು ಕೂಡ. ಮೂರು ನಾಲ್ಕು ತಿಂಗಳಲ್ಲೇ ಕೇದಾರ ದರ್ಜೆಗೆ ಪ್ರಥಮನೆನಿಸಿಕೊಂಡ.

ನಾನಾ ತನ್ನ ಆಸ್ತಿ-ಪಾಸ್ತಿಯನ್ನೆಲ್ಲ ಮೊಮ್ಮಗನ ಹೆಸರಿಗೆ ಬರೆದಿದ್ದರು. ಹಾಗಾಗಿ ಅವರ ದಾಯಾದಿಯ ಮಗ ಸಿಟ್ಟಾಗಿದ್ದ. ವ್ಯಾಜ್ಯ ಕೂಡ ನಡೆದು ಕೊನೆಗೆ ರಾಜಿಯಾಯಿತು. ನಂತರ ನಾನಾ ಕನ್ಹೈಲಾಕ್ಕೆ ಹೊರಟು ಹೋದರು.

ಕೇದಾರ ನಿಜಾಮಾಬಾದ್‌ನಲ್ಲಿ ಓದುತ್ತಾ ಇದ್ದ ಸಮಯದಲ್ಲಿ ಇತ್ತ ಅವನ ತಂಗಿ ರಾಮಪ್ಯಾರಿ ತೀರಿಕೊಂಡಳು. ಕನ್ಹೈಲಾಕ್ಕೆ ಬಂದಾಗಲೇ ಅವನಿಗೆ ಆ ಸುದ್ದಿ ತಿಳಿದದ್ದು. ತಂಗಿಯ ಬಗ್ಗೆ ಅಪಾರ ಪ್ರೀತಿ ಹೊಂದಿದ್ದ ಆತನಿಗೆ ಆಕೆಯ ಸಾವು ಬಹಳ ಆಳವಾದ ನೋವು ಉಂಟುಮಾಡಿತು.

ಇಡೀ ಜಿಲ್ಲೆಯ ಮಿಡ್ಲ್ ಸ್ಕೂಲಿನ ವಿದ್ಯಾರ್ಥಿಗಳ ವಾರ್ಷಿಕ ಪರೀಕ್ಷೆ ಆಜಮ್‌ಗಢ ಮಿಶನ್ ಸ್ಕೂಲಿನಲ್ಲಿ ನಡೆಯಿತು. ಕೇದಾರ ರಾಣೀ-ಕೀ-ಸರಾಯ್ ಪ್ರಾಥಮಿಕ ಶಾಲೆಯಲ್ಲಿ ಕಲಿಯುತ್ತಿದ್ದಾಗ ಅವನ ನಾನಾ ಇದೇ ಮಿಶನ್ ಸ್ಕೂಲಿನ ಬಗ್ಗೆ ಆಗಾಗ ಹೇಳುತ್ತಿದ್ದರು-"ಉರ್ದು ಕಲಿತಾಗಲಿ, ಮತ್ತೆ (ಮಿಡ್ಲ್ ಸ್ಕೂಲಿನ ಹೆಡ್‌ಮಾಸ್ಟರ್) ಪಾದರೀ ಸಾಹೇಬರಿಗೆ ಒಂದು ಮಿಲಿಟರಿ ಸಲಾಮು ಹೊಡೆದು ಅವನನ್ನು ಅಲ್ಲಿಗೆ ಸೇರಿಸಿಯೇ ಶುದ್ಧ."

ಆದರೆ ಇದರ ನೌಬತ್ತೇ ಬರಲಿಲ್ಲ. ಮಿಡ್ಲ್ ಸ್ಕೂಲಿನ ಪರೀಕ್ಷೆ ಕೊಟ್ಟು ಬಂದ ನಂತರ ಕೇದಾರ ಎರಡು ವಾರಕ್ಕಿಂತ ಹೆಚ್ಚು ದಿನ ಮನೆಯಲ್ಲಿರಲಿಲ್ಲ. "ಸೈರ್ ಕರ್ ದುನಿಯಾಂ ಕೀ ಗಾಫಿಲ್...." ಮಂತ್ರ ಅವನನ್ನು ಶಾಂತವಾಗಿ ಕೂರಲು ಬಿಡುತ್ತಿರಲಿಲ್ಲ.

ನಾನಾನಿಗೆ ಮೊಮ್ಮಗನದೇ ದೊಡ್ಡ ಚಿಂತೆಯಾಗಿತ್ತು. ಆದರೆ "ಆರು ತಿಂಗಳ ನಾಯಿ, ಹನ್ನೆರಡು ವರ್ಷದ ಮಗ, ಆದದ್ದಾಯಿತು ಹೋದದ್ದು ಹೋಯಿತು ಎಂಬ ಗಾದೆಯಿದೆಯಲ್ಲ, ಹಾಗೆ" ಎಂತಲೂ ಹೇಳುತ್ತಿರುತ್ತಿದ್ದರು.1909ನೇ ಇಸವಿ, ಮಿಡ್ಲ್ ಸ್ಕೂಲಿನ ಪರೀಕ್ಷೆ ಮುಗಿಸಿದಾಗ, ಕೇದಾರ ಹದಿನಾರು ವರ್ಷದವನಾಗಿದ್ದ.

ಎರಡು ವರ್ಷಗಳ ಹಿಂದೆ ಕೇದಾರ ಓಡಿಹೋದದ್ದಕ್ಕೆ ಕಾರಣ ತುಪ್ಪ ಚೆಲ್ಲಿ ಉರುಳಿದ್ದು, ನಾನಾನ ಭಯ. ಆದರೆ ಈಗ ಅಂತಹ ಕಾರಣಗಳ ಅಗತ್ಯವೇ ಇರಲಿಲ್ಲ. ನಾನಾ ಹೇಗೆ ಅವನ ತಂದೆ ಇಟ್ಟಿದ್ದ ನೂರೈವತ್ತು ರೂಪಾಯಿ ಎತ್ತಿಕೊಂಡು ಅಷ್ಟು ದೂರದ ಹೈದರಾಬಾದಿಗೆ ಓಡಿಹೋದ ಎಂಬ ಕತೆಯನ್ನು ಕೇದಾರ ಹೇಗೂ ಕೇಳಿದ್ದ. ಒಂದು ಕಾಸಿನ ಪರ ಮತ್ತು ಒಂದೆರಡು ಬಿಡಿ ರೂಪಾಯಿಗೆ ಕೈ ಹಚ್ಚಿದ. ಕಲ್ಕತ್ತೆಯ ರಸ್ತೆ ಅವನಿಗೆ ಹೇಗೂ ತಿಳಿದೇ ಇತ್ತು. ಮುಗಲ್ ಸರಾಯ್‌ನಿಂದ ಮುಂದೆ ಟಿಕೆಟಿಲ್ಲದ ಪ್ರಯಾಣ.

ಕಲ್ಕತ್ತೆಯಲ್ಲಿ ಪಾಠಕರ ಆಶ್ರಯವಂತೂ ಇತ್ತು. ಆತನ ದಲಾಲಿ ಕೆಲಸದಲ್ಲಿ ಕೇದಾರನೂ ಸಹಾಯ ಮಾಡಿದ. ಕೆಲ ದಿನಗಳ ನಂತರ ಅವನಿಗೆ ಹೌರಾ ಸ್ಟೇಶನ್ನಿನ ಗೋಡೌನಿನಲ್ಲಿ ಮಾರ್ಕ್‌ಮ್ಯಾನ್ ಕೆಲಸ ಸಿಕ್ಕಿತು. ರಶೀದ ನೋಡಿ ಮಾಲಿನ ಮೇಲೆ ಬಿಳಿ ಅಥವಾ ಕಪ್ಪು ಶಾಯಿಯಲ್ಲಿ ಕಳಿಸುವ ಮತ್ತು ಇಳಿಸಿಕೊಳ್ಳುವ ಸ್ಟೇಶನ್ನುಗಳ ಸಂಕೇತಾಕ್ಷರಗಳನ್ನೂ, ರಶೀದಿ ನಂಬರನ್ನೂ ಇಂಗ್ಲಿಷ್‌ನಲ್ಲಿ ಬರೆಯಬೇಕಾಗಿತ್ತು. ಆದರೆ ಎರಡು ಮೂರು ವಾರಗಳಿಗಿಂತ ಹೆಚ್ಚಿಗೆ ಕೇದಾರನಿಗೆ ಆ ಕೆಲಸದಲ್ಲಿ ಮನಸ್ಸು ನಿಲ್ಲಲಿಲ್ಲ. ಅನಂತರ ಆ ಕೆಲಸವನ್ನು ಬಿಟ್ಟು ಬಂದ.

ಮತ್ತೆ ಕೆಲ ದಿನಗಳ ಬಳಿಕ ಸುಂಘನೀ ಸಾಹು ಅವರ ಅಂಗಡಿಯಲ್ಲಿ ಕೆಲಸ ಸಿಕ್ಕಿತು. ಹಿಂದಿಯ ಪ್ರಸಿದ್ಧ ಕವಿ ಜಯಶಂಕರ್ ಪ್ರಸಾದರ ಬನಾರಸಿನ ಮನೆತನ "ಸುಂಘನೀ ಸಾಹು" ಹೆಸರಿನಲ್ಲಿ ಪ್ರಸಿದ್ಧವಾಗಿದೆ. ಅವರ ಚಿಕ್ಕಪ್ಪ ಗಿರಿಜಾಶಂಕರ ಸಾಹು ಅವರು ತಮ್ಮ ಒಂದು ಶಾಖೆಯನ್ನು ಕಲ್ಕತ್ತೆಯಲ್ಲಿ ತೆರೆದಿದ್ದರು. ಪರಿಮಳದ ತಂಬಾಕು, ನಸ್ಯ, ಜರ್ದಾ, 'ಕ್ಷೀರ', ಮುಂತಾದವು ಅಲ್ಲಿ ಮಾರಾಟವಾಗುತ್ತಿದ್ದುವು. ಅಲ್ಲಿ ಪತ್ರ–ಗಿತ್ರ ಬರೆಯುವುದು, ಪ್ರತಿವಾರ ಜಮಾ ಖರ್ಚಿನ ಲೆಕ್ಕ ಬರೆದು ಬನಾರಸಿಗೆ ಕಳಿಸುವುದು ಕೇದಾರನ ಕೆಲಸವಾಯಿತು.

ಗಿರಿಜಾಶಂಕರ್ ಕುಳ್ಳಗಿನ ಸ್ವಲ್ಪ ಸ್ಥೂಲ ವ್ಯಕ್ತಿ. ಐವತ್ತೈದರ ಆಸುಪಾಸು ವಯಸ್ಸಿನವರು. ದಮ್ಮಿನ ತೊಂದರೆಯಿತ್ತು. ಸಂಜೆ ಬಿಡದೆ ನಿಯಮಬದ್ಧವಾಗಿ ಅಫೀಮು ತಿನ್ನುತ್ತಿದ್ದರು. ತಿರುಗಾಡಲು ಅಥವಾ ರಾತ್ರಿ ತಮ್ಮ ನಿವಾಸಕ್ಕೆ ಹೊರಟರೆಂದರೆ ಕೇದಾರ ಅವರ ಜೊತೆ ಇರುತ್ತಿದ್ದ.

ಒಂದು ದಿನ ಸಾಹು ತಿರುಗಾಡಲು ಹೊರಟಾಗ ಭಂಗಿಯ ಬರ್ಫಿಯ ಮೇಲೆ ಅವರ ದೃಷ್ಟಿ ಹರಿಯಿತು. ತೆಗೆದುಕೊಂಡು ಒಂದು ಚೂರು ತಾನು ತಿಂದರು. ಒಂದು ಚೂರು ಕೇದಾರನಿಗೂ ಕೊಟ್ಟರು. ಕೇದಾರನಿಗದು ಬಹಳ ಇಷ್ಟವಾಯಿತು. ಸಾಹು ಮುಂದೆ ನಡೆದು ಯಾರೊಂದಿಗೋ ಮಾತಿಗಿಳಿದಿದ್ದರೆ ಈತ ಆ ಅಂಗಡಿಯಿಂದ ಇನ್ನೂ ಸ್ವಲ್ಪ ಬರ್ಫಿ ಕೊಂಡುಕೊಂಡು ತಿಂದುಬಿಟ್ಟ. ಭಂಗಿಯ ನಶೆ ಏರತೊಡಗಿತು. ಹೇಗೋ ಅಂತೂ ಸಾಹು ಅವರನ್ನು ಮನೆ ತಲುಪಿಸಿದ. ಹಿಂದಿರುಗುವಾಗ ಗಂಟಲು ಬುಡ ಒಣಗಿ ಬಂತು. ದಾರಿಯಲ್ಲಿ ಒಬ್ಬ ಕುಲ್ಫಿವಾಲಾನಿಂದ ಒಂದಷ್ಟು ಕುಲ್ಫಿ ಕೊಂಡು ಅವನ್ನೂ ತಿಂದ. ಆದರೆ ಗಂಟಲು ಒಣಗಿ ಬರುವುದು ನಿಲ್ಲಲಿಲ್ಲ. ಒಟ್ಟಾರೆ ಹೇಗೋ ಅಂತೂ ತಾನು ಇರುವಲ್ಲಿಗೆ ಬಂದು ತಲುಪಿದ.

ಆಮೇಲೇನಾಯಿತು, ಕೇದಾರನಿಗೆ ಏನೂ ಗೊತ್ತಿಲ್ಲ. ಎಚ್ಚರ ಬಂದಾಗ ತನ್ನನ್ನು ಮೆಡಿಕಲ್ ಕಾಲೇಜು ಹಾಸ್ಪಿಟಲ್‌ನಲ್ಲಿ ಮಲಗಿಸಿದ್ದಾರೆ ಎಂದು ತಿಳಿಯಿತು. ಸಂಜೆ ಪಾಠಕರು ಬಂದ ಮೇಲೆಯೇ ಎಲ್ಲ ಗೊತ್ತಾದದ್ದು-ಅವತ್ತು ರಾತ್ರಿ ಮನೆ ಮುಟ್ಟುತ್ತಲೇ ಆತ ಪ್ರಜ್ಞೆ ತಪ್ಪಿ ಬಿದ್ದು, ಒಂದೇ ಸಮ ಭೇದಿಯಾಯಿತು, ಸಂಜೆ ಮೂರ್ಛಾವಸ್ಥೆಯಲ್ಲಿಯೇ ಆಸ್ಪತ್ರೆಗೆ ಕೊಂಡೊಯ್ದರು, ಎಷ್ಟೋ ದಿನಗಳ ಮೇಲೆ ಪ್ರಜ್ಞೆ ಬಂತು-ಅಂತೆಲ್ಲ. ಪಾಠಕರು ಪ್ರತಿ ದಿನ ಬರುತ್ತಿದ್ದರು. ಸಾಹು ಕೂಡ ಎರಡು ಮೂರು ದಿನಕ್ಕೊಮ್ಮೆ ನೋಡಿ ಹೋಗಲು ಬರುತ್ತಿದ್ದರು. ಅವರು ಕೇದಾರ ಬದುಕುಳಿಯುವ ಆಸೆಯನ್ನೇ ಬಿಟ್ಟು ಬಿಟ್ಟಿದ್ದರು.

ಕೊನೆಗೂ ಕೇದಾರನಿಗೆ ಎಚ್ಚರ ಬಂತು. ನಿಧಾನವಾಗಿ ಸುಧಾರಿಸಿಕೊಳ್ಳಲಾರಂಭಿಸಿದ. ದೇಹಕ್ಕೆ ಸ್ವಲ್ಪ ಶಕ್ತಿ ಕೂಡಿ ಬಂದಂತೆ ಮನೆಯ ನೆನಪಾಗತೊಡಗಿತು. ಕನೈಲಾಕ್ಕೆ ಹಿಂದಿರುಗಿ ಬಿಟ್ಟ.

ಮನೆಗೆ ಹಿಂದಿರುಗಿದ ಮೇಲೆ ಕೇದಾರನ ಜೀವನದ ದಿಕ್ಕೇ ಬದಲಾಯಿತು. ಆತನಲ್ಲಿ ಕಲ್ಕತ್ತೆಯ ರಂಗಿನ ಪ್ರಪಂಚದ ಯಾವ ಆಕರ್ಷಣೆಯೂ ಉಳಿಯಲಿಲ್ಲ. ವೈರಾಗ್ಯದ ಮಾಂತ್ರಿಕ ಪ್ರಭಾವ ಅವನ ಮೇಲಾಗತೊಡಗಿತು. ಈಗ ಇಂಗ್ಲಿಷ್ ಅಲ್ಲ, ಸಂಸ್ಕೃತ ಕಲಿಯುವ ಉತ್ಸಾಹ ಅವನಲ್ಲಿ ಉಂಟಾಯಿತು. ಯಾವ ದೊಡ್ಡ ನಗರಕ್ಕೆ ಹೋಗಿ ನೌಕರಿ ಮಾಡುವುದೂ ಬೇಡವೆನಿಸಿತು. ತಾನು ಸಾಧು ಆಗಿ ಇಡೀ ದೇಶ ಸಂಚಾರ ಮಾಡಬೇಕೆಂಬ ಮತ್ತು ಸಂಸ್ಕೃತದ ಆಳ ಅಧ್ಯಯನ ಮಾಡಬೇಕೆಂಬ ಹಂಬಲವುಂಟಾಯಿತು.

ಈಗ ಆತ ಹದಿನೇಳು ವರ್ಷದ ತರುಣ.

# ಕಾಶಿಯಲ್ಲಿ ಓದು

ಈ ಸಮಯದಲ್ಲಾಗಲೇ ನಾನಾ ಕೂಡ ಪಂದಹಾದಿಂದ ಕನೈಲಾಕ್ಕೆ ಬಂದು ಬಿಟ್ಟಿದ್ದರು. ಕೇದಾರನಾಥನ, ತಂದೆ ಗೋವರ್ಧನ ಪಾಂಡೆ ತನ್ನ ಶ್ರದ್ಧಾಪೂರ್ಣ ಪೂಜಾ ಪಾಠದಿಂದಾಗಿ 'ಪುಜಾರೀ' ಎಂದೇ ಕರೆಸಿಕೊಳ್ಳುತ್ತಿದ್ದರಷ್ಟೆ ? ಕೇದಾರನಾಥನೀಗ ತಂದೆಯ ಹೆಜ್ಜೆಯ ಮೇಲೆ ಮುನ್ನಡೆಯ ತೊಡಗಿದ.

ಹತ್ತಿರದ ಉಮರ್‌ಪುರ ಎಂಬ ಹಳ್ಳಿಯ ಸಮೀಪ ಪರಮಹಂಸ ಬಾಬಾ ಅವರ ಕುಟೀರವಿತ್ತು. ಅವರ ವಯಸ್ಸು ನೂರಿಪ್ಪತ್ತಕ್ಕಿಂತೇನೂ ಕಡಿಮೆಯಿರಲಿಕ್ಕಿಲ್ಲ ಎಂದು ಜನರ ಅಂದಾಜು. ಅವರು ನೇಪಾಳದಿಂದ ಕಾಶಿಗೆ ಬಂದು ವಿದ್ಯಾಭ್ಯಾಸ ಮುಗಿಸಿದವರು ಸನ್ಯಾಸಿಯಾಗಿದ್ದರು. ನಂತರ ಕಾಶಿ ಬಿಟ್ಟು ಇಲ್ಲಿ ಉಮರ್‌ಪುರದ ಸಮೀಪದ ಏಕಾಂತ ಸ್ಥಳದಲ್ಲಿ ಕುಟೀರ ಕಟ್ಟಿಕೊಂಡಿದ್ದರು. ಯಾರನ್ನೂ ಭೇಟಿಯಾಗುತ್ತಿರಲಿಲ್ಲ. ಭಕ್ತರಿಂದಲೂ ದೂರವೇ ಇರುತ್ತಿದ್ದರು. ಹರಿಕರಣ ದಾಸ ಎಂಬ ಹೆಸರಿನ ಒಬ್ಬ ಸನ್ಯಾಸಿ ಬಾಬಾ ಅವರ ಸೇವೆಗಾಗಿ ಅಲ್ಲೇ ಆಸುಪಾಸಿನಲ್ಲಿ ವಾಸಿಸುತ್ತಿದ್ದರು. ಬಾಲದತ್ತ ಸಿಂಹ ಎಂಬವರು ಬಾಬಾ ಕುಟೀರದ ಸಮೀಪ ವಾಸಿಸುವ ಮತ್ತೊಬ್ಬ ಭಕ್ತರು.

'ಪುಜಾರೀ' ಕೂಡಾ ಬಾಬಾ ಪರಮಹಂಸರ ದೊಡ್ಡ ಭಕ್ತರಾಗಿದ್ದರು. ಮಹಾದೇವ ಪಂಡಿತರಂತಹ ಸಂಸ್ಕೃತ ವಿದ್ವಾಂಸರು ಸಹ ಬಾಬಾ ಬಳಿಗೆ ಹೋಗುತ್ತಿದ್ದರು. ಆದರೆ ಬಾಬಾ ಯಾರಿಗೂ ಉಪದೇಶ ನೀಡುತ್ತಿರಲಿಲ್ಲ. ಯಾರನ್ನೂ ತನ್ನ ಹಿಂಬಾಲಕರನ್ನಾಗಿ ಮಾಡಿಕೊಂಡೂ ಇರಲಿಲ್ಲ.

ತಂದೆ ಮತ್ತು ಅವರ ಗೆಳೆಯರನ್ನು ಅನುಕರಿಸಿ ಕೇದಾರ ಕೂಡಾ ಬಾಬಾ ಅವರ ಕುಟೀರಕ್ಕೆ ಹೋಗತೊಡಗಿದ. ಬಾಬಾರ ಭಕ್ತ ಹರಿಕರಣ ದಾಸರು ಅವನ ಕಿವಿಯಲ್ಲಿ ವೇದಾಂತ ಹಾಗೂ ವೈರಾಗ್ಯದ ಮಂತ್ರಗಳನ್ನು ಊದತೊಡಗಿದರು. ಕೇದಾರ ವೇದಾಂತ ಕುರಿತ ಲಭ್ಯ ಹಿಂದೀ ಪುಸ್ತಕಗಳನ್ನು ಓದತೊಡಗಿದ. ದಿನಚರಿಯೂ ಬದಲಾಯಿತು. ಪೂಜಾ-ಪಾಠ, ತ್ರಿಕಾಲ ಸಂಧ್ಯಾಸ್ನಾನ ಮತ್ತು ಏಕಾಹಾರ ಆರಂಭಿಸಿದ. ಹೆಚ್ಚು ಸಮಯವನ್ನು ಬಾಬಾರ ಕುಟೀರದಲ್ಲೇ ಕಳೆಯತೊಡಗಿದ. ಒಂದು ದಿನ ಹರಿಕರಣರು ತನ್ನ ಬದರೀ ಯಾತ್ರೆ, ಕಾನನವಾಸ ಇತ್ಯಾದಿಗಳ ಕುರಿತು ವರ್ಣನೆ ಮಾಡುತ್ತಿದ್ದರೆ ಕೇದಾರನ ಮನಸ್ಸು ಉನ್ನತೋನ್ನತ ಪರ್ವತ ಶ್ರೇಣಿಗಳು, ಹರಿದ್ವರ್ಣದ ದೇವದಾರು, ಬೆಳಂಬೆಳ್ಳನೆಯ ಹಿಮ, ಶೀತಲ ಜಲಬುಗ್ಗೆಗಳಲ್ಲಿ ವಿಹರಿಸ ತೊಡಗಿತು.

ಕೇದಾರ ಆಜಮ್‌ಗಢಕ್ಕೆ ಹೋಗಿ ಅಲ್ಲಿ ಇಂಗ್ಲಿಷ್ ಸ್ಕೂಲಿನಲ್ಲಿ ಓದು ಮುಂದುವರಿಸಲಿ ಎಂದು ಮನೆಯಲ್ಲಿ ಬಯಸುತ್ತಿದ್ದರು. ಆದರೆ ಆತ ಇಂಗ್ಲಿಷ್ ಬಯಸದೆ ಸಂಸ್ಕೃತ ಓದಲಿಕ್ಕಾಗಿ ಬನಾರಸಿಗೆ ಹೋಗಲು ಬಯಸುತ್ತಿದ್ದ. ಬನಾರಸಿನ ಮಾರ್ಗ ಮುಚ್ಚಿದ್ದು ಮನಗಂಡು ಆತ ಉತ್ತರಾಖಂಡದ ಕಡೆಗೆ ತೆರಳಲು ನಿರ್ಧರಿಸಿದ. ಮನೆಯಿಂದ ಓಡಿ ಹೋಗಲು ಈಗವನಿಗೆ ದುಡ್ಡಿನ ಅವಶ್ಯಕತೆ ಇರಲಿಲ್ಲ. ಸಧ್ಯ ವೈರಾಗ್ಯಧನವಿತ್ತು. ಹದಿನೇಳನೇ ವಯಸ್ಸು ತುಂಬುತ್ತಲಿತ್ತು.

ಒಂದು ಬೆಳಿಗ್ಗೆ ಕೇದಾರ ಒಬ್ಬನೇ ಮನೆಯಿಂದ ಹೊರ ಬಿದ್ದ. ಕಾಲ್ನಡಿಗೆಯಲ್ಲೇ ಅಯೋಧ್ಯೆ ಮಾರ್ಗವಾಗಿ ಹರಿದ್ವಾರ ಮುಟ್ಟುವ ನಿಶ್ಚಯ ಮಾಡಿಕೊಂಡಿದ್ದ. ಸ್ನಾನಗೀನ ಊಟಪಾನ, ವಾಸ ಶಯನ ಇತ್ಯಾದಿ ವಿಚಾರಗಳಲ್ಲಿ ಸಿಹಿ-ಕಹಿ ಅನುಭವ ಪಡೆಯುತ್ತಾ ಅಯೋಧ್ಯೆ ಹಾದು ಕಾಲ್ನಡಿಗೆಯಲ್ಲೇ ಮುರಾದಾಬಾದ್ ತಲುಪಿದ. ಕಲ್ಕತ್ತೆಯಲ್ಲಿದ್ದ ಪಾಠಕರು ತನ್ನ ಕುಟುಂಬದೊಂದಿಗೆ ಮುರಾದಾಬಾದಿಗೆ ಮರಳಿದ್ದರು. ಕೇದಾರ ಹತ್ತು ಹದಿನೈದು ದಿನಗಳ ಕಾಲ ಅವರ ಜೊತೆ ಉಳಿದುಕೊಂಡ. ಅಲ್ಲಿನ ಒಂದು ಸೇಠ್ ಮನೆಯವರು ಒಂದು ಗಿಂಡಿ ಕೊಟ್ಟರು, ಹರಿದ್ವಾರದವರೆಗಿನ ಟಿಕೆಟ್ ವ್ಯವಸ್ಥೆ ಮಾಡಿದರು.

ಕೇದಾರ ಹರಿದ್ವಾರದ ಸ್ಟೇಷನ್ನಿನಲ್ಲಿ ಇಳಿಯುವಾಗ ಅವನ ಬಳಿ ಮೂರ್ನಾಲ್ಕು ಆಣೆಗಿಂತ ಹೆಚ್ಚಿಗೆ ದುಡ್ಡಿರಲಿಲ್ಲ. ಇಡೀ ಜಗತ್ತು ಸಂಸ್ಕೃತ ಕಲಿಯಲಿಕ್ಕೆ ಬನಾರಸಿಗೆ ಹೋದರೆ ಬನಾರಸಿನ ಸಮೀಪದ ಈ ಮಹಾಶಯ ಹರಿದ್ವಾರಕ್ಕೆ ಬಂದಿದ್ದಾನಲ್ಲ, ಉಲ್ಟೀ ಗಂಗಾ- ಎಂದುಕೊಂಡರು ಅಲ್ಲಿನ ಜನ. ವಿಷ್ಣುದತ್ತ ಎಂಬ ಹೆಸರಿನ ಪಂಡಿತನೊಬ್ಬ ಆತನಿಗೆ ಆಶ್ರಯ ನೀಡಿದ. ಮರುದಿನ ಕೇದಾರ ಯಾಗೇಶನಿಗೆ ಪತ್ರ ಬರೆದು ತಾನು ಹರಿದ್ವಾರ ಮುಟ್ಟಿದ ಸುದ್ದಿ ತಿಳಿಸಿದ.

ಪಂಡಿತ ವಿಷ್ಣುದತ್ತನಿಗೆ ಸಂಸ್ಕೃತ ಬರುವುದಿಲ್ಲವೆಂದು ಕೆಲವೇ ದಿನಗಳಲ್ಲಿ ಕೇದಾರನಿಗೆ ತಿಳಿದದ್ದೇ ಆ ಜಾಗ ಬಿಟ್ಟುಬಿಟ್ಟ. ಬಿಟ್ಟು ಹಿಮಾಲಯದ ಕಡೆಗೆ ಮುಂದುವರಿಯ ತೊಡಗಿದ. ಅನ್ನಸತ್ರ ಮತ್ತು ಧರ್ಮಶಾಲೆಗಳಲ್ಲಿ ಆಶ್ರಯ ಪಡೆಯುತ್ತ ದೇವಪ್ರಯಾಗ, ತೇಹರೀ, ಜಮುನೋತ್ರಿ, ಗಂಗೋತ್ರಿ, ಕೇದಾರನಾಥ ಮತ್ತು ಬದರೀನಾಥಗಳ ಯಾತ್ರೆ ಮಾಡಿದ. ಹರಿದ್ವಾರದಿಂದ ಬರೆದಿದ್ದ ಕೇದಾರನ ಪತ್ರ ಸಿಕ್ಕಿದ ಮೇಲೆ ಯಾಗೇಶನೂ ಹಿಮಾಲಯದ ಯಾತ್ರೆಗೆ ಹೊರಟು ಬಿಟ್ಟಿದ್ದ. ಕೇದಾರನಾಥದಲ್ಲಿ ಇಬ್ಬರೂ ಭೇಟಿಯಾದರು. ಮುಂದಿನ ಯಾತ್ರೆಯನ್ನು ಜೊತೆಯಾಗಿ ಕೈಗೊಂಡರು. ಹಿಂದಿರುಗುವಾಗ ಹರಿದ್ವಾರಕ್ಕೆ ಹೋಗದೆ ರಾಮನಗರ, ಕಾಳೀಪುರ, ಪೀಲೀಭೀತ ಮತ್ತು ಅಯೋಧ್ಯೆ ದಾರಿಯಾಗಿ ಇಬ್ಬರೂ ಜ್ವರದ ಸ್ಥಿತಿಯಲ್ಲಿ ಬನಾರಸ್ ಮುಟ್ಟಿಕೊಂಡರು. ಅಲ್ಲಿ ಯಾವುದಕ್ಕೂ ಮೊದಲು ಎಡ್ವರ್ಡ್ ಆಸ್ಪತ್ರೆಗೆ ಹೋಗಿ ಮಲೇರಿಯಾ ಔಷಧಿ ತೆಗೆದುಕೊಂಡರು.

ಬನಾರಸಿನಲ್ಲಿ ಶಾಲೆ ಮತ್ತು ಸಂಸ್ಕೃತ ಓದಿನ ವ್ಯವಸ್ಥೆಗಾಗಿ ಹುಡುಕುತ್ತಿದ್ದಾಗ, ಚಕ್ರಪಾಣಿ ಬ್ರಹ್ಮಚಾರಿ ಎಂಬ ಒಬ್ಬ ಇಳಿ ವಯಸ್ಸಿನ ವ್ಯಕ್ತಿ ಅವರನ್ನು ಕುರುಕ್ಷೇತ್ರ ಕೊಳದ ಬಳಿ ಇರುವ ಮೋತೀರಾಮ-ಕಾ-ಬಾಗ್‌ಗೆ ತನ್ನ ಜೊತೆ ಕರೆದುಕೊಂಡು ಹೋದರು. ಅವರು ಒಂದು ಕಪ್ಪು ದನ ಸಾಕಿಕೊಂಡಿದ್ದರು. ತೋರಿಕೆಗಾಗಿ ಅವರು ನಾಲ್ಕೈದು ವಿದ್ಯಾರ್ಥಿಗಳನ್ನು ಬಳಿ ಇರಿಸಿಕೊಂಡಿದ್ದರು. ಕೇದಾರ ಮತ್ತು ಯಾಗೇಶ ಒಂದು ವಾರ ಕಾಲ ಅಲ್ಲಿ ಉಳಿದರು. ಕರೆ ಬರಲು ಮನೆಗೆ ಮರಳಿದರು. ಈಗ ಮನೆಯವರಿಗೂ ಕೇದಾರನ ಸಂಸ್ಕೃತ ಕಲಿಕೆಗೆ ಅಡ್ಡಿ ಬರಲು ಮನಸ್ಸಿರಲಿಲ್ಲ. ಬನಾರಸಿನ ಬದಲು ಐದು ಕಿಲೋಮೀಟರ್ ದೂರದ ಬಛವಲ್‌ನಲ್ಲಿರುವ ಮಾವ ಮಹಾದೇವ ಪಂಡಿತರ ಬಳಿಗೆ ಕೇದಾರನನ್ನು ಕಳಿಸುವುದು ಹೆಚ್ಚು ಸುರಕ್ಷಿತವೆಂದು ಕಂಡು ಬಂದಿತು.

ಕೇದಾರ ಬಛವಲ್ ತಲುಪಿದ. ಶುಭ ಮುಹೂರ್ತದಲ್ಲಿ ಸರಸ್ವತೀ ಪೂಜೆ ಮಾಡಿ ಮಹಾದೇವ ಪಂಡಿತರು ಲಘು ಸಿದ್ಧಾಂತ ಕೌಮುದೀ ಪಾಠ ಆರಂಭಿಸಿದರು. ಆದರೆ ಈ ವ್ಯವಸ್ಥೆಯೂ ಹೆಚ್ಚು ದಿನ ನಡೆಯಲಿಲ್ಲ. ಎರಡು ಎರಡೂವರೆ ತಿಂಗಳು ಕಳೆದದ್ದೇ ಯಾಗೇಶ ಮತ್ತು ಬೇರೆ ಒಬ್ಬಿಬ್ಬರು ವಿದ್ಯಾರ್ಥಿಗಳನ್ನು ಜೊತೆ ಕರೆದುಕೊಂಡು ಕೇದಾರ ಪ್ರಯಾಗದ ಪ್ರದರ್ಶನ ನೋಡಲಿಕ್ಕಾಗಿ

ಬಳವಲ್‌ನಿಂದ ಮಾಯವಾದ. ಸಾರನಾಥ, ಚುನಾರ್, ಮಿರ್ಜಾಪುರ ಮುಂತಾದ ಊರುಗಳನ್ನು ಸುತ್ತುತ್ತಾ ಎಲ್ಲರೂ ಪ್ರಯಾಗ ತಲುಪಿದರು. ಹಾಗೂ ಪ್ರದರ್ಶನ ನೋಡಿ ವಾಪಸು ಬಂದರು. ಕೆಲ ದಿನಗಳ ಬಳಿಕ ಕೇದಾರ ಪುನಃ ಬನಾರಸಿಗೆ ಬಂದ. ಈಗವನಿಗೆ ಹದಿನೆಂಟು ವರ್ಷ ತುಂಬುತ್ತ ಬಂದಿತ್ತು. 1911ರ ಮಾರ್ಚ್‌ನಲ್ಲಿ ತಾನು ಬನಾರಸಿನಲ್ಲಿದ್ದೆ ಎಂದು ಸ್ವತಃ ರಾಹುಲರೇ ಒಂದೆಡೆ ಹೇಳಿಕೊಂಡಿದ್ದಾರೆ.

ಮುಂದಿನ ಒಂದೂವರೆ ವರ್ಷಗಳ ಕಾಲ ಕೇದಾರನಾಥ ಬನಾರಸಿನ ಮೋತೀರಾಮ-ಕಾ-ಬಾಗ್‌ನಲ್ಲಿದ್ದ. ಆರಂಭದೊಲ್ಲೊಮ್ಮೆ ಆತ ನಡೆದುಕೊಂಡೇ ಕಲ್ಕತ್ತೆಗೆ ಹೋಗುವ ಪ್ರಯತ್ನ ಮಾಡಿ, ಸ್ವಲ್ಪ ದೂರ ಹೋಗಿ ವಾಪಸು ಬಂದಿದ್ದ. ಮೋತಿರಾಮ್-ಕಾ-ಬಾಗ್ ಹಳೆಯ ಮುನಿಯಾಶ್ರಮದಂತೆ ಇತ್ತು. ಅದಕ್ಕೆ ನಾಲ್ಕೂ ಕಡೆಯಿಮದ ಸುತ್ತುವರಿದ ಗೋಡೆಗೆ ತಾಗಿ ಅನೇಕ ಕುಟೀರಗಳಿದ್ದುವು. ಅವುಗಳಲ್ಲಿ ಮಹಾತ್ಮಾ, ಪಂಡಿತ, ಬ್ರಹ್ಮಚಾರಿ ಮತ್ತು ವಿದ್ಯಾರ್ಥಿಗಳು ವಾಸ ಮಾಡುತ್ತಿದ್ದರು. ಛತ್ರಗಳಲ್ಲಿ ಅಟ್ಟ ಅನ್ನ ಸಿಗುತ್ತಿತ್ತು. ಬುದ್ಧಿವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನದ ವ್ಯವಸ್ಥೆಯೂ ಇತ್ತು.

ಕೇದಾರ ಮೋತೀರಾಮ್-ಕಾ-ಬಾಗ್‌ನಲ್ಲಿ ಚಕ್ರಪಾಣಿ ಬ್ರಹ್ಮಚಾರಿಯವರ ಆಶ್ರಯದಲ್ಲಿ ಉಳಿದುಕೊಂಡ. ತನ್ನ ಮಾವನ ಹಳೆಯ ಶಿಷ್ಯ ಪಂಡಿತ ಮುಖರಾಮರಿಂದ ವ್ಯಾಕರಣ ಅಭ್ಯಾಸ ಮಾಡತೊಡಗಿದ. ಒಮ್ಮೆ ಒಬ್ಬ ಗುಜರಾತಿ ವೈದಿಕನ ಮೇಲ್ವಿಚಾರಣೆಯಲ್ಲಿ ಯಜುರ್ವೇದದ ಋಚಾಗಳ ಸ್ವರಬದ್ಧ ಪಾಠವನ್ನು ಆರಂಭಿಸಿಕೊಂಡಿದ್ದ. ಮುಂದೆ ಬೇಸಗೆಯಲ್ಲಿ ರಘುವಂಶ, ರಾಮಾಯಣ ಹಾಗೂ ಇತರ ಸರಳ ಕಾವ್ಯ ಗ್ರಂಥಗಳ ಅಧ್ಯಯನ ಮಾಡಿದ. ಸೆಕೆ ಅತಿಯಾಯಿತೆಂದರೆ ಪ್ರತೀ ದಿನ ಸಂಜೆ ಎರಡು ಗಂಟೆ ಕಾಲ ಗಂಗೆಯಲ್ಲಿ ಈಜುತ್ತಿದ್ದ.

ಈ ಪ್ರವಾಸದಲ್ಲಿಯೇ ಕೇದಾರನಿಗೆ ನೇಪಾಳಿ ಸ್ವಾಮೀ ಪೂರ್ಣಾನಂದರ ಸಂಪರ್ಕವಾಗಿ ಮಂತ್ರ-ತಂತ್ರದ ಕಡೆಗೆ ಒಲವು ಹೆಚ್ಚುತ್ತಾ ಹೋಯಿತು. ತಂತ್ರದ ಕುರಿತ ಅನೇಕ ಪುಸ್ತಕಗಳನ್ನು ಓದಿಕೊಂಡ. ತಾಮ್ರವನ್ನು ಚಿನ್ನ ಮಾಡುವ ರಸಾಯನದ ಅಸಫಲ ಪ್ರಯೋಗವನ್ನೂ ಮಾಡಿದ. ಕಾಮ ಶಾಸ್ತ್ರ ಕುರಿತ ಪುಸ್ತಕ ಮತ್ತು ನಾರು-ಬೇರಿನ ಒಂದು ನೇಪಾಳೀ ಪುಸ್ತಕ ಓದಿ, ಅದನ್ನು ಹಿಂದಿಗೆ ಅನುವಾದ ಮಾಡಿದ. ಮಂತ್ರ-ತಂತ್ರದ ವಿಶೇಷ ಜ್ಞಾನವುಳ್ಳವನೆಂದು ಪಂಡಿತ ಕೇದಾರನಾಥ ಪಾಂಡೇಯನ ಖ್ಯಾತಿ ಹಬ್ಬತೊಡಗಿತು.

ಮಂತ್ರ-ತಂತ್ರದ ಮೇಲೆ ಶ್ರದ್ಧೆ ಹೆಚ್ಚುತ್ತ ಹೋದಂತೆ, ಪಂಡಿತ ಕೇದಾರನಾಥ ಮಂತ್ರಸಿದ್ಧಿಯ ಕುರಿತಂತೆ ಯಾವುದಾದರೊಂದು ದೊಡ್ಡ ಪ್ರಯೋಗ ಮಾಡಲು ನಿರ್ಧರಿಸಿದ. ಎಲ್ಲಾ ತಯಾರಿ ಮಾಡಿಕೊಂಡು ನವರಾತ್ರಿಯಲ್ಲಿ ಒಂದು ಖಾಲಿ ಕೋಣೆಯಲ್ಲಿ ಆಸನ ಹಾಕಿ ನೆಲದ ಮೇಲೆ ಷಟ್ಕೋಣ ಬರೆದು ಅದರ ಕೇಂದ್ರದಲ್ಲಿ ಓಂ ಮತ್ತು ಆರೂ ಮೂಲೆಗಳಲ್ಲಿ 'ಶ್ರೀಂ ಹ್ರೀಂ ಕ್ಲೀಂ ಫಟ್ ಸ್ವಾಹಾ' ಬರೆದದ್ದಾಯಿತು. ಬೆಳಗಿನ ಗಂಗಾ ಸ್ನಾನದ ನಂತರ 'ಚಕ್ರ'ದ ಪೂಜೆ ಮಾಡಿ ರುದ್ರಾಕ್ಷಿ ಮಾಲೆ ಹಿಡಿದು 'ಶ್ರೀಂ ಹ್ರೀಂ ಕ್ಲೀಂ' ಜಪ ಸುರು ಮಾಡಿದ. ಪೂರಾ ನಿಯಮಗಳೊಂದಿಗೆ ಒಂಬತ್ತು ಲಕ್ಷ ಜಪ ಮಾಡಿದರೆ ಸಿಂಹವಾಹಿನೀ ಆದಿಶಕ್ತಿಯ ಸಾಕ್ಷಾತ್ ದರ್ಶನವಾಗುತ್ತದೆ ಎಂದು ಅವನಿಗೆ ಹೇಳಿದ್ದರು.

ನಿದ್ದೆಯ ಮೂರು ನಾಲ್ಕು ಘಂಟೆ ಬಿಟ್ಟರೆ ಬಾಕಿ ಸಮವಯವೆಲ್ಲ ಜಪ ಹಾಗೂ ಪೂಜೆಯಲ್ಲಿ ವಿನಿಯೋಗವಾಗುತ್ತ ಇತ್ತು. ಏಳನೆಯ ದಿನ ಕಳೆಯಿತು. ಎಂಟನೆಯ ದಿನವೂ ಕಳೆಯಿತು. ಕೇದಾರನ ಅಧೈರ್ಯ ಹೆಚ್ಚುತ್ತ ಹೋಯಿತು. ಕೊನೆಯ ದಿನ ಚೆನ್ನಾಗಿ ಮನಸ್ಸಿಟ್ಟು ಜಗದಂಬೆಯ ಪೂಜೆ ಮಾಡಿ,

ಜಪ ಪೂರ್ತಿಗೊಳಿಸಿದ. ಆಗಲೂ ಆದಿಶಕ್ತಿಯ ದರ್ಶನವಾಗಲಿಲ್ಲವಾಗಿ ಇದಕ್ಕೆ ತನ್ನ ನಿರ್ಭಾಗ್ಯ ಬದುಕೇ ಹೊಣೆ ಎಂದು ಯೋಚಿಸಿ ಕೂಡಲೇ ಎರಡು ಪತ್ರಗಳನ್ನು ಬರೆದ. ಒಂದರಲ್ಲಿ "ಹೆಣವನ್ನು ಮಣಿಕರ್ಣಿಕೆಯಲ್ಲಿ ಬಿಸಾಡಿ ಬಿಡಿ". ಇನ್ನೊಂದು ತಂದೆಗೆ "ನಿರ್ಭಾಗ್ಯ ಪುತ್ರನಿಗಾಗಿ ಶೋಕಿಸಬೇಡಿ". ನಂತರ ಪೂಜೆಗೇರಿಸಿದ್ದ ದತ್ತೂರದ ಮಾಗಿದ ಹಣ್ಣುಗಳಲ್ಲಿ ಎರಡರ ಎಲ್ಲಾ ಬೀಜಗಳನ್ನು ಚೂರ್ಣದೊಂದಿಗೆ ಬೆರೆಸಿ ನೀರಿನೊಂದಿಗೆ ನುಂಗಿ ಬಿಟ್ಟ.

ಮಾರನೇ ದಿನ ಸ್ವಲ್ಪ ಸ್ಮೃತಿ ಬಂದಾಗಲೇ ಆಮೇಲೆ ಏನಾಯಿತು ಎಂದು ಕೇದಾರನಿಗೆ ತಿಳಿದದ್ದು– ಅಲ್ಲಿನ ಒಬ್ಬ ವಿದ್ಯಾರ್ಥಿ ಅದೇ ದಿನ ರಾತ್ರಿ ಮಾಳಿಗೆಗೆ ಬಂದಾಗ ಕೇದಾರ ಹೊರಳಾಡುತ್ತಿದ್ದುದನ್ನು ನೋಡಿದನಂತೆ. ನಂತರ ಜನರೆಲ್ಲ ಕೂಡಿ ಅವನನ್ನು ಕೆಳಗೆ ತಂದರಂತೆ. ಕೇದಾರ ಏನೇನೋ ಮಾತಾಡುತ್ತ ಇದ್ದನಂತೆ. ವಾಂತಿಯಾಗಿ ಹೊಟ್ಟೆಯಲ್ಲಿದ್ದದ್ದೆಲ್ಲ ಸಾಕಷ್ಟು ಹೊರ ಬಿತ್ತು– ಅಂತೆಲ್ಲ. ಅದೇ ದಿನ ಹೇಳಿ ಕಳಿಸಿದ ಹಾಗೆ ಯಾಗೇಶ ಬನಾರಸಿಗೆ ಬಂದು ತಲುಪಿದ್ದ. ಕೇದಾರ ಕೆಲ ದಿನಗಳ ಬಳಿಕ ಸರಿಹೋದ. ಆದರೆ ಅನೇಕ ದಿನಗಳವರೆಗೆ ದೃಷ್ಟಿ ಮಾತ್ರ ದುರ್ಬಲವಾಗಿಯೇ ಇತ್ತು. ಕೆಲ ದಿನಗಳ ಕಾಲ ಮನೆಗೆ ಹೋಗಿ ಇದ್ದು ಮತ್ತೆ (1911 ಅಕ್ಟೋಬರ್) ಬನಾರಸಿಗೆ ಹೊರಟು ಹೋದ.

ಮಂತ್ರ–ತಂತ್ರ, ಪೂಜಾಧ್ಯಯನ ಹಾಗೂ ದೇವೀ–ದೇವತೆಗಳಿಂದ ಕೇದಾರನಿಗೆ ಮುಕ್ತಿಯೇನೋ ದೊರಕಲಿಲ್ಲ. ಆದರೆ ಈಗ ಕೊಂಚ ಬದಲಾಗಿದ್ದ. ಓದಿಗೆ ಹೆಚ್ಚು ಸಮಯ ಕೊಡತೊಡಗಿದ. ಒಬ್ಬ ಬ್ರಹ್ಮಚಾರಿಯ ನೆರವಿನಿಂದ ಆರನೇ ಕ್ಲಾಸಿನವರೆಗಿನ ಇಂಗ್ಲಿಷ್ ರೀಡರ್‌ಗಳನ್ನಲ್ಲದೆ ಹಿಂದೀ ಪುಸ್ತಕಗಳನ್ನು ಸಮಾಚಾರ ಪತ್ರಿಕೆಗಳನ್ನು ಓದತೊಡಗಿದ್ದ. ಆ ದಿನಗಳಲ್ಲಿಯೇ ಅವನು ಮೊಟ್ಟ ಮೊದಲ ಬಾರಿಗೆ 'ಸರಸ್ವತೀ' ಎಂಬ ಮಾಸಿಕ ಓದಲು ಸುರು ಮಾಡಿದ. ತರುಣರನ್ನು ಪುಸಲಾಯಿಸಿ ದ್ವೀಪಗಳಿಗೆ ಸಾಗಿಸುವ ಸಾಗಣೆದಾರರಿಂದ ಜಾಗರೂಕರಾಗಿರುವಂತೆ ತಿಳಿಸುವ ಮತ್ತು ದ್ವೀಪದಲ್ಲಿನ ಸಂಕಷ್ಟಗಳನ್ನು ವಿವರಿಸುವ ಅಚ್ಚಾದ ಹ್ಯಾಂಡ್ ಬಿಲ್‌ಗಳು ಅವನಿಗೆ ಓದಲು ದೊರೆತವು. ಅವನ್ನು ಓದಿ ಕೇದಾರನ ರಕ್ತ ಕುದಿಯತೊಡಗಿತು. ಯಾವನಾದರು ಇಂತಹ ಕಳ್ಳಸಾಗಣೆದಾರನೊಂದಿಗೆ ಘರ್ಷಣೆಗಿಳಿಯುವ ಅವಕಾಶಕ್ಕಾಗಿ ಹುಡುಕಲಾರಂಭಿಸಿದ.

ಒಂದು ದಿನ ಒಬ್ಬ ಸಾಗಣೆದಾರನೊಡನೆ ಘರ್ಷಣೆ ನಡೆದೇ ಬಿಟ್ಟಿತು. ಅಮಾಯಕನಂತೆ ಕೇದಾರ ಅವನ ಜೊತೆ ಒಂದು ತೋಟದೊಳಗಡೆ ಇದ್ದ ಮನೆಗಳಿಗೆ ಹೋದ. ನೋಡಿದರೆ ಅಲ್ಲಿ ಸೇರಿದ ಹಳ್ಳಿಗರಲ್ಲಿ ಆಜಮ್‌ಗಢ ಜಿಲ್ಲೆಯ ತನ್ನದೇ ವಯಸ್ಸಿನ ಒಬ್ಬ ಹುಡುಗನಿದ್ದಾನೆ! ಕೇದಾರ ಕೆರಳಿ ಅವನಿಗೆ ಅಸಲು ವಿಚಾರ ತಿಳಿಸ ಹೊರಟಾಗ ಸಾಗಣೆದಾರ ಕೇಳಿಸಿಕೊಂಡ. ಕುಪಿತನಾಗಿ ಆತ ತನ್ನ ಮೇಲೆ ಎರಗಲು ಬಂದಿದ್ದೇ ತಡ ಕೇದಾರ ತೋಟದಿಂದ ಹೊರಗೋಡಿದ.

ಹೊರಗೆ ಬಂದ ಮೇಲೆ ತನ್ನ ಜಿಲ್ಲೆಯ ಕೆಲ ವಿದ್ಯಾರ್ಥಿಗಳನ್ನು ಒಗ್ಗೂಡಿಸಿ, ಆ ಹುಡುಗನನ್ನು ಸಾಗಣೆದಾರನಿಂದ ಬಿಡಿಸುವ ಉಪಾಯ ಮಾಡಿದ. ಆದರೆ ಅದು ವ್ಯರ್ಥವಾಯಿತು. ಎನ್ನಿಬೆಸೆಂಟರ ಹತ್ತಿರ ಸಹಾಯ ಕೇಳಲು ಹೋದರೆ ಅವರು ಶಾಂತವಾಗಿರಬೇಕೆಂಬ ಉಪದೇಶ ಬಿಟ್ಟರೆ ಬೇರೇನನ್ನೂ ಮಾಡಲಿಲ್ಲ.

"ನನ್ನ ಸಾರ್ವಜನಿಕ ಕಾರ್ಯ ಮೊತ್ತ ಮೊದಲು ಆರಂಭಗೊಂಡದ್ದು ಈ ವೇಳೆಯಲ್ಲಿಯೇ" (ನವೆಂಬರ್ 1911 ಇ) ಎಂದು ಬರೆದಿದ್ದಾರೆ ರಾಹುಲಜೀ.

# ವೈರಾಗಿ ಸಾಧು

ಓದು ನಡೆಯುತ್ತಿತ್ತು. ಪ್ರಸ್ತುತ ಸಿದ್ಧಾಂತ ಕೌಮುದಿಯ ಪಾಠ ಮುಂದುವರಿಯುತ್ತಾ ಇತ್ತು. ಸಂಸ್ಕೃತ ನಾಟಕ ಮತ್ತು ಕಾವ್ಯಭ್ಯಾಸವೂ ಸಾಗಿತ್ತು. ಪಾಠ ಹೇಳುವವರು ಕೂಡ ಅನೇಕರಿದ್ದರು. ಇಂಗ್ಲಿಷ್ ಕಲಿಕೆಯ ಜತೆ ಹಿಂದಿಯ ಸ್ವಾಧ್ಯಾಯ ನಡೆದಿತ್ತು. ಅದೇ ಸಮಯದಲ್ಲಿ ಕೇದಾರ ಬನಾರಸಿನಲ್ಲಿ ಹೊಸತಾಗಿ ತೆರೆದ ದಯಾನಂದ ಸ್ಕೂಲಿನಲ್ಲಿ ಏಳನೇ ದರ್ಜೆಗೆ ತನ್ನ ಹೆಸರು ಬರೆಸಿದ. ಹೀಗೆ ಎಲ್ಲ ಅಚ್ಚುಕಟ್ಟಾಗಿ ನಡೆಯುತ್ತ ಇದ್ದಂತೆ ಒಮ್ಮಿಂದೊಮ್ಮೆಗೆ ಎಲ್ಲ ಬದಲಾಗಿ ಬಿಟ್ಟಿತು.

ಆ ದಿನಗಳಲ್ಲಿಯೇ (ಬಿಹಾರದ ಛಪರಾ ಜಿಲ್ಲೆಯಲ್ಲಿರುವ) ಪರಸಾ ಮಠದ ಮಹಂತರು ಕಾಶಿಗೆ ಬಂದಿದ್ದರು. ಸಾಕಷ್ಟು ಪ್ರಾಚೀನವಾದ ಶ್ರೀಮಂತ ಮಠ ಅದು. ಮಹಂತರ ಉತ್ತರಾಧಿಕಾರಿ ಶಿಷ್ಯ ರಾಮಉದಾರ ದಾಸ ಕೆಲ ಸಮಯದ ಹಿಂದಷ್ಟೆ ತೀರಿಕೊಂಡಿದ್ದರು. ಹಾಗಾಗಿ ಮಹಂತರು ಹೊಸ ಉತ್ತರಾಧಿಕಾರಿಯ ಹುಡುಕಾಟದಲ್ಲಿದ್ದರು. ಸಂಯೋಗವಶಾತ್ ಒಂದು ದಿನ ತಮ್ಮ ಒಂದು ಮೊಕದ್ದಮೆಯ ತೀರ್ಪಿನ ಕಾಗದವನ್ನು ಕೇದಾರನಾಥರಿಂದ ಓದಿಸಿದರು. ಕಾಗದ ಇಂಗ್ಲಿಷಿನಲ್ಲಿತ್ತು. ಕೇದಾರ ಒಪ್ಪವಾಗಿ ಅದರ ಭಾವಾರ್ಥ ತಿಳಿಸಿ ಹೇಳಿದಾಗ ಮಹಂತರು ಭಾರೀ ಪ್ರಭಾವಿತರಾದರು. ಅವರು ಕೇದಾರನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳುವ ಅಪೇಕ್ಷೆಯನ್ನು ಹೊಂದಿದ್ದರು.

ಮೂರನೆಯವರ ಮುಖಾಂತರ ಕೇದಾರನೆದುರು ಇದನ್ನು ಪ್ರಸ್ತಾಪಿಸಲಾಯಿತು. ಆರಂಭದಲ್ಲಿ ಕೇದಾರ ತನ್ನ ಕಷ್ಟಗಳನ್ನು ಹೇಳಿಕೊಂಡ. ಮೊದಲು ತನ್ನ ಓದು ಸಾಗಬೇಕೆಂದು ಅವನು ಹೇಳಿದ. ಪರಸಾದಲ್ಲಿಯೂ ಪಂಡಿತರು ಹಾಗೂ ಅಧ್ಯಾಪಕರ ವ್ಯವಸ್ಥೆ ಮಾಡಲು ಸಾಧ್ಯವಿದೆ ಎಂದು ತಿಳಿಸಿದಾಗ ಅವನು ಕೊನೆಯಲ್ಲಿ ಒಪ್ಪಿಗೆ ಕೊಟ್ಟುಬಿಟ್ಟ. ಪರಸಾವಾಸದಿಂದಾಗಿ ಮನೆಯವರಿಂದ ಸಾಕಷ್ಟು ದೂರ ಇರುತ್ತೇನೆಂತಲೂ ಅವನಿಗನಿಸಿತ್ತು.

ಸೆಪ್ಟೆಂಬರ್ 1912ರ ಒಂದು ದಿನ ಕೇದಾರನಾಥ ಪರಸಾಮಠ ಮುಟ್ಟಿದ. ಅಲ್ಲಿ ಒಬ್ಬ ರಾಜಕುಮಾರನಂತೆ ಅವನಿಗೆ ರಾಜೋಚಿತ ಸ್ವಾಗತ ದೊರೆಯಿತು. ಅವನ ಸುಖ ಸೌಲಭ್ಯಗಳಿಗಾಗಿ ಅವರು ಎಲ್ಲ ರೀತಿಯ ಗಮನ ಕೊಟ್ಟರು. ಮಹಂತರ ಕುದುರೆ ಕಾಸ್ತಾರನ ಮಗ ರಾಮದಾಸ ಎಂಬವನನ್ನು ಅವನ ಸೇವಕನನ್ನಾಗಿ ನೇಮಿಸಿದರು. ಬೆಳಿಗ್ಗೆ ಶೌಚಾರ್ಥ ಗದ್ದೆಗೆ ಹೋಗುವಾಗ ರಾಮದಾಸ ನೀರಿನ ತಂಬಿಗೆ ಹಿಡಿದುಕೊಂಡು ಅವನ ಜೊತೆಗೆ ಹೆಜ್ಜೆ ಹಾಕುತ್ತಿದ್ದ. ಕೇದಾರನ ಊಟ-ತಿಂಡಿಗಳಿಗೂ ವಿಶೇಷ ವ್ಯವಸ್ಥೆಯಾಯಿತು.

ಮಂತ್ರ ದೀಕ್ಷೆಯ ಸಮಯ ಬಂತು. ತುಲಸೀಮಾಲೆ ಮತ್ತು "ರಾಂ ರಾಮಾಯ ನಮಃ" ಎಂಬ ಮಂತ್ರೋಪದೇಶವಲ್ಲದೆ ಇನ್ನೂ ಒಂದು ವಿಧಿ ನಡೆಯಿತು. ಹಿತ್ತಾಳೆಯ ಶಂಖ ಚಕ್ರದ ಮುದ್ರೆಯನ್ನು ಬೆಂಕಿಯಲ್ಲಿ ಕೆಂಪಗೆ ಕಾಯಿಸಿ ಕೇದಾರನ ಎರಡೂ ಬಾಹು ಮೂಲದಲ್ಲಿ ಸುಡಲಾಯಿತು.

"ನನಗೆಲ್ಲಾದರೂ ಬನಾರಸಿನಲ್ಲಿಯೇ ಈ ವಿಧಿಯ ಪತ್ತೆ ಹತ್ತಿದ್ದರೆ ಅಷ್ಟು ಮಾತ್ರಕ್ಕೇ ನಾನು ಪರಸಾದ ಹೆಸರು ಕೂಡ ಎತ್ತುತ್ತಿರಲಿಲ್ಲ. ಆದರೆ ಈಗಲೋ ಮಾತು ಕೊಟ್ಟು ಬಹಳ ಮುಂದೆ ಬಂದಾಗಿತ್ತು" ಎಂದು ಬರೆದಿದ್ದಾರೆ ರಾಹುಲಜೀ.

ಈಗ ಕೇದಾರನಾಥ ಪಾಂಡೇ ವೈರಾಗಿ ಸಾಧು. ಹಾಗೂ ಅವನ ಹೊಸ ಹೆಸರು-ರಾಮ ಉದಾರ ದಾಸ ಅಥವಾ ಸಂಕ್ಷೇಪದಲ್ಲಿ ರಾಮ ಉದಾರ (ರಾಮೋದಾರ)

ಮಠದಲ್ಲಿ ರಾಮ ಉದಾರರ ಆರಾಮಕ್ಕಾಗಿ ತುಂಬ ಗಮನ ನೀಡಲಾಯಿತು. ಸ್ನಾನ-ಒಗೆತಕ್ಕೆ, ತೈಲ ಮಜ್ಜನಕ್ಕೆ, ಕಾಲು ತಿಕ್ಕಲಿಕ್ಕೆ ಮುಂತಾದವಕ್ಕೆಲ್ಲ ನೌಕರನಿದ್ದ. ಉತ್ತಮ ಜಾಬಂದೀ, ತೆಳ್ಳನೆಯ ಮೃದು ಧೋತಿ ಮತ್ತು ಪಾದರಕ್ಷೆ ಬಂತು. ನೌಕರ ಕೊಡೆ ಹಿಡಿದು ನಡೆಯುತ್ತಿದ್ದ. ಮಹಂತರ ಪ್ರೀತಿ ಹೆಚ್ಚುತ್ತ ಹೋಯಿತು. ರಾಮ ಉದಾರರು ಮಹಂತರ ಸಂಪ್ರದಾಯದ ನಡೆ-ನುಡಿ ವ್ಯವಹಾರಗಳನ್ನು ಕಲಿಯಲಾರಂಭಿಸಿದರು.

ಆದರೆ ಅಲ್ಲಿ ಓದಿನ ವ್ಯವಸ್ಥೆ ಏನೂ ಇರಲಿಲ್ಲ. ರಾಮ ಉದಾರ ದಾಸ "ಸರಸ್ವತೀ" ಮತ್ತು ಇಂಗ್ಲಿಷ್ ಮಾಸಿಕ 'ಡಾನ್' ತರಿಸಿಕೊಂಡರು. ಹಿಂದಿ ಮತ್ತು ಸಂಸ್ಕೃತದ ಅನೇಕ ಪುಸ್ತಕಗಳು ಸಹ ಬೇಕೆಂದು ಕೇಳಿದರು.

ಒಂದು ದಿನ ತಂದೆ ಮತ್ತು ಮಾವ ಅಕಸ್ಮಾತ್ ಪರಸಾಕ್ಕೆ ಬಂದು ಬಿಟ್ಟರು. ಖಂಡಿತ ವಾಪಸು ಕಳಿಸುತ್ತೇವೆಂದು ಮಹಂತರಿಗೆ ಮಾತು ಕೊಟ್ಟು, ರಾಮ ಉದಾರರನ್ನು ಅವರು ಕನ್ನೈಲಾಕ್ಕೆ ಕರೆದೊಯ್ದರು. ಅಲ್ಲಿಂದ ಹಿಂತಿರುಗಲು ಬಿಡುವುದಿಲ್ಲವೆಂದು ರಾಮ ಉದಾರರಿಗೆ ಚೆನ್ನಾಗಿಯೇ ತಿಳಿದಿತ್ತು. ಅಲ್ಲಿ ತನ್ನ ಮೇಲೆ ತೀವ್ರ ನಿಗಾ ಇಟ್ಟಿರುತ್ತಾರೆ ಎಂಬುದು ಸಹ ಅವರಿಗೆ ಗೊತ್ತಿತ್ತು. ಆದರೆ ರಾಮ ಉದಾರರು ಈ ಸಲವೂ ಮನೆ ಬಿಟ್ಟು ಓಡಿ ಹೋಗುವುದರಲ್ಲಿ ಯಶಸ್ವಿಯಾದರು. ಮೂರು ತಿಂಗಳ ಬಳಿಕ ಪರಸಾ ತಲುಪಿದರು. ಹಿಂದಿನ ದಿನಚರಿ ಮತ್ತೆ ಮೊದಲಾಯಿತು. ಈಗ ಅವರಿಗೆ ಇಪ್ಪತ್ತು ವರ್ಷ.

ಮಠದ ಇತಿಹಾಸ ಮತ್ತು ದೇಶವಿಡೀ ಹರಡಿರುವ ಅದರ ಶಿಷ್ಯ ಶಾಖೆಗಳ ಕುರಿತು ರಾಮ ಉದಾರರು ವಿಸ್ತಾರವಾಗಿ ತಿಳಿದುಕೊಂಡರು. ಅವರಿಗೆ ಸಂಪ್ರದಾಯ ಮತ್ತು ಮೂಲ ಕ್ಷೇತ್ರದ ವಿಚಾರವಾಗಿ ಅನೇಕ ವಿಚಾರಗಳನ್ನು ತಿಳಿಸಲಾಯಿತು. ಮಹಂತರು ದಕ್ಷಿಣ ಭಾರತದ ತನ್ನ ಯಾತ್ರಾ ಕಥೆಗಳನ್ನು ಹೇಳಿದರು. ರಾಮ ಉದಾರ ಮಠದ ಆಸ್ತಿ-ಪಾಸ್ತಿಗಳ ವಿಚಾರವೆಲ್ಲ ಅವರಿಗೆ ತಿಳಿದಿರಲಿ ಮತ್ತು ಅವನ್ನು ಅವರು ನಡೆಸಲಿ ಎಂಬುದೇ ಮಹಂತರ ಇಚ್ಛೆಯಾಗಿತ್ತು. ಆದರೆ ರಾಮ ಉದಾರರಿಗೆ ಅದರಲ್ಲಿ ಕಿಂಚಿತ್ತೂ ಆಸಕ್ತಿ ಇರಲಿಲ್ಲ. ಅಲ್ಲಿನ ಬೌದ್ಧಿಕ ನಿರಶನದ ವಾತಾವರಣದಿಂದ ಹೊರಬಿದ್ದು ಓಡಲಿಕ್ಕಾಗಿ ಅವರ ಮನಸ್ಸು ಚಡಪಡಿಸತೊಡಗಿತು.

1913ರ ಜುಲೈ ತಿಂಗಳ ಒಂದು ದಿನ ಒಂದೆರಡು ಸಂಸ್ಕೃತ ಪುಸ್ತಕ, ಎರಡು ಧೋತಿ, ಎರಡು ಲಂಗೋಟಿ, ಸಣ್ಣದೊಂದು ಬೈರಾಸ ಹಾಗೂ ಮೂರು ರೂಪಾಯಿ ಹಿಡಿದುಕೊಂಡು ಸಾಧು ರಾಮ ಉದಾರ ಏಕಮಾಕ್ಕೆ ಹೋದರು. ಗಾಡಿಯೇರಿ ಲಖೀಸರಾಯ್ ತಲುಪಿದರು. ಅಲ್ಲಿಂದ ಮುಂದೆ ಒಬ್ಬ ವಕೀಲರು ಅವರನ್ನು ತನ್ನ ಜೊತೆಯಲ್ಲಿ ಬರಲು ಒತ್ತಾಯಿಸಿದರು. ರಜಾ ದಿನಗಳಲ್ಲಿ ಆ ವಕೀಲರು ಪುರೀ, ರಾಮೇಶ್ವರ ಮುಂತಾದೆಡೆ ತೀರ್ಥಯಾತ್ರೆಗೆ ಹೊರಟರು. ಅವರೊಂದಿಗೆ ಯಾತ್ರೆ ಹೊರಟ

ರಾಮ ಉದಾರ ಮೊದಲು ಜಗನ್ನಾಥಪುರಿಗೆ ಅಲ್ಲಿಂದ ಮದ್ರಾಸಿನವರೆಗೆ ತೆರಳಿದರು. ಅಲ್ಲಿಂದ ಮುಂದೆ ಅವರು ಒಂಟಿಯಾಗಿ ಯಾತ್ರೆ ಮುಂದುವರಿಸಿದರು. ರೈಲಿನಲ್ಲಿ ಮೊದಲು ಅವರು ಸೈದಾಪೇಟೆಗೆ ಹೋದರು. ಅಲ್ಲಿ ಅವರು ಛತ್ರಂ (ಧರ್ಮಶಾಲೆ) ಮತ್ತು ಉತ್ತರಾದಿ (ಉತ್ತರ ಭಾರತೀಯ) ಮಠಗಳಲ್ಲಿ ತಂಗಿರುತ್ತಿದ್ದರು. ಅಲ್ಲಿಂದ ಅವರು ಕಾಲ್ನಡೆಯಲ್ಲಿಯೇ ಯಾತ್ರೆ ಮುಂದುವರಿಸಿದರು. ತಿರುಮಲೈ, ಪುನ್ನಮಲೈ ಹಾಗೂ ಪಚ್ಚ ಪೆರುಮಾಳ್ ಮುಂತಾದ ತೀರ್ಥ ಕ್ಷೇತ್ರಗಳನ್ನು ಅವರು ನೋಡಿದರು. ಕೊನೆಯಲ್ಲಿ ತಿರುಮಲಿಶೈನಲ್ಲಿರುವ ಉತ್ತರಾರ್ಧೀ ಮಠದ ಸ್ವಾಮೀ ಹರಿ ಪ್ರಸನ್ನಾಚಾರ್ಯರ ಬಳಿ ಹೋದರು.

ಹರಿ ಪ್ರಪನ್ನಸ್ವಾಮಿ ಬರಿಗೈಯಲ್ಲಿ ಬೃಂದಾವನದಿಂದ ದಕ್ಷಿಣಕ್ಕೆ ಓಡಿ ಬಂದವರು. ಅವರಿಗೆ ದಾನಿಗಳೊಬ್ಬರು ಸಿಕ್ಕಿದರು. ಅವರಿಂದ ಚಂದಾ ಸಿಕ್ಕಿತು, ಆ ಹಣದಿಂದ ಅವರು ಈ ಮಠ ಸ್ಥಾಪಿಸಿದ್ದರು. ಈಗ ಮಠದ ಬಳಿ ಸಾಕಷ್ಟು ಸಂಪತ್ತು ಇತ್ತು. ಹರಿಪ್ರಸನ್ನ ಸ್ವಾಮಿಯ ಇಬ್ಬರು ಶಿಷ್ಯರು ಅವರ ಜೊತೆ ಇರುತ್ತಿದ್ದರು. ಅಲ್ಲಿಯೇ ಉಳಿದು ಸಂಸ್ಕೃತಾಭ್ಯಾಸವನ್ನು ಮುಂದುವರಿಸುವಂತೆ ಅವರು ರಾಮ ಉದಾರರನ್ನು ಒತ್ತಾಯಿಸಿದರು. ರಾಮ ಉದಾರರಿಗೂ ಈ ಸಲಹೆ ಉಚಿತವೆನಿಸಿತು. ಅಲ್ಲಿನ ಸಂಸ್ಕೃತ ಪಾಠಶಾಲೆಗೆ ಅವರು ತಮ್ಮ ಹೆಸರು ಸೇರಿಸಿದರು. ಇಲ್ಲಿನ ಅಭ್ಯಾಸ ಬನಾರಸಿಗಿಂತ ಹೆಚ್ಚು ಚೆನ್ನಾಗಿ ಮತ್ತು ಮುಕ್ತವಾಗಿ ಇತ್ತು. ರಾಮ ಉದಾರರ ಮನಸ್ಸು ಒಂದೆಡೆ ಕೇಂದ್ರೀಕೃತವಾಯಿತು.

ಸ್ವಾಮೀ ಹರಿಪ್ರಪನ್ನರು ಕೂಡ ಒಬ್ಬ ಯೋಗ್ಯ ಉತ್ತರಾಧಿಕಾರಿಗಾಗಿ ಹುಡುಕುತ್ತಿದ್ದರು. ಮೊದಲ ಭೇಟಿ ಆದ ದಿನದಿಂದಲೇ ಅವರು ರಾಮ ಉದಾರರನ್ನು ಇಷ್ಟಪಟ್ಟಿದ್ದರು. ಬಹಳ ದಿನ ಕಾದು ಅವರೆದುರು ಈ ವಿಚಾರ ಪ್ರಸ್ತಾಪಿಸಿದರು. ಆರಂಭದಲ್ಲಿ ಆತ ಸಮ್ಮತಿಸಲಿಲ್ಲ. ಆದರೆ ನವ್ಯ-ನ್ಯಾಯದ ಅಧ್ಯಾಪಕ ಭಾಗವತಾಚಾರ್ಯ ಅವರೂ ಸ್ವಾಮೀಜಿಯವರ ಪ್ರಸ್ತಾಪವನ್ನು ಸಮರ್ಥಿಸಿದಾಗ ಒಪ್ಪಿಕೊಂಡರು. ಮತ್ತೆ ವಾಸುದೇವ ಮಂತ್ರ ನೀಡಲಾಯಿತು. ಬಾಹು ಮೂಲದಲ್ಲಿ ಶಂಖ-ಚಕ್ರದ ಮುದ್ರೆಯೂ ಒತ್ತಲ್ಪಟ್ಟಿತು. ದೀಕ್ಷೆಯ ಬಳಿಕ ರಾಮ ಉದಾರ ತಿರುಮಲಿಶೈ ಮಠದ ಉತ್ತರಾಧಿಕಾರಿಯಾದರು.

ತಿರುಮಲಿಶೈನಲ್ಲಿ ಅವರು ಸುಮಾರು ನಾಲ್ಕು ತಿಂಗಳುಗಳ ಕಾಲ ಇದ್ದರು. ಓದು ಸಾಗುತ್ತಿತ್ತು. ಹೀಗಾಗಿ ಮನಸ್ಸೂ ನೆಲೆಸಿತು. ಮತ್ತೆ ದಕ್ಷಿಣದ ತೀರ್ಥಸ್ಥಳಗಳನ್ನು ನೋಡುವ ಯೋಜನೆ ಹಾಕಿಕೊಂಡರು. ಪರಸಾಕ್ಕೆ ಕಾಗದ ಬರೆದರೆ ಅಲ್ಲಿಂದ ಇಪ್ಪತ್ತೈದು ರೂಪಾಯಿಯೂ ಬಂತು. ರಾಮ ಉದಾರ ಮೊದಲು ತಿರುಪತಿ ಮತ್ತು ಬಾಲಾಜಿಯ ದರ್ಶನ ಮಾಡಿದರು. ಅದೇ ಹೊತ್ತಿನಲ್ಲಿ, ಇನ್ನು ತಿರುಮಲಿಶೈಗೆ ಹಿಂದಿರುಗುವುದಕ್ಕೆ ಬದಲು ಉತ್ತರ ಭಾರತವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿಯೂ ಬಿಟ್ಟರು.

ಪಕ್ಷಿತೀರ್ಥ, ಕಾಂಚೀಪುರ, ರಾಮೇಶ್ವರ ಮುಂತಾದ ತೀರ್ಥಸ್ಥಳಗಳ ಯಾತ್ರೆ ಮುಗಿಸಿ ಬೆಂಗಳೂರಿಗೆ ಬಂದರು. ಅಲ್ಲಿಂದ ವಿಜಯನಗರದ ಸಾಮ್ರಾಜ್ಯದ ಭಗ್ನಾವಶೇಷಗಳನ್ನು ನೋಡಲು ಹಂಪಿಗೆ ತೆರಳಿದರು. ಸಾಧುಗಳ ಸಹವಾಸದಿಂದ ಈಗ ಅವರಿಗೆ ಗಾಂಜಾ ಮತ್ತು ತಂಬಾಕು ಚಿಲುಮೆ ಅಭ್ಯಾಸವಾಗಿತ್ತು. ಇದಕ್ಕೆಲ್ಲ ಪರಸಾ ಮಠದ ಉತ್ತರಾಧಿಕಾರ ಅವರಿಗೊಂದು ಬಗೆಯ ರಹದಾರಿಯೇ ಆಗಿತ್ತು.

ತಂತಿ ಕೊಟ್ಟಾಗ ಪರಸಾದಿಂದ ಮತ್ತಷ್ಟು ಹಣ ಬಂದಿತು. ಇದರಿಂದ ಸಾಧು ರಾಮ ಉದಾರ ಮುಂದೆ ಪಂಢರಾಪುರ, ಪುಣೆ, ಮುಂಬೈ, ನಾಸಿಕ, ತ್ರ್ಯಂಬಕೇಶ್ವರ, ಕಪಿಲಧಾರಾ, ಓಂಕಾರ-ಮಾಂಧಾತಾ ಮುಂತಾದ ಕ್ಷೇತ್ರಗಳ ಯಾತ್ರೆ ಮಾಡಿ ಉಜ್ಜೈನಿ ತಲುಪಿದರು. "ತಿಂಗಳಾನುಗಟ್ಟಲೆಯಿಂದ ನೂರಾರು ಕ್ಷೇತ್ರಗಳಿಗೆ ಹೋಗಿ, ಅಲ್ಲಿ ತಂಗಿ, ಜನರೊಂದಿಗೆ ಮಾತುಕತೆಯಾಡುತ್ತಾ ಇದ್ದುದರಿಂದ ನನಗೀಗ ರೀತಿ ರಿವಾಜು ಹಾಗೂ ಸ್ಥಳೀಯ ಮತ್ತು ಅಭ್ಯಾಗತ ಸಾಧುಗಳ ಕರ್ತವ್ಯ ಮತ್ತು ಅಧಿಕಾರದ ಬಗ್ಗೆ ಪರಿಚಯವಾಗಿ ಬಿಟ್ಟಿತ್ತು. ಯಾವುದೇ ಸ್ಥಳಕ್ಕೆ ಹೋಗುವುದು-ಬರುವುದು, ಭೇಟಿ-ಗೀಟಿ, ವಾಸ-ಗೀಸದಲ್ಲೆಲ್ಲ ಯಾವ ಸಂಕೋಚವೂ ಇರಲಿಲ್ಲ. ಈಗ ನಾನು ನಿಜವಾಗಿಯೂ ಅಪ್ಪಟ ಸಾಧುವಾಗಿದ್ದೆ"-ಎಂದು ಬರೆದಿದ್ದಾರೆ ರಾಹುಲಜೀ.

ಮುಂದೆ ಅವರು ಅಹಮದಾಬಾದಿನಲ್ಲಿ ಸುಮಾರು ಒಂದು ತಿಂಗಳಿದ್ದರು. ಅಲ್ಲಿ ಕೆಲ ಗುಜರಾತಿ ಗ್ರಂಥಗಳ ಅಧ್ಯಯನ ನಡೆಸಿದರು. ಡಾಕೋರ್‌ನಲ್ಲಿದ್ದಾಗ ಪರಸಾದಿಂದ ದುಡ್ಡು ಬರುವುದರ ಜೊತೆಗೆ 'ಬೇಗ ಬಂದು ಬಿಡು' ಎಂಬ ಪತ್ರವೂ ಬಂತು. ಅಲ್ಲಿಂದ ಮತ್ತೆ ಎಲ್ಲಿಯೂ ನಿಲ್ಲದೆ ಸೀದಾ ಪರಸಾಕ್ಕೇ ಬಂದು, ತಲುಪಿಕೊಂಡರು. ಅಲ್ಲಿ ತನ್ನ ಬನಾರಸಿನ ಸಹಪಾಠಿ ವರದರಾಜನನ್ನು ಕಂಡು ಅತೀವ ಸಂತೋಷವಾಯಿತು.

ಪರಸಾ ಮಠದ ಆಸ್ತಿ ಹಾಗೂ ಜಮೀನು ಕುರಿತ ಕೆಲ ಹೊಸ ವ್ಯಾಜ್ಯಗಳಿದ್ದವು. ಆದರೆ ರಾಮ ಉದಾರರಿಗೆ ಅದರಲ್ಲಿ ಆಸಕ್ತಿಯೇ ಇರಲಿಲ್ಲ. ಹಾಗೆ ಕೆಲ ಜಗಳಗಳನ್ನು ಬಿಡಿಸುವುದರಲ್ಲಿ ಸ್ವಲ್ಪ ಸಹಕರಿಸಿದರು. ಅದು 1914ನೇ ಇಸವಿ. ರಾಮ ಉದಾರರಿಗೆ ತುಂಬು ಇಪ್ಪತ್ತೊಂದನೇ ವರ್ಷ.

ಅದೇ ಸಮಯದಲ್ಲಿ ಭಾರತೀಯ ಪುರಾತತ್ವ ವಿಭಾಗದ ಇಬ್ಬರು ಫೋಟೋಗ್ರಾಫರುಗಳು ಪುರಾತನ ವಸ್ತುಗಳ ಫೋಟೋ ತೆಗೆದುಕೊಳ್ಳಲು ಏಕಮಾಕ್ಕೆ ಬಂದವರು. ಪರಸಾಕ್ಕೂ ಬಂದರು. ಮಠದ ಫೋಟೋ ತೆಗೆದುಕೊಂಡರು. ರಾಮಉದಾರರು ಅವರಿಗೆ ನೆರವಾದರು. ಅದೇ ವೇಳೆ ಅವರು ರಾಮಉದಾರರ ಮೊದಲ ಫೋಟೋ ತೆಗೆದು ಒಂದು ಪ್ರತಿಯನ್ನು ಅವರಿಗೆ ಕೊಟ್ಟರು. ಆದರೆ ಆ ಫೋಟೋ ಅಯೋಧ್ಯೆಯಲ್ಲಿ ಕಳೆದು ಹೋಯಿತು. ರಾಮಉದಾರರು ಕುದುರೆಯ ಮೇಲೆ ಕುಳಿತ ಫೋಟೋವನ್ನು ಆಗ ತೆಗೆದಿದ್ದರು.

ಪರಸಾದಲ್ಲಿ ಅವರ ಮನಸ್ಸು ನಿಲ್ಲಲಿಲ್ಲ. ಪುನಃ ಅಲ್ಲಿಂದ ಓಡಿ ಹೋಗುವ ಯೋಚನೆ ಬಂದಿತು. ಅವರ ಸಹಯಾತ್ರಿಯಾಗಲು ವರದರಾಜರು ಸಹ ತಯಾರಾದರು. ಕೈಯಲ್ಲಿ ಬಿಡಿಗಾಸಿಲ್ಲದೆ ಇಬ್ಬರು ಪರಸಾದಿಂದ ಹೊರಟು ಅಯೋಧ್ಯೆ ತಲುಪಿದರು. ಶ್ರಾವಣ ಮಾಸದಲ್ಲಿ ಅಲ್ಲಿ ಭಾರೀ ಉತ್ಸವದ ವಾತಾವರಣ. ಸುಮಾರು ಒಂದು ವಾರದ ನಂತರ ಅಲ್ಲಿನ ಮದ್ರಾಸೀ ವೇದಾಂತ ಪಾಠಶಾಲೆಯಲ್ಲಿ ಹೆಸರು ಕೊಟ್ಟರು. ಸಾಮವೇದದ ಸ್ವರ ಪಾಠವನ್ನು ಆರಂಭಿಸಿಯೂ ಬಿಟ್ಟರು.

ಮೂರು ತಿಂಗಳ ಅಯೋಧ್ಯಾ ವಾಸ ರಾಮಉದಾರರಲ್ಲಿ ಸಾಕಷ್ಟು ಪರಿವರ್ತನೆ ಉಂಟುಮಾಡಿತು. ಮೊದಲ ವೇದಾಂತ ಪಾಠಶಾಲೆಯನ್ನು ಮುಚ್ಚಬೇಕಾಗಿ ಬಂದಿದ್ದರಿಂದ ಅವರು ಇನ್ನೊಂದು ವೇದಾಂತ ಪಾಠಶಾಲೆ ಸ್ಥಾಪಿಸುವ ಪ್ರಯತ್ನ ಮಾಡಿದರು. ಹತ್ತಿರದ ದೇವಕಾಳೀ ದೇವಸ್ಥಾನದಲ್ಲಿ ನವರಾತ್ರಿಯ ಸಮಯ ಆಡುಗಳನ್ನು ಬಲಿ ಕೊಡುತ್ತಿದ್ದರು. ಅದನ್ನು ತಡೆಯಲು ರಾಮಉದಾರರು ತಂಡ ಕಟ್ಟಿಕೊಂಡು ಸಂಘರ್ಷಕ್ಕಿಳಿದರು. ಆರ್ಯಸಮಾಜೀ ಸಬ್‌ಇನ್ಸ್‌ಪೆಕ್ಟರ್

ಮತ್ತು ವಕೀಲ ಬಲದೇವ ಬಾಬಾ (ಆಚಾರ್ಯ ನರೇಂದ್ರದೇವ ಅವರ ತಂದೆ) ಅವರು ಈ ಪ್ರಯತ್ನಕ್ಕೆ ಬೆಂಬಲ ನೀಡಿದರು. ಅವರಿಗೆ ಆರ್ಯಸಮಾಜದತ್ತ ಆಸಕ್ತಿ ಹೆಚ್ಚತೊಡಗಿತು.

ಪ್ರಥಮ ಮಹಾಯುದ್ಧ ಆರಂಭವಾಗಿತ್ತು. ರಾಮಉದಾರರು ಪತ್ರಿಕೆ ಓದತೊಡಗಿದರು. ಭಾಷಣ ಮಾಡುವ ಸಂದರ್ಭಗಳು ಮೊದಲಿಗೆ ಒದಗಿ ಬಂದದ್ದೂ ಅವರಿಗೆ ಈ ಸಮಯದಲ್ಲಿಯೇ. ಸ್ವಾಮೀ ದಯಾನಂದ ಹಾಗೂ ಆರ್ಯಸಮಾಜದ ಹೆಸರನ್ನು ಬನಾರಸಿನಲ್ಲಿದ್ದಾಗಲೇ ಅವರು ಕೇಳಿದ್ದರು. ಆದರೆ ಆವಾಗ ಅವರು ಸ್ವಾಮೀ ದಯಾನಂದರ "ಸತ್ಯಾರ್ಥ ಪ್ರಕಾಶ"ವನ್ನು "ಮಿಥ್ಯಾರ್ಥ ಪ್ರಕಾಶ" ಎಂದು ಗಣಿಸಿದ್ದರು.

ಆದರೆ ಈಗ ಅಯೋಧ್ಯಾವಾಸದಲ್ಲಿ ಆರ್ಯಸಮಾಜ ಕುರಿತಂತೆ ಅವರ ವಿಚಾರಗಳಲ್ಲಿ ಪರಿವರ್ತವನೆಯಾಗುತ್ತ ಬಂತು. ಅವರು "ಸತ್ಯಾರ್ಥ ಪ್ರಕಾಶ"ದ ಪ್ರತಿಗಳನ್ನು ದೊರಕಿಸಿಕೊಂಡು, ಉತ್ಸಾಹದಿಂದ ಅವನ್ನು ಓದಿ ಹಾಕಿದರು. ಆ ಸಮಯದ ತನ್ನ ಮನಸ್ಥಿತಿಯ ಕುರಿತು ರಾಹುಲಜೀ ಹೀಗೆ ಬರೆದಿದ್ದಾರೆ.

"ಆರ್ಯಸಮಾಜದ ಹೊರತಾಗಿ ಸುದ್ದಿ ಪತ್ರಿಕೆಗಳ ಮುಖಾಂತರ ಬಾಹ್ಯ ಜಗತ್ತಿನ ಗಾಳಿಯೂ ನನಗೆ ತಾಕತೊಡಗಿತು. ನಾನು ಅಂತರಂಗದಲ್ಲಿ ಒಂದು ಕ್ಷುದ್ರ ಹಳ್ಳದಿಂದ ಹೊರಬಂದು ವಿಶಾಲ ಜಲಾಶಯದೊಳಗೆ ಪ್ರವೇಶಿಸುವ ಮೂಕವೇದನೆಯನ್ನು ಅನುಭವಿಸುತ್ತಾ ಇದ್ದೆ".

ಅದೇ ಮನಸ್ಥಿತಿಯಲ್ಲಿ ರಾಮಉದಾರ ದಾಸ ಅರ್ಥಾತ್ ಕೇದಾರನಾಥರು ಮಾವನಿಗೆ ಪತ್ರ ಬರೆದರು. ತಂದೆ ಅಯೋಧ್ಯೆಗೆ ಬಂದು ಮಗನನ್ನು ತನ್ನ ಜೊತೆ ಕನ್ಹೈಲಾಕ್ಕೆ ಕರೆದುಕೊಂಡು ಹೋದರು.

# ಸ್ವಾಮಿ ದಯಾನಂದರ ಭಿಕ್ಷು

ಕೇದಾರನಾಥರು ತಂದೆಯ ಜೊತೆ ಕನ್ಖಲ್‌ಗೆ ತಲುಪಿದರು. ಅದು ದೀಪಾವಳಿಯ ಆಚೀಚಿನ ಸಮಯ. ಮೊಮ್ಮಗನನ್ನು ಅಪರಿಮಿತವಾಗಿ ಪ್ರೀತಿಸಿದ, ಆತನ ಜೀವನದ ಮೇಲೆ ದೀರ್ಘ ಪ್ರಭಾವ ಬೀರಿದ ನಾನಾ ರಾಮಶರಣ ಪಾಠಕರು ಈಗ ಈ ಲೋಕದಲ್ಲಿರಲಿಲ್ಲ. ಕೇದಾರರು ದಕ್ಷಿಣ ಭಾರತದ ತೀರ್ಥಯಾತ್ರೆಯಲ್ಲಿದ್ದಾಗ ಅವರು ತೀರಿಕೊಂಡಿದ್ದರು.

ಮಗನ ತಲೆಯಿಂದ ವೈರಾಗ್ಯದ ಭೂತ ಇಳಿದು ಹೋಗಿದೆ, ಇನ್ನಾತ ಮನೆಯ ಜವಾಬ್ದಾರಿ ತೆಗೆದುಕೊಂಡಾನು ಎಂದು ತಂದೆ ತಿಳಿದಿದ್ದರು. ಬಛವಲ್‌ಗೆ ಹೋದರೆ ಅಲ್ಲಿ ಮಾವನೂ ಕೇಳಿದರು: "ಕ್ವ ವಿಶೇಷಃ ?" ಅಂದರೆ ಯಾವುದು ಲೇಸು ? ವೈರಾಗ್ಯವೋ, ಮನೆಯೋ ? ವೈರಾಗ್ಯ ಮತ್ತು ವೇದಾಂತದ ಆವೇಶ ಕಡಿಮೆಯಾಗಿ ಕೇದಾರರು ಶಾಂತಚಿತ್ತರಾಗಿ ಕಾಣಿಸುತ್ತಿದ್ದದ್ದಂತೂ ಹೌದು. ಆದರೆ ಇದು ತೂಫಾನು ಏಳುವ ಮುಂಚಿನ ಶಾಂತತೆಯಂತಿತ್ತು.

1915ನೇ ಇಸವಿ. ಕೇದಾರ ಈಗ 22 ವರ್ಷದವರು. ಮಹಾಯುದ್ಧದ ಸುದ್ದಿಯನ್ನು ಆಸಕ್ತಿಯಿಂದ ಓದುತ್ತಿದ್ದರು. ಪ್ರಯಾಗದ ಮಾಘಮೇಳ ಸಮೀಪಿಸಿತು. ಯಾಗೇಶರ ಸಲಹೆ, ಇಪ್ಪತ್ತು ಇಪ್ಪತ್ತೆರಡು ರೂಪಾಯಿ ಕೇದಾರರ ಕೈಯಲ್ಲಿ, ಇಬ್ಬರೂ ಮೇಳಕ್ಕೆ ಹೋದರು. ಅಲ್ಲಿ ಪ್ರಥಮ ಸಲಕ್ಕೆ ಪಂಡಿತ ಮದನ ಮೋಹನ ಮಾಲವೀಯರ ಭಾಷಣ ಕೇಳಿದರು. ಆರ್ಯ ಸಮಾಜದವರ ಭಾಷಣವನ್ನು ಕೇಳಿದರು. ಕೇದಾರರು ಈ ಹಲವು ವರ್ಷಗಳಿಂದ 'ಸರಸ್ವತೀ'ಯ ಓದುಗರಾಗಿದ್ದರು. ನೌಕರಿ ಹುಡುಕಿಕೊಂಡು ಒಂದು ದಿನ 'ಇಂಡಿಯನ್ ಪ್ರೆಸ್‌ಗೆ ಹೋದರು. ಆದರೆ ಅಲ್ಲಿ ಎರಡು ಮೂರು ದಿನಗಳ ಹಿಂದೆಯಷ್ಟೆ ಒಬ್ಬ ಪ್ರೂಫ್ ರೀಡರನ್ನು ನೇಮಿಸಿಕೊಂಡಿದ್ದರು.

ಅವರ ಓದುವ ಅಭಿರುಚಿ ನೋಡಿ ಪ್ರಯಾಗದ ಒಬ್ಬ ಬಾಬು "ಆಗ್ರಾದಲ್ಲಿನ ಪಂಡಿತ ಭೋಜದತ್ತರ ಶಾಲೆಗೆ ಯಾಕೆ ಹೋಗುವುದಿಲ್ಲ ! ಅಲ್ಲಿ ಊಟ ಮತ್ತು ಅಧ್ಯಯನದ ವ್ಯವಸ್ಥೆಯಿದೆ. ವ್ಯಾಖ್ಯಾನ ಕಲಿಸಿ ಕೊಡುತ್ತಾರೆ"–ಎಂದು ಸಲಹೆ ಮಾಡಿದರು.

ಕೇದಾರನಾಥರು ಜನವರಿ (1915) ಯಲ್ಲಿ ಒಂದು ದಿನ ಆಗ್ರಾ ಸ್ಟೇಷನ್ನಿನಲ್ಲಿ ರೈಲಿನಿಂದ ಇಳಿದರು. ಮೊದಲು ವಿದ್ಯಾಲಯಕ್ಕೆ ಹೋಗಿ ನಂತರ ಅದರ ವ್ಯವಸ್ಥಾಪಕ ಡಾ। ಲಕ್ಷ್ಮೀದತ್ತ (ಪಂಡಿತ ಭೋಜದತ್ತರ ಹಿರಿಯ ಮಗ) ಅವರ ಮನೆ ತಲುಪಿದರು. ಅಲ್ಲಿಯೇ "ಮುಸಾಫಿರ್ ಆಗ್ರಾ" ಸಾಪ್ತಾಹಿಕ ಕಛೇರಿ. ಪಂಡಿತ ಲಕ್ಷ್ಮೀದತ್ತರಿಗೆ ಕೇದಾರರು ತನ್ನ ಅರ್ಹತೆ ತಿಳಿಸಿದರು–"ಉರ್ದು ಮಿಡ್ಲ್, ಸಾಕಷ್ಟು ಸಂಸ್ಕೃತ ಹಾಗೂ ಅಷ್ಟಿಷ್ಟು ಇಂಗ್ಲಿಷ್". ಕಲಿಕೆಯ ನಂತರ ಆರ್ಯ ಸಮಾಜದ ಸೇವೆಯಲ್ಲಿ ತೊಡಗಿಕೊಳ್ಳುತ್ತೇನೆಂದು ಕೇದಾರರಿಂದ ಆಶ್ವಾಸನೆ ದೊರೆತ ಮೇಲೆ "ಅಚ್ಛಾ, ಹಾಗಾದರೆ ಹೋಗಿ, ನೀವು (ಶಾಲೆಗೆ) ಸೇರಿದಿರಿ" ಎಂದರು ಪಂಡಿತ ಲಕ್ಷ್ಮೀದತ್ತ.

ಆರ್ಯ ಮುಸಾಫಿರ್ ವಿದ್ಯಾಲಯದಲ್ಲಿ ಎರಡು ವರ್ಷದ ಕೋರ್ಸು ಇತ್ತು. ಆಗ ಸಂಸ್ಕೃತ ಮತ್ತು ಅರಬ್ಬೀ ಭಾಷೆಯಲ್ಲದೆ ಆರ್ಯ ಸಮಾಜದ ಸಿದ್ಧಾಂತಗಳ ಶಿಕ್ಷಣವನ್ನು ನೀಡುತ್ತಿದ್ದರು. ಪ್ರತೀ ದಿನ ಸಂಜೆ ಶಾಸ್ತ್ರಾರ್ಥವನ್ನಲ್ಲದೆ ಭಾಷಣ ಕ್ರಮವನ್ನು ತಿಳಿಸುತ್ತಿದ್ದರು. ಕೇದಾರರು ಸಂಸ್ಕೃತದಲ್ಲಿ ಸಾಕಷ್ಟು ಮುಂದಿದ್ದುದರಿಂದ ಅರಬ್ಬೀ ಮಾತ್ರ ಓದಿಕೊಂಡರೆ ಸಾಕಾಗಿತ್ತು. ಅರಬ್ಬೀ ಕಲಿಸುವ ಮಹೇಶ ಪ್ರಸಾದರನ್ನು ಎಲ್ಲರೂ 'ಭಾಯೀ ಸಾಹೇಬ' ಎನ್ನುತ್ತಿದ್ದರು. ಮುಂದೆ ಕೇದಾರರಿಗೂ 'ಭಾಯೀ ಸಾಹೇಬ'ರಿಗೂ ಆತ್ಮೀಯ ಸಂಬಂಧ ಏರ್ಪಟ್ಟಿತು.

ಕೆಲವೇ ದಿನಗಳಲ್ಲಿ ಕೇದಾರನಾಥರು ಶಾಸ್ತ್ರಾರ್ಥದಲ್ಲಿ ಹಾಗೂ ಭಾಷಣ ನೀಡುವುದರಲ್ಲಿ ಸಾಕಷ್ಟು ಪಾರಂಗತರಾದರು. ಪ್ರತಿ ದಿನ 'ಮುಸಾಫಿರ್ ಆಗ್ರಾ' ಕಛೇರಿಗೆ ಹೋಗಿ ಎರಡು ಮೂರು ಗಂಟೆಗಳ ಕಾಲ ಪತ್ರಿಕೆ ಓದುತ್ತಿದ್ದರು. ಅದೇ ವರ್ಷ, 1915ರ ಕೊನೆಯ ದಿನಗಳಲ್ಲಿ, "ಮುಸಾಫೀರ್ ಆಗ್ರಾ"ದಲ್ಲಿ ಕೇದಾರನಾಥ ವಿದ್ಯಾರ್ಥಿಯ ಬರೆಹಗಳೂ ಅಚ್ಚಾಗತೊಡಗಿದುವು. ಆ ವರ್ಷವೇ ಕೇದಾರರ ಪ್ರಥಮ ಹಿಂದೀ ಲೇಖನ ಮೇರಠ್‌ನಿಂದ ಹೊರಡುವ ಮಾಸಿಕ 'ಭಾಸ್ಕರ'ದಲ್ಲಿ ಎರಡು ಅಂಕಗಳಲ್ಲಿ ಪ್ರಕಟವಾಯಿತು. ಆ ಲೇಖನದಲ್ಲಿ ಅವರು ಅಯೋಧ್ಯೆಯಲ್ಲಿ ಸಾಧುಗಳ ಬಳಿಗೆ ಗೃಹಸ್ಥ ಜನರು ಯಾವ ಬಗೆಯ ಮಂತ್ರ ಹೇಳಿಸಿಕೊಳ್ಳಲು ಹೋಗುತ್ತಾರೆ ಎಂಬುದರ ವರ್ಣನೆ ಮಾಡಿದ್ದರು.

ಕೇದಾರನಾಥರು ಈಗ ತನ್ನನ್ನು "ದಯಾನಂದರ ಭಿಕ್ಷು" ಎಂದು ಕರೆದುಕೊಂಡರು. ಅವರು ವೇದಗಳನ್ನು ಈಶ್ವರೀಯ ಜ್ಞಾನವೆಂದು ಪರಿಗಣಿಸಿದ್ದರು. ಈಗ ಅವರು ಆರ್ಯಸಮಾಜದ ಪಕ್ಕಾ ಅನುಯಾಯಿಯಾಗಿದ್ದರು. ಊರೂರು ತಿರುಗಿ ಭಾಷಣ ನೀಡುತ್ತಿದ್ದರು. ಶಾಸ್ತ್ರಾರ್ಥದಲ್ಲಿಯೂ ಭಾಗವಹಿಸುತ್ತಿದ್ದರು. ಜಬಲ್‌ಪುರದಲ್ಲಿ ಸೆಪ್ಟೆಂಬರ್ 1915ರಲ್ಲಿ ಮುಸಲ್ಮಾನರ ಜೊತೆ ನಡೆದ ಇಂತಹ ಒಂದು ಶಾಸ್ತ್ರಾರ್ಥ ಸಭೆಯಲ್ಲಿ ಸಂಸ್ಕೃತ ಸಹಾಯಕನ ರೂಪದಲ್ಲಿ ಆರ್ಯ ಸಮಾಜದ ಪ್ರತಿನಿಧಿಯಾಗಿ ಭಾಗವಹಿಸಿದ್ದರು.

ಅದೇ ವರ್ಷದ ಕೊನೆಯಲ್ಲಿ ಆಗ್ರಾದ ಪ್ರೆಸ್ ಒಂದರಲ್ಲಿ ಪ್ರತಿ ಅಧ್ಯಾಯಕ್ಕೆ ಎರಡೂವರೆ ರೂಪಾಯಿಯಂತೆ ಕುರಾನ್‌ನ ಅರಬ್ಬೀ ವಾಕ್ಯಗಳನ್ನು ದೇವನಾಗರಿ ಲಿಪಿಯಲ್ಲಿ ಬರೆಯಲು ಮತ್ತು ಹಿಂದಿಗೆ ಅನುವಾದಿಸಿ ಕೊಡಲು ಒಪ್ಪಿಕೊಂಡರು. ಆದರೆ ಪ್ರೆಸ್‌ನವನು ಮೋಸ ಮಾಡುತ್ತಿದ್ದಾನೆಂಬ ಸುಳಿವು ಸಿಕ್ಕಿ ಅವರು ಎರಡು ಅಧ್ಯಾಯಗಳ ನಂತರ ಮುಂದಿನ ಬರೆಹಗಳನ್ನು ಕೊಡದೆ ನಿಲ್ಲಿಸಿಬಿಟ್ಟರು. ಆಶ್ಚರ್ಯವೆಂದರೆ ಹಲವು ವರ್ಷಗಳ ನಂತರ ಕೇದಾರನಾಥರು ಕಾನ್ಪುರದಲ್ಲಿ ಅವೇ ಎರಡು ಅಧ್ಯಾಯಗಳು ಮಾರಾಟವಾಗುತ್ತಿದ್ದುದನ್ನು ಕಂಡರು. ಅದೂ ತಮ್ಮ ಹೆಸರೇ ಇಲ್ಲದೆ!

ಮನೆಯೊಂದಿಗೆ ಯಾವುದೇ ಸಂಬಂಧವಿಟ್ಟುಕೊಳ್ಳಲು ಇಷ್ಟ ಪಡದಿದ್ದರೂ ಕೇದಾರನಾಥರು ಯಾಗೇಶರೊಂದಿಗೆ ಮಾತ್ರ ಸಂಪರ್ಕ ಎಂದೂ ಕಳೆದುಕೊಂಡಿರಲಿಲ್ಲ. ಎಲ್ಲೇ ಇದ್ದರೂ ಯಾಗೇಶರಿಗೆ ಪತ್ರ ಬರೆಯುತ್ತಿದ್ದರು. ಯಾಗೇಶರೂ ಕೂಡ ಅವರನ್ನು ಹಿಂಬಾಲಿಸಲು ಸದಾ ಸಿದ್ಧವಾಗಿರುತ್ತಿದ್ದರು. ಕೇದಾರನಾಥರು ಮುಂದಿನ ಓದಿಗಾಗಿ ಲಾಹೋರಿಗೆ ತೆರಳಲು ನಿಶ್ಚಯಿಸಿದರೆ ಅದಕ್ಕೂ ಮೊದಲೇ ಯಾಗೇಶ ಆಗ್ರಾ ತಲುಪಿ ಮುಸಾಫಿರ ವಿದ್ಯಾಲಯಕ್ಕೆ ಸೇರಿಕೊಂಡಿದ್ದರು.

ಅನೇಕ ಸ್ಥಳಗಳಲ್ಲಿ ಸಂಚರಿಸುತ್ತಾ ಕೇದಾರರು ಕೊನೆಯಲ್ಲಿ ಆರ್ಯ ಸಮಾಜದ ಕೇಂದ್ರವಾದ ಲಾಹೋರಿಗೆ ಬಂದು ತಲುಪಿದರು. ಅಲ್ಲಿ ಖುಶಹಾಲಚಂದ 'ಖುರ್ಸಂದ್' ಅವರಲ್ಲಿದ್ದು, ಒಂದು

ವಾರದೊಳಗೆ ಡಿ.ಎ.ವಿ. ಕಾಲೇಜಿನಲ್ಲಿ ಸಂಸ್ಕೃತ ವಿಭಾಗದಲ್ಲಿ ವಿಶಾರದ ಶ್ರೇಣಿಗೆ ಸೇರಿಕೊಂಡರು. ಕೆಲ ದಿನಗಳ ಬಳಿಕ ಒಂದು ವಿದ್ಯಾರ್ಥಿವೇತನ ಸಿಕ್ಕಿ ಕಾಲೇಜಿನ ವಿದ್ಯಾರ್ಥಿನಿಲಯವಾದ 'ವೈದಿಕ ಆಶ್ರಮ'ಕ್ಕೆ ಸೇರಿಕೊಂಡರು.

ಲಾಹೋರಿನಲ್ಲಿ ಅವರು ಹೊಸ ವ್ಯಕ್ತಿಗಳೊಂದಿಗೆ ಸಂಪರ್ಕ ಬೆಳೆಸಿಕೊಂಡರು. ಆಗ್ರಾದಲ್ಲಿ ಪರಿಚಿತರಾದ, ನಂತರ ಕೇದಾರರ ಗಾಢ ಮಿತ್ರರೂ ಆದ, ಬಲದೇವ ಚೌಬೇ (ಸ್ವಾಮೀ ಸತ್ಯಾನಂದ ಸರಸ್ವತೀ) ಲಾಹೋರಿಗೆ ಬಂದು ಬಿಟ್ಟಿದ್ದರು. ಕೆಲ ಸಮಯದ ನಂತರ ಭಾಯೀ ಮಹೇಶ ಪ್ರಸಾದರೂ ಅಲ್ಲಿಗೆ ಬಂದರು. ಆ ದಿನಗಳಲ್ಲಿಯೇ ಕೇದಾರನಾಥರು ಪಂಡಿತ ಸಂತರಾಮಜೀ ಅವರನ್ನು ಮೊದಲ ಬಾರಿಗೆ ಭೇಟಿಯಾದದ್ದು. ಪಂಡಿತ ಭಗವದ್ದತ್ತ ಅವರ ಸಂಪರ್ಕಕ್ಕೆ ಬಂದದ್ದೂ ಆಗಲೇ. ಒಂದು ದಿನ ಕೇದಾರನಾಥರು ಆವೇಶದಿಂದ ಅವರೆದುರು ನುಡಿದರು. "ನಾನು ದಯಾನಂದರ ಒಂದೊಂದು ವಾಕ್ಯವನ್ನೂ ದೇವರ ವಾಕ್ಯವೆಂದೇ ಮಾನ್ಯ ಮಾಡುವವನು" ಇದನ್ನು ಒಪ್ಪಿಕೊಂಡೂ ಕೂಡ ಭಗವದ್ದತ್ತರು ತಿಳಿ ಹೇಳಿದರು.

"ಇಷ್ಟು ಅವಸರ ಪಡಬೇಡಿ, ಮೊದಲು ಓದಿ ನೋಡಿರಲ್ಲ."

1916ರಲ್ಲಿ ಬೇಸಗೆಯ ದೀರ್ಘ ರಜೆಗಾಗಿ ಕಾಲೇಜನ್ನು ಮುಚ್ಚಲಾಯಿತು. ಕೇದಾರರು ಮತ್ತೆ ಸಂಚಾರ ಹೊರಟರು. ಅವರು ಕಾಲೇಜಿನ ವಿದ್ಯಾರ್ಥಿ ಈಶಾನಂದರ ಜೊತೆ ಅವರ ಹಳ್ಳಿ ಬಿರಾಲಸಿಗೆ ಹೋದರು. ಅಲ್ಲೊಂದು ಗುರುಕುಲವೂ ಇತ್ತು. ಮಾವಿನ ಶ್ರಾಯದವರೆಗೆ ಅಲ್ಲಿದ್ದು ನಂತರ ಮುಜಫ್ಫರ್ ನಗರ ತಲುಪಿದ್ದಾರೆ, ಆಗ್ರಾದಿಂದ 'ಭಾಯೀ ಸಾಹೇಬ'ರ ಪತ್ರ ಬಂತು. ಅಲ್ಲಿಗೆ ಹೋದಾಗ ಭಾಯೀ ಸಾಹೇಬರು "ವೈದಿಕ ಮಿಶನರಿ ಸಿದ್ಧಗೊಳಿಸುವಲ್ಲಿ ಗಂಭೀರ ಹೆಜ್ಜೆ ಇಡಬೇಕಾದ ಸಮಯ ಈಗ ಬಂದಿದೆ. ಚಂದಾ ವಸೂಲಿ ಸಾಧ್ಯತೆಯ ವೀಕ್ಷಣೆಗಾಗಿ ಒಮ್ಮೆ ಸಂಯುಕ್ತ ಪ್ರಾಂತ (ಉತ್ತರ ಪ್ರದೇಶ)ದ ಪರ್ಯಟನ ಮಾಡಬೇಕಾದೀತು" ಎಂಬ ಪ್ರಸ್ತಾಪ ಮುಂದಿಟ್ಟರು.

ಭಾಯೀ ಸಾಹೇಬರ ಮಾತನ್ನು ತಳ್ಳಿ ಹಾಕುವಂತಿರಲಿಲ್ಲ. ಕೇದಾರನಾಥರು ಇಟಾವಾ ಮತ್ತು ಕಾನ್ಪುರ ಪ್ರವಾಸ ಮಾಡಿ ಬಳಿಕ ಲಕ್ನೋ ಆರ್ಯ ಸಮಾಜ ಕೇಂದ್ರಕ್ಕೆ ಬಂದರು. ಅಲ್ಲಿ ಅವರು ಅನೇಕ ಗಣ್ಯ ವ್ಯಕ್ತಿಗಳೊಂದಿಗೆ ಮಾತುಕತೆ ನಡೆಸಿದರು. ಅಲ್ಲಲ್ಲಿ ಉಪನ್ಯಾಸಗಳು ಮಾಡಿದರು. ಲಕ್ನೋದಲ್ಲಿನ ಬೌದ್ಧ ವಿಹಾರದ ಬಗ್ಗೆ ಕೇಳಿದ್ದ ಅವರು ಒಂದು ಸಂಜೆ ಅಲ್ಲಿಗೆ ಹೋಗಿ ಸ್ವಾಮೀ ಬೋಧಾನಂದಜೀ ಅವರನ್ನು ಭೇಟಿ ಮಾಡಿದರು. ಅವರಿಂದ ಪಾಲಿ ಬೌದ್ಧ ಸಾಹಿತ್ಯದ ಬಗ್ಗೆ ಅನೇಕ ವಿಷಯಗಳನ್ನು ತಿಳಿದುಕೊಂಡರು. ಈ ಸಂಕ್ಷಿಪ್ತ ಭೇಟಿ ಮುಂದೆ ಕೇದಾರರ ಜೀವನ ವಿಕಾಸದಲ್ಲಿ ಬಹಳ ಮಹತ್ವದ ಭೂಮಿಕೆಯನ್ನು ಒದಗಿಸಿತು.

ಅಮೇಠಿ ಮತ್ತು ಪ್ರತಾಪಗಢದ ಮಾರ್ಗವಾಗಿ ಕೇದಾರರು ಬನಾರಸು ತಲುಪಿದರು. ಅಲ್ಲಿಗೆ ಹೋಗುವ ಮುನ್ನ ಅವರು ಯೋಗೇಶರಿಗೆ ಪತ್ರ ಬರೆದಿದ್ದರು. ಒಂದು ದಿನ ಯೋಗೇಶರು ತಮ್ಮ ಶ್ಯಾಮಲಾಲನನ್ನು ಕರೆದುಕೊಂಡು ಬನಾರಸಿಗೆ ಬಂದುಬಿಟ್ಟರು. ಅವರ ಒತ್ತಾಯದ ಮೇಲೆ ಕೇದಾರರು ಕನ್ಯೆಲಾಕ್ಕೆ ಹೋದರು. ಆದರೆ ಕೆಲ ದಿನಗಳಲ್ಲಿಯೇ ಅವರು ಆ ಊರು ತ್ಯಜಿಸಿ, ಅಹರೌರಾ(ಮಿರ್ಜಾಪುರ)ಕ್ಕೆ ತೆರಳಿದರು. ಅಲ್ಲಿ ಅವರು ಒಬ್ಬ ಆರ್ಯ ಸಮಾಜದವರ ಮನೆಯಲ್ಲಿ ತಂಗಿದರು. ಕೆಲ ದಿನ ಕಳೆದ ಮೇಲೆ ಭಾಯೀ ಸಾಹೇಬರಿಂದ ಮಹೇಶಪುರಕ್ಕೆ ತೆರಳಲು ಪತ್ರ ಬಂತೆಂದು

ರೈಲು ಹಿಡಿಯಲು ಅಹರೌರಾ ರೋಡ್ ಸ್ಟೇಷನ್ನಿಗೆ ಹೋದರು. ಸ್ವಲ್ಪ ಹೊತ್ತು ಬಿಟ್ಟು ನೋಡಿದರೆ ತಂದೆಯೂ ಪ್ಲಾಟ್ ಫಾರ್ಮಿಗೆ ಬಂದು ನಿಂತಿದ್ದಾರೆ, ಏದುಸಿರು ಬಿಡುತ್ತಿದ್ದಾರೆ. ಅವರಿಗೆ ಅಹರೌರದಲ್ಲಿನ ಯಾರೋ ಕೇದಾರರ ಕುರಿತು ಸುಳಿವು ಕೊಟ್ಟಿದ್ದರು.

ತಂದೆ ಪ್ಲಾಟ್‌ಫಾರ್ಮಿನ ಮೇಲೆಯೇ ಬಿಕ್ಕಿಬಿಕ್ಕಿ ಅಳತೊಡಗಿದರು. ಜನ ಸೇರಿದರು. ಕೇದಾರರಿಗೆ ಆಗ ಅವರ ಜೊತೆ ಬನಾರಸಿಗೆ ಹೋಗುವುದೇ ಸರಿ ಎನಿಸಿತು. ರಸ್ತೆಯುದ್ದಕ್ಕೂ ಮತ್ತು ಬನಾರಸು ಸ್ಟೇಷನ್ ತಲುಪಿದ ಮೇಲೆಯೂ ಕೇದಾರನಾಥರು ತಂದೆಗೆ ಹೇಳುತ್ತಲೇ ಇದ್ದರು. "ಕನ್ಯೆಲಾಕ್ಕೆ ನಾನು ಅಯೋಗ್ಯ. ನಾನು ನಿಮ್ಮ ಕೆಲಸಕ್ಕಾಗದವ. ಈಗ ಬಲವಂತ ಮಾಡಿದಿರೆಂದರೆ ಭಯಂಕರ ಪರಿಣಾಮವಾದೀತು. ನೀವು ನನ್ನ ಬದುಕಿನ ಬಗ್ಗೆ ಕೈ ತೊಳೆದುಕೊಳ್ಳಬೇಕಾದೀತು."

ತಂದೆಯ ಮನಸ್ಸಿನ ಮೇಲೆ ಇದು ಪರಿಣಾಮ ಬೀರಿದಂತೆ ಕಂಡಿತು. ಆದರೆ ಅವರು ಆಶ್ಚರ್ಯವಾಗುವಂತಹ ಉತ್ತರ ಕೊಟ್ಟರು. "ನಾನೀಗ ನಿನ್ನ ದಾರಿಗೆ ಅಡ್ಡಿಯಾಗುವುದಿಲ್ಲ. ಆದರೆ, ಇನ್ನು ನಾನು ಕನ್ಯೆಲಾಕ್ಕೆ ಹಿಂದಿರುಗುವುದಿಲ್ಲ. ಇಲ್ಲಿಯೇ ಜೀವನ ಕಳೆಯುತ್ತೇನೆ"-ಮೊದಲ ಮಾತನ್ನು ಅವರು ಸಂಪೂರ್ಣವಾಗಿ ನಡೆಸಿದರು ಕೂಡ.

ಕೇದಾರರೂ ಪ್ರತಿಜ್ಞೆ ಮಾಡಿದರು. "ಐವತ್ತು ವರ್ಷ ತುಂಬುವವರೆಗೆ ನಾನು ಆಜಮುಗಢ ಜಿಲ್ಲೆಯ ಒಳಗೆ ಕಾಲಿಡುವುದಿಲ್ಲ". ಆಗ ಕೇದಾರರಿಗೆ ಇಪ್ಪತ್ನಾಲ್ಕು ನಡೆಯುತ್ತಿತ್ತು. ತಂದೆ-ಮಗನ ಭೇಟಿ ಇದೇ ಕೊನೆಯದಾಯಿತು.

ಕೇದಾರನಾಥರು ಮಹೇಶಪುರ ತಲುಪಿದರು. ದತಿಯಾ, ಜಾಲಾನ್, ಕಾಲ್ಪೀ ಮುಂತಾದ ಸ್ಥಳಗಳಿರುವ ಈ ಕ್ಷೇತ್ರದಲ್ಲಿ ದರೋಡೆಕೋರರ ಉಪಟಳದಿಂದ ಜನ ಭಯಗ್ರಸ್ಥರಾಗಿದ್ದರು. ಆರ್ಯ ಸಮಾಜ ಪ್ರೇಮಿಯಾದ ಒಬ್ಬ ಗೃಹಸ್ಥರ ಸಹಾಯದಿಂದ ಕೇದಾರನಾಥರು ಮಹೇಶಪುರದಲ್ಲಿ ಒಂದು ಶಾಲೆ ಆರಂಭಿಸಿದರು. ಆಸುಪಾಸಿನ ಊರುಗಳಿಂದ ಚಂದಾ ಕೂಡ ವಸೂಲಿ ಮಾಡಿದ್ದಾಯಿತು. ಆದರೆ ಶಾಲೆ ಸರಿಯಾಗಿ ನಡೆಯಲಿಲ್ಲ. ಆಗ ಅದನ್ನು ಕಾಲ್ಪಿಗೆ ವರ್ಗಾಯಿಸಿದರು. ಅಲ್ಲಿಯೂ ಶಾಲೆಯ ಆರ್ಥಿಕ ಸ್ಥಿತಿ ಸುಧಾರಿಸಲಿಲ್ಲ.

ಆದೇ ಹೊತ್ತಿಗೆ ಮಹಂತಜೀಯ ತಂತಿ ಬಂದು ಕೇದಾರನಾಥರು ರಾಮ ಉದಾರರಾಗಿ ಪರಸಾಕ್ಕೆ ತೆರಳಿದರು. ಅಲ್ಲಿ ಕೆಲ ದಿನವಿದ್ದು ಆಸ್ತಿ ಜಮೀನು ವಿಚಾರದಲ್ಲಿನ ಕೆಲ ತೊಡಕುಗಳನ್ನು ಬಿಡಿಸಿ ಪುನಃ ಕಾಲ್ಪೀಗೆ. ಜಬಲ್‌ಪುರಕ್ಕೆ ಹೋಗಿ ವೇರ-ಮಾಧ್ಯಮಾ ಪರೀಕ್ಷೆಗೆ ಕುಳಿತು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು.

1918ನೇ ಇಸವಿಯ ಮೊದಲ ತಿಂಗಳುಗಳು. ರಷ್ಯಾದ ಕಾರ್ಮಿಕ ಕ್ರಾಂತಿಯ ಕುರಿತ ಸಾಕಷ್ಟು ಸುದ್ದಿ ಅವರ ಕಿವಿಗೂ ಮುಟ್ಟಿತ್ತು. ಅದೇ ಆಧಾರದ ಮೇಲೆ ಅವರು ತನ್ನೊಳಗೇ ಸಾಮ್ಯವಾದೀ ಜಗತ್ತಿನ ಒಂದು ಕಲ್ಪನೆಯನ್ನು ಮಾಡಿಕೊಂಡಿದ್ದರು. ಅಷ್ಟೇ ಅಲ್ಲ, ಆ ಕುರಿತು ವಿಷಯದ ಮೇಲೆ ಒಂದು ಪುಸ್ತಕ ಬರೆಯಲು ರೂಪರೇಷೆ ಕೂಡ ಹಾಕಿಕೊಂಡಿದ್ದರು. ನಂತರ ಅದೆಲ್ಲೋ ಕಳೆದು ಹೋಯಿತು. ಕೊನೆಗದು "ಬಾಯೀಸವೀಂ ಸದೀ" (ಇಪ್ಪತ್ತೆರಡನೆಯ ಶತಮಾನ) ಎಂಬ ಪುಸ್ತಕ ರೂಪದಲ್ಲಿ 1923ರಲ್ಲಿ ಅವರು ಹಜಾರಿಬಾಗ್ ಜೈಲಿನಲ್ಲಿದ್ದಾಗ ಪೂರ್ಣಗೊಂಡಿತು.

ಕಾಲ್ಪಿಯ ಶಾಲೆ ಮುಚ್ಚಿದ ಬಳಿಕ ಕೇದಾರನಾಥರು ಶಾಸ್ತ್ರೀ ಪರೀಕ್ಷೆಗೆ ತಯಾರಿ ನಡೆಸಲು

ಅಯೋಧ್ಯೆಗೆ ಹೋದರು. ಅದೇ ವೇಳೆ ಸರ್ವೇ ಕೆಲಸಕ್ಕೆ ಸಹಾಯ ಮಾಡಲು ಬರಬೇಕೆಂದು ಮಹಂತಜೀಯವರಿಂದ ಕರೆ ಬಂತು. ವೈರಾಗಿ ಸಾಧು ರಾಮೋದಾರ ದಾಸರಾಗಿ ಕೇದಾರನಾಥರು ಪುನಃ ಪರಸಾಕ್ಕೆ ಹೋಗಬೇಕಾಯಿತು. ಸರ್ವೇ ಕೆಲಸ ಮುಗಿಯುತ್ತಿದ್ದಂತೆ ಮಹಂತಜೀ ಉತ್ತರಾಧಿಕಾರಿಯ ಓದು-ಬರವಣಿಗೆಯ ಮಾತು ತೆಗೆದರು. ಆದರೆ ಕೇದಾರನಾಥರು ಮಠಾಧಿಪತ್ಯ ಸ್ವೀಕರಿಸಲು ಸ್ಪಷ್ಟವಾಗಿ ನಿರಾಕರಿಸಿ ಅಲ್ಲಿಂದ ನೇರ ಲಾಹೋರಿಗೆ ಹೊರಟು ಹೋಗಿ, ಶಾಸ್ತ್ರೀ ಪರೀಕ್ಷೆಗೆ ತಯಾರಿ ನಡೆಸಿದರು.

ಏಪ್ರಿಲ್ 5 (1919ನೇ ಇಸವಿ)ರಂದು ಪರೀಕ್ಷೆ ಮುಗಿಯಿತು. ನಾಲ್ಕು ದಿನಗಳ ಬಳಿಕ ಕೇದಾರರಿಗೆ ಇಪ್ಪತ್ತಾರು ತುಂಬಿತು. ಪರೀಕ್ಷೆ ಚೆನ್ನಾಗಾಗಿದ್ದರೂ ಆ ವರ್ಷ ಡಿ.ಎ.ವಿ. ಕಾಲೇಜಿನಿಂದ ಶಾಸ್ತ್ರೀ ಪರೀಕ್ಷೆಯಲ್ಲಿ ಒಬ್ಬ ವಿದ್ಯಾರ್ಥಿಯೂ ಉತ್ತೀರ್ಣನಾಗಲಿಲ್ಲ.

ಏಪ್ರಿಲ್ 6ರಂದು ಕೇದಾರರು ಲಾಹೋರಿನಲ್ಲಿಯೇ ಇದ್ದರು. ಭಾರತದ ಇತರ ನಗರಗಳಲ್ಲಿನ ಹಾಗೆ ಲಾಹೋರಿನಲ್ಲಿಯೂ ಆ ದಿನ ರೌಲಟ್-ಆಕ್ಟ್ ವಿರೋಧಿ ದಿನಾಚರಣೆ ಬಹಳ ಜೋರಾಗಿ ಆಚರಿಸಲ್ಪಟ್ಟಿತು. ಮರುದಿನ ಕೇದಾರರು ಕಾನ್ಪುರಕ್ಕೆ ಹೊರಟರು. ಆದರೆ ಮಾರ್ಗದಲ್ಲಿಯೇ ಅವರಿಗೆ ಏಪ್ರಿಲ್ 13ರಂದು ಅಮೃತಸರದಲ್ಲಾದ ಜಲಿಯನ್ ವಾಲಾಬಾಗ್ ಹತ್ಯಾಕಾಂಡದ ಸಮಾಚಾರ ಬಂದಿತು. ನಂತರ ಪಂಜಾಬಿನಲ್ಲಿ ಲಷ್ಕರಿಶಾಸನ ಜಾರಿಯಾಯಿತು. ಆದರೂ, ಲಷ್ಕರಿಶಾಸನದ ಆ ದಿನಗಳಲ್ಲಿಯೇ, ಕೇದಾರನಾಥರು ತಮ್ಮ ಸಂಚಾರ ಮುಂದುವರಿಸಿ ಪುನಃ ಲಾಹೋರಿಗೆ ಬಂದರು.

ಅವರು ಲಾಹೋರಿನ ಸೆಕೆಗೆ ಕಂಗೆಟ್ಟು, ಮಳೆಗಾಲದ ಆರಂಭದಲ್ಲಿ ಚಿತ್ರಕೂಟದ ತಂಪ್ರತಾಣದ ಒಂದು ಮಠಕ್ಕೆ ಹೋಗಿ ಅಲ್ಲಿ ತಂಗಿದರು. ಅಲ್ಲಿದ್ದುಕೊಂಡು ಕಾಶಿಯ ನ್ಯಾಯ-ಮಾಧ್ಯಮಾ ಮತ್ತು ಕಲ್ಕತ್ತಾದ ಮೀಮಾಂಸಾ-ಪ್ರಥಮಾ ಪರೀಕ್ಷೆಗಳಿಗೆ ತಯಾರಿ ನಡೆಸಬೇಕಿತ್ತು. ಮುಂದಿನ ವರ್ಷ (1920 ಇ) ಮಾರ್ಚ್‌ನಲ್ಲಿ ಪ್ರಯಾಗ ಮತ್ತು ಜಬಲ್‌ಪುರದಲ್ಲಿ ನಡೆಯುವ ಈ ಪರೀಕ್ಷೆಗಳಿಗೆ ಹಾಜರಾಗಿ ಪುನಃ ಶಾಸ್ತ್ರೀ ಪರೀಕ್ಷೆಗಾಗಿ ಲಾಹೋರಿಗೆ ಬಂದರು. ಜ್ವರದಿಂದ ಬಳಲುತ್ತಿದ್ದರೂ, ಅದೇ ಸ್ಥಿತಿಯಲ್ಲಿ ಅವರು ಪರೀಕ್ಷೆ ಕೊಟ್ಟರು.

ಪುನಃ ಅಲೆದಾಡುವ ಚಟ ಅವರನ್ನು ಬಿಡಲಿಲ್ಲ. "ಎಷ್ಟೋ ವರ್ಷಗಳಿಂದ ಮನಸ್ಸಿನಲ್ಲಿ ತುಂಬಿಕೊಂಡು ಬಂದಿದ್ದ ಭಾವನೆಗಳು ಬುದ್ಧನ ಕುರಿತು ನನ್ನಲ್ಲಿ ಅತೀವ ಶ್ರದ್ಧೆಯನ್ನು ಹುಟ್ಟಿಸಿದ್ದುವು. ಆತನ ಜೀವನ ಕತೆಯನ್ನು ಓದಿ ಅವನ ಜೀವನಕ್ಕೆ ಸಂಬಂಧಿಸಿದ ಸ್ಥಳಗಳನ್ನು ನೋಡಬೇಕೆಂಬ ಅಭಿಲಾಷೆ ಉತ್ಕಟವಾಯಿತು. ಅವನ್ನು ನೋಡಿ ಬರುವುದೆಂದು ನಿಶ್ಚಯಿಸಿಕೊಂಡೆ". ಕೇದಾರನಾಥರು ಜಲಂಧರ್‌ನಲ್ಲಿ ಇಳಿದು ಸಂತರಾಮಜೀಯವರನ್ನು ಭೇಟಿ ಮಾಡಿದರು. ಕನ್ಯಾ ಮಹಾವಿದ್ಯಾಲಯದ ಮುಖಪತ್ರಿಕೆ "ಭಾರತೀ"ಗೆ ತಮ್ಮ ಯಾತ್ರೆ ಕುರಿತ ಲೇಖನಗಳನ್ನು ಕಳಿಸುತ್ತ ಇರುತ್ತೇನೆಂದು ಮಾತು ಕೊಟ್ಟರು.

1920ರ ಏಪ್ರಿಲ್ ತಿಂಗಳಲ್ಲಿ ಕೇದಾರನಾಥರ, ಸಾಧು ರಾಮೋದಾರ ದಾಸರ ಎನ್ನಿ, ಬೌದ್ಧ ತೀರ್ಥಯಾತ್ರೆಯ ಕಾರ್ಯಕ್ರಮ ಆರಂಭವಾಯಿತು. ಹತ್ತಿರ ಬಿಡಿಗಾಸೂ ಇರಲಿಲ್ಲ. ಇದ್ದ ಬಟ್ಟೆ ಬರೆಯೆಂದರೆ ಮೊಣಕಾಲಿಗಿಂತ ಕೊಂಚ ಕೆಳಗಿರುವ ಒಂದು ತೆಳ್ಳನೆಯ ಕಂಬಳಿಯ ಅಡ್ಡ ಪಂಚೆ, ಎರಡು ಲಂಗೋಟಿ ಮತ್ತು ಒಂದು ಬೈರಾಸ, ನೀರು ಕುಡಿಯಲು ಸೋರೆ ಬುರುಡೆಯ ಒಂದು

ಕಮಂಡಲ. ಬರಿಗಾಲು, ಬರಿತಲೆ. ಜೊತೆಗೆ ಒಂದೆರಡು ಪುಸ್ತಕ ಇಷ್ಟೆ.

ಜ್ವರದಲ್ಲೇ ರಾಮೋದಾರ ದಾಸರು ಬನಾರಸು ತಲುಪಿದರು. ಅಲ್ಲಿ ಔಷಧ ತೆಗೆದುಕೊಂಡು ಸಾರನಾಥಕ್ಕೆ ತೆರಳಿದರು. ಅಶೋಕ ಸ್ತಂಭ ಮತ್ತು ಇತರ ಭಗ್ನಾವಶೇಷಗಳನ್ನು ವೀಕ್ಷಿಸಿದರು. ಆಗಿನ್ನೂ ಅಲ್ಲಿ ಸಂಗ್ರಹಾಲಯ ಮತ್ತು ಮೂಲಗಂಧ ಕುಟೀ ವಿಹಾರ ಆಗಿರಲಿಲ್ಲ. ಮುಂದೆ ದೇವರಿಯಾ ದಾರಿಯಾಗಿ ಕಸಯಾಕ್ಕೆ (ಕುಶೀನಗರ) ಹೋಗಲು ಆಜಮಗಢ ಜಿಲ್ಲೆಯನ್ನು ದಾಟಬೇಕಿತ್ತು. ಹಾಗಾಗಿ ಛಪರಾ ಮಾರ್ಗವಾಗಿ ಸಾಗಿದರು. ಒಂದೆರಡು ದಿನ ಪರಸಾದಲ್ಲಿಯೂ ಉಳಿದರು. ದೇವರಿಯಾದಿಂದ ಕಸಯಾ ತನಕ ಕಾಲ್ನಡಿಗೆಯಲ್ಲಿಯೇ ಬಂದು ಬೈರಾಗಿ ಮಠದಲ್ಲಿ ಉಳಿದುಕೊಂಡರು. ಬುದ್ಧನ ನಿರ್ವಾಣ ಸ್ಥಾನ ದರ್ಶನ. ಮಹಾಸ್ಥವಿರ ಚಂದ್ರಮಣಿ ಬಾಬಾ ಅವರೊಂದಿಗೆ ಭೇಟಿ. ಮಲಗಿರುವ ಭಂಗಿಯಲ್ಲಿನ ಬುದ್ಧನ ವಿಶಾಲ ಮೂರ್ತಿಯನ್ನು ಪೂಜಿಸುವಾಗ, ಆರ್ಯ ಸಮಾಜದ ವಿಚಾರಗಳು ಅವರಿಗೆ ಅಡ್ಡ ಬರಲಿಲ್ಲ.

ಟಿಕೆಟಿಲ್ಲದೆ ರೈಲು ಪ್ರಯಾಣ ಸಾಗುತ್ತಿತ್ತು. ಉಳಿದುಕೊಳ್ಳಲು ವೈಷ್ಣವ ಮಠಗಳು ಬಹುತೇಕ ಸಿಕ್ಕಿಯೇ ಸಿಕ್ಕುತ್ತಿದ್ದುವು. ದುಡ್ಡಿಲ್ಲದಿದ್ದರೂ ಆಹಾರ-ಪಾನೀಯಕ್ಕೆ ಯಾವ ಕಷ್ಟವೂ ಆಗಲಿಲ್ಲ. ರಾಮೋದಾರ ದಾಸರು ನೇಪಾಳ ಸೀಮೆ ತಲುಪಿ ರುಮ್ಮಿಂದೇಯಿ (ಲುಂಬಿನೀ), ತಿಲೌ ರಾಕೋಟ್ (ಕಪಿಲ ವಸ್ತು), ಪಿಪರ ಹವಾ ಹಾಗೂ ನಿಗಲಿಹವಾ ಮುಂತಾದ ಸ್ಥಳಗಳಲ್ಲಿ ಪುರಾತನ ಅವಶೇಷಗಳನ್ನು ನೋಡಿದರು. ಈ ಸಂದರ್ಭದಲ್ಲಿ ಅವರು ಸಾಧುಗಳು ಹಾಗೂ ಅವರ ಜೊತೆ ವಾಸಿಸುತ್ತಿದ್ದ ಯೋಗಿನಿಯರ ಬದುಕನ್ನು ಹತ್ತಿರದಿಂದ ಪರಿಚಯ ಮಾಡಿಕೊಂಡರು. ಅವರ ಒಡನಾಟದಲ್ಲಿ ರಾಮೋದಾರರಿಗೂ ಭಂಗಿ-ಗಾಂಜಾದ ಚಟ ಅಂಟಿತು. ರಕ್ಸೌಲ್ ತಲುಪಿದ ನಂತರ ನೇಪಾಳಕ್ಕೆ ಹೋಗಲು ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗಲಿಲ್ಲ.

ಉತ್ತರ ಬಿಹಾರದ ಬೌದ್ಧ ಕ್ಷೇತ್ರಗಳನ್ನು ನೋಡಿದ ಬಳಿಕ ನಾಲಂದಾಕ್ಕೆ ಹೋದರು. ಆರ್ಯ ಸಮಾಜದ ಶಾಲೆಗಳಲ್ಲಿ ಕೆಲಸ ಮಾಡುವ ಸಮಯದಲ್ಲಿ ನಾಲಂದಾದ ಆದರ್ಶ ಅವರೆದುರಿಗಿತ್ತು. ಚೀನೀ ಯಾತ್ರಿಗಳಾದ ಫಾಹಿಯಾನ್, ಹ್ಯುವೆನ್‌ತ್ಸಾಂಗ್ ಮತ್ತು ಇತ್ಸಿಂಗ್ ಅವರೆಲ್ಲರ ವರ್ಣನೆಗಳನ್ನು ಅವರು ಗಮನವಿಟ್ಟು ಓದಿಕೊಂಡಿದ್ದರು. ಕಾಲ್ಪಿಯಲ್ಲಿದ್ದಾಗ ಫಾಹಿಯಾನನ ವಿವರಣೆಗಳ ಅರ್ಧ ಭಾಗದಷ್ಟನ್ನು ಸಹ ಅವರು ಅನುವಾದಿಸಿದ್ದರು. ಆದರೆ ಅದು ಮುಂದೆ ಅದೆಲ್ಲೋ ಕಳೆದು ಹೋಯಿತು. ಬೌದ್ಧ ಕ್ಷೇತ್ರಗಳ ಈ ಯಾತ್ರೆಯ ಕುರಿತು ರಾಮೋದಾರರು 'ಭಾರತೀ'ಗೆ ಕೆಲ ಲೇಖನ ಬರೆದು ಕಳಿಸಿದರು.

ನಾಲಂದಾದ ಸಂಗ್ರಹಾಲಯ ನೋಡಲು ಹೋದಾಗ ಅಲ್ಲಿ ಡಾ। ಹೀರಾನಂದ ಶಾಸ್ತ್ರೀ (ಅಜ್ಞೇಯರ ತಂದೆ) ರಾಮೋದಾರರಿಗೆ ಉತ್ಖನನದಲ್ಲಿ ದೊರೆತ ಹೊಸ ವಸ್ತುಗಳನ್ನು ತೋರಿಸಿದರು. ಅಲ್ಲಿಂದ ರಾಮೋದಾರ ಸಾಧು ರಾಜನಗರಿ, ಗಯಾ ಹಾಗೂ ಬೋಧ ಗಯಾ ಹೋದರು. ಮುಂದೆಯೂ ಅನೇಕ ಬಾರಿ ಅವರು ಗಯಾ ಹಾಗೂ ಬೋಧ ಗಯಾಕ್ಕೆ ಹೋಗಬೇಕಾಗಿ ಬಂತು. ಬೋಧ ಗಯಾದ ಮಹಾಬೋಧಿ ಮಂದಿರ, ಬೌದ್ಧರ ವಶಕ್ಕೆ ಬರುವಂತೆ ಮಾಡಲು ಸಹ ಅವರು ತೀವ್ರ ಪ್ರಯತ್ನ ನಡೆಸಿದರು.

ಭಾಗಲ್ಪುರದಲ್ಲಿ ಹದಿನೈದು ದಿನವಿದ್ದು ರಾಮೋದಾರರು ನದಿಯಾಕ್ಕೆ (ನವದ್ವೀಪ) ತೆರಳಿದರು.

ಅಲ್ಲಿನ ಮಠ ಮಂದಿರಗಳನ್ನು ನೋಡಿದರು. ನ್ಯಾಯ ಶಾಸ್ತ್ರದ ಕೆಲ ಪಂಡಿತರನ್ನು ಭೇಟಿ ಮಾಡಿದರು. ಅಲ್ಲಿಯ ಸೊಳ್ಳೆ ದಂಡಿನಿಂದ ಕಚ್ಚಿಸಿಕೊಂಡು ಅನಂತರ ಕಲ್ಕತ್ತೆಯ ದಾರಿ ಹಿಡಿದರು. ಅಲ್ಲಿ ಅವರಿಗೆ ನೋಡಲು ಹೊಸತೇನೂ ಇರಲಿಲ್ಲ. ಅಲ್ಲಿಂದ ಪುರೀ ಮತ್ತು ತಿರುಪತಿ-ಬಾಲಾಜಿ-ದರ್ಶನ ಮಾಡಿಕೊಂಡು ಸೆಪ್ಟೆಂಬರ್ 1920ರ ಆರಂಭದಲ್ಲಿ ಏಳು ವರ್ಷಗಳ ಬಳಿಕ, ತಿರುಮಲಿಶ್ಶೈ ತಲುಪಿದರು.

ಮುಂದಿನ ಸುಮಾರು ಆರು ತಿಂಗಳ ಕಾಲ ರಾಮೋದಾರ ದಾಸರು ತಿರುಮಲಿಶ್ಶೈನಲ್ಲಿಯೇ, ಸ್ವಾಮೀ ಹರಿಪ್ರಸನ್ನಾಚಾರ್ಯರ ಮಠದಲ್ಲಿ, ಉಳಿದುಕೊಂಡು ಅಲ್ಲಿನ ವಿದ್ವಾಂಸರೊಂದಿಗೆ ವೇದಾಂತ ಹಾಗೂ ಮೀಮಾಂಸೆಯ ಗ್ರಂಥಗಳ ಅಧ್ಯಯನ ನಡೆಸುತ್ತ ಇದ್ದು ಬಿಟ್ಟರು. ಆ ಸಮಯದಲ್ಲಿಯೇ ತಮಿಳು ಭಾಷೆಯ ಕೆಲ ರೀಡರುಗಳನ್ನು ಓದಿಕೊಂಡರು. ಸ್ವಾಮೀ ಹರಿಪ್ರಪನ್ನರು ಏಳು ವರ್ಷಗಳ ಹಿಂದೆಯೇ ಅವರಿಗೆ ದೀಕ್ಷೆ ಕೊಟ್ಟಿದ್ದರು. ರಾಮೋದಾರರು ಉತ್ತರಾಧಿಕಾರಿ ಸ್ಥಾನದಿಂದ ಮಠದ ಸಂಚಾಲನ ಭಾರ ನಿರ್ವಹಿಸಲಿ ಎಂಬುದು ಅವರ ಇಚ್ಛೆಯಾಗಿತ್ತು. ಆದರೆ ರಾಮೋದಾರರು, ಅದಕ್ಕೆ ತಾನು ಯೋಗ್ಯನಲ್ಲ ಎಂದು ತಿಳಿಸಿದಾಗ ಅವರ ರಾಜನೈತಿಕ ಉಗ್ರ ವಿಚಾರಗಳ ಕುರಿತು ಆ ವೇಳೆಗಾಗಲೇ ಸ್ವಾಮೀಜಿಯವರಿಗೂ ತಿಳಿದು ಬಂದಿದ್ದರಿಂದ ಅವರು ಹೆಚ್ಚು ಒತ್ತಾಯ ಮಾಡಲಿಲ್ಲ.

ತಿರುಮಲಿಶ್ಶೈ ಬಿಟ್ಟ ಮೇಲೆ ರಾಮೋದಾರ ದಾಸರು ಕೊಡಗಿನ ರಮಣೀಯ ಪ್ರಕೃತಿಯ ಮಡಿಲಲ್ಲಿ ನಾಲ್ಕು ತಿಂಗಳು ಕಳೆದರು. ಅವರು ಪ್ರತಿ ದಿನ 'ಹಿಂದೂ' ಓದುತ್ತಿದ್ದರು. ಅವರ ರಾಜನೈತಿಕ ವಿಚಾರಗಳು ಈಗ ಕಾವೇರತೊಡಗಿದುವು.

ಅಲ್ಲಿರುವಾಗಲೇ ತಂದೆ ಗೋವರ್ಧನ ಪಾಂಡೇಯವರು ನಿಧನರಾದ ವಾರ್ತೆ ತಿಳಿಸುವ ಯಾಗೇಶನ ಪತ್ರ ಬಂತು. ತಂದೆಯ ನಿಧನದ ಸುದ್ದಿ ಕೇಳಿ, ಮಗನ ಕಣ್ಣಲ್ಲಿ ಎರಡು ಹನಿ ಕಂಬನಿಯೂ ಉದುರಲಿಲ್ಲ.

ಹತ್ತು ವರ್ಷಗಳ ಬಳಿಕ 1930ನೇ ಇಸವಿಯಲ್ಲಿ ತಮ್ಮ ಪ್ರಪ್ರಥಮ ಮಹತ್ವದ ಕೃತಿ "ಬುದ್ಧ ಚರ್ಯಾ"ವನ್ನು ತನ್ನ ತಂದೆಗೆ ಸಮರ್ಪಿಸುತ್ತ ರಾಹುಲಜೀ "ನನ್ನ ಗೃಹತ್ಯಾಗದಿಂದ ಯಾರ ಅಪಾರ್ಥಕ್ಯ ಜೀವನದ ಅಂತಿಮ ವರ್ಷ ದುಃಖಮಯವಾಯಿತೋ, ಆ ಸಾಂಕೃತ್ಯ-ಸಗೋತ್ರ, ಮಲಾಂವ್-ಪಾಂಡೇಯ, ಸ್ವರ್ಗೀಯ ಪಿತಾ ಶ್ರೀ ಗೋವರ್ಧನದ ಸ್ಮೃತಿಯಲ್ಲಿ" ಎಂದು ಬರೆದಿದ್ದಾರೆ.

ಕೊಡಗಿನಿಂದ ಹೊರಟ ರಾಮೋದಾರ ದಾಸರು ಮುಂದೆ ರಾಜನೈತಿಕ ಜೀವನದಲ್ಲಿ ಪ್ರವೇಶಿಸುವ ನಿರ್ಧಾರ ಕೈಗೊಂಡರು.

# ರಾಜನೈತಿಕ ಕಾರ್ಯ

1921 ಜೂನ್ ತಿಂಗಳ ಒಂದು ದಿನ. ಛಪರಾದ ಕಾಂಗ್ರೆಸ್ ಕಮಿಟಿ ಕಛೇರಿಯಲ್ಲಿ ಜಿಲ್ಲೆಯ ರಾಜಕೀಯ ಕಾರ್ಯಕರ್ತರು ಜಮಖಾನದ ಮೇಲೆ ಕುಳಿತುಕೊಂಡು ಚರ್ಚೆ ನಡೆಸುತ್ತಾ ಇದ್ದರು. ಅದೇ ವೇಳೆ ಕಮಂಡಲ ಹಿಡಿದು, ಖದ್ದರ್ ಶಾಲು ಹೊದೆದು ಬೋಳುತಲೆಯ ಬರಿಗಾಲಿನ ತರುಣ ಸಾಧುವೊಬ್ಬರು ಅಲ್ಲಿಗೆ ಬಂದರು. ಜಮಾಖಾನದ ಮೂಲೆಗೆ ನಡೆದು ಒಂದು ಕಡೆ ಕುಳಿತುಕೊಂಡರು. ಸ್ವಲ್ಪ ಹೊತ್ತು ಬಿಟ್ಟು ತಾನು 'ರಾಮೋದಾರ ದಾಸ' ಎಂದು ಪರಿಚಯ ಹೇಳಿಕೊಂಡರು.

ಅವತ್ತು ಅಲ್ಲಿದ್ದ ಯಾರಿಗೂ ಮುಂದಿನ ಐದು ವರ್ಷಗಳಲ್ಲಿ ಸಾಧು ರಾಮೋದಾಸರು ಈ ಜಿಲ್ಲೆಗಷ್ಟೇ ಅಲ್ಲ ಇಡೀ ಪ್ರಾಂತ್ಯಕ್ಕೇ ಒಬ್ಬ ಪ್ರಮುಖ ಹಾಗೂ ಪ್ರಭಾವಶಾಲಿ ನಾಯಕರಾಗಲಿರುವರೆಂದು ಕಿಂಚಿತ್ತೂ ಅನಿಸಿರಲಿಲ್ಲ. ಹಾಗಾಗಿ ಆ ದಿನ ರಾಮೋದಾರ ದಾಸರ ಉಪಸ್ಥಿತಿಗೆ ಅವರು ಸ್ವಲ್ಪವೂ ಮಹತ್ವ ಕೊಡದಿದ್ದರೆ ಅದರಲ್ಲಿ ಆಶ್ಚರ್ಯದ ಮಾತೂ ಇಲ್ಲ.

ಅವು ಅಸಹಕಾರ ಆಂದೋಲನದ ದಿನಗಳು. ಗಾಂಧೀಜಿಯವರು ಅಸಹಕಾರ ಆಂದೋಲನ ನಡೆಸಿ ಒಂದು ವರ್ಷದೊಳಗೆ 'ಸ್ವರಾಜ್ಯ' ಗಳಿಸುವ ವಿಶ್ವಾಸವನ್ನು ಜನರಿಗೆ ನೀಡಿದ್ದರು. ರಾಮೋದಾರ ದಾಸರು ಅದರಲ್ಲಿ ತಾವೂ ಸೇರಿಕೊಳ್ಳಲು ನಿರ್ಧರಿಸಿದರು. ಆಜಮಗಢ ಜಿಲ್ಲೆಗೆ ಅವರು ಹೋಗುವಂತಿರಲಿಲ್ಲವಾದ್ದರಿಂದ ಬಿಹಾರದ ಛಪರಾ ಜಿಲ್ಲೆಯನ್ನು ತನ್ನ ರಾಜಕೀಯ ಕೆಲಸಗಳಿಗಾಗಿ ಆಯ್ಕೆ ಮಾಡಿಕೊಂಡು ಪರಸಾಕ್ಕೆ ಹೋದರು. ಪರಸಾದ ಜನರಿಗೆ ತಮ್ಮ ರಾಮೋದಾರದಾಸರ ಭಾಷಣವನ್ನು ಕೇಳುವ ಪ್ರಥಮ ಅವಕಾಶವಿದು. ಏಕಮಾ ರಾಮೋದಾರದಾಸರ ಕಾರ್ಯಕೇಂದ್ರವಾಯಿತು. ಅದೇ ವರ್ಷ ಸೆಪ್ಟಂಬರಿನಲ್ಲಿ ಛಪರಾ ಪಟ್ಟಣ ಮುಳುಗುವಷ್ಟು ಭಾರೀ ನೆರೆ ಬಂತು. ರಾಮೋದಾರ ಬಾಬಾ ನೆರೆಪೀಡಿತರಿಗಾಗಿ ದಣಿವರಿಯದೆ ದುಡಿದರು. ದೋಣಿಗಳಲ್ಲಿ ಜನರನ್ನು ಸುರಕ್ಷಿತ ಸ್ಥಳಗಳಿಗೆ ತಲುಪಿಸಿದರು. ಮಾಡು ಮರಗಳ ಮೇಲೆ ಹಸಿದು ಕುಳಿತವರಿಗೆ ಊಟ ನೀಡಿದರು. ಸ್ವತಃ ಆಹಾರದ ಮೂಟೆಯನ್ನು ತಲೆಯ ಮೇಲಿಟ್ಟುಕೊಂಡು ಸೊಂಟಮಟ್ಟದ ನೀರಿನಲ್ಲಿ ಸಾಗಿ ಸಂತ್ರಸ್ತರಿಗೆ ತಲುಪಿಸಿದರು. ಸಹಾಯತಾ ಶಿಬಿರ ನಡೆಸಿದರು. ಒಬ್ಬ ಕಾರ್ಯಕರ್ತರು ಹೇಳಿಯೂ ಬಿಟ್ಟರು "ಈ ಬಾಬಾ ಸಾಮ್ಯವಾದಿ".

ಅವರ ಪ್ರಯತ್ನಗಳಿಂದಾಗಿ ಏಕಮಾದಲ್ಲಿ ಒಂದು ಹೊಸ ಜಾಗೃತಿಯುಂಟಾಯಿತು. ಅಲ್ಲಿ ಗಾಂಧೀ-ವಿದ್ಯಾಲಯವೊಂದು ತೆರೆಯಲ್ಪಟ್ಟಿತು. ಬಾಬಾ ಛಪರಾದ ಆಡುಭಾಷೆಯಲ್ಲಿಯೇ (ಮಲ್ಲೀ ಅಥವಾ ಭೋಜ ಪುರೀ) ಭಾಷಣ ಮಾಡುತ್ತಿದ್ದರು. ಎಂತಲೇ ಜನ ಬಹಳ ಪ್ರಭಾವಿತರಾದರು. ಈಗ ಅವರು 'ಬಾಬಾ' ಎಂದೇ ಪರಿಚಿತರಾಗಿದ್ದರು. ಕಪ್ಪು ಕಂಬಳಿಯ, ಫಕೀರರು ಧರಿಸುವಂತಹ ತೋಳಿಲ್ಲದ ಉದ್ದನೆಯ ನಿಲುವಂಗಿ ಅವರ ಉಡುಗೆಯಾಗಿತ್ತು.

ಛಪರಾದಲ್ಲಿ 1922ರ ಜನವರಿ 31ರಂದು ಬಾಬಾ ರಾಮೋದಾರ ದಾಸರ ಅಧ್ಯಕ್ಷತೆಯಲ್ಲಿ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಸಭೆ ನಡೆಯುತ್ತಿದ್ದಾಗ ಪೋಲೀಸರು ಅವರನ್ನು ಬಂಧಿಸಿದರು. ಅವರಿಗಿದು ಜೈಲಿಗೆ ಹೋಗುವ ಪ್ರಥಮ ಅನುಭವ. ಕೆಲದಿನಗಳ ನಂತರ ಮೊಕದ್ದಮೆ ನಡೆಯಿತು. ಆರು ತಿಂಗಳ ಸಾದಾ ಸಜೆಯಾಯಿತು. 'ಧನ್ಯವಾದ' ಎಂದರು ಬಾಬಾ. ಇಬ್ಬರು ಸಿಪಾಯಿಗಳು ಅವರನ್ನು ಕರೆದುಕೊಂಡು ಬಕ್ಸರ್‌ಗೆ ಹೊರಟಾಗ ಬಾಬಾಗೆ ಕೋಳ ತೊಟ್ಟುಕೊಳ್ಳಬೇಕೆಂದು ಬಹಳ ಆಸೆಯಾಯಿತು. ಅವರ ಹಠಕ್ಕಾಗಿ ಸಿಪಾಯಿಗಳು ಸ್ವಲ್ಪ ಹೊತ್ತಿನವರೆಗೆ ಅವರ ಕೈಗೆ ಕೋಳ ತೊಡಿಸಿದಾಗ ಬಾಲ್ಯದಲ್ಲಿ ನಾನಾ ತೊಡಿಸಿದ ಬೆಳ್ಳಿಯ ಕಡಗ ನೆನಪಿಗೆ ಬಂತು.

ಬಕ್ಸರ್ ಜೈಲಿನಲ್ಲಿ ಅವರು ಆರು ತಿಂಗಳುಗಳ ಕಾಲ ಮನೋರಂಜನೆ ಹಾಗೂ ಓದು-ಬರಹದಲ್ಲಿ ಕಳೆದರು. ಅಲ್ಲಿ ಭರತೇಂದು ಅವರ 'ಅಂಧೇರ್ ನಗರಿ' ನಾಟಕ ಆಡಿಸಿದ್ದಲ್ಲದೆ ಅದರಲ್ಲಿ ಪಾತ್ರವನ್ನೂ ವಹಿಸಿದ್ದರು.

ಆ ದಿನಗಳಲ್ಲಿಯೇ ರಾಮೋದಾರ ದಾಸರಿಗೆ ಟ್ರಾಟ್ಸ್ಕಿಯ "ಬಾಲ್ಶೆವಿಕರು ಮತ್ತು ವಿಶ್ವಶಾಂತಿ" ಪುಸ್ತಕದ ಇಂಗ್ಲಿಷ್ ಪ್ರತಿ ಓದಲು ಸಿಕ್ಕಿತು. ರಷ್ಯಾಕ್ರಾಂತಿ ಹಾಗೂ ಸಾಮ್ಯ ವಾದದ ಬಗ್ಗೆ ಅವರು ಚೂರುಪಾರು ಲೇಖನಗಳನ್ನು ಓದಿಕೊಳ್ಳುತ್ತಲೇ ಬಂದಿದ್ದರು. ಕಾಲ್ಬಿಯಲ್ಲಿ ಸಾಮ್ಯವಾದ ಸಮಾಜದ ಕುರಿತು ಒಂದು ನೋಟುಬುಕ್ಕಿನಲ್ಲಿ ಟಿಪ್ಪಣಿ ಕೂಡ ಮಾಡಿಕೊಂಡಿದ್ದರು. ಅದನ್ನು ಸಂಸ್ಕೃತದಲ್ಲಿ ಬರೆಯತೊಡಗಿದರು. ಅದರಲ್ಲಿನ ಒಬ್ಬ ಯುವ ತಪಸ್ವಿ ವಿಶ್ವಬಂಧು ಎಂಬಾತನನ್ನು ಹಿಮಾಲಯದ ಕಡೆಗೆ ಕಳಿಸಿದ್ದರು, ಹಾಗಾಗಿ ಅದಕ್ಕೆ 'ವಿಶ್ವಬಂಧು ಪ್ರದೀಪ' ಎಂದು ಹೆಸರಿಟ್ಟರು. ಆದರೆ ಆ ಪುಸ್ತಕ ಅಂದು ಪೂರ್ತಿಯಾಗಲಿಲ್ಲ. ಹಜಾರೀಬಾಗ್‌ನಲ್ಲಿ ಕಳೆದ ಎರಡನೆಯ ಜೈಲುವಾಸದಲ್ಲಿ ಅದು 'ಬಾಯೀಸವೀಂ ಸದೀ' ಎಂಬ ಹೆಸರಿನಲ್ಲಿ ಸಿದ್ಧವಾಯಿತು.

ಮೊದಲ ಜೈಲುವಾಸದಲ್ಲಿ ರಾಮೋದಾರ ದಾಸರು ಕುರಾನಿನ ಸಂಸ್ಕೃತಾನುವಾದವನ್ನು ಮಾಡಿದ್ದರು, ಅದನ್ನೇ ದ್ವಿತೀಯ ಜೈಲುವಾಸದಲ್ಲಿ ಹಿಂದಿಗೆ ಅನುವಾದಿಸಿದರು. ಅದೇ ವೇಳೆಯಲ್ಲಿ, ಕುರಾನಿನ ಜೊತೆಜೊತೆಗೇ ವೇದಾಂತ ಸೂತ್ರಗಳ ಹಿಂದೀ ಟೀಕೆಯನ್ನೂ ಸಿದ್ಧಪಡಿಸಿದರು. ಆದರೆ ಆ ಮೇಲದು ಎಲ್ಲಿ ಕಳೆಯಿತೋ, ಸಿಗಲಿಲ್ಲ. ಬಕ್ಸರ್ ಜೈಲಿನಿಂದ ಹೊರಬಿದ್ದ ಕೆಲವೇ ತಿಂಗಳುಗಳ ಬಳಿಕ ರಾಮೋದಾರ ದಾಸರನ್ನು ಛಪರಾ ಜಿಲ್ಲೆಯ ಕಾಂಗ್ರೆಸ್ ಸಲಹಾಕಾರರನ್ನಾಗಿ ಚುನಾಯಿಸಿದರು. ಆ ವರ್ಷ (1922) ಡಿಸೆಂಬರದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯುವುದಿತ್ತು. ಗಯಾ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ದೇಶಬಂಧು ಚಿತ್ತರಂಜನದಾಸ್ ಆಯ್ಕೆಯಾಗಿದ್ದರು. ರಾಮೋದಾರ ದಾಸರು ಪಂಡಿತ ಮೋತೀಲಾಲ ನೆಹರೂ ಅವರ ಸ್ವರಾಜ್ಯ ಪಾರ್ಟಿಯ ಪರಿವರ್ತನವಾದೀ ನೀತಿಯ ಸಮರ್ಥಕರಾಗಿದ್ದರು. ತನ್ನ ಕಾರ್ಯಕರ್ತರೊಂದಿಗೆ ಕಾಂಗ್ರೆಸ್ ಅಧಿವೇಶನದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಈಗ ಅವರು ಜಾತಿ ಪಾತಿ ಸ್ಪೃಶ್ಯ ಅಸ್ಪೃಶ್ಯ ಇತ್ಯಾದಿಗಳನ್ನು ಬಹಿರಂಗವಾಗಿ ವಿರೋಧಿಸತೊಡಗಿದ್ದರು. ಗಯಾದಲ್ಲಿ ಒಂದು "ಸುಧಾಮ ಭೋಜನ ಶಾಲೆ"ಯನ್ನು ತೆರೆದರು. ಅವರ ಪ್ರಯತ್ನದಿಂದ ಆ ಸಮಯದಲ್ಲಿಯೇ ಸೋನ್ಪುರದಲ್ಲಿ ಪ್ರಾಂತೀಯ ಕಿಸಾನ್ ಸಭಾ ಸ್ಥಾಪನೆಯಾಯಿತು.

ಬೋಧಗಯಾದ ಮಹಾಬೋಧಿ ಮಂದಿರವನ್ನು ಬೌದ್ಧರಿಗೆ ಒಪ್ಪಿಸಬೇಕೆಂಬ ರಾಮೋದಾರರ ಪ್ರಸ್ತಾಪವನ್ನು ಪ್ರಾಂತೀಯ ಕಾಂಗ್ರೆಸ್ ಕಮಿಟಿ ಪಾಸುಮಾಡಿತ್ತು. ಆದರೆ ಗಯಾ ಕಾಂಗ್ರೆಸ್

ಅಧಿವೇಶನದಲ್ಲಿ ಆ ಪ್ರಸ್ತಾಪವನ್ನು ಮಂಡಿಸುವುದಕ್ಕೆ ಬಿಟ್ಟಿರಲಿಲ್ಲ. ಈ ಸಂದರ್ಭದಲ್ಲಿ ಅವರು ಬರ್ಮಾ ಮತ್ತು ಶ್ರೀಲಂಕೆಯ ಅನೇಕ ಬೌದ್ಧಭಿಕ್ಷುಗಳನ್ನು ಗಯಾಕ್ಕೆ ಕರೆದಿದ್ದರು. ಹಾಗೂ ಅವರ ಪಾಲಿ, ಸಂಸ್ಕೃತ ಹಾಗೂ ಇಂಗ್ಲಿಷ್ ಭಾಷಣಗಳ ಅನುವಾದ ಮಾಡಿದ್ದರು. ಇದರಿಂದಾಗಿ ಜನ ಅವರನ್ನು ಬಹುಭಾಷಾ ವಿಶಾರದರೆಂದು ಗೌರವಿಸತೊಡಗಿದ್ದರು. ಮಹಾಬೋಧಿ ಮಂದಿರ ಕುರಿತ ರಾಮೋದಾರರ ಪ್ರಸ್ತಾಪ ಎಂದು ಬರೆದಿದ್ದರೇನಾಯಿತು, ಅಂದಿನಿಂದ ಅವರು ತಮ್ಮನ್ನು ಬೌದ್ಧ ಧರ್ಮಕ್ಕೆ ಇನ್ನಷ್ಟು ನಿಕಟವರ್ತಿಯೆಂದು ಪರಿಗಣಿಸತೊಡಗಿದರು.

ರಾಹುಲರ ಜೀವನದಲ್ಲಿ ಒಂದಂತೂ ಗಟ್ಟಿಯಾಯಿತು, ಏನೆಂದರೆ ಅವರು ಒಂದು ಕೆಲಸ ಪೂರೈಸುತ್ತಲೂ ಇನ್ನೊಂದು ಕೆಲಸದಲ್ಲಿ ತೊಡಗುತ್ತಿದ್ದರು. ಒಂದು ಕ್ಷೇತ್ರವನ್ನು ಬಿಟ್ಟು ಏಕಾಏಕಿ ಇನ್ನೊಂದು ಕ್ಷೇತ್ರಕ್ಕೆ ನುಗ್ಗುತ್ತಿದ್ದರು. "ಸೈರ್ ಕರ್ ದುನಿಯಾಂ ಕೀ ಗಾಫಿಲ್" ಮಂತ್ರ ಅವರನ್ನು ಕೂತಲ್ಲೇ ಕೂರಲು ಬಿಡಲಿಲ್ಲ.

1923 ಫೆಬ್ರವರಿಯ ಮೊದಲಲ್ಲಿ ಸಾಧು ರಾಮೋದಾರ ದಾಸರು ಮಹೇಂದ್ರನಾಥ ಸಿಂಹರನ್ನು ಜೊತೆಗೆ ಕರೆದುಕೊಂಡು ನೇಪಾಳಕ್ಕೆ ಹೊರಟರು. ರಕ್ಸೌಲ್‌ನ ನಂತರದ ಪಯಣ ಕಾಲ್ನಡೆಯಲ್ಲಿ ಸಾಗಿತು. ಶಿವರಾತ್ರಿಯ ದಿನವಾದ್ದರಿಂದ ಬಹಳ ಮಂದಿ ಯಾತ್ರಿಕರು ಪಶುಪತಿನಾಥನ ದರ್ಶನಕ್ಕಾಗಿ ಹೋಗುತ್ತಾ ಇದ್ದರು. ಏರು ಇಳಿಜಾರುಗಳು ಕಳೆದು ಥಾಪಾಥಲ್ಲಿ (ಕಾಠ್ಮಂಡೂ) ತಲುಪಿ ಅಲ್ಲಿನ ಬೈರಾಗೀ ಮಠದಲ್ಲಿ ಇಬ್ಬರೂ ತಂಗಿದರು. ರಾಮೋದಾರ ದಾಸರು ಬರುವ ಮುಂಚೆಯೇ ಅಲ್ಲಿ ಅವರ ಕೀರ್ತಿ ಹಬ್ಬಿತ್ತು. ಮಠದ ಮಹಂತರು ಅವರ ಊಟ-ತಿಂಡಿಗಳಿಗಾಗಿ ವ್ಯವಸ್ಥೆ ಮಾಡಿದರು. ರಾಜಗುರು ಪಂಡಿತ ಹೇಮರಾಜ ಶರ್ಮ ಅವರೂ ಭೇಟಿಯಾಗಲು ಬಂದರು. ಒಂದು ದಿನ ಪ್ರಧಾನಮಂತ್ರಿ ಚಂದ್ರ ಶಂಸೇರರು ಥಾಪಾಥಲ್ಲಿಗೆ ಬಂದವರು ರಾಮೋದಾರ ದಾಸರನ್ನು ಭೇಟಿಯಾಗಿ ಮಾತುಕತೆಯಾಡಿದರು.

ಶಿವರಾತ್ರಿಯ ನಂತರ ರಾಮೋದಾರರು ಮತ್ತೂ ಕೆಲದಿನಗಳ ಕಾಲ ನೇಪಾಳದಲ್ಲೇ ಬೇರೊಂದು ಕಡೆ ಹೋಗಿ ಉಳಿದುಕೊಂಡರು. ಸುಮಾರು ಒಂದೂವರೆ ತಿಂಗಳ ನೇಪಾಳವಾಸದಲ್ಲಿ ಅಲ್ಲಿನ ಅನೇಕ ಐತಿಹಾಸಿಕ ಧಾರ್ಮಿಕ ಸ್ಥಳಗಳನ್ನು ವೀಕ್ಷಿಸಿದರು. ಕೆಲ ಬೌದ್ಧ ಪಂಡಿತರೊಂದಿಗೆ ಮಾತುಕತೆ ನಡೆಸಿದರು. ಪಂಡಿತ ಹೇಮರಾಜ ಶರ್ಮ ಅವರ ಗ್ರಂಥಾಲಯಕ್ಕೆ ಭೇಟಿ ನೀಡಿದರು. ಆ ಸಮಯದಲ್ಲಿ ಭೀಮಫೇರೀಯಿಂದ ಕಾಠ್ಮಂಡೂವರೆಗೆ ರೋಪಲೈನ್ ಸಿದ್ಧವಾಗುತ್ತ ಇತ್ತು. ಅದರ ಪಕ್ಕದಲ್ಲೇ ಸಾಗುವ ಗುಡ್ಡದ ಮಾರ್ಗವಾಗಿ ಮತ್ತೆ ಪಯಣಿಸಿ ಇಬ್ಬರೂ ಭೀಮಫೇರೀ ಸೇರಿಕೊಂಡರು. ಮುಂದಿನ ತಂಗುಸ್ಥಳದಿಂದ ಜೊತೆ ಪಯಣಿಗ ಬೇರೆ ಹೋದ. ರಾಮೋದಾರ ದಾಸರು ಜ್ವರದಿಂದ ಬಳಲುತ್ತಿದ್ದರು. ಅವರ ಬಳಿ ಒಂದು ಪೈಸೆ ಕೂಡ ಇರಲಿಲ್ಲ. ಹೇಗೋ ಅಂತೂ ರಕ್ಸೌಲ್ ತಲುಪಿ ಜೊತೆಗಿದ್ದ ಎರಡು ಪಾತ್ರೆಗಳನ್ನು ಎರಡೂವರೆ ರೂಪಾಯಿಗೆ ಮಾರಿ ರೈಲು ಟಿಕೆಟು ಕೊಂಡು ಛಪರಾಕ್ಕೆ ಹೊರಟು ಹೋದರು.

ನೇಪಾಳ ಯಾತ್ರೆಗೂ ಕೆಲದಿನಗಳ ಹಿಂದೆ ಪಾಟ್ನಾದ ಒಂದು ಸಾರ್ವಜನಿಕ ಸಭೆಯಲ್ಲಿ ಬಾಬೂರಾಜೇಂದ್ರ ಪ್ರಸಾದರ ಭಾಷಣದ ನಂತರ ರಾಮೋದಾರರ ಭಾಷಣವಿದ್ದಿತು. ನೇಪಾಳದಿಂದ ವಾಪಸಾದ ಮೇಲೆ ಅದಕ್ಕಾಗಿ ತಮಗೆ ಅರೆಸ್ಟ್ ವಾರಂಟ್ ನೀಡಲಾಗಿದೆ ಎಂದು ತಿಳಿಯಿತು. ಅರೆಸ್ಟ್

ಆಗುವ ಬದಲು ಅಲ್ಲಿಂದ ಓಡಿ ಹೋಗುವಂತೆ ಸ್ನೇಹಿತರು ಸೂಚಿಸಿದರು. ಆದರೆ ರಾಮೋದಾರರು ಬಂಧನಕ್ಕೊಳಗಾಗ ಬಯಸಿ, ಪೋಲೀಸರಿಗೆ ತಮ್ಮ ಸುಳಿವು ಕೊಟ್ಟರು. ದೇಶದ್ರೋಹದ ಮೊಕದ್ದಮೆ ನಡೆಯಿತು. ಎರಡು ವರ್ಷದ ಸಾದಾ ಸಜೆಯಾಯಿತು. ಮುಂದಿನ ಎರಡು ವರ್ಷಗಳನ್ನು ,1923 ಏಪ್ರಿಲ್‌ನಿಂದ 1925 ಏಪ್ರಿಲ್) ರಾಮೋದಾರರು ಬಕ್ಸರ್ ಮತ್ತು ಹಜಾರೀ ಬಾಗ್ ಜೈಲುಗಳಲ್ಲಿ ಕಳೆದರು.

ಜೈಲಿನಲ್ಲಿ ಓದು-ಬರವಣಿಗೆಗೆ ಒಳ್ಳೆಯ ಅವಕಾಶ ಸಿಕ್ಕಿತು. ಜೈಲು ಒಡನಾಡಿಗಳಲ್ಲಿ ಶಂಕರಾಚಾರ್ಯ ಸ್ವಾಮೀ ಭಾರತೀಕೃಷ್ಣ ತೀರ್ಥರೂ ಒಬ್ಬರು, ಅವರು ಒಳ್ಳೆಯ ಗಣಿತ ಶಾಸ್ತ್ರಜ್ಞರು ಸಹ. ರಾಮೋದಾರರು ಸಂಸ್ಕೃತ, ಇಂಗ್ಲಿಷ್ ಮತ್ತು ಗಣಿತದ ಅನೇಕ ಗ್ರಂಥಗಳನ್ನು ದೊರಕಿಸಿಕೊಂಡು, ಶಂಕರಾಚಾರ್ಯ ಸ್ವಾಮಿಗಳ ಸಹಾಯದಿಂದ ಉಚ್ಚಬೀಜಗಣಿತ ಗೋಲೀಯ ತ್ರಿಕೋಣಮಿತಿ, ನಿರ್ದೇಶಾಂಕ ಜ್ಯಾಮಿತಿ ಮುಂತಾದವುಗಳ ಅಧ್ಯಯನ ನಡೆಸಿದರು.

ಶಂಕರಾಚಾರ್ಯರು ಬಿಡುಗಡೆಯಾಗಿ, ಹೊರಟು ಹೋದ ಮೇಲೆ ರಾಮೋದಾರರು "ಬಾಯಿಸವೀ ಸದೀ"ಯನ್ನು ಹಿಂದಿಯಲ್ಲಿ ಬರೆದರು. ಇದು ಹಿಂದಿಯಲ್ಲಿ ಪ್ರಕಟವಾದ ಅವರ ಪ್ರಥಮ ಪುಸ್ತಕ. ಈ ಪುಸ್ತಕ ಮುಂದೆ ಭಾರೀ ಜನಪ್ರಿಯವಾಯಿತು.

ಅನಂತರ ರಾಮೋದಾರ ದಾಸರು ಜ್ಯೋತಿಷ್ಯ ಕುರಿತ ಒಂದು ಪುಸ್ತಕ ಬರೆಯಲು ಆರಂಭಿಸಿದರು. ಅದಕ್ಕಾಗಿ ಖಗೋಳ ಚಿತ್ರಗಳನ್ನು ಬರೆದರು. ಇದು ಮುಂದಣ ಹಜಾರೀಬಾಗ್ ಜೈಲುವಾಸದಲ್ಲಿ "ವಿಶ್ವ ಕೀ ರೂಪರೇಖಾ" ಎಂಬ ಹೆಸರಿನಲ್ಲಿ ಸಿದ್ಧಗೊಂಡಿತು.

ಹೀಗೆ ಎರಡು ವರ್ಷದ ಜೈಲು ವಾಸ ಮುಗಿಯಿತು. ರಾಹುಲ್ ಜೀ ಅವರೇ ಬರೆದರಂತೆ "....ಎರಡು ವರ್ಷ ನನಗೆ ಗೊತ್ತೇ ಆಗದಿದ್ದಷ್ಟು ಬೇಗ ಕಳೆದು ಹೋಯಿತು. ಈ ಎರಡು ವರ್ಷಗಳಲ್ಲಿ ನಾನು ಓದು ಬರವಣಿಗೆಯಲ್ಲಿ ಮಗ್ನನಾಗಿದ್ದಷ್ಟು ಹಿಂದೆಂದೂ ಆಗಿರಲಿಲ್ಲ. ಓದು ಬರವಣಿಗೆಯಲ್ಲದೆ ಫ್ರೆಂಚ್ ಮತ್ತು ಅವೆಸ್ತಾಗಳನ್ನು ನಾನು ಅಭ್ಯಾಸ ಮಾಡಿದೆ. ನನ್ನ ವೈಜ್ಞಾನಿಕ ದೃಷ್ಟಿ ಇನ್ನಷ್ಟು ವಿಕಾಸವಾಯಿತು. ಆರ್ಯ ಸಮಾಜದ ವಿಚಾರಗಳ ಬಗ್ಗೆ ಇದ್ದ ಕಟ್ಟಾ ವಿಶ್ವಾಸ ಕಡಿಮೆಯಾಗತೊಡಗಿ ಬೌದ್ಧ ಧರ್ಮದ ಕಡೆಗೆ ನನ್ನ ಒಲವು ಹೆಚ್ಚಿತು. ವೇದದ ನಿಭ್ರಾಂತತೆಯ ಬಗ್ಗೆ ಸಂದೇಹ ಏಳತೊಡಗಿತು. ಆದರೆ ಈಗಲೂ ದೇವರ ಮೇಲೆ ವಿಶ್ವಾಸವಿತ್ತು."

1925ನೇ ಇಸವಿ ಏಪ್ರಿಲ್ 18ರಂದು ಸಾಧು ರಾಮೋದಾರ ದಾಸರು ಹಜಾರೀ ಬಾಗ್ ಜೈಲಿನಿಂದ ಹೊರಬಂದರು. ಜೀವನದ ಮೂವತ್ತೊಂದು ಸಂವತ್ಸರಗಳು ಕಳೆದಿದ್ದುವು. ಮೊಟ್ಟ ಮೊದಲು ತನ್ನ ಛಪರಾ ಜಿಲ್ಲೆಯ ಪ್ರವಾಸಕ್ಕೆ ಹೊರಟರು. ಮೀರ್‌ಗಂಜ್ (ಹಥುವಾ) ಸ್ಟೇಶನ್ನಿನಲ್ಲಿ ಇಳಿಯುತ್ತಿದ್ದಂತೆ ಧ್ವಜೋತ್ಸವದ ವಿಷಯದಲ್ಲಿ ಹಿಂದೂ ಮುಸ್ಲಿಂ ಜಗಳ ಆರಂಭವಾಗಿದೆ ಎಂಬ ಸುದ್ದಿ ಬಂದಿತು. ಹಿಂದೂಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಮುಸಲ್ಮಾನರ ಸಂಖ್ಯೆ ಕಡಿಮೆ ಇತ್ತು. ಸಾಧು ರಾಮೋದಾರರು ಊರಿನ ಎಲ್ಲೆಡೆ ತಿರುಗಾಡಿ, ಶಸ್ತ್ರರಹಿತರಾಗಿದ್ದ ಮುಸಲ್ಮಾನರ ರಕ್ಷಣೆಗೆ ನಿಂತರು. ಸ್ವತಃ ಅಡ್ಡ ನಿಂತು ಎಷ್ಟೋ ಮುಸಲ್ಮಾನರನ್ನು ಉಳಿಸಿದರು. "ನನ್ನ ಕಪ್ಪು ನಿಲುವಂಗಿ, ಹೆಸರು, ಹಾಗೂ ನನ್ನ ರಾಷ್ಟ್ರೀಯ ಕೆಲಸದ ಅರಿವು ಅವರಿಗಿತ್ತು. ಹೀಗಾಗಿ ಯಾರೂ ನನ್ನ ಮೈಮುಟ್ಟುವ ಧೈರ್ಯ ಮಾಡಲಿಲ್ಲ."

ಆ ಸಮಯದಲ್ಲಿಯೇ ಬೋಧಗಯಾ ಮಂದಿರದ ಬಗ್ಗೆ ಒಂದು ಕಮಿಟಿ ರಚಿತವಾಯಿತು. ರಾಜೇಂದ್ರ ಬಾಬೂ ಅದರ ಅಧ್ಯಕ್ಷರಾಗಿದ್ದರು. ಸದಸ್ಯರಲ್ಲಿ ಸಾಧು ರಾಮೋದಾರ ಮತ್ತು ಕಾಶೀ ಪ್ರಸಾದ ಜೈಸ್ವಾಲರು ಕೂಡ ಇದ್ದರು. ಕಮಿಟಿ ತನ್ನ ವರದಿ ನೀಡಿತು. ಮಂದಿರವನ್ನು ಬೌದ್ಧರಿಗೆ ಒಪ್ಪಿಸಬೇಕೆಂಬುದು ರಾಮೋದಾರರ ಮತ. ಆ ವರ್ಷ (1925) ರಾಮೋದಾರರು ಕಾನ್ಪುರ ಕಾಂಗ್ರೆಸ್‌ನ ಪ್ರತಿನಿಧಿಯಾಗಿದ್ದರು. ಅಖಿಲಭಾರತ ಕಾಂಗ್ರೆಸ್ ಕಮಿಟಿಯ ಸದಸ್ಯರೂ ಆಗಿದ್ದರು. ಅಧಿವೇಶನ ಬಹಳ ಸಪ್ಪೆಯಾಗಿ ಜರುಗಿತು. ರಾಮೋದಾರ ದಾಸರು ತನ್ನ ಮಿತ್ರ ಬಲದೇವ ಚೌಬೆಯ ಜೊತೆ ಮೀರತ್‌ಗೆ ಹೋದರು. ಮೀರತ್‌ನಲ್ಲಿ, ಮುಂದೆ ಭಿಕ್ಷು ಅನಂದ ಕೌಸಲ್ಯಾಲಯನ ಎಂದು ಹೆಸರಾದ, ಬ್ರಹ್ಮಚಾರಿ ಹರನಾಮದಾಸ್ ಅವರ ಪ್ರಥಮ ಭೇಟಿಯಾಯಿತು. ಭವಿಷ್ಯದಲ್ಲಿ ಅವರಿಬ್ಬರಲ್ಲಿಯೂ ಪರಸ್ಪರ ಚಿರಂತನವಾದ ಸೋದರ ಸಂಬಂಧ ಸ್ಥಾಪಿತಗೊಂಡಿತು. ಅಂದು ಹರಿನಾಮದಾಸರ ಕೇಳಿಕೆ ಮೇರೆಗೆ ರಾಮೋದಾರರು ಅವರಿಗೊಂದು ಆದರ್ಶವಾಕ್ಯ ಬರೆದುಕೊಟ್ಟರು. "ಅಸಿನಾ ಗೀತಯಾ ಜೈವ ಜಯಿಷ್ಯೇ ಭುವನತ್ರಯಮ್".

ಅಲ್ಲಿಯವರೆಗೆ ರಾಹುಲರಿಗೆ, ದೇವರ ಮೇಲಣ ವಿಶ್ವಾಸ ಒಂದಿಷ್ಟೂ ಕಡಿಮೆಯಾಗಲಿಲ್ಲ ಎಂಬುದಕ್ಕೆ ಇದು ಉದಾಹರಣೆ. ತಿಲಕರ 'ಗೀತಾರಹಸ್ಯ'ದ ಶಾಶ್ವತ ಪರಿಣಾಮ ಹಾಗೂ ಅಹಿಂಸೆಯ ಬದಲು ಅಸಿ (ಖಡ್ಗ) ಸಿದ್ಧಾಂತದಲ್ಲಿ ಹೆಚ್ಚಿನ ಭರವಸೆ ಆಗ ಅವರಲ್ಲಿತ್ತು ಎಂಬುದೂ ಇದರಿಂದ ಸ್ಪಷ್ಟವಾಗುತ್ತದೆಯಷ್ಟೆ?

1926ರ ಜನವರಿ ಆರಂಭದಲ್ಲಿ ರಾಮೋದಾರ ಸಾಧುಗಳು ಹಿಮಾಲಯ ಸಂಚರಿಸಿ ಬರಲು ನಿರ್ಧರಿಸಿ ದಿಲ್ಲಿ ಮಾರ್ಗವಾಗಿ ಲಾಹೋರ್ ತಲುಪಿದರು. ಅಲ್ಲಿ ಕೆಲ ದಿನ ತಂಗಿ "ಬಾಯೀಸವೀಂ ಸದೀ"ಯ ಕೆಲ ಅಧ್ಯಾಯಗಳನ್ನು ಉರ್ದುವಿನಲ್ಲಿ ಬರೆದರು. "ಮಿಲಾಪ" ಪತ್ರಿಕೆಯಲ್ಲಿ ಅದು ಪ್ರಕಟವಾಯಿತು. ಅಲ್ಲಿಂದ ರಾವಲ್ಪಿಂಡಿ ಮಾರ್ಗವಾಗಿ ಅವರು ಖೈಬರ್‌ನ ಲಂಡೀ ಕೋತಲ್‌ವರೆಗೆ ತೆರಳಿದ್ದರು. ಕಾವಿ ಲುಂಗಿ ಹಾಗೂ ಚಾದರ ಹೊದೆದುಕೊಂಡಿರುತ್ತಿದ್ದ ಅವರು ಆ ಇಡೀ ಯಾತ್ರೆಯುದ್ದಕ್ಕೂ ಸಸ್ಯಾಹಾರಿಯಾಗಿಯೇ ಉಳಿದರು.

ಲಡಾಖ್‌ಗೆ ಹೋಗಲು ಅನುಮತಿ ದೊರೆಯಿತು. ಅಲ್ಲಿನ ಇಂಜಿನಿಯರ್ ಲಾಲಾ ರಾಮರಖಾ ಬಹಳ ಸಹಾಯ ಮಾಡಿದ್ದರಿಂದ ಕರ್ಗಿಲ್ ಲಡಾಖ್, ಹೇಮಿಸ್ ಹಾಗೂ ಅಲ್ಲಿಂದ ಮುಂದಿನ ಪ್ರವಾಸ ಸುಖವಾಗಿ ಸಾಗಿತು. ಈ ಪ್ರವಾಸ ಕುರಿತ ತಮ್ಮ ಲೇಖನಗಳನ್ನು ಅವರು ಬಿಹಾರದ ಪತ್ರಿಕೆಗಳಿಗೆ ನಿರಂತರವಾಗಿ ಕಳಿಸುತ್ತಾ ಇದ್ದರು. 5600 ಮೀಟರ್ ಎತ್ತರದ ಖರ್ದೊಂಗದ ಆರೋಹಣ ಹಾಗೂ ನಂತರದ ಯಾತ್ರೆಯ ವರ್ಣನೆ ರಾಜೇಂದ್ರ ಬಾಬೂ ಅವರಿಗೆ ಎಷ್ಟು ಇಷ್ಟವಾಯಿತೆಂದರೆ ಅವರು ಬನಾರಸಿನ ತನ್ನ ಮಿತ್ರರಿಗೆ ಪತ್ರ ಬರೆದು ರಾಮೋದಾರರ ಈ ಲಡಾಖ್ ಯಾತ್ರಾ ಲೇಖನಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಲು ಸೂಚಿಸಿದರು.

ಲಡಾಖ್‌ನ ತಹಸೀಲ್ದಾರರು ತನ್ನ ಚಪ್ರಾಸಿ ಗಂಗಾರಾಮನನ್ನು ರಾಮೋದಾರರ ಚಾಕರಿಗೆಂದು ಅವರ ಜೊತೆ ಬಿಟ್ಟಿದ್ದರು. ಹೀಗಾಗಿ ಹನ್ಲೆ ಯಾತ್ರೆಯ ಬಳಿಕ ಪಶ್ಚಿಮ ಟಿಬೆಟಿನ ಛು-ಮೂರ್ತಿ ಪ್ರದೇಶ ನೋಡುತ್ತ ಕನೋರ ರಸ್ತೆಯಲ್ಲಿ ವಾಪಸಾಗಲು ಅವರಿಗೆ ವಿಶೇಷ ಕಷ್ಟವೇನೂ ಆಗಲಿಲ್ಲ. ಸಿಂಧೂತಟದ ಬಳಿಯ ಪ್ರದೇಶಗಳಲ್ಲಿ ಸಂಚರಿಸುವಾಗ ಒಂದಷ್ಟು ಸ್ತ್ರೀಪುರುಷರ ತಂಡ ಕುರಿ ಹಾಗೂ ಹೇಸರಗತ್ತೆಗಳ

ಮೇಲೆ ಸಾಮಾನು ಹೇರಿಕೊಂಡು ಹೋಗುತ್ತಿರುವುದನ್ನು ಕಂಡ ರಾಮೋದಾರ ಸಾಧುಗಳಿಗೆ "ನಾನೂ ಹೀಗೆ ಕೆಲ ಕುರಿ, ಹೇಸರಗತ್ತೆ ಮತ್ತು ಒಬ್ಬ ಟಿಬೆಟೀ ತರುಣಿಯೊಂದಿಗೆ ಒಂದೂರಿನಿಂದ ಇನ್ನೊಂದೂರಿಗೆ ಸಂಚರಿಸುವಂತಿದ್ದರೆ ಏನು ಚೆನ್ನಾಗಿರುತ್ತಿತ್ತು. ಎಲ್ಲಿ ಮನಸ್ಸಾಯಿತೋ ಅಲ್ಲಿಯೇ ಡೇರೆ ಹಾಕುವುದು. ತರುಣಿ ಮತ್ತು ನಾನು ಸೇರಿ ಕುರಿ, ಹೇಸರಕತ್ತೆಗಳ ಮೇಲಿಂದ ಸಾಮಾನು ಇಳಿಸುವುದು. ತರುಣಿ ಚಹ ತಯಾರಿಸುವಳು, ಮತ್ತೆ ಈ ನಿರ್ಜನ ಮರಗಿಡಗಳಿಲ್ಲದ ಬೋಳು ಪರ್ವತದ ಮಡಿಲಲ್ಲಿ ನಾವಿಬ್ಬರೂ ನಿರ್ದ್ವಂದ್ವದ ಒಂದು ವಿಚಿತ್ರ ಬದುಕು ಕಳೆಯುವೆವು" ಅಂತೆಲ್ಲ ಯೋಚನೆ ಬಂತು.

ಅದೇ ಪ್ರವಾಸದ ಒಂದು ಕರುಣಾಜನಕ ಘಟನೆ. ರಾಮೋದಾರ ದಾಸರಿಗೆ ಒಂದು ದೊಡ್ಡ ನಾಯಿಯನ್ನು ಜೊತೆಗಿಟ್ಟುಕೊಳ್ಳಬೇಕೆಂಬ ಆಸೆಯಿತ್ತು. ಹನ್ಲೇಯ ಲಾಮಾ ಲಾಸಾದಿಂದ ಒಂದು ದೊಡ್ಡ ಚೀನೀ ಹೆಣ್ಣುನಾಯಿಯನ್ನು ಅವರಿಗೆ ಕಾಣಿಕೆ ಕೊಟ್ಟರು. ಅದರ ಹೆಸರು ಸೇಂಗ್-ಟುಕ್. ಆದರೆ ವಾಪಸು ಪಯಣದಲ್ಲಿ ಕೆಲ ದಿನ ಕಳೆದದ್ದೇ ಅದು ಕುಡಿಯುವುದು ತಿನ್ನುವುದನ್ನೆಲ್ಲ ನಿಲ್ಲಿಸಿತು. ಸತ್ತೇ ಹೋಯಿತು. ಆವತ್ತಿನ ತನ್ನ ಮನೋವ್ಯಥೆಯನ್ನು ಕುರಿತ ರಾಹುಲರು ಹೀಗೆ ಬರೆಯುತ್ತಾರೆ. "ತಂದೆ ತಾಯಿ ಹೋದಾಗ ಹಾಗೂ ನನಗಾಗಿ ಪ್ರಾಣ ಕೊಡಬಲ್ಲ ನಾನಾ-ನಾನೀ ತೀರಿಕೊಂಡಾಗಲೂ ಹನಿಯೊಡೆಯದ ನನ್ನ ಕಣ್ಣುಗಳಲ್ಲಿ ಈಗ ಕಂಬನಿ ಉಕ್ಕಿ ಹರಿಯಿತು. ಅದೇ ರಾತ್ರಿ ನಾನು ಅತೀವ ತಪ್ತ ಹೃದಯದಿಂದ ಎಂಟು ಶ್ಲೋಕಗಳನ್ನು ಬರೆದೆ (ಸೇಂಗ್ ಟುಕಾಷ್ಟಕ) ಅವು "ಸೇಂಗ ಟುಕೇ! ತ್ವತ್ಪ್ರಯಾಣೇ" ಎಂದು ಮುಗಿಯುತ್ತವೆ.

ಸಿಮ್ಲಾ ತಲುಪಿದ ಬಳಿಕ ರಾಮೋದಾರ ದಾಸರು ಅಲ್ಲಿಂದ ಬೇಗನೇ ಛಪರಾಕ್ಕೆ ಹೊರಟರು. ಕೌನ್ಸಿಲ್ ಚುನಾವಣೆಯ (1926) ಜಯೋತ್ಸವ ಭರಾಟೆಯಿಂದ ನಡೆಯುತ್ತಿತ್ತು. ರಾಮೋದಾರರು ಎಲ್ಲ ಕಡೆ ತಿರುಗಿ ಕಾಂಗ್ರೆಸ್ ಉಮೇದ್ವಾರರ ಪರ ಭಾಷಣ ಮಾಡಿದರು. ಹೆಚ್ಚಾಗಿ ಆ ಸಭೆಗಳಲ್ಲಿ ರಾಜೇಂದ್ರ ಬಾಬುಗಳ ಭಾಷಣವೂ ಏರ್ಪಾಟಾಗುತ್ತಿತ್ತು. ಆದರೆ ರಾಮೋದಾರರ ಭಾಷಣ ಜನ ಸಾಮಾನ್ಯರಿಗೆ ಅರ್ಥವಾಗುವಂತೆ ಸರಳವಾಗಿ ಇರುತ್ತಿತ್ತು. ಆದ್ದರಿಂದ ಇದು ಜನತೆಯ ಮೇಲೆ ಹೆಚ್ಚು ಪರಿಣಾಮ ಬೀರುತ್ತಿತ್ತು.

ಚುನಾವಣೆಯ ಅದೇ ವೇಳೆಯಲ್ಲಿ ರಾಹುಲರಿಗೆ ಧೂಪನಾಥರೆಂಬ ಒಬ್ಬ ಸ್ಥಾಯೀ ಗೆಳೆಯರು ದೊರೆತರು. ಆ ವರ್ಷದ ಕಾಂಗ್ರೆಸ್ ಅಧಿವೇಶನ ಗೌಹಾತಿಯಲ್ಲಿ ನಡೆಯಿತು. ಧೂಪನಾಥರೂ ಜೊತೆಗೆ ಹೊರಟರು. ಬ್ರಹ್ಮಚಾರಿ ಹರಿನಾಮದಾಸರು ಕೂಡ ಗೌಹಾತಿಗೆ ತೆರಳಿದರು. ಗೌಹಾತಿಯಿಂದ ಮರಳಿದ ಮೇಲೆ ರಾಮೋದಾರ ದಾಸರ ಮನಸ್ಸು ರಾಜಕೀಯದಲ್ಲಿ ನಿಲ್ಲಲಿಲ್ಲ. ಲಡಾಖ್ ಯಾತ್ರೆಯ ನಂತರ ಬೌದ್ಧ ಧರ್ಮದ ಅಧ್ಯಯನ ಮಾಡಬೇಕೆಂಬ ಇಚ್ಛೆ ಪ್ರಬಲವಾಯಿತು. ಆದ್ದರಿಂದ ಅವರಿಗೆ ಶ್ರೀಲಂಕೆಗೆ ಹೋಗುವ ಸುಸಂದರ್ಭವೂ ಶೀಘ್ರವೇ ಲಭಿಸಿತು.

# ಶ್ರೀಲಂಕೆಯಲ್ಲಿ ಅಧ್ಯಯನ-ಅಧ್ಯಾಪನ

ಸಿಂಹಳವೆಂದೂ ಕರೆಯಿಸಿಕೊಳ್ಳುವ ಶ್ರೀಲಂಕಾ ಹಸಿರುತುಂಬಿ ಕಂಗೊಳಿಸುತ್ತಿರುವ ಒಂದು ಸುಂದರ ದ್ವೀಪ. ಸಾಮ್ರಾಟ್ ಅಶೋಕನ ಕಾಲದಲ್ಲೇ ಅಲ್ಲಿಗೆ ಬೌದ್ಧಧರ್ಮ ತಲುಪಿತ್ತು. ಬೌದ್ಧ ಧರ್ಮದಿಂದಾಗಿ ಅಲ್ಲಿ ಪಾಲಿ ಮತ್ತು ಸಂಸ್ಕೃತ ಭಾಷೆಗಳ ಕಲಿಕೆ ಕಲಿಸುವಿಕೆ ಪ್ರಾಚೀನ ಕಾಲದಿಂದಲೂ ಪರಂಪರೆಯಾಗಿ ಬಂದಿದೆ. ಸಿಂಹಳೀ ಭಾಷೆ ಮೇಲ್ವರ್ಗದವರದು. ಸಿಂಹಳೀ ಲಿಪಿಯ ಮೂಲ ಬ್ರಾಹ್ಮೀ ಲಿಪಿ.

ಕಳೆದ ಶತಮಾನದ ಉತ್ತರಾರ್ಧದಲ್ಲಿ ಶ್ರೀಲಂಕಾದಲ್ಲಿ ಬೌದ್ಧ ಪುನರುತ್ಥಾನದ ನವಯುಗ ಪ್ರಾರಂಭವಾಗಿ ಬಿಕ್ಷುಗಳಿಗೂ ಗೃಹಸ್ಥರಿಗೂ ಸಿಂಹಳೀ, ಪಾಲಿ ಹಾಗೂ ಸಂಸ್ಕೃತ ಭಾಷೆಗಳ ಯುಕ್ತ ಶಿಕ್ಷಣ ನೀಡುವ ಉದ್ದೇಶದಿಂದ ಅಲ್ಲಿ ಎರಡು ವಿಹಾರ-ವಿದ್ಯಾಪೀಠಗಳು ಸ್ಥಾಪನೆಗೊಂಡವು. 1874ನೇ ಇಸವಿಯಲ್ಲಿ ಕೊಲಂಬೋದಲ್ಲಿ ವಿದ್ಯೋದಯ ಪರಿವೇಣ (ವಿಹಾರ) ಹಾಗೂ 1875ರಲ್ಲಿ ಕೊಲಂಬೋ ವಿದ್ಯಾಲಂಕಾರ ಪರಿವೇಣ. ನಗರದಿಂದ ದೂರ ತೆಂಗು ಹಸಿರುಪಚ್ಚೆ ಗದ್ದೆ ಬಯಲು ವೃಕ್ಷರಾಜಿಗಳ ನಡುವೆ ಇರುವ ಕಾರಣ ವಿದ್ಯಾಲಂಕಾರ ವಿಹಾರ ನಯನ ಮನೋಹರವಾಗಿದೆ.

ಇದೇ ವಿದ್ಯಾಲಂಕಾರ ವಿಹಾರದಲ್ಲಿ 1927 ಮೇ 16ರಂದು ನಡೆದ ಘಟನೆ. ಬೆಳಗಿನ ಹೊತ್ತು ಬಿಳೀ ಧೋತಿ, ಬಿಳೀ ಜುಬ್ಬ ಹಾಗೂ ಭಾಗಲ್ಪುರ ಚದ್ದರು ಹೊದೆದ ಮೂವತ್ನಾಲ್ಕು ವರ್ಷ ವಯಸ್ಸಿನ ಎತ್ತರ ನಿಲುವಿನ ಓರ್ವ ತರುಣ ಕೆಲೋನಿಯಾ ಸ್ಟೇಶನಿನಲ್ಲಿ ಇಳಿದ. ಕೇಳುತ್ತ ಕೇಳುತ್ತ ಅಲ್ಲೇ ಸ್ವಲ್ಪ ದೂರದಲ್ಲಿದ್ದ ವಿದ್ಯಾಲಂಕಾರ ವಿಹಾರ ತಲುಪಿದ. ವಿಹಾರದ ಸಾಧುಗಳಿಗೆ ಈತನೇ "ದಂಬದಿವ್ರು ಬ್ರಾಹ್ಮಣ ಪಂಡಿತುಮಾ..." (ಜಂಬೂದ್ವೀಪದ ಬ್ರಾಹ್ಮಣ ಪಂಡಿತ) ಎಂದು ತಿಳಿಯಲು ತಡವಾಗಲಿಲ್ಲ.

ಪಂಡಿತರನ್ನು ವಿಹಾರದ ಪ್ರಧಾನ ಶ್ರೀ ಧರ್ಮಾನಂದ ನಾಯಕ ಮಹಾಸ್ಥವಿರರ ಬಳಿಗೆ ಕರೆದುಕೊಂಡು ಹೋದರು. ವಿಹಾರದ ಸರ್ವ ಭಿಕ್ಷುಗಳೂ ಅಧ್ಯಾಪಕರೂ ಅಲ್ಲಿ ಸೇರಿದರು. ಪಂಡಿತರು ಮಹಾಸ್ಥವಿರರಿಗೆ ವಿನಮ್ರತೆಯಿಂದ ಪ್ರಣಾಮ ಮಾಡಿದರು. ಪ್ರಯಾಣದ ಕುಶಲ-ಕ್ಷೇಮಗಳ ಕುರಿತು ಇಬ್ಬರ ನಡುವೆ ಕೊಂಚ ಹೊತ್ತು ಸಂಸ್ಕೃತದಲ್ಲೇ ಮಾತುಕತೆಯಾದ ಬಳಿಕ ಸ್ನಾನ ಗೀನ ಉಪಾಹಾರ ಇತ್ಯಾದಿಗಳಿಗೆ ಬಿಡುವು ದೊರೆಯಿತು.

"ಪಂಡಿತುಮಾ" ಅವರಿಗಾಗಿ ಗಾಳಿಬೆಳಕು ಚೆನ್ನಾಗಿರುವ ಒಂದು ದೊಡ್ಡ ಕೋಣೆಯ ವ್ಯವಸ್ಥೆಯಾಗಿತ್ತು. ಅದರಲ್ಲಿ ಅಚ್ಚುಕಟ್ಟಾಗಿ ವಾರ್ನಿಶ್ ಮಾಡಿದ ಕುರ್ಚಿ ಮೇಜು, ಅಲ್ಮಿರಾ ಹಾಗೂ ಹೊಚ್ಚ ಹೊಸ ಸೊಳ್ಳೆ ಪರದೆ ಹಾಕಿ ಸಜ್ಜಾದ ಮಂಚ. ಬ್ರೆಡ್ಡು ಬೆಣ್ಣೆ, ಹಾಲು ಸಕ್ಕರೆ ತೆಗೆದುಕೊಳ್ಳುತ್ತೇನೆಂದ ಪಂಡಿತರು ತಮಗೆ ಸಸ್ಯಾಹಾರ ಭೋಜನ ಇಷ್ಟ ಎಂದು ತಿಳಿಸಿದರು.

ಅವತ್ತು ವಿದ್ಯಾಲಂಕಾರ ವಿಹಾರ ತಲುಪಿ ಇಷ್ಟೆಲ್ಲ ಸೌಹಾರ್ದಪೂರ್ಣ ಸ್ವಾಗತ ಪಡೆದ

"ದಂಬದಿವು ಪಂಡಿತುಮಾ" ಇನ್ಯಾರೂ ಅಲ್ಲದೆ, ಕೆಲವೇ ದಿನಗಳ ಕೆಳಗೆ ಛಪರಾದಲ್ಲಿ ಕಪ್ಪು ನಿಲುವಂಗಿ ಧರಿಸಿ ರಾಜನೈತಿಕ ಕಾರ್ಯ ನಿರ್ವಹಿಸುತ್ತಿದ್ದ ವೈರಾಗಿ ಸಾಧುಗಳೆನಿಸಿಕೊಂಡಿದ್ದ ಬಾಬಾ ರಾಮೋದಾರ ದಾಸರು.

ಶ್ರೀಲಂಕಾ ತಲುಪುತ್ತಲೇ ಅವರ ವೇಷ ಬದಲಾಗಿ ಬಿಟ್ಟಿತ್ತು. ವಿಚಾರಗಳೂ ಸಾಕಷ್ಟು ಬದಲಾಗಿದ್ದುವು. ಆದರೆ ಹೆಸರು ಮಾತ್ರ ಹಿಂದಿನದೇ – ರಾಮೋದಾರ ಸಾಧು. ಅವರು ವಿದ್ಯಾಲಂಕಾರ ವಿಹಾರ ವಿದ್ಯಾಪೀಠದಲ್ಲಿ ಸಂಸ್ಕೃತ ಅಧ್ಯಾಪಕರಾಗಿ ನೇಮಕಗೊಂಡಿದ್ದರು. ಆದರೆ ಅವರ ನಿಜವಾದ ಉದ್ದೇಶ ಪಾಲಿ ಬೌದ್ಧ ಸಾಹಿತ್ಯದ ಅಧ್ಯಯನ. ವೇತನದ ಕುರಿತು ಕೇಳಿದರೆ ರಾಮೋದಾರರೆಂದರು "ವೇತನದ ಅಗತ್ಯವಿಲ್ಲ. ಊಟ, ಉಡುಗೆ ಮತ್ತು ಪುಸ್ತಕಗಳು ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ಪಾಲಿ ಅಧ್ಯಯನಕ್ಕಾಗಿ ಉತ್ತಮ ವ್ಯವಸ್ಥೆಯಾದರೆ ಸಾಕು."

ರಾಮೋದಾರ ಸಾಧು–ನಂತರದ ರಾಹುಲ ಸಾಂಕೃತ್ಯಾಯನ–ಶ್ರೀಲಂಕೆಯಲ್ಲಿ ಸುಮಾರು ಹದಿನೆಂಟು ತಿಂಗಳ ಕಾಲ ಇದ್ದರು. ಅವರು ಗಂಭೀರ ಅಧ್ಯಯನ ಹಾಗೂ ಅಧ್ಯಾಪನದಲ್ಲಿ ಕಳೆದ ಅವಧಿ ಅದು. ಅಂದಿನ ಅವರ ದಿನಚರಿಯೆಂದರೆ ಬೆಳಿಗ್ಗೆ ಐದು ಗಂಟೆಗೆ ಏಳುವುದು, ಶೌಚ, ಕೈಕಾಲು ತೊಳೆದು, ಬಾವಿಕಟ್ಟೆಗೆ ಹೋಗಿ ಸ್ನಾನ ಮಾಡುವುದು, ಕೆಲ ನಿಮಿಷಗಳಷ್ಟು ಹೊತ್ತು ಶೀರ್ಷಾಸನ. ಈ ಶೀರ್ಷಾಸನ ಹಾಗೂ ಸಂಜೆ ಹೊತ್ತಿನ ಒಂದು ಗಂಟೆಯ ತಿರುಗಾಟ ಅವರ ನಿಯಮಬದ್ಧವಾದ ವ್ಯಾಯಾಮವಾಗಿತ್ತು. ಬ್ರೆಡ್ಡು ಬೆಣ್ಣೆ ಸಕ್ಕರೆ ಬೆರೆಸಿದ ಹಾಲು ಅವರ ಉಪಾಹಾರ. ಮತ್ತೆ ಹನ್ನೊಂದೂವರೆಯ ತನಕ ಓದು ಬರಹದಲ್ಲಿ ಮಗ್ನ. ಮಧ್ಯಾಹ್ನದ ಊಟಕ್ಕೆ ಕತ್ತರಿಸಿ ಬೇಯಿಸಿದ ಆಲೂಗಡ್ಡೆಯ ಮೇಲೆ ಲಿಂಬೆ ಹಣ್ಣು ಹಿಂಡಿ ಮೆಣಸಿನಕಾಳು ಚಿಮುಕಿಸಿ ಪುಷ್ಕಳವಾಗಿ ಹೊಡೆಯುವುದು. ಅಲ್ಲಿನ ಊಟದಲ್ಲಿ ಕೆಂಪು ಮೆಣಸಿನಕಾಯಿಯ ಮತ್ತು ಮಸಾಲೆಯ ಅತಿ ಬಳಕೆ ಅವರಿಗೆ ಆಗುತ್ತಲೇ ಇರಲಿಲ್ಲ.

ಭೋಜನಾನಂತರ ಅವರು ಕುರ್ಚಿಯಲ್ಲಿ ತೂಗಿಕೊಳ್ಳುತ್ತಲೇ ತುಸು ವಿಶ್ರಾಂತಿ ಪಡೆಯುತ್ತಿದ್ದರು. ನಂತರ ಸಂಜೆ ಐದರವರೆಗೂ ಉಚ್ಚ ದರ್ಜೆಯ ವಿದ್ಯಾರ್ಥಿಗಳಿಗೆ ಸಂಸ್ಕೃತ ಮಾಧ್ಯಮದಲ್ಲಿಯೇ ಸಂಸ್ಕೃತವನ್ನು ಬೋಧಿಸುತ್ತಿದ್ದರು. ಅನಂತರ ಒಂದು ಗಂಟೆ ಹೊತ್ತು ಗಾಳಿ ಸಂಚಾರ. ಆರರಿಂದ ರಾತ್ರಿ ಹನ್ನೆರಡು ಗಂಟೆಯ ವರೆಗೆ ಪುನಃ ಸ್ವಂತ ಅಧ್ಯಯನ. ಬೌದ್ಧ ವಿಹಾರಗಳಲ್ಲಿ ರಾತ್ರಿ ಊಟವಿರುವುದಿಲ್ಲ.

ರಾಹುಲರ ಶ್ರೀಲಂಕಾವಾಸದ ಈ ದಿನಚರಿ ಅವರ ಗುರುಬಂಧು ಪೂಜ್ಯ ಭಿಕ್ಷು ಆನಂದ ಕೌಸಲ್ಯಾಯನರ ವಿವರಣೆಯನ್ನು ಆಧರಿಸಿತ್ತು. ಗೌಹಾತಿ ಕಾಂಗ್ರೆಸ್ ಅಧಿವೇಶನದ ನಂತರ ಹರಿನಾಮ ದಾಸ (ಹೊಸ ಹೆಸರು ಬ್ರಹ್ಮಚಾರೀ ವಿಶ್ವನಾಥ) ಛಪರಾಕ್ಕೆ ಹೋಗಿ ಕೆಲ ದಿನ ರಾಮೋದಾರ ಸಾಧುಗಳ ಜೊತೆಗಿದ್ದರು. ಶ್ರೀಲಂಕೆಗೆ ಹೊರಡುವ ಮೊದಲು ರಾಮೋದಾರದಾಸರು ಅವರಿಗಾಗಿ ದೇಶದ ಬೌದ್ಧ ಕ್ಷೇತ್ರಗಳ ಯಾತ್ರಾ ಕಾರ್ಯಕ್ರಮ ಹಾಕಿಕೊಟ್ಟಿದ್ದರು. ಉಡುಗೆಯನ್ನು ಹಳದಿಗೆ ಮಾರ್ಪಡಿಸಿಕೊಂಡು ಕೈಯಲ್ಲಿ ಕಮಂಡಲ ಹಿಡಿದು ಬ್ರಹ್ಮಚಾರೀ ವಿಶ್ವನಾಥರು ಬೋಧಗಯಾ, ನಲಂದಾ, ವೈಶಾಲಿ, ಸಾಂಚಿ, ಅಜಂತಾ–ಎಲ್ಲೋರಾ ಮುಂತಾದ ಅನೇಕ ಕ್ಷೇತ್ರಗಳ ಯಾತ್ರೆ ಮುಗಿಸಿಕೊಂಡು, 1928ರ ಜನವರಿಯಲ್ಲಿ ವಿದ್ಯಾಲಂಕಾರ ವಿಹಾರಕ್ಕೆ ಬಂದು ರಾಮೋದಾರ ಸಾಧುಗಳ ಬಳಿಗೆ ಹೋದರು. ಅವರು ಅಲ್ಲಿ ಮೊದಲೇ ರಾಮೋದಾರ ಸಾಧುಗಳಿಗಿಂತ ಬೌದ್ಧ

ಭಿಕ್ಷುವಾದರು. ಆಮೇಲೆ ಅವರ ಹೆಸರು ಆನಂದ ಕೌಸಲ್ಯಾಯನ ಎಂದಾಯಿತು.

ವಿದ್ಯಾರ್ಥಿಗಳಿಗೆ ಬೋಧಿಸುವುದರ ಜೊತೆಗೆ ರಾಮೋದಾರ ಸಾಧುಗಳ ಸ್ವಂತ ಅಧ್ಯಯನವೂ ಭರದಿಂದ ಸಾಗುತ್ತಿತ್ತು. ಸಂಸ್ಕೃತಕ್ಕೆ ನಿಕಟವಿರುವುದರಿಂದ ಪಾಲಿ ಭಾಷೆ ಅವರಿಗೆ ಸುಲಭವಾಗಿತ್ತು. ಅವರು ಪಾಲಿಯಲ್ಲಿಯೂ ತ್ರಿಪೀಟಿಕಾದ ಅಧ್ಯಯನ ಆರಂಭಿಸಿಬಿಟ್ಟರು. ತ್ರಿಪೀಟಿಕಾದಲ್ಲಿ ಬೌದ್ಧಕಾಲೀನ ಭಾರತದ ಸಮಾಜ, ರಾಜನೀತಿ, ಭೂಗೋಲ ಮೊದಲಾದವುಗಳ ಕುರಿತು ಇರುವ ವಿವರಗಳನ್ನೆಲ್ಲ ತನ್ನ ನೋಟುಬುಕ್ಕಿನಲ್ಲಿ ಬರೆದಿಡುತ್ತ ಹೋದರು. ಐತಿಹಾಸಿಕ ವಿಚಾರಗಳನ್ನು ಅರಿಯುವ ಅವರ ದಾಹ ಹೆಚ್ಚುತ್ತ ಹೋಯಿತು. ಲಂಡನಿನ ಪಾಲಿ ಟೆಕ್ಸ್ಟ್ ಸೊಸೈಟಿಯ ಹಳೆಯ ಜರ್ನಲ್ ಹಾಗೂ ರಾಯಲ್ ಏಶಿಯಾಟಿಕ್‌ನ ಸಿಲೋನ್, ಬಂಗಾಳ ಹಾಗೂ ಮುಂಬಯಿ ಶಾಖೆಗಳ ಹಳೆಯ ಜರ್ನಲ್‌ಗಳನ್ನು ಅವರು ಓದಿದರು. ಇದಕ್ಕಾಗಿಯೇ ಮೊದಲು ಅವರು ಪ್ರತಿ ಭಾನುವಾರ ಕೊಲಂಬೋಕ್ಕೆ ಹೋಗುತ್ತಿದ್ದರು. ನಂತರ ಅಲ್ಲಿನ ಲೈಬ್ರೆರಿ ಗ್ರಂಥಗಳು ಅವರಿಗಾಗಿ ವಿಹಾರಕ್ಕೇ ಬರತೊಡಗಿದುವು.

ಈ ಸಮಯದಲ್ಲಿ ರಾಮೋದಾರ ಸಾಧುಗಳು ಭಾರತದ ಪುರಾತನ ಲಿಪಿಗಳ ಅಧ್ಯಯನಕ್ಕೆ ತೊಡಗಿದರು. 'ಎಪಿಗ್ರಾಫಿಕಾ ಇಂಡಿಕಾ'ದ ಎಲ್ಲ ಭಾಗಗಳನ್ನೂ ಓದಿ ರಾಶಿ ಹಾಕಿದರು. ವಿದ್ಯಾಲಂಕಾರಕ್ಕೆ ಅದೇ ಸಮಯಕ್ಕೆ ಬಂದ ಜರ್ಮನಿಯ ಪ್ರೊ. ರುಡಾಲ್ಫ್ ಓಟ್ಟೋ, ರಾಮೋದಾರ ಸಾಧುಗಳೊಡನೆ ಮಾತುಕತೆ ನಡೆಸಿದರು. ಅವರು ಯಾವ ವಿಶ್ವವಿದ್ಯಾಲಯದ ವಿದ್ಯಾರ್ಥಿಯೂ ಅಲ್ಲವೆಂದು ತಿಳಿದು ಬೆಕ್ಕಸ ಬೆರಗಾದರು.

ಶ್ರೀಲಂಕಾದಲ್ಲಿ ಇದ್ದಾಗಲೇ ರಾಮೋದಾರ ಸಾಧು "ಸರಸ್ವತೀ"ಗೆ ಧಾರವಾಹಿ ರೂಪದಲ್ಲಿ ಲೇಖನಗಳನ್ನು ಬರೆದರು. ಆ ಲೇಖನಗಳನ್ನು ಓದಿ "ಸರಸ್ವತೀ"ಯ ಅನೇಕ ವಾಚಕರು ಹಿಂದಿಯಲ್ಲಿನ ಈ ಹೊಸ ವಿಭೂತಿ ಯಾರು ಎಂದು ಸಂಪಾದಕರೊಡನೆ ಕೇಳಿದ್ದರು. ರಾಮೋದಾರರು ಆ ಸಮಯದಲ್ಲಿಯೇ "ವಿಶ್ವಮಿತ್ರ" ಹಾಗೂ "ಮಿಲಾಪ" ಪತ್ರಿಕೆಗಳಿಗೂ ಲೇಖನ ಕಳಿಸಿದರು. ಪ್ರತೀ ಶನಿವಾರ ಒಂದಲ್ಲ ಒಂದು ಭಾರತೀಯ ಪತ್ರಿಕೆಗಳಿಗೆ ಲೇಖನ ಬರೆಯುವುದನ್ನು ಅವರು ನಿಯಮವನ್ನಾಗಿ ಮಾಡಿಕೊಂಡಿದ್ದರು- ಎನ್ನುತ್ತಾರೆ ಭಿಕ್ಷು ಆನಂದ ಕೌಸಲ್ಯಾಯನ. ರಾತ್ರಿ ಹನ್ನೆರಡು ಗಂಟೆಗೆ ಬರವಣಿಗೆ ಮುಗಿಯುತ್ತಿತ್ತು. ಆ ಕೂಡಲೇ ಅದನ್ನು ಕವರಿನಲ್ಲಿ ಬಂದು ಮಾಡಿ ಹತ್ತಿರದ ಅಂಚೆ ಪೆಟ್ಟಿಗೆಗೆ ಹಾಕಿ ಬರುತ್ತಿದ್ದರು. "ಒಂದು ರೀತಿಯಲ್ಲಿ 1927ನೇ ಇಸವಿಯಲ್ಲಿಯೇ ನನ್ನ ಸಾಹಿತ್ಯಿಕ ಜೀವನ ಆರಂಭವಾಯಿತು" ಎಂದು ಬರೆದಿದ್ದಾರೆ ರಾಹುಲಜೀ. ಆಗಲೇ ಅವರು ಟಿಬೇಟ್ ಮತ್ತು ಫ್ರೆಂಚ್ ಭಾಷೆಗಳನ್ನು ಕಲಿಯತೊಡಗಿದ್ದರು. ಗಾಢ ಹಾಗೂ ವ್ಯಾಪಕ ಅಧ್ಯಯನ ಅವರಲ್ಲಿ ವೈಜ್ಞಾನಿಕ ದೃಷ್ಟಿಕೋನವನ್ನು ಬೆಳೆಸಿತ್ತು. ಶ್ರೀಲಂಕಾವಾಸ ಅವರಲ್ಲಿ ದೇವರ ಮೇಲಿನ ವಿಶ್ವಾಸವನ್ನು ಅಂತ್ಯಗೊಳಿಸಿತ್ತು. ಊಟದ ವಿಚಾರದಲ್ಲಿ ಸಾಕಷ್ಟು ಸ್ವಾತಂತ್ರ್ಯವಿತ್ತು. ಮಾನವತೆಯ ಇಕ್ಕಟ್ಟಿನ ಬಂಧನವನ್ನು ಹರಿಸಿಬಿಟ್ಟಿತ್ತು. "ದೇವರು ಮತ್ತು ಬುದ್ಧ ಒಟ್ಟಿಗೇ ಇರಲು ಸಾಧ್ಯವಿಲ್ಲ. ಇದು ಸ್ಪಷ್ಟವಾಯಿತು, ಅಲ್ಲದೆ ದೇವರೆಂಬುದು ಕೇವಲ ಕಾಲ್ಪನಿಕ ವಸ್ತುವೆಂಬುದೂ ಸ್ಪಷ್ಟವಾಯಿತು......ಈಗ ನನಗೆ ಡಾರ್ವಿನ್ನನ ವಿಕಾಸವಾದದ ಸತ್ಯ ತಿಳಿಯತೊಡಗಿತು. ಮಾರ್ಕ್ಸ್‌ವಾದದ ಯಥಾರ್ಥತೆ ಹೃದಯ ಮತ್ತು ಮಿದುಳು ಪ್ರವೇಶಿಸುತ್ತಿರುವುದರ ಅರಿವಾಗತೊಡಗಿತು."

ಶ್ರೀಲಂಕಾ ವಾಸದಲ್ಲೇ ರಾಮೋದಾರ ಸಾಧು ಮತ್ತೊಂದು ಕೆಲಸ ಮಾಡಿದರು. ಬೌದ್ಧ ದಾರ್ಶನಿಕ ವಸುಬಂಧುವಿನ (400ಇ) "ಅಭಿಧರ್ಮಕೋಶ" ದ ಖಂಡಿತ ಅಂಶಗಳನ್ನು ಫ್ರೆಂಚ್ ಅನುವಾದದಿಂದ ಪೂರ್ತಿಗೊಳಿಸಿ ಅದರ ಮೇಲೆ ಸಂಸ್ಕೃತ ಟೀಕೆಯನ್ನು ಬರೆದರು.

ತ್ರಿಪೀಟಿಕಾದ ಅಧ್ಯಯನ ಪೂರ್ತಿಗೊಂಡಿತು; ವಿದ್ಯಾಲಂಕಾರ ವಿಹಾರ 1928 ಸೆಪ್ಟೆಂಬರಿನಲ್ಲಿ ರಾಮೋದಾರರಿಗೆ 'ತ್ರಿಪೀಟಿಕಾಚಾರ್ಯ' ಉಪಾಧಿಯನ್ನು ನೀಡಿ ಗೌರವಿಸಿತು. ಆದರೆ ರಾಮೋದಾರ ಸಾಧು ತನ್ನ ಬೌದ್ಧಸಾಹಿತ್ಯ ಅಧ್ಯಯನವಿನ್ನೂ ಅಪೂರ್ಣವೆಂದೇ ತಿಳಿದರು. ಭಾರತದಿಂದ ಮರೆಯಾದ ಸಂಸ್ಕೃತ ಬೌದ್ಧ ಗ್ರಂಥಗಳ ಟಿಬೇಟೀ ಅನುವಾದವನ್ನು ಓದಲು ಅವರು ಟಿಬೆಟ್‌ಗೆ ತೆರಳಲು ನಿರ್ಧರಿಸಿದರು. ಹೀಗಾಗಿ ಅವರು ಆಗ ಭಿಕುವಾಗಲಿಲ್ಲ. ಅವರದೇ ಪ್ರೇರೇಪಣೆಯಿಂದ ಆನಂದಜೀ ಈಗಾಗಲೇ ಶ್ರಮಣರಾಗಿ ಬಿಟ್ಟಿದ್ದರು.

1928ರ ಡಿಸೆಂಬರ್ ಒಂದರಂದು, ಭಿಕ್ಷು ಆನಂದ ಕೌಸಲ್ಯಾಯರನ್ನು ವಿದ್ಯಾಲಂಕಾರ ವಿಹಾರದಲ್ಲಿಯೇ ಬಿಟ್ಟು ರಾಮೋದಾರ ದಾಸ ಸಾಧು ಭಾರತಕ್ಕೆ ಹೊರಟಾಗ, ನಾಯಕಪಾದ ಧರ್ಮಾನಂದ ಮಹಾಸ್ಥವಿರರ ಕಣ್ಣುಗಳು ಹನಿಗೂಡಿದವು.

ರಾಮೋದಾರ ಸಾಧು ಪುಣೆ, ಕಾರ್ಲಿ, ಎಲ್ಲೋರಾ-ಅಜಂತಾ, ಸಾಂಚಿ ಮುಂತಾದೆಡೆ ಸಂಚಾರ ಮಾಡುತ್ತಾ ಬುಂದೇಲಖಂಡ ತಲುಪಿದರು. ಈಗವರು ಓರ್ವ ಬೌದ್ಧ ಪುರಾವಿದರಂತೆಯೇ ಯಾತ್ರೆ ಮಾಡುತ್ತಿದ್ದರು. ಮುಂದಿನ ಪ್ರಯಾಣಕ್ಕಾಗಿ ಪುನಃ ಉಣ್ಣೆಯ ನಿಲುವಂಗಿ ಧರಿಸಿದರು, ಕಾಷಾಯ ವರ್ಣದ ಒಂದು ಮುಚ್ಚು ಜೋಳಿಗೆ ಕೈಗೆತ್ತಿಕೊಂಡರು. ಸಂಕಾಸ್ಯ, ಕೌಶಾಂಬಿ, ಶ್ರಾವಸ್ತೀ, ಸಾರಾನಾಥ ಮುಂತಾದ ಬೌದ್ಧ ಕ್ಷೇತ್ರಗಳನ್ನು ಸಂದರ್ಶಿಸುತ್ತ ಬನಾರಸಿಗೆ ಹೋದರು. ಕಾಶೀ ವಿದ್ಯಾಪೀಠ 'ಅಭಿಧರ್ಮಕೋಶ'ವನ್ನು ಅಚ್ಚು ಮಾಡಲು ಒಪ್ಪಿಕೊಂಡಿತಾಗಿ ಅವರಿಗೆ ಸ್ವಲ್ಪ ಹಣವೂ ಸಿಕ್ಕಿತು.

ಮತ್ತೆ ಛಪರಾ ದಾರಿಯಾಗಿ ಪಾಟ್ನಾ ತಲುಪಿದರು. ಅಲ್ಲಿ ಪಂಡಿತ ಜಯಚಂದ್ರ ವಿದ್ಯಾಲಂಕಾರ ಮತ್ತು ಡಾ। ಕಾಶೀಪ್ರಸಾದ ಜೈಸ್ವಾಲರನ್ನೂ ಭೇಟಿ ಮಾಡಿದರು.

ರಾಮೋದಾರ ಸಾಧು ಭಾರತ, ನೇಪಾಲ ಮತ್ತು ಟಿಬೆಟ್ ಈ ಮೂರು ದೇಶದ ಸರಕಾರಗಳ ಕಣ್ಣಿಗೆ ಮಣ್ಣೆರಚಿ, ಲಾಸಾ ತಲುಪಬೇಕಿತ್ತು. ಅವರು ರಕ್ಸೌಲ್ ತಲುಪಿದ್ದಾಯಿತು. ಶಿವರಾತ್ರಿ (1929) ಸಮಯ ಸುಲಭವಾಗಿ ರಹದಾರಿ ಸಿಗುತ್ತದೆಯಾದ್ದರಿಂದ ರಾಮೋದಾರ ಸಾಧು ಪರಿಚಿತ ಮಾರ್ಗದಲ್ಲೇ ಪ್ರಯಾಣಿಸಿ ಥಾಪಾಥಲ್ಲೀಯಲ್ಲಿನ (ಕಾಠ್ಮಂಡೂ) ವೈರಾಗೀ ಮಠವನ್ನು ತಲುಪಿದರು.

ಅವರ ಜಿವನದ ಸಮಸ್ತ ಯಾತ್ರೆಗಳಲ್ಲಿಯೇ ಅತ್ಯಂತ ಅಧಿಕ ಸಾಹಸಪೂರ್ಣ ಮತ್ತು ಅಪಾಯದ ಯಾತ್ರೆ-ಲಾಸಾದ ಪ್ರಥಮ ಯಾತ್ರೆ-ಅಲ್ಲಿಂದ ಪ್ರಾರಂಭವಾಯಿತು.

# ಪ್ರಥಮ ಟಿಬೆಟ್ ಯಾತ್ರೆ

ರಾಹುಲರು ತಮ್ಮ 'ಜೀವನ-ಯಾತ್ರಾ'ವನ್ನು ಸಾಕಷ್ಟು ವಿಸ್ತಾರವಾಗಿ ಬರೆದಿದ್ದರೂ, ಆ ಕುರಿತು ಅನೇಕ ಕಲ್ಪನೆಗಳಿವೆ. ಅದರಲ್ಲಿ ಒಂದೆಂದರೆ ಅವರು ತಮ್ಮ ಪ್ರಥಮ ಟಿಬೆಟ್ ಯಾತ್ರೆಯಲ್ಲಿ ತಮಗೆ ಸಂಪೂರ್ಣ ಅಪರಿಚಿತವಾದ, ನೇಪಾಳೀಯರಿಗೂ ದುರ್ಗಮವಾದ ಮಾರ್ಗದಲ್ಲಿ ಪಯಣಿಸಿ ಲಾಸಾ ತಲುಪಿದರು ಎಂಬುದು. ಹಾಗೇನಲ್ಲ, ಆ ಮಾರ್ಗ ದುರ್ಗಮವಾಗಿತ್ತೇನೋ ನಿಜ. ಆದರೆ ಅದು ನೇಪಾಳೀ ಹಾಗೂ ಟಿಬೆಟಿಯರಿಗೆ ಮಾತ್ರವಲ್ಲ, ಭಾರತೀಯರಿಗೂ ಕೂಡ ಶತಮಾನಗಳಿಂದ ಬಹಳ ಚೆನ್ನಾಗಿ ಪರಿಚಿತವಾಗಿದ್ದ ಮಾರ್ಗ.

ಕಾಲಿಂಪ್ಪೋಂಜನಿಂದ ಫರಿ ಮತ್ತು ಗ್ಯಾನಜೇ ಮೂಲಕ ಲಾಸಾ ತಲುಪುವ ಮಾರ್ಗ ಸುಗಮವಾಗುವ ಮುಂಚೆ ಮಧ್ಯದೇಶದಿಂದ (ಉತ್ತರ ಪ್ರದೇಶ ಮತ್ತು ಬಿಹಾರ) ಟಿಬೇಟಿಗೆ ಹೋಗುವ ಮುಖ್ಯ ಮಾರ್ಗ ನೇಪಾಳದ ಮೂಲಕವೇ ಇತ್ತು. ನೇಪಾಳದ ಮಾತ್ರವಲ್ಲ ಭಾರತದ ಸಾಮಾನು-ಸರಂಜಾಮುಗಳೂ ಈ ಮಾರ್ಗವಾಗಿಯೇ ಟಿಬೇಟು ತಲುಪುತ್ತಿದ್ದುವು. ನಾಲಂದಾದ ಆಚಾರ್ಯ ಶಾಂತರಕ್ಷಿತ (ಕ್ರಿ.ಶ.8ನೇ ಶತಮಾನ) ಈ ದಾರಿಯಾಗಿಯೇ ಎರಡು ಬಾರಿ ಲಾಸಾಕ್ಕೆ ಹೋಗಿದ್ದರು ಎರಡನೆಯ ಸಲವಂತೂ ಎಪ್ಪತ್ತೈದು ವರ್ಷದ ವೃದ್ಧಾವಸ್ಥೆಯಲ್ಲಿ ಅವರ ನಂತರ ನೂರಾರು ಭಾರತೀಯ ಬೌದ್ಧ ಪಂಡಿತರು ಟಿಬೇಟಿಗೆ ಹೋದದ್ದು, ನೂರಾರು ಟಿಬೇಟೀಯರು ಅಧ್ಯಯನಕ್ಕಾಗಿ ಬೌದ್ಧ ಕ್ಷೇತ್ರಗಳ ಯಾತ್ರೆಗಾಗಿ ಭಾರತಕ್ಕೆ ಬಂದದ್ದು ಈ ಮಾರ್ಗವಾಗಿಯೇ.

ಕಾಲಿಂಪ್ಪೋಜ-ಫರಿಯ ರಸ್ತೆ ಸ್ವಲ್ಪ ಸರಳವಾದದ್ದು. ಆದರೆ ಅದರ ಮೇಲೆ ಇಂಗ್ಲಿಷರ ತೀವ್ರ ಕಾವಲಿನ ಕಾರಣ ರಾಹುಲರು ಅದನ್ನು ಆರಿಸಿಕೊಳ್ಳುವಂತಿರಲಿಲ್ಲ. 1929ರ ಮಾರ್ಚ್ ಸುರುವಿನಲ್ಲಿ, ಮಹಾಶಿವರಾತ್ರಿಯ ಸಂದರ್ಭದ ಲಾಭ ಪಡೆದು, ಅವರು ನೇಪಾಳ ತಲುಪಿದರು. ಹೀಗೆ ಬ್ರಿಟಿಷ್ ಆಡಳಿತದ ಗಡಿಯಾಚೆ ಬಂದು ಬಿಟ್ಟರು. ಆದರೆ ಈಗ ಇರುವುದು ನೇಪಾಳೀ ಸರಕಾರದ ಭಯ. ಮಹಾಶಿವರಾತ್ರಿಯ ನಂತರ ರಾಹುಲರು ಸಿಕ್ಕಿಬಿದ್ದದ್ದೇ ಆದರೆ ಅವರನ್ನು ಪುನಃ ಭಾರತಕ್ಕೆ ಕಳಿಸುತ್ತಿದ್ದರು. ಹೀಗಾಗಿ ಅಜ್ಞಾತವಾಸದಲ್ಲಿದ್ದುಕೊಂಡೇ ಹೇಗೋ ನೇಪಾಳದ ರಸ್ತೆಗಳನ್ನು ಕ್ರಮಿಸಿ ಟಿಬೇಟಿನ ಸೀಮೆಯೊಳಗೆ ಪ್ರವೇಶಿಸಬೇಕಾಗಿತ್ತು. ಈ ರೀತಿಯಾಗಿಯೇ ಲಾಸಾವರೆಗಿನ ದೀರ್ಘ ಪ್ರಯಾಣವನ್ನೂ ಮುಗಿಸಬೇಕಾಗಿತ್ತು.

ರಾಹುಲರು ಈಗ ಥಾಪಾಥಲ್ಲೀಯ ವೈರಾಗೀ ಮಠ ಬಿಟ್ಟು ಬೇರೆಲ್ಲಾದರೂ ಅಜ್ಞಾತವಾಗಿದ್ದುಕೊಂಡು ನೇಪಾಳ ಟಿಬೆಟ್ ಗಡಿಯ ತನಕ ತಲುಪುವ ವ್ಯವಸ್ಥೆ ಮಾಡಿಕೊಳ್ಳಲೇ ಬೇಕಾಗಿತ್ತು. ಅವರು ಕಾಠ್ಮಂಡೂ ಹತ್ತಿರದ ಮಹಾಬೋಧ ಬೌದ್ಧ ತೀರ್ಥಕ್ಕೆ ಹೋದರು. ಆ ಕಾಲದಲ್ಲಿ ಅಲ್ಲೊಬ್ಬ ಬಹಳ ದೊಡ್ಡ ಲಾಮಾ-ಡುಕ್ಪಾಲಾಮಾ-ತಮ್ಮ ಮೂವತ್ತು ನಲ್ವತ್ತು ಶಿಷ್ಯ ಶಿಷ್ಯೆಯರ ಜೊತೆಗೆ

ನೆಲೆಸಿದ್ದರು. ಅವರಲ್ಲಿ ರಾಹುಲರಿಗೆ ಪರಿಚಿತನಾಗಿದ್ದ ರಿನ್-ಛೇನ್ ಎಂಬ ಹೆಸರಿನ ತರುಣ ಕೂಡ ಇದ್ದ. ಅವನ ಸಹಾಯದಿಂದ ರಾಹುಲರು ಡುಕ್ಪಾಲಾಮಾರವರನ್ನು ಭೇಟಿ ಮಾಡಿದರು. ರಾಹುಲರು ಲಡಾಖ್‌ನ ತಮ್ಮ ಗುರುತಿನವರ ಪತ್ರಗಳನ್ನು ಅವರಿಗೆ ತೋರಿಸಿ "ನಾನು ಶ್ರೀಲಂಕಾದಲ್ಲಿದ್ದುಕೊಂಡು ತ್ರಿಪೀಟಕಾದ ಅಧ್ಯಯನ ಮಾಡಿದ್ದೇನೆ. ಆದರೆ ಬೌದ್ಧ ಧರ್ಮದ ಎಲ್ಲಾ ಗ್ರಂಥಗಳು ಅಲ್ಲಿ ಸಿಗುತ್ತಿಲ್ಲ. ಆದ್ದರಿಂದ ಅವನ್ನು ಓದಿಕೊಳ್ಳಲು ಟಿಬೇಟಿಗೆ ಹೋಗಲು ಬಯಸುತ್ತಿದ್ದೇನೆ. ಭಾರತದಲ್ಲಿ ಬೌದ್ಧ ಧರ್ಮದ ಪ್ರಚಾರ ಮಾಡಬೇಕೆಂದಿದ್ದೇನೆ. ಈ ಪುಣ್ಯಕಾರ್ಯಕ್ಕೆ ಸಹಾಯ ಮಾಡಿ" ಎಂದು ನಿವೇದಿಸಿಕೊಂಡರು.

ಡುಕ್ಪಾಲಾಮಾ ಸಂತೋಷ ವ್ಯಕ್ತಪಡಿಸಿ "ನೀವು ನಮ್ಮ ಜೊತೆಯಲ್ಲಿರಿ. ಕೆಲ ದಿನ ಇಲ್ಲಿದ್ದು ನಾವು ಟಿಬೆಟಿನ ಕಡೆ ತೆರಳುವವರಿದ್ದೇವೆ. ನೀವು ಸಂತೋಷವಾಗಿ ನಮ್ಮ ಜೊತೆಗೆ ಬರಬಹುದು"ಎಂದರು. ರಾಹುಲರಿಗೆ ತುಂಬ ಸಂತೋಷವಾಯಿತು. ತಾವು ಗುರಿ ಮುಟ್ಟಿದಂತೆಯೇ ಎಂದುಕೊಂಡರು.

ಒಂದು ಬೆಳಿಗ್ಗೆ ತಮ್ಮ ಕೆಲವೇ ಸಾಮಾನುಗಳನ್ನು ಹಿಡಿದುಕೊಂಡು ರಾಹುಲರು ಮಹಾಬೋಧಾ ಸ್ತೂಪಕ್ಕೆ ಹೋದರು. ವಿಶಾಲವಾದ ಸ್ತೂಪದ ನಾಲ್ಕು ದಿಕ್ಕಿನಲ್ಲಿ ಎರಡು ಮೂರು ಕಟ್ಟಡಗಳು, ಅವುಗಳ ಕೆಳ ಅಂತಸ್ತಿನಲ್ಲಿ ಅಂಗಡಿಗಳು. ಮಾಳಿಗೆಯಲ್ಲಿ ಟಿಬೆಟೀ ಬೌದ್ಧಯಾತ್ರಿಗಳು ತಂಗುತ್ತಿದ್ದರು. ಕೆಲ ನೇಪಾಳೀಯರೂ ಅಲ್ಲಿ ಮನೆಮಾಡಿಕೊಂಡಿದ್ದರು. ರಾಹುಲರಿಗೆ ಮೊದಲು ಒಬ್ಬ ನೇಪಾಳೀಯನ ಮನೆಯಲ್ಲಿ ತಂಗಲು ವ್ಯವಸ್ಥೆ ಮಾಡಿದ್ದರು. ಆದರೆ ಅಲ್ಲಿ ಯಾರೂ ಅವರನ್ನು ಗುರುತು ಹಿಡಿಯಬಹುದು ಅನಿಸಿತು. ಆಗ ರಿನ-ಛೇನ, ಲಾಮಾನ ಶಿಷ್ಯ-ಶಿಷ್ಯೆಯರು ವಾಸಿಸುವ ಮನೆಯಲ್ಲಿಯೇ, ರಾಹುಲರ ವಾಸಕ್ಕೆ ವ್ಯವಸ್ಥೆಯನ್ನು ಮಾಡಿದ.

ಈಗ ರಾಹುಲರು ಟಿಬೇಟಿಯರ ವೇಷದಲ್ಲಿದ್ದರು. ಟಿಬೇಟಿಯರು ಧರಿಸುತ್ತಿದ್ದ ಹಿಂದಿನ ಕಾಲದ ಒಂದು ಉದ್ದ ನಿಲುವಂಗಿ ಮತ್ತು ಉದ್ದನೆಯ ಜೋಡು ಕೊಂಡುಕೊಂಡಿದ್ದರು. ಗಡ್ಡಮೀಸೆ ಬೆಳೆಸಿದ್ದರು. ಒಗೆತ-ಸ್ನಾನ ಕೂಡ ಬಿಟ್ಟು ಬಿಟ್ಟರು. ಮುಖದಲ್ಲಿ ಕೊಳೆ ಕರೆಗಟ್ಟತೊಡಗಿತು. ಆದರೂ ತಮ್ಮ ಭಾರತೀಯ ಮುಖಚರ್ಯೆ ಹಾಗೂ ಉನ್ನತ ನಿಲುವಿನ ಕಾರಣ ಎಲ್ಲಾದರೂ ಯಾರಾದರೂ ಗೊತ್ತು ಹಿಡಿದಾರು ಎಂಬ ಭಯ ಸದಾ ಅವರನ್ನು ಕಾಡುತ್ತಿತ್ತು. ಆದುದರಿಂದ ಹಗಲು ಮನೆಯಿಂದ ಹೊರಗೇ ಹೋಗುತ್ತಿರಲಿಲ್ಲ. ರಾತ್ರಿ ಹೊರ ಬಂದು ಸ್ತೂಪಕ್ಕೆ ಸುತ್ತು ಹಾಕುತ್ತಿದ್ದರು. ಈ ರೀತಿ ಒಂದು ತಿಂಗಳಿಗೂ ಹೆಚ್ಚು ಕಾಲ ಮಹಾಬೋಧಾ (ಕಾಠ್ಮಂಡೂ)ದಲ್ಲಿ ಕಳೆಯಿತು.

ಕೆಲದಿನಗಳಲ್ಲಿಯೇ ಡುಕ್ಪಾಲಾಮಾನ ಸೋದರಿ, ಅವಳ ಮಗಳು ಮತ್ತು ಆರು ವರ್ಷದ ಅವಳ ಮಗ ತಿನ್-ಜನ್‌ರೊಂದಿಗೆ ಆತ್ಮೀಯತೆ ಬೆಳೆಯಿತು. ಲಾಮಾನ ಸೋದರಿ ಮತ್ತು ಸೋದರ ಸೊಸೆ ರಾಹುಲರಿಗೆ ಅಡುಗೆ ಮಾಡಿ ಬಡಿಸುತ್ತಿದ್ದರು. ತಿನ್-ಜನ್‌ನ ಗೆಳೆತನದಿಂದ ಆದ ಒಂದು ಲಾಭವೆಂದರೆ ಟಿಬೇಟೀ ಭಾಷೆಯನ್ನು ಕಲಿತಿದ್ದು, ಡುಕ್ಪಾಲಾಮಾನ ಶಿಷ್ಯ ಶಿಷ್ಯೆಯರು ಸ್ತೂಪದ ಬಳಿಯಲ್ಲಿ ಅಕ್ಷರ ಕೊರೆದ ಮರದಚ್ಚನ್ನು ಕೈಕಾಗದದ ಮೇಲೆ ಒತ್ತುತ್ತಾ ಧಾರ್ಮಿಕ ಗ್ರಂಥಗಳನ್ನು ಅಚ್ಚು ಮಾಡುತ್ತಾ ಇರುತ್ತಿದ್ದರು. ಆಗ ರಾಹುಲರು ಕೊಠಡಿಯಲ್ಲಿ ಕುಳಿತು ಒಬ್ಬರೇ ಕುಳಿತು ಇಂಗ್ಲೀಷ್ ಮಾಧ್ಯಮದ ಮೂಲಕ ಟಿಬೇಟೀ ಬೋಧೆಯನ್ನು ಓದುತ್ತ ಇರುತ್ತಿದ್ದರು. ಡುಕ್ಪಾಲಾಮಾನ ಆಚರಣೆಗಳನ್ನು, ಶಿಷ್ಯ ಶಿಷ್ಯೆಯರ ಗತಿ-ವಿಧಿಗಳನ್ನು ನೋಡಿ ಗ್ರಹಿಸುತ್ತ ಇದ್ದರೂ ಅದರಲ್ಲೇನೂ ಅವರಿಗೆ ಅಂತಹ ಆಸಕ್ತಿ ಇರಲಿಲ್ಲ.

ರಾಹುಲರು ದಿನಾ ಕೇಳುತ್ತಿದ್ದ ಪ್ರಶ್ನೆ – ಹೊರಡುವುದು ಯಾವಾಗ? ದಿನಾ ನಾಳೆ – ನಾಡಿದ್ದು ಎಂದಾಗುತ್ತಿತ್ತು. ಒಂದು ದಿನ ಡುಕ್ಪಾಲಾಮಾ ಈಗ ಕಿಂದೋಲ ವಿಹಾರಕ್ಕೆ ಹೋಗಲಿದ್ದಾರೆಂಬ ಸುದ್ದಿ ತಿಳಿಯಿತು. ಕಿಂದೋಲ ವಿಹಾರ ಕಾಠ್ಮಂಡೂವಿನಿಂದ ಸುಮಾರು ಒಂದೂವರೆ ಕಿಲೋಮೀಟರು ಪಶ್ಚಿಮಕ್ಕೆ ಸ್ವಯಂಭೂ ಮಹಾಸ್ತೂಪದ ಸಮೀಪವಿದೆ.ಕಿಂದೋಲ ವಿಹಾರಕ್ಕೆ ತೆರಳುವ ಮುಂಚೆ ರಾಹುಲರು ಕಾಠ್ಮಂಡೂವಿನಲ್ಲಿ ಧರ್ಮಸಾಹು ಅವರ ಮನೆಗೆ ಹೋಗಿ ಉಳಿದುಕೊಂಡರು. ಧರ್ಮಸಾಹು, ನೇಪಾಳದ ಬೌದ್ಧ ಗೃಹಸ್ಥರಲ್ಲಿ ಭಾರೀ ಪ್ರತಿಷ್ಠಿತರು. ಟಿಬೆಟಿನಲ್ಲಿ ವ್ಯಾಪಾರ ನಡೆಸಿ ಅವರು ಭಾರೀ ಹಣ ಸಂಪಾದಿಸಿದ್ದರು. ಲಾಸಾದಲ್ಲಿ ಅವರದೊಂದು ಬಹಳ ಹಳೆಯ ಕಾಲದ ಮನೆಯಿತ್ತು. ಆತ ರಾಹುಲರಿಗೆ ಲಾಸಾದ ಕುರಿತು ಅನೇಕ ವಿಚಾರ ತಿಳಿಸಿದರು.

ಕಿಂದೋಲ ವಿಹಾರದಲ್ಲಿ ರಾಹುಲರಿಗೆ ತಂಗಲು ಲಾಮಾರವರ ಪಕ್ಕದ ಕೋಣೆಯಲ್ಲಿ ವ್ಯವಸ್ಥೆಯಾಯಿತು. ಆದರೆ ಅಲ್ಲಿಗೆ ಬಂದ ಸಂದರ್ಶಕರ ದೃಷ್ಟಿ ತಮ್ಮ ಮೇಲೆ ನೆಟ್ಟಾಗ ರಾಹುಲರು ತುಂಬ ಗಾಬರಿಗೊಳ್ಳುತ್ತಿದ್ದರು. ಅಲ್ಲಿನ ವ್ಯವಸ್ಥಾಪಕರಾಗಿದ್ದ ದಸರತನ ಸಾಹುವಿನ ಬಳಿ ತನ್ನ ದಿಗಿಲನ್ನು ಹೇಳಿಕೊಂಡಾಗ ಅಲ್ಲಿಂದ ತುಸು ದೂರದ ಒಂದು ತೋಟದ ಮನೆಯಲ್ಲಿ ಅವರಿಗೆ ವ್ಯವಸ್ಥೆಮಾಡಿದರು. ರಾಹುಲರೆನ್ನುತ್ತಾರೆ "ಈ ಮನೆ ಸಂಪೂರ್ಣ ಪ್ರತ್ಯೇಕವಾಗಿತ್ತು. ಹಲವು ದಿನಗಳಿಂದ ಅದರಲ್ಲಿ ಯಾರೂ ವಾಸವಾಗಿರಲಿಲ್ಲ. ನಾನೀಗ ಇಲ್ಲಿನ ಕೋಣೆಯಲ್ಲಿರುತ್ತಿದ್ದೆ. ದಸರತನ ಸಾಹು ಹೊರಗಿಂದ ಕದ ಹಾಕಿಕೊಂಡು ಹೊರಟು ಹೋಗುತ್ತಿದ್ದರು. ಸಂಜೆ ಮುಂಜಾವು ಕತ್ತಲೆಯಲ್ಲಿ ಮಾತ್ರ ಶೌಚ ಮುಂತಾದವಕ್ಕಾಗಿ ಮನೆಯಿಂದ ಹೊರ ಬರುವುದನ್ನು ಬಿಟ್ಟರೆ ರಾತ್ರಿ ಹಗಲು ಇದೊಂದು ಸ್ವಯಂ ಸ್ವೀಕೃತ ಜೈಲು ಏಕಾಂತವಾಗಿತ್ತು."

ಪೂಜೆ ಪುನಸ್ಕಾರ ಜೋರಾಗಿ ನಡೆಯುತ್ತಿತ್ತಾಗಿ ಡುಕ್ಪಾಲಾಮಾ ಹದಿನೈದು ಇಪ್ಪತ್ತು ದಿನ ಕಳೆದರೂ ಕಿಂದೋಲ ವಿಹಾರದಿಂದ ಅಲುಗಾಡುವ ಸುದ್ದಿ ಎತ್ತಲಿಲ್ಲ. ರಾಹುರಿಗೋ, ಇಡೀ ಮನೆಯಲ್ಲಿ ಏಕಾಕಿ ಬಂದಿಯಾಗಿದ್ದು ಇದ್ದು ಸಾಕಾಗಿ ಹೋಗಿತ್ತು. ಲಾಮಾ ಇಲ್ಲಿಂದ ಸೀಮಾಂತ್ಯದಲ್ಲಿರುವ ಎಲ್ಮೋ ಗಾಂವ್‌ಗೆ ಹೋಗಲಿದ್ದಾರೆ ಎಂದು ತಿಳಿದದ್ದೇ ರಾಹುಲರು ಮೊದಲೇ ಅಲ್ಲಿಗೆ ಹೋಗಿ ಬಿಡಲು ತೀರ್ಮಾನಿಸಿದರು. ಎಲ್ಮೋ ಗಾಂವ್‌ಗೆ ಕಾಠ್ಮಂಡೂವಿನಿಂದ ನಾಲ್ಕೈದು ದಿನದ ದಾರಿ. ಅಲ್ಲಿ ತನ್ನನ್ನು ಗುರುತಿಸುವ ಅಪಾಯ ಕಡಿಮೆ ಎಂದು ಅಂದಾಜು ಮಾಡಿದರು. ದಸರತನ ಸಾಹು ಅವರನ್ನು ಅಲ್ಲಿಗೆ ತಲುಪಿಸಲು ಸಿದ್ಧರಾದರು.

ರಾಹುಲರು ಟಿಬೇಟೀ ಉಡುಗೆ, ಕೊಳೆ ಹತ್ತಿದ ಮುಖದಲ್ಲಿದ್ದರೇನೋ ನಿಜ. ಆದರೆ ತನ್ನ ಉನ್ನತ ನಿಲುವು ಹಾಗೂ ಮುಖಚರ್ಯೆಯನ್ನು ಅವರು ಹೇಗೆ ಮರೆಮಾಚಿಕೊಂಡಾರು ? ಎಂತಲೇ ಎಲ್ಮೋಕ್ಕೆ ತೆರಳುವಾಗ ನೇಪಾಳೀ ಪೈಜಾಮಾ, ಬಗಲುಚೀಲ, ಬೊಟ್ಟು ಬೊಟ್ಟಾಗಿರುವ ಕಪ್ಪುಟೊಪ್ಪಿ ಧರಿಸಿದರು. ಕಣ್ಣುಮರೆಸಲು ಕಪ್ಪುಕನ್ನಡಕ ಧರಿಸಿಕೊಂಡರು. ಕಾಲಿಗೆ ಭಟ್ಟೆಯ ಹೊಸ ಬೂಟುಗಳು. ಇವೋ, ಎರಡು ಮೂರು ಕಿಲೋಮೀಟರು ದೂರ ಹೋಗುವುದರೊಳಗೆ ಕಚ್ಚತೊಡಗಿದುವು. ಅನೇಕ ದಿನ ಕೋಣೆಯೊಳಗೇ ಬಂದಿಯಾಗಿ ಕುಳಿತ ಕಾರಣ ಏರು ಹತ್ತಲು ಕಾಲು ಒಲ್ಲೆನುತಿತ್ತು. ಅದೃಷ್ಟಕ್ಕೆ ದಾರಿಯಲ್ಲಿ ಒಬ್ಬ ಗಟ್ಟಿಮುಟ್ಟಾದ ಆಳು ಸಿಕ್ಕಿದ. ಆತ ದುಪ್ಪಟ್ಟು ಕೂಲಿಗೆ ದಸರತನ ಈ "ಕಾಹಿಲೆ ಸಾಥೀ"ಯನ್ನು ಬೆನ್ನಿಗೇರಿಸಿಕೊಂಡು ಸಾಗಲು ಒಪ್ಪಿಕೊಂಡ. ಹೀಗೆ ಕಾಠ್ಮಂಡೂ ಬಿಟ್ಟ ನಾಲ್ಕನೇ ಅಥವಾ ಐದನೇ ದಿನ ಇಬ್ಬರೂ ಪಯಣಿಗರು ಎಲ್ಮೋ ತಲುಪಿದರು ಅಂತಾಯಿತು.

ಟಿಬೇಟೀ ಭಾಷೆಯನ್ನಾಡುವ ಜನರುಳ್ಳ ಎಲ್ಮೋ ಗಾಂವ್, ಸಮುದ್ರ ಮಟ್ಟದಿಂದ ಸುಮಾರು 3000 ಮೀಟರು ಎತ್ತರದಲ್ಲಿ ದೇವದಾರು ವೃಕ್ಷ ಸಮೂಹದ ಸುಂದರ ಭೂಖಂಡದಲ್ಲಿರುವ ಕಾರಣ ರಾಹುಲರು, ಅಲ್ಲಿ ತುಂಬ ಆನಂದಪರವಶರಾದರು. ಜೂನ್ ತಿಂಗಳ ಆರಂಭದ ದಿನಗಳಾಗಿದ್ದವು ಅವು. ಹಿಮದ ಹೆಸರೇ ಇರಲಿಲ್ಲ. ದಸರತನ ಸಾಹು, ರಾಹುಲರನ್ನು ಡುಕ್ಪಾಲಾಮಾ ಅವರ ಶಿಷ್ಯೆಯಾಗಿದ್ದ ಒಬ್ಬ ವೃದ್ಧ ಭಿಕ್ಷುಣಿಯ ಮನೆಯಲ್ಲಿ ಉಳಿಸಿ ಕಾಠ್ಮಂಡೂಗೆ ವಾಪಸಾದರು. ಕೆಲದಿನಗಳ ಬಳಿಕ ಡುಕ್ಪಾಲಾಮಾ ಅವರ ಶಿಷ್ಯ ಮಂಡಲಿಯ ಕೆಲವರು ಎಲ್ಮೋಗೆ ಬಂದು ಸಮೀಪದ ಒಂದು ಬೌದ್ಧ ಮಂದಿರದಲ್ಲಿ ತಂಗಿದಾಗ ರಾಹುಲರು ಅವರನ್ನು ಸೇರಿಕೊಂಡರು. ಈಗ ಅವರು ಪುನಃ ಟಿಭೋಟಿಯಾ (ಟಿಬೆಟ್) ವೇಷದಲ್ಲಿದ್ದರು ಎನ್ನುತ್ತಾರೆ. ಅಲ್ಲಿ ತಿನ್-ಜಿನ್ ಕೂಡ ಹಾಜರಿದ್ದ, ಹೀಗಾಗಿ ಭಾಷಾಭ್ಯಾಸ ಮುಂದರಿಸಲು ಒಳ್ಳೆಯದಾಯಿತು.

ಅಲ್ಲಿ ಡುಕ್ಪಾಲಾಮಾ ಇಲ್ಲದಿದ್ದುದರಿಂದ ರಾಹುಲರಿಗೆ ಊಟ ತಿಂಡಿಗೆ ತೊಂದರೆಯಾದರೂ ತನಗಾಗಿ ಅವರು ಬೇರೆ ವ್ಯವಸ್ಥೆ ಮಾಡಿಕೊಳ್ಳಲಿಲ್ಲ. ಬೆಳಿಗ್ಗೆ ಮುಸುಕಿನ ಜೋಳದ ಮುದ್ದೆ ಹಾಗೂ ಸಂಜೆ ಅದರದೇ ತೆಳ್ಳಗಿನ ರೊಟ್ಟಿ. ಅದರಲ್ಲೇ ದಿನ ಕಳೆಯುತ್ತಿದ್ದರು. ಅಲ್ಲಿ ರಾಹುಲರು ಹಸ್ತ ನೋಡಿ ಭವಿಷ್ಯ ಹೇಳುವ ಲಾಮಾ ಎಂದೇ ಪ್ರಸಿದ್ಧರಾದರು.

ಡುಕ್ಪಾಲಾಮಾ ತಾನು ಖಂಡಿತ ಎಲ್ಮೋಗೆ ಬರುತ್ತೇನೆಂದು ಮಾತುಕೊಟ್ಟಿದ್ದರು. ಆದರೆ ಒಂದು ದಿನ ಸಂಜೆ ಲಾಮಾರವರ ಇಬ್ಬರು ಶಿಷ್ಯರು ಲಾಮಾ ಈ ಮಾರ್ಗ ಬಿಟ್ಟು ಸೀದಾ ಗ್ಯೇನಮ್ ಕಡೆಗೆ ಹೊರಟಿದ್ದಾರೆ ಎಂದು ಸುದ್ದಿ ಕೊಟ್ಟರು. ಕೇಳಿ ರಾಹುಲರು ಸ್ತಬ್ಧರಾದರು. ಸ್ಥಿತಿ ಹಾಗಿತ್ತು. ನೇಪಾಳೀ ಜನ ಕುತ್ತೀ ಎಂದು ಕರೆಯುವ ಗ್ಯೇನಮ್ ಟಿಬೇಟಿನ ಗಡಿಯೊಳಗೆ ಇದೆ. ವ್ಯಾಪಾರದ ದೃಷ್ಟಿಯಿಂದ ಪ್ರಾಚೀನ ಕಾಲದಿಂದಲೂ ಗ್ಯೇನಮ್‌ಗೆ ಬಹಳ ದೊಡ್ಡ ಮಹತ್ವದ ಸ್ಥಳವಾಗಿತ್ತು. ಟಿಬೆಟ್‌ನ ಜನರು ತಮ್ಮ ಖಾರಿ ಝರಿಗಳ ಉಪ್ಪನ್ನು ಗ್ಯೇನಮ್‌ಗೆ ತರುತ್ತಿದ್ದರು ಮತ್ತು ಈಚೆಯಿಂದ ನೇಪಾಳೀ ಜನರು ಭತ್ತ, ಬಟ್ಟೆ ಮುಂತಾದ ವಸ್ತುಗಳನ್ನು ಅಲ್ಲಿಗೇ ಒಯ್ಯುತ್ತಿದ್ದರು. ಅವನ್ನು ಮಾರಿ ನೇಪಾಳೀಯರು ಉಪ್ಪುಕೊಂಡು ತರುತ್ತಿದ್ದರು.

ಡುಕ್ಪಾಲಾಮಾ ಬೇರೆ ದಾರಿಯಾಗಿ ಗ್ಯೇನಮ್ ಕಡೆಗೆ ಹೊರಟಿದ್ದಾರೆ ಎಂದು ಕೇಳಿ, ರಾಹುಲರಿಗೆ ತುಂಬಾ ಬೇಸರವಾಯಿತು. ತಾನೂ ಕೂಡಲೇ ಗ್ಯೇನಮ್ ಕಡೆ ಹೊರಟು ಬಿಡಲು ನಿರ್ಧರಿಸಿದರು. ಎಲ್ಮೋರ ಒಬ್ಬ ರೈತ ಇಮ್ಮಡಿ ಕೂಲಿಗೆ ಜೊತೆಯಲ್ಲಿ ಬರಲು ಬಹಳ ಕಷ್ಟದಿಂದ ಒಪ್ಪಿಕೊಂಡ. ಎರಡು ದಿನ ಪಯಣಿಸಿ ಕಾಠ್ಮಂಡೂವಿನಿಂದ ಗ್ಯೇನಮ್‌ಗೆ ಹೋಗುವ ದಾರಿಗೆ ಮುಟ್ಟಿಕೊಂಡಾಗ ಡುಕ್ಪಾಲಾಮಾ ಅವರ ಸುದ್ದಿ ಸಿಕ್ಕಿತು. ನಂತರ ಒಂದು ದಿನದ ಏರುದಾರಿ ಸವೆದ ಬಳಿಕ ಒಂದು ಹಳ್ಳಿಯಲ್ಲಿ ಅಂತೂ ಡುಕ್ಪಾಲಾಮಾರನ್ನು ತಲುಪಿಕೊಂಡರು. ಲಾಮಾ ಏನೂ ಆಗಿಯೆ ಇಲ್ಲವೆಂಬಂತೆ ನಗುತ್ತಾ ಅವರನ್ನು ಸ್ವಾಗತಿಸಿದರು.

ಈಗ ಡುಕ್ಪಾಲಾಮಾ ಅವರ ಜೊತೆ ಪ್ರಯಾಣ ಮುಂದುವರಿದು ಭೋಟ್‌ಕೋಸೀಯ ತೀರ ತಲುಪಿದರು. ಮುಂದೆ ತಾತಪಾನೀಯಲ್ಲಿ ಬಿಸಿನೀರಿನ ಬುಗ್ಗೆ ಇದ್ದಿತಾದರೂ ಕೊಳೆ ತೊಳೆಯಬಾರದೆಂದು ರಾಹುಲರು ಅಲ್ಲಿ ಸ್ನಾನ ಮಾಡಲಿಲ್ಲ. ನಂತರದ ಏರು ದಾರಿಯ ಬಳಿಕ ನೇಪಾಳದ ಗಡಿಯಲ್ಲಿರುವ ಸೈನ್ಯದ ಚೌಕಿಯನ್ನು ತಲುಪಿದರು. ಪಹರೆಯ ಸಿಪಾಯಿ ಅವರನ್ನು ತಡೆದ. ಇನ್ನೊಬ್ಬ ಸಿಪಾಯಿ ಸುಬೇದಾರ ಸಾಹೇಬರನ್ನು ಕರೆಯಲು ಹೋದ.

ರಾಹುಲರ ಎದೆ ಡವಗುಡತೊಡಗಿತು. ಅವರು ತಮ್ಮ ಹೆಸರು ಛೇವಂಗ್; ಹುಟ್ಟಿದೂರು ಖುನ್ನೂ (ರಾಮಪುರ-ಬುಶಹರ) ಎಂದು ಇಟ್ಟುಕೊಂಡಿದ್ದರು. ಆದರೆ ಎಲ್ಲದಕ್ಕಿಂತ ದೊಡ್ಡ ಚಿಂತೆ ನಿಲುವು ಮತ್ತು ಮುಖಚರ್ಯೆಯದು. ಸರಿ, ಎಲ್ಲರೂ ಹೆಸರು ಬರೆಸುವಾಗ ರಾಹುಲರು ತನ್ನ ಹೆಸರನ್ನು ಖುನ್ನೂ ಛೇವಂಗ್ ಎಂದು ಬರೆಸಿದರು. ಎಲ್ಲರೂ ಅವರು ಕೇ-ರೋಂಗ್‌ನ ಅವತಾರೀ ಲಾಮಾರವರ ಶಿಷ್ಯ ಎಂದದ್ದು ಸುಬೇದಾರನ ಮೇಲೆ ಪರಿಣಾಮ ಮಾಡಿತು. ಅಂತೂ ಚೌಕಿ ದಾಟಿಕೊಂಡು ಸಮೀಪದ ಒಂದು ಹಳ್ಳಿಗೆ ತೆರಳಿ, ಅಲ್ಲಿ ತಂಗಿದರು. ಅಲ್ಲಿಂದ ಮುಂದೆ ಭೋಟ್‌ಕೋಸೀಯ ಮರದ ಸೇತುವೆ ದಾಟಿಕೊಂಡು ರಾಹುಲರೂ ಸಂಗಡಿಗರೂ ಟಿಬೇಟಿನ ಗಡಿಯೊಳಗೆ ತಲುಪಿಕೊಂಡರು.

ರಾಹುಲರಿಗೆ ಆಗ ಸಹಜವಾಗಿಯೇ ಎಷ್ಟು ಸಂತೋಷವಾಗಿರಬೇಕು, ಊಹಿಸಬಹುದಷ್ಟೆ ? ಬ್ರಿಟಿಷ್ ಆಡಳಿತದ ಮೇರೆಯನ್ನು ಅವರು ರಕ್ಸೌಲ್‌ನಲ್ಲಿಯೇ ದಾಟಿ ಬಂದಿದ್ದರು. ಈಗ ನೇಪಾಳೀ ಗಡಿಯನ್ನೂ ದಾಟಿಕೊಂಡರು. ಇನ್ನೂ ಹೀಗೆಯೆ ಅಜ್ಞಾತವಾಸದಲ್ಲಿಯೇ ಲಾಸಾದವರೆಗಿನ ದೀರ್ಘ ಮಾರ್ಗವನ್ನು ಕ್ರಮಿಸಬೇಕು. ಸಂಕಷ್ಟಗಳೇನು ಕಡಿಮೆಯಾಗಿರದಿದ್ದರೂ, ತಲೆಯ ಭಾರ ಕಡಿಮೆಯಾಗಿ ಹಗುರವೆನಿಸುತ್ತಿತ್ತು. ಈಗ ಅವರು ಡುಕ್ಪಾಲಾಮಾರ ಯಾತ್ರಾ ತಂಡದ ಮುಂದೆ ಮುಂಚೂಣಿಯಲ್ಲಿ ಸಾಗುತ್ತ ಪ್ರಕೃತಿ ಸೌಂದರ್ಯವನ್ನು ಧಾರಾಳವಾಗಿ ಆಸ್ವಾದಿಸತೊಡಗಿದರು. ಗ್ಯೇನಮ್ ತಲುಪಬೇಕಿತ್ತು. ಅಲ್ಲಿಗೆ ಕೇವಲ ಮೂರು ದಿನದ ದಾರಿ. ಆದರೆ ಲಾಮಾ, ಮಾರ್ಗ ಮಧ್ಯೆ ಸಿಗುವ ಊರುಗಳಲ್ಲಿ ಕಾಣಿಕೆ-ಪೂಜೆ ಸ್ವೀಕರಿಸುತ್ತಾ ನಿಧಾನವಾಗಿ ಮುಂದರಿಯುತ್ತಾ ಇದ್ದರು.

ಆ ವೇಳೆಯಲ್ಲಿ ರಾಹುಲರಿಗೊಬ್ಬ ಹೊಸ ಜೊತೆಗಾರನಾಗಿ ಮಂಗೋಲ ಭಿಕ್ಷು ಸಿಕ್ಕಿದ. ಬೋಧಗಯಾದಲ್ಲಿ ಅವನ ಭೇಟಿಯಾಗಿತ್ತು. ಈಗ ಮಾರ್ಗದಲ್ಲಿ ಮತ್ತೆ ಭೇಟಿಯಾಯಿತು. ಆತ ಪೂರ್ವ ಮಂಗೋಲಿಯದವನು. ಆದರೆ ಈಗ ಅನೇಕ ವರ್ಷಗಳಿಂದ ಲಾಸಾ ಸಮೀಪದ ಡೇ-ಪುಂಗ್ ವಿಹಾರದಲ್ಲಿ ವಾಸಿಸುತ್ತಿದ್ದ. ಓದು ಬರೆಹ ತಿಳಿದವನಲ್ಲ. ಪ್ರತೀ ಚಳಿಗಾಲದಲ್ಲಿ ಆತ ಬೋಧಗಯಾ ತೀರ್ಥಯಾತ್ರೆಗೆ ಬರುತ್ತಿದ್ದ ಮತ್ತು ಬರು-ಹೋಗುವ ಜನರಿಗೆ ಮಂತ್ರದಾರ ಹಾಗೂ ಪ್ರಸಾದ ಕೊಟ್ಟು ದಕ್ಷಿಣೆ ವಸೂಲು ಮಾಡುತ್ತಿದ್ದ. ವರ್ಷದಲ್ಲಿ ಒಂಭತ್ತು ತಿಂಗಳು ಯಾತ್ರೆಯಲ್ಲಿಯೇ ಕಳೆದು ಹೋಗುತ್ತಿತ್ತು. ಉಳಿದ ಸಮಯ ಆತ ಡೇ-ಪುಂಗ್ ವಿಹಾರದಲ್ಲಿ ಊಟಗೀಟ ಮಾಡಿಕೊಂಡು ಇದ್ದು ಬಿಡುತ್ತಿದ್ದ. ಆ ಮಂಗೋಲ ಭಿಕ್ಷುವಿನ ಹೆಸರು ಲೋಬ್ಜಂಗ್ ಶೇರ್ಬ್ ಎಂದರೆ 'ಸುಮತಿ ಪ್ರಜ್ಞ' ಎಂದರ್ಥ. ಅಂತೂ ಕೊನೆಗೊಂದು ದಿನ ಎಲ್ಲರೂ – ಡುಕ್ಪಾಲಾಮಾ, ಶಿಷ್ಯ ಶಿಷ್ಯೆಯರು ಮತ್ತು ರಾಹುಲರು, ಲೋಬ್ಜಂಗ್ ಶೇರ್ಬ್ ಗ್ಯೇನಮ್ ತಲುಪಿದರು. ಒಳ್ಳೆಯ ಪೇಟೆ ಸ್ಥಳವಾದ ಕಾರಣ ಅಲ್ಲಿ ನೇಪಾಳಿಗಳ ಅನೇಕ ಅಂಗಡಿಗಳಿದ್ದುವು. ಆ ಪ್ರಾಂತದ ಟಿಬೆಟ್ ಮ್ಯಾಜಿಸ್ಟ್ರೇಟ್ ಸಹ ಗ್ಯೇನಮ್‌ನಲ್ಲಿಯೇ ಇರುತ್ತಿದ್ದ. ಡುಕ್ಪಾಲಾಮಾ ಅಲ್ಲಿಂದ ಏಳುವ ಮಾತನ್ನೆ ಆಡುತ್ತಿರಲಿಲ್ಲ. ರಾಹುಲರೋ ಮುಂದೆ ಸಾಗಲು ಬಯಸುತ್ತಿದ್ದರು. ಟಿಬೇಟೀ ಉಡುಗೆಯಲ್ಲಿದ್ದ ಅವರು ಟಿಬೇಟೀ ಭಾಷೆಯಲ್ಲಿ ಚೆನ್ನಾಗಿ ಸಂಭಾಷಿಸುತ್ತಲೂ ಇದ್ದರು, ಆದರೆ ಮುಂದುವರಿಯಲು ಒಂದು ತೊಂದರೆಯಿತ್ತು. ಗ್ಯೇನಮ್ ಹಳ್ಳಿಯ ಸಮೀಪದ ನದಿಯ ಮೇಲೊಂದು ಸೇತುವೆ. ಅಲ್ಲಿನ ಕಾವಲುಗಾರ ಮ್ಯಾಜಿಸ್ಟ್ರೇಟರು ಸ್ವತಃ ಕೈಯಿಂದ ಬರೆದ ರಹದಾರಿ ಪತ್ರ ನೋಡದೆ, ಯಾರನ್ನೂ ಮುಂದೆ ಬಿಡುತ್ತಿರಲಿಲ್ಲ.

ರಹದಾರಿ ಹೇಗೆ ಸಿಕ್ಕೀತು ? ರಾಹುಲರು ತಮ್ಮ ಮಂಗೋಲ ಮಿತ್ರನೊಂದಿಗೆ ಈ ಸಮಸ್ಯೆ ಹೇಳಿಕೊಂಡರು. 'ಸುಮತಿ ಪ್ರಜ್ಞ' – "ಇದರಲ್ಲೇನಿದೆ ಕಷ್ಟ ?" ಎಂದ ಸ್ವಲ್ಪ ಹೊತ್ತಿನ ನಂತರ ಡೇ–ಪುಂಗ್ ವಿಹಾರದ ಇಬ್ಬರು ಭಿಕ್ಷುಗಳ ಹೆಸರಿನಲ್ಲಿ ಎರಡು ರಹದಾರಿಗಳನ್ನು ತಂದೂ ಬಿಟ್ಟ. ಈಗ ಈ ಇಬ್ಬರದೇ ಮುಂದಿನ ಪ್ರಯಾಣದ ಸಿದ್ಧತೆ. ಡುಕ್ವಾಲಾಮಾ ರಾಹುಲರಿಗೆ ಒಂದು ಪತ್ರವನ್ನು ಚೆನ್ನಾಗಿ ಬರೆದುಕೊಟ್ಟದ್ದಲ್ಲದೆ ದಾರಿಯಲ್ಲಿನ ಊಟ–ತಿಂಡಿಗಾಗಿ ಸಾಮಗ್ರಿಗಳನ್ನೂ ಒದಗಿಸಿದರು. ರಾಹುಲ್ ಮತ್ತು ಸುಮತಿಯರ ಸಹಯಾತ್ರೆ ಆರಂಭವಾಯಿತು. ಈ ಕುರಿತು ರಾಹುಲರೇ ಬರೆದಿದ್ದಾರೆ. "ನಮ್ಮಿಬ್ಬರ ವೇಷ ಹೇಗಿತ್ತೆಂದರೆ ನೋಡಿದವರು ಭಿಕ್ಷುಕರೆನ್ನದೆ ಬೇರೆ ಏನೂ ಹೇಳಲೂ ಸಾಧ್ಯವಿಲ್ಲ ಹಾಗೆ. ನನ್ನ ನಿಲುವಂಗಿ ಹರಿದೇನೋ ಹೋಗಿರಲಿಲ್ಲ. ಆದರೆ ಅದರ ಕೆಂಪು ಬಣ್ಣ ಅಲ್ಲಲ್ಲಿ ಮಸುಕಾಗಿ ಬಟ್ಟೆ ಗೋಣಿತಾಟಿನಂತಾಗಿತ್ತು. ಬೂಟುಗಳೂ ಅಷ್ಟೆ. ಹ್ಞಾಂ, ಅವೀಗ ಕಚ್ಚುತ್ತಿರಲಿಲ್ಲ. ಬೆನ್ನಮೇಲೆ ಮರದ ಎರಡು ಕಮಾನುಗಳ ನಡುವೆ ಸಾಮಾನುಗಳನ್ನು ಬಿಗಿದು ಅದರ ಎರಡೂ ತೋಳುಗಳನ್ನೂ ಹೊರ ಚಾಚಿ ಬಿದಿರಿನ ಅಡ್ಡಣಿಗೆಗೆ ನೇತು ಹಾಕಿದ್ದೆ. ನಮ್ಮಿಬ್ಬರ ಕೈಯಲ್ಲಿಯೂ ಒಂದೊಂದು ದೊಣ್ಣೆಯಿತ್ತು. ನಾಲ್ಕು ಸುತ್ತೂ ಬೋಳು ಗುಡ್ಡಗಳು, ಪೂರ್ವಕ್ಕೆ ಪ್ರಪಂಚದಲ್ಲೇ ಅತ್ಯುನ್ನತವೆನಿಸಿದ ಗೌರೀಶಂಕರ ಶಿಖರ ತನ್ನ ಧವಳ ಶೋಭೆಯನ್ನು ನೀಲನಭದಲ್ಲಿ ಪ್ರತಿಫಲಿಸುತ್ತ ನಿಂತಿತ್ತು."

ಆದರೆ ಈ ಸುಖಾನುಭೂತಿ ಬಹಳ ಹೊತ್ತು ಉಳಿಯಲಿಲ್ಲ. ಮಂಗೋಲ ಲಾಮಾ ತನ್ನ ಒಂದು ಮಣಕ್ಕಿಂತಲೂ ಹೆಚ್ಚಿನ ಭಾರ ಹೊತ್ತು ಭಾರೀ ಉಲ್ಲಾಸದಿಂದ ಹಾರುತ್ತ ಕುಪ್ಪಳಿಸುತ್ತಾ ನಡೆಯುತ್ತಿದ್ದರೆ ರಾಹುಲ ಲಾಮಾ ತನ್ನ ಸುಮಾರು ಇಪ್ಪತ್ತು ಸೇರು ಭಾರವನ್ನು ಹೊತ್ತು ನರಳುತ್ತಾ ನಡೆಯುತ್ತಿದ್ದರು. ಬಿದಿರಿನ ಅಡ್ಡಣಿಗೆ ಮುರಿಯ ತೊಡಗಿತು. ಕಾಲಿನ ಮೀನಖಂಡ ಸಿಡಿಯತೊಡಗಿತು. ಈಗ ಅವರು ಸಮುದ್ರ ಮಟ್ಟದಿಂದ ಸುಮಾರು 4000 ಮೀಟರ್ ಎತ್ತರದಲ್ಲಿ ನಡೆಯುತ್ತ ಇದ್ದರು. ಆಮ್ಲಜನಕದ ಕೊರತೆಯಿಂದ ಉಸಿರಾಟ ಕಷ್ಟವಾಯಿತು. ನಾನಾ ನೆನಪಿಗೆ ಬಂದರು. "ನಾನು ಅಂದು ಮೊದಲು ನಾನಾ ಅವರನ್ನು, ನಂತರ ನನ್ನನ್ನು ನಿಂದಿಸಿಕೊಂಡೆ. ಮಕ್ಕಳನ್ನು ಸುಖದ ಸುಪ್ಪತ್ತಿಗೆಯಲ್ಲಿ ಬೆಳೆಸಲೇಬಾರದೆಂದು ನನಗನಿಸಿತು. ಅವರು ಮೈಮುರಿದು ದುಡಿಯುವಂತೆ ಮಾಡಬೇಕು ಎಂದು ಬರೆಯುತ್ತಾರೆ ರಾಹುಲಜೀ. ಇರಲಿ, ಹೀಗೆ ಇಬ್ಬರು ತಿರುಪೆಲಾಮಾಗಳ ಮುಂದೆ ಸಾಗುತ್ತಲೇ ಇದ್ದರು. ಮಂಗೋಲ ಲಾಮಾರ ಹಿಂದೆ ರಾಹುಲ ಲಾಮಾ ಕಟುಕನ ಹಿಂದೆ ದನದಂತೆ. ತಂಗಲು ಕೆಲವೊಮ್ಮೆ ಸ್ಥಳ ಸಿಗುತ್ತಿತ್ತು. ಕೆಲವು ಸಲ ಸಿಗುತ್ತಿರಲಿಲ್ಲ. ಯಾವುದಾದರೂ ಊರು ಅಥವಾ ಮನೆ ತಲುಪಿದೊಡನೆ ಕಚ್ಚಲು ಧಾವಿಸಿ ಬರುವ ಟಿಬೇಟಿನ ಕ್ರೂರ ನಾಯಿಗಳಿಗೆ ರಾಹುಲರು ವಿಪರೀತ ಭಯಪಡುತ್ತಿದ್ದರು. ಎಲ್ಲೆಲ್ಲೂ ಅವರಿಗೆ ಮೊದಲು ಸಿಗುತ್ತಿದ್ದುದು ಬೆಣ್ಣೆ ಹಾಕಿ ಉಪ್ಪು ಬೆರೆಸಿದ ಬಿಸಿಬಿಸಿ ಚಹಾ. ಯಾತ್ರೆಯ ಮುಖ್ಯ ಊಟವೆಂದರೆ ಬೆರಣಿಯ ಬೆಂಕಿಯ ಮೇಲೆ ಬೇಯಿಸಿದ "ಥುಕ–ಪಾ". ಮುದ್ದೆ ಅಕ್ಕಿಯೊಂದಿಗೆ ಮೂಲಂಗಿ, ಮೂಳೆ ಅಥವಾ ಮಾಂಸವನ್ನು ಗಂಟೆಗಟ್ಟಲೆ ಬೇಯಿಸಿ ತಯಾರು ಮಾಡುವಂಥದ್ದು.

ಮುಂದೆ ಟಿಬೆಟಿನ ಅತ್ಯಂತ ಕಠಿಣವಾದ ಸೀಮೆ ಥೋಂಗ್–ಲಾ ದಾಟಬೇಕಿತ್ತು. ಐದಾರು ಸಾವಿರ ಮೀಟರು ಎತ್ತರದಲ್ಲಿದ್ದ ಕಾರಣ ಎರಡೂ ಕಡೆ ಎಷ್ಟೋ ದೂರದವರೆಗೂ ಯಾವುದೇ ಹಳ್ಳಿಪಳ್ಳಿಗಳ

ಸುಳಿವಿರಲಿಲ್ಲ. ಅದು, ಡಕಾಯಿತರ ತಾಣವಾಗಿತ್ತು. ಕೊಂದರೂ ಕೇಳುವವರಿರಲಿಲ್ಲ. ಆದರೆ ಬೇಡಿತಿಂಬವರಿಗೆ ಡಕಾಯಿತರ ಭಯವೆಂತಹುದು ? ಒಂದು ವೇಳೆ ಡಕಾಯಿತ ಕಾಣಿಸಿಕೊಂಡನೆಂದೇ ಮಾಡೋಣ, ಟೋಪಿ ಕಳಚಿ ನಾಲಗೆ ಚಾಚಿ 'ಕುಚೀ-ಕುಚೀ (ದಯೆ, ದಯೆ) ಒಂದು ಪೈಸೆ' ಎಂದು ಬೇಡ ತೊಡಗಿದರೆ ಸರಿ. ನಿಜವಾದ ಕಷ್ಟವೆಂದರೆ ಬೆನ್ನಮೇಲೆ ಸಾಮಾನು ಹೇರಿಕೊಂಡು ಪರ್ವತದ ಏರನ್ನೂ ಹತ್ತಿಕೊಂಡು ಇಪ್ಪತ್ತೈದು ಕಿಲೋಮಿಟರು ದೂರದ ತಂಗುದಾಣವನ್ನು ತಲುಪುವುದು. ಎಂತಲೇ ಕುದುರೆಗಳನ್ನು ಗೊತ್ತು ಮಾಡಿಕೊಂಡರು.

ಥೋಂಗ್-ಲಾ ದಾಟಿ ಇಬ್ಬರೂ ಯಾತ್ರಿಕರು ತಿಜರೀಯ ವಿಶಾಲ ಮೈದಾನ ತಲುಪಿದವರು ಅಲ್ಲಿ ಶೇಕರ ವಿಹಾರಕ್ಕೆ ಹೋಗಿ ವಿಶ್ರಾಂತಿ ಪಡೆದರು. ಆ ಮೇಲೆ 'ಸುಮತಿ'ಗೆ ಪರಿಚಿತರಾದ ಅಲ್ಲಿನ ಮ್ಯಾಜಿಸ್ಟ್ರೇಟರ ಮನೆಗೆ ಹೋದರು. ಅಲ್ಲಿ ಮೊದಲು ನಾಯಿಗಳ ಸ್ವಾಗತದ ನಂತರ ಯಜಮಾನನ ಸ್ವಾಗತ ದೊರೆಯಿತು. "ಅಹೋ ! ಮಂಗೋಲ ಭಿಕ್ಷು, ಮತ್ತು ಲಡಾಖಿಯೂ !"

ರಾಹುಲರು ಇದುವರೆಗೆ ತನ್ನನ್ನು ಖುನೂಪಾ ಎಂದೇ ಹೇಳಿಕೊಂಡಿದ್ದರು. ಆದರೆ ಎರಡು ಮೂರು ಕಡೆಗಳಲ್ಲಿ ಅವರನ್ನು ಜನ ಲಡಾಖೀ ಎಂದಿದ್ದರು. ಹೀಗಾಗಿ ಮುಂದೆ ತನ್ನನ್ನು ಲಡಾಖೀ ಎಂದೇ ಹೇಳಿಕೊಳ್ಳುವುದೆಂದು ನಿಶ್ಚಯಿಸಿಕೊಂಡರು. ತಿಜರೀಯ ನಂತರ ಚಕೋರಗಾಂವ್ ಸಿಕ್ಕಿತು. ಇಲ್ಲಿಯೂ 'ಸುಮತಿ' ಹುರಿಗಡಲೆ, ದಕ್ಷಿಣೆ ಮುಂತಾದ ಸಂಭಾವನೆ ಬಾಚಿಕೊಳ್ಳುತ್ತ ಮುನ್ನಡೆಯುತ್ತಿದ್ದ. ಸುಮತಿಯದು ಭಾರೀ ಸಿಡುಕುವ ಸ್ವಭಾವ. ಅಗಾಗ ರಾಹುಲರ ಮೇಲೆ ಉರಿಕಾರುತ್ತಿದ್ದ. ಆದರೆ ಇನ್ನೊಂದು ಒಳ್ಳೆಯ ಮುಖವೂ ಇತ್ತು. ರಾಹುಲರನ್ನು ಜೊತೆಯಲ್ಲಿ ಕರೆದುಕೊಂಡೇ ಸಾಗುತ್ತಿದ್ದ.

ಮುಂದೆ ಇಬ್ಬರೂ ಶೇಕರ ವಿಹಾರದ ರಸ್ತೆ ಹಿಡಿದರು. ಸ್ವಲ್ಪ ದೂರ ಸಾಗುತ್ತಲೇ ಕೋಸೀ ನದಿಯ ಪ್ರಧಾನಧಾರೆ ಕಾಣಿಸಿತು. ಹಿಮಕರಗಿ ಹರಿವ ಸೊಂಟಮಟ್ಟದ ಜಲಧಾರೆಯಲ್ಲಿ ಇಬ್ಬರೂ ಏಳುತ್ತ ಬೀಳುತ್ತ ಸಾಗಿ ಹೇಗೋ ಅಂತೂ ಶೇಕರ ತಲುಪಿದರು. ಬೆನ್ನ ಮೇಲೆ ಹೊರೆ ಹೇರಿಕೊಂಡು ನಡೆಯುವುದು ರಾಹುಲರಿಗೀಗ ಬಹಳ ಕಷ್ಟವಾಗುತ್ತ ಇತ್ತು. ಬಹಳ ನಿಶ್ಶಕ್ತಿ ಎನಿಸುತ್ತಿತ್ತು. ನಿಶ್ಶಕ್ತಿಯ ಕಾರಣವೆಂದರೆ ಹುರಿಗಡಲೆ ಮುದ್ದೆಯೂಟ. ಅದನ್ನು ಅರೆ ಹೊಟ್ಟೆ ತುಂಬುವಷ್ಟು ಉಣ್ಣಲು ಕೂಡ ಅವರಿಂದ ಆಗುತ್ತಿರಲಿಲ್ಲ.

ರಾಹುಲರಿಗೆ ಲಾಸಾದ ದಾರಿ ಮಾತ್ರವಲ್ಲ, ಟಿಬೇಟೀ ಜನರ ಜೀವನ ರೀತಿ ರಿವಾಜುಗಳೂ ಇದೇ ಹೊಸದಾಗಿ ಮೊದಲ ಸಲ ಪರಿಚಯವಾಗುತ್ತ ಇತ್ತು. ಟಿಬೇಟಿನಲ್ಲಿ ಎಲ್ಲ ಸೋದರರಿಗೆ ಸೇರಿದ ಒಬ್ಬ ಪತ್ನಿ ಇರುತ್ತಾಳೆ. ಸ್ತ್ರೀ ಪುರುಷ ಸಂಬಂಧ ಮುಕ್ತ. ವಿಪರೀತ ಚಳಿಯ ಕಾರಣ ಜನ ಆರಾರು ತಿಂಗಳು ಅಥವಾ ವರ್ಷಗಟ್ಟಲೆ ಕೂಡ ಮೀಯುವುದಿಲ್ಲ. ಒಣಕಲು ಗುಡ್ಡಗಳಿಂದಾಗಿ ಉರುವಲು ಕಟ್ಟಿಗೆ ಸಿಗುವುದೂ ಕಡಿಮೆ. ಬೆರಣಿಯಿಂದಲೇ ಉರುವಲು ಕೆಲಸ ಪೂರೈಸುತ್ತದೆ. ಜನ ಧಾರಾಳವಾಗಿ ಸರಾಯಿ ಕುಡಿಯುತ್ತಾರೆ. ಮುಖ್ಯ ಭೋಜನವೆಂದರೆ ಹುರಿಗಡಲೆ ಹಿಟ್ಟಿನ ಮುದ್ದೆ ಮತ್ತು ಹಸಿ ಮಾಂಸ.

ಟಿಬೇಟಿನ ಈ ಚಿತ್ರ ಆರೇಳು ದಶಕಗಳ ಹಿಂದಿನದು. ಈಗ ಅಲ್ಲಿನ ಸ್ಥಿತಿಗತಿ ಸಾಕಷ್ಟು ಬದಲಾಗಿರಬಹುದು. ಈಗಂತೂ ಲಾಸಾದಿಂದ ಕಾಠ್ಮಂಡೂ ತನಕ ಚೆನ್ನಾದ ರಸ್ತೆ ಇದೆ. ಶೇಕರರಿಂದ

ಲರ್ಚೆ ವರೆಗಿನ ರಸ್ತೆ ಬ್ರಹ್ಮಪುತ್ರ ತೀರದ ಸಮೀಪದಿಂದ ಸಾಗಿ ಹೋಗಿದೆ. ಇಬ್ಬರು ಯಾತ್ರಿಗಳೂ ಕತ್ತೆಗಳ ಮೇಲೆ ಸಾಮಾನು ಹೇರಿಕೊಂಡು ಒಂದು ಯಾತ್ರಿಕ ತಂಡದ ಜೊತೆಗೆ ಲರ್ಚೆ ಮುಟ್ಟಿದರು. ಲರ್ಚೆಯಿಂದ ಚರ್ಮದ ನಾವೆಯ ಮೇಲೆ ಎರಡು ದಿನಗಳಲ್ಲಿ ಟಶೀಲುಂಪೋ ಅಥವಾ ಶಿಗಾರ್ಚೀ ತಲುಪಬಹುದಿತ್ತು. ರಾಹುಲರು ಬ್ರಹ್ಮಪುತ್ರಾ ಯಾತ್ರೆಯ ಸಿದ್ಧತೆ ನಡೆಸಿದರು. ದೋಣಿಯ ಏರ್ಪಾಟನ್ನೂ ಮಾಡಿದರು. ಆದರೆ ಹೊರಡುವ ಹೊತ್ತಿನಲ್ಲಿ ಜಗಳವಾಗಿ, ಹೇಸರಕತ್ತೆಗಳನ್ನು ಬಾಡಿಗೆಗೆ ಪಡೆದು, ವ್ಯಾಪಾರಿಗಳ ಒಂದು ತಂಡದ ಜೊತೆಯಲ್ಲಿ ಮೊದಲು ನರ್ಥಂಗ್, ಆ ನಂತರ ಶಿಗಾರ್ಚೆ ತಲುಪಿಕೊಂಡರು.

ಟಿಬೇಟೀ ಸಾಹಿತ್ಯದ ದೃಷ್ಟಿಯಿಂದ ನರ್ಥಂಗ್‌ನ ಬೌದ್ಧಮಠಕ್ಕೆ ಬಹಳ ಮಹತ್ವವಿದೆ. ಕಂಜೂರ್ (ಬುದ್ಧವಚನಗಳ ಅನುವಾದ) ಹಾಗೂ 'ತಂಜೂರ್' (ಬೌದ್ಧಶಾಸ್ತ್ರ-ಗ್ರಂಥಗಳ ಅನುವಾದ)ಗಳ ಮುದ್ರಣಾಲಯ ಇಲ್ಲಿಯೇ ಇತ್ತು. 'ಕಂಜೂರ್' ಮತ್ತು 'ತಂಜೂರ್'ನಲ್ಲಿ ಸಾವಿರಾರು ಭಾರತೀಯ ಗ್ರಂಥಗಳ ಅನುವಾದ ಸುಕ್ಷಿತವಾಗಿದೆ.

ನರ್ಥಂಗ್‌ನಿಂದ ಕೆಲ ಗಂಟೆಗಳ ಪಯಣದ ಬಳಿಕ ಪರ್ವತದ ಬುಡದಲ್ಲಿ ಟಶೀಲುಂಪೋದ ಸುಂದರ ಮಹಾವಿಹಾರ (ಗುಂಬಾ) ಕಾಣಿಸಿಕೊಂಡಿತು. ರಾಹುಲರು ಶಿರಬಾಗಿದರು. ಮಹಾವಿಹಾರದ ಸಮೀಪದಲ್ಲಿಯೇ ಶಿಗರ್ಚೀ ನಗರ. ಲಾಸಾದ ನಂತರ ಟಿಬೇಟಿನ ದೊಡ್ಡ ನಗರವಿದು. ಆ ವೇಳೆ ಭಾರತದಿಂದ ಗ್ಯಾನಚೀ, ಲಾಸಾ ಮತ್ತು ಶಿಗರ್ಚೆಯವರೆಗೆ ಟಪಾಲು ವ್ಯವಸ್ಥೆ ಇತ್ತು. ಶಿಗರ್ಚೆ ತಲುಪಿದೊಡನೆ ರಾಹುಲರಿಗೆ ಕಾಠ್ಮಂಡೂ ಬಿಟ್ಟ ನಂತರ ಮೊದಲ ಸಲಕ್ಕೆ ಒಂದು ಸಭ್ಯ ಜಗತ್ತಿಗೆ ಬಂದಿದ್ದೇನೆ ಅನ್ನಿಸಿತು. ಶಿಗರ್ಚೆಯಲ್ಲಿ ಒಬ್ಬ ನೇಪಾಳೀ ಸಾಹುವಿನ ಮನೆಯಲ್ಲಿ ಆಶ್ರಯ ಸಿಕ್ಕಿತು. ಭಾರತ ಬಿಟ್ಟ ಮೇಲಿನ ಪ್ರಥಮ ಪತ್ರವನ್ನು ಅವರು ಅಲ್ಲಿಂದ ಭಿಕ್ಷು ಆನಂದ ಕೌಸಲ್ಯಾಯನರಿಗೆ ಶ್ರೀಲಂಕಾ ವಿಳಾಸಕ್ಕೆ ಬರೆದರು.

"ಪ್ರಿಯ ಆನಂದಜೀ,

ಜೀವನಕ್ಕೆ ತುಂಬ ಬೆಲೆ ಇದೆ. ಸಮಯ ಬಂದಾಗ ಏನೂ ಇಲ್ಲ. ಕೆಲಸ ಮುಗಿಸುತ್ತೇನೆ. ಇಲ್ಲ, ಸಾಯುತ್ತೇನೆ.

ರಾಮೋದಾರ ಸಾಧು."

ರಾಹುಲರು ಫೆಬ್ರವರಿ ಅಂತ್ಯದಲ್ಲಿ (1929) ಭಾರತದಿಂದ ಹೊರಟಿದ್ದರು. ಶಿಗರ್ಚೆ ತಲುಪುವಾಗ ಜುಲೈ ಆರಂಭ. ಶಿಗರ್ಚೆಯಿಂದ ಲಾಸಾಕ್ಕೆ ಒಂದು ನೇರ ಮಾರ್ಗವಿದೆ. ಆದರೆ ರಾಹುಲರು ಹೇಸರಗತ್ತೆವಾಲರೊಂದಿಗೆ ಗ್ಯಾನಚೀ ಮಾರ್ಗದಲ್ಲಿ ನಡೆದರು. ಶಿಗರ್ಚೆಯಲ್ಲಿ ಮಂಗೋಲ ಭಿಕ್ಷುವಿನ ಜೊತೆ ಕಡಿಯಿತು. ಆಗ ಗ್ಯಾನಚೀಯಲ್ಲಿ ಬ್ರಿಟಿಷ್ ಸರಕಾರದ ವಾಣಿಜ್ಯ ಕಛೇರಿ ಮತ್ತು ಸುಮಾರು ನೂರು ಸಿಪಾಯಿಗಳ ಒಂದು ಪ್ಲೆಟೂನ್ ಇತ್ತು. ರಾಹುಲರು ಅಲ್ಲಿ ಜುಲೈ ಏಳರಂದು (1929) ತಲುಪಿದ್ದರು. ಅಲ್ಲಿಂದ ಮುಂದೆ ಲಾಸಾದ ಮಾರ್ಗದಲ್ಲಿ ಉನ್ನತವಾದೊಂದು ಶಿಖರ ಮತ್ತು ವಿಶಾಲ ಸರೋವರ ಹಾಗೂ ಬ್ರಹ್ಮಪುತ್ರಾ ನದಿ ಸಿಗುತ್ತದೆ.

ದೋಣಿಯಲ್ಲಿ ಕುಳಿತು ಬ್ರಹ್ಮಪುತ್ರಾ ದಾಟಿದ ಬಳಿಕ, ಜುಲೈ 19ರಂದು, ಎಷ್ಟೋ ಕಿಲೋಮೀಟರು ದೂರದಿಂದ ಕೆಂಪು ಬಣ್ಣದ ಅನೇಕ ಸ್ತರಗಳ ದಲಾಯಿಲಾಮಾ ಅವರ ಪ್ರಾಸಾದ

"ಪ್ರೋತಲಾ" ಕಾಣಿಸಿಕೊಂಡಿತು. ಯಾವುದರ ದರ್ಶನ ಪ್ರಪಂಚದಲ್ಲೇ ಅತಿ ಕಠಿಣ ಎಂದು ಎಣಿಸಲಾಗಿತ್ತೋ ಹಾಗೂ ಯಾವುದನ್ನು ನೋಡಲು ರಾಹುಲರು ನಾಲ್ಕೂವರೆ ತಿಂಗಳುಗಳ ಕಾಲ ನಾನಾ ಬಗೆಯ ಕಷ್ಟಗಳನ್ನು ಅನುಭವಿಸಿದ್ದರೋ ಲಾಸಾದ ಆ ಪ್ರೋತಲಾ ಪ್ರಾಸಾದ ಕಾಣುತ್ತಿದೆ ಈಗ, ಎದುರಿಗೇ.

ಬೆನ್ನ ಮೇಲೆ ಹೊರೆ ಹೇರಿಕೊಂಡು 'ಚೋಗಾ' ತೊಟ್ಟುಕೊಂಡು, ತಲೆಗೆ ಟಿಬೇಟಿ ಭಿಕ್ಷುಣಿಯರ ಹಳದಿ ಬಣ್ಣದ ಕಿವಿಮುಚ್ಚುವ ಟೊಪ್ಪಿಗೆ ಏರಿಸಿಕೊಂಡು ಕೈಯಲ್ಲಿ ದಂಡ ಹಿಡಿದು ರಾಹುಲಬಾಬಾ ನಗರದ ಒಂದು ದ್ವಾರದಿಂದ ಲಾಸಾ ಪ್ರವೇಶಿಸಿದರು.

ರಸ್ತೆಯಲ್ಲಿ ಧೀರೇಂದ್ರ ವಜ್ರ ಎಂಬ ಒಬ್ಬ ನೇಪಾಳೀ ತರುಣ ಸಿಕ್ಕಿದ. ಆತ ರಾಹುಲರನ್ನು ಧರ್ಮಸಾಹುವಿನ ಮನೆ 'ಛು-ಶಿಂಗ್'ಗೆ ತಲುಪಿಸಿದ. ಧರ್ಮಸಾಹುವಿನ ಪುತ್ರರು ರಾಹುಲರಿಗೆ ಹಾರ್ದಿಕ ಸ್ವಾಗತ ನೀಡಿದರು. ಸ್ವಲ್ಪ ಮಾತುಕತೆ ಆದ ಬಳಿಕ ಮೊದಲು ರಾಹುಲರು ಅಲ್ಲಿದ್ದ ಹಿಂದಿನ ನಾಲ್ಕೈದು ತಿಂಗಳ ಪತ್ರಿಕೆಗಳನ್ನು ಓದಿದರು. ಇನ್ನು ಕೊಳಕರಾಗಿ ಕಾಣಿಸಿಕೊಳ್ಳಬೇಕಾದ ಅಗತ್ಯ ಇಲ್ಲದಿರುದ್ದರಿಂದ ಕಾಲುವೆಗೆ ನಡೆದು ಸ್ನಾನ ಮಾಡಿದರು.

ಅವರಿಗೆ ಈಗ ಅಜ್ಞಾತವಾಸದಿಂದ ಹೊರಬರಬೇಕಾಗಿತ್ತು. ಆದುದರಿಂದ ದಲಾಯಿಲಾಮಾರಿಗೆ ಆದಷ್ಟು ಬೇಗ ಸಂದೇಶ ಕಳಿಸಲೇಬೇಕಾಗಿ ಬಂದು, ಸಂಸ್ಕೃತದಲ್ಲಿ ಹದಿನೈದು ಶ್ಲೋಕಗಳನ್ನು ರಚಿಸಿದರು. ಅವುಗಳ ಆಶಯವೆಂದರೆ ಟಿಬೇಟಿಗೆ ನೂರಾರು ಭಾರತೀಯ ಪಂಡಿತರು ಬಂದರು, ಅವರು ಸಾವಿರಾರು ಭಾರತೀಯ ಗ್ರಂಥಗಳನ್ನು ಟಿಬೇಟೀ ಭಾಷೆಗೆ ಅನುವಾದಿಸಿದರು. ಸಾವಿರಾರು ಜನರಿಗೆ ಬೌದ್ಧ ತತ್ವ ಜ್ಞಾನದ ಶಿಕ್ಷಣವನ್ನು ಕೊಟ್ಟರು. ಹಿಂದೆ ಎಲ್ಲಿಗೆ ಭಾರತೀಯರು ಗುರುಗಳಾಗಿ ಬರುತ್ತಿದ್ದರೋ ಅಲ್ಲಿಗೆ ನಾನು ಶಿಷ್ಯನಾಗಿ ಬಂದಿದ್ದೇನೆ. ನನ್ನಂತಹ ಭಾರತೀಯ ವಿದ್ಯಾರ್ಥಿಗೆ ಇಲ್ಲಿ ಅನುಕೂಲತೆಗಳು ಸಿಗಲಿ.

ಶ್ಲೋಕಗಳನ್ನು ಟಿಬೇಟೀ ಭಾಷೆಗೆ ಅನುವಾದ ಮಾಡಿಸಿ ಒಬ್ಬ ಪ್ರಭಾವಶಾಲಿ ಲಾಮಾದ ಮುಖಾಂತರ ಆಗಸ್ಟ್ 9ರಂದು ಎರಡನ್ನೂ ದಲಾಯಿ ಲಾಮಾರಿಗೆ ತಲುಪಿಸಲಾಯಿತು. ಸಂಜೆ ಹೊತ್ತಿಗೆ ಧರ್ಮಸಾಹು ಅವರ ಮನೆಗೆ ಸಂದೇಶ ಬಂತು. "ಪಂಡಿತರು ನಿಮ್ಮ ಮನೆಯಲ್ಲಿರಲಿ. ಯಾವತ್ತಾದರೂ ಒಂದು ದಿನ ಅವರನ್ನು ಕರೆಯುತ್ತೇನೆ."

ಸುಮಾರು ಐದು ತಿಂಗಳ ಅಜ್ಞಾತವಾಸ ಅಂತೂ ಕೊನೆಗೊಂಡಿತು. ಇನ್ನು ರಾಹುಲರು ದೀರ್ಘ ಸಮಯ ಟಿಬೆಟಿನಲ್ಲಿದ್ದುಕೊಂಡು ಟಿಬೇಟೀ ಭಾಷೆ ಮತ್ತು ಬೌದ್ಧ ಗ್ರಂಥಗಳ ಆಳ ಅಧ್ಯಯನ ಮಾಡುವುದಿದೆ. ಲಾಸಾ ತಲುಪುವಾಗ ಅವರ ಹತ್ತಿರ ಉಳಿದದ್ದು ಸುಮಾರು ನೂರು ರುಪಾಯಿ ಚಿಲ್ಲರೆ. ಇದರಲ್ಲಿ ಹಾಗೂ ಹೀಗೂ ನಾಲ್ಕೈದು ತಿಂಗಳು ಕಳೆಯಬಹುದು. ಮುಂದೆ ಏನಾದರೊಂದು ವ್ಯವಸ್ಥೆ ಆಗಿಯೇ ಆಗುತ್ತದೆಂಬ ಭರವಸೆ ಅವರದು. ರಾಹುಲಜೀ ಡೇಪುಂಗ್ ಅಥವಾ ಸೇರಾದಂತಹ ಯಾವುದಾದರೊಂದು ಪುರಾತನ ಮಠದಲ್ಲಿರಲು ಬಯಸಿದ್ದರು. ಆದರೆ ಎಂತಹ ಕೆಲ ಪರಿಸ್ಥಿತಿಗಳು ಹುಟ್ಟಿಕೊಂಡವೆಂದರೆ ಅವರು ಧರ್ಮಸಾಹುವಿನ ಮನೆಯ ಒಂದು ಕೋಣೆಯನ್ನೇ ತನ್ನ ಕೇಂದ್ರ ನಿವಾಸ ಮಾಡಿಕೊಳ್ಳಬೇಕಾಯಿತು. ಚಳಿಗಾಲ ಆರಂಭವಾಗುತ್ತ ಇತ್ತು. ಹಾಗಾಗಿ ಭಿಕ್ಷುವಿನ ಉಣ್ಣೆ ವಸ್ತ್ರ ಹಾಗೂ ಚರ್ಮದ ಉದ್ದ 'ಜೋಗಾ' ಕೊಂಡು ಕೊಂಡರು. ಅಲ್ಲಿಯ ಊಟವೆಂದರೆ ಹುರಿದ

ಕಡಲೆ, ಹುರಿದವಲಕ್ಕಿ, ಬೇಳೆ-ಅನ್ನ ಮತ್ತು ಮಾಂಸ. ಚಹವಂತೂ ದಿನವಿಡೀ ಯಾವಾಗ ಬೇಕದಾರೂ ಸಿಗುತ್ತಿತ್ತು. ರಾಹುಲಜೀ ತಮ್ಮ ಊಟದ ಹೊಣೆಯನ್ನು ಸಾಹು ಕುಟುಂಬದ ಮೇಲೆ ಬಹಳ ದಿನ ಹೊರಿಸಲಿಲ್ಲ.

ತನ್ನ ಓದು-ಬರವಣಿಗೆಯನ್ನೂ ಬೇಗನೇ ಆರಂಭಿಸಿದರು. ಎಲ್ಲಕ್ಕೂ ಮೊದಲಿಗೆ ನೇಪಾಳೀಯರ ಸಂಸ್ಕೃತ ವ್ಯಾಕರಣ ಒಂಭತ್ತು ಗ್ರಂಥಗಳನ್ನು ಕೇಳಿ ಪಡೆದು ಟಿಬೇಟೀ ಭಾಷೆಯ ಅನುವಾದದೊಂದಿಗೆ ಅವುಗಳನ್ನು ಓದಲಾರಂಭಿಸಿದರು. ಈ ರೀತಿ ಸಂಸ್ಕೃತ ಗ್ರಂಥಗಳನ್ನು ಅವುಗಳ ಟಿಬೇಟೀ ಅನುವಾದದ ಜೊತೆ ಜೊತೆಗೆ ಅಧ್ಯಯನ ಮಾಡುತ್ತ ರಾಹುಲರು ಕೊನೆಯಲ್ಲಿ ಸುಮಾರು ಹದಿನಾರು ಸಾವಿರ ಶಬ್ದಗಳ ಒಂದು ಭೋಟ್-ಸಂಸ್ಕೃತ ಕೋಶವನ್ನು ತಯಾರು ಮಾಡಿದರು. ಟಿಬೇಟೀ ಭಿಕ್ಷುಗಳು ಮತ್ತು ಪಂಡಿತರೊಂದಿಗೆ ಮಾತನಾಡುತ್ತ ಟಿಬೇಟಿ ಭಾಷಾಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತ ಹೋದರು. ಒಂದು ಮಠದಿಂದ ತಂಜೂರ್‌ನ ಗ್ರಂಥಗಳು ಅವರಿಗೆ ತಲುಪ ತೊಡಗಿದವು.

ಆದರೆ ಲಾಸಾದಲ್ಲಿ ಒಂದು ತಿಂಗಳು ಕೂಡಾ ಕಳೆದಿಲ್ಲ, ಹೊಸತೊಂದು ಸಂಕಷ್ಟ ಎದುರಾಯಿತು. ಟಿಬೆಟ್ ಮತ್ತು ನೇಪಾಳದ ನಡುವೆ ಕದನವೇರ್ಪಡುವ ಬಿಸಿ ಹವೆ. ಎರಡೂ ಸರಕಾರಗಳ ನಡುವೆ ಹಿಂದಿನಿಂದಲೂ ಏನೋ ಒಂದು ಬಗೆಯ ಜಗ್ಗಾಟವಿತ್ತು. ಈಗ ಹೊಸದಾಗಿ ದುರ್ಘಟನೆಯೊಂದು ಜರಗಿತು. ಶರ್ಬಾ ಗ್ಯಲ್ಪೊ ಎಂಬ ಹೆಸರಿನ ಒಬ್ಬ ಭೋಟ್‌ಭಾಷೀ ವ್ಯಾಪಾರಿ ಲಾಸಾದಲ್ಲಿ ವಾಸಿಸುತ್ತಿದ್ದ. ಆದರೆ ಆತ ನೇಪಾಳೀ ಪ್ರಜೆ. ಕಾನೂನು ಪ್ರಕಾರ ನೇಪಾಳಿ ಪ್ರಜೆಗಳ ಮೊಕದ್ದಮೆಗಳ ತೀರ್ಮಾನವನ್ನು ನೇಪಾಳೀ ಪ್ರತಿನಿಧಿಯೇ ಮಾಡಬಹುದಿತ್ತು. ಟಿಬೇಟಿನ ಕೋರ್ಟಲ್ಲ. ಶರ್ಬಾ, ದಲಾಯಿ ಲಾಮಾರನ್ನೂ ಬಹಿರಂಗವಾಗಿ ಟೀಕಿಸುತ್ತಿದ್ದ. ಆದುದರಿಂದ ಪೋಲೀಸರು ಅವನನ್ನು ಹಿಡಿದು ಜೈಲಿಗೆ ಹಾಕಿದರು. ಶರ್ಬಾ ಅಲ್ಲಿಂದ ಹೇಗೋ ತಪ್ಪಿಸಿಕೊಂಡು ನೇಪಾಳೀ ದೂತಾವಾಸ ಸೇರಿಕೊಂಡ. ಇದು ಆಗಸ್ಟ್ 14 (1929)ರ ಘಟನೆ.

ಟಿಬೇಟೀ ಪ್ಲೇಟೂನ್, ನೇಪಾಳೀ ದೂತಾವಾಸಕ್ಕೆ ಹೋಗಿ ಶರ್ಬಾನನ್ನು ಸೆರೆಹಿಡಿದು ಕೊಂಡೊಯ್ದಿತು. ಜೈಲಿನಲ್ಲಿ ಅನುಭವಿಸಿದ ಚಿತ್ರ ಹಿಂಸೆಯಿಂದ ಆತ ತೀರಿಕೊಂಡು ಬಿಟ್ಟ. ಒಪ್ಪಂದವನ್ನು ಟಿಬೆಟ್ ಮುರಿದಿತ್ತು. ಆದ್ದರಿಂದ ಎರಡೂ ದೇಶಗಳಲ್ಲಿ ವೈಮನಸ್ಯ ಜಾಸ್ತಿಯಾಗುತ್ತ ಹೋಯಿತು. ಲಾಸಾದಲ್ಲಿ ಯುದ್ಧ ಸಿದ್ಧತೆ ಆರಂಭವಾಯಿತು. ಅತ್ತ ನೇಪಾಳೀ ಸೈನಿಕರು ಗಡಿ ಪ್ರಾಂತದಲ್ಲಿ ಸೇರಿಕೊಂಡರು. ಲಾಸಾದಲ್ಲಿನ ನೇಪಾಳೀ ವ್ಯಾಪಾರಸ್ಥರು ಭಯಗ್ರಸ್ತರಾದರು. ಅವರು ಅಲ್ಲಿ ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿಕೊಂಡು ನೆಲೆಗೊಂಡಿದ್ದರು. ಇದರಿಂದ ಲಾಸಾದ ಸ್ವರೂಪವೇ ಸಂಪೂರ್ಣವಾಗಿ ಬದಲಾಯಿತು. ಸುಮಾರು ಏಳು ತಿಂಗಳವರೆಗೆ ಯುದ್ಧದ ಕಾರ್ಮೋಡಗಳು ಗುಡುಗುಟ್ಟುತ್ತಲೇ ಇದ್ದುವು. ಕೊನೆಗೆ ಬ್ರಿಟಿಷರ ಹಿತಚಿಂತಕನಾದ ಡಾರ್ಜಿಲಿಂಗ್ ನಿವಾಸಿ ಭೋಟ್ ಭಾಷೀ ಸಜ್ಜನ ಲೇಡನ್ಲಾನ ಪ್ರಯತ್ನದಿಂದ 1930ರ ಮಾರ್ಚ್ 22ರಂದು ಎರಡೂ ದೇಶಗಳ ನಡುವೆ ಒಪ್ಪಂದವಾಯಿತು.

ಇಂತಹ ಪರಿಸ್ಥಿತಿಯಲ್ಲಿ ರಾಹುಲರೂ ತನ್ನ ಕಾರ್ಯಕ್ರಮದಲ್ಲಿ ಸಾಕಷ್ಟು ಬದಲಾವಣೆ ಮಾಡಿ ಆದಷ್ಟು ಬೇಗ ಭಾರತಕ್ಕೆ ಹಿಂದಿರುಗಲು ನಿರ್ಧರಿಸಬೇಕಾಯಿತು. ಅವರು ತಮ್ಮ ಅಧ್ಯಯನ-ಸಂಶೋಧನೆಗಳನ್ನು ಇನ್ನಷ್ಟು ಭರದಿಂದ ನಡೆಸತೊಡಗಿದರು. ದುಡ್ಡಿನ ಚಿಂತೆ ದೂರವಾಗಿತ್ತು. ಆಚಾರ್ಯ ನರೇಂದ್ರ ದೇವ ಅವರು ವಾರಣಾಸಿಯಿಂದ ಮೊದಲು ನೂರೈವತ್ತು

ರುಪಾಯಿ, ಮತ್ತೆ ನೂರ ಹದಿನಾಲ್ಕು ರುಪಾಯಿ ಕಳಿಸಿದ್ದರು. ಇನ್ನು ಮುಂದೆಯೂ ಕಳಿಸುವ ಭರವಸೆ ನೀಡಿದರು.

ಅತ್ತ ಶ್ರೀಲಂಕಾದಲ್ಲಿ ಆನಂದಜೀಯವರೂ ಹಣಕ್ಕಾಗಿ ಒಂದು ಬಲವಾದ ವ್ಯವಸ್ಥೆ ಮಾಡುವ ಪ್ರಯತ್ನದಲ್ಲಿದ್ದರು. ರಾಹುಲರು ಬೇಗನೇ ಭಾರತಕ್ಕೆ ಹಿಂದಿರುಗಲು ನಿರ್ಧರಿಸಿದ್ದರಿಂದ ಸಾಧ್ಯವಾದಷ್ಟೂ ಹೆಚ್ಚು ಟಿಬೇಟೀ ಸಾಹಿತ್ಯ, ಚಿತ್ರಪಟಗಳು ಮುಂತಾದವು ತಮ್ಮ ಜೊತೆಗೆ ಬರಲಿ ಎಂಬುದು ಅವರ ಬಯಕೆ. ಇದಕ್ಕಾಗಿ ಯಥೇಷ್ಟ ಹಣದ ಅವಶ್ಯಕತೆಯಿತ್ತು. ಶ್ರೀಲಂಕೆಯ ವಿದ್ಯಾಲಂಕಾರ ವಿಹಾರದ ಅಧ್ಯಕ್ಷ ಶ್ರೀ ಧರ್ಮಾನಂದ ನಾಯಕಪಾದ ಅವರು ದಾನಿಗಳಿಂದ ಸಂಗ್ರಹಿಸಿದ ಮೂರುಸಾವಿರ ರುಪಾಯಿಗಳನ್ನು, ಆನಂದಜೀ, ತಂತಿ ಮುಖಾಂತರ ಲಾಸಾಕ್ಕೆ ಕಳಿಸಿದರು.

ನಾಯಕಪಾದ ಶ್ರೀ ಧರ್ಮಾನಂದಜೀ ಅವರಿಗೆ ರಾಹುಲರ ಮೇಲೆ ಎಂತಹ ಸ್ನೇಹವಿತ್ತೆಂಬುದು ಅವತ್ತಿನ ಒಂದು ಘಟನೆಯಿಂದ ಸ್ಪಷ್ಟವಾಗುತ್ತದೆ. ನೇಪಾಳ ಮತ್ತು ಟಿಬೆಟುಗಳ ನಡುವೆ ಯುದ್ಧ ನಡೆಯುವ ಸಂಭವವಿದೆ ಎಂದು ತಿಳಿದೊಡನೆ ನಾಯಕಪಾದರು ಆನಂದಜೀ ಅವರಿಂದ ರಾಹುಲರಿಗೆ ಪತ್ರ ಬರೆಸಿದರು. "ಸಿಪಾಯಿಗಳಿಗೆ ಪಂಡಿತ ಯಾರು, ಮೂರ್ಖ ಯಾರು ಎಂಬುದಿಲ್ಲ. ಅವರು ಎಲ್ಲರ ಶಿರಗಳನ್ನು ಸಮಾನ ಭಾವದಿಂದ ತುಂಡರಿಸುವರು. ಹೇಗಾದರೂ ಮಾಡಿ ಬೇಗ ಹಿಂದಿರುಗಿ-ಎಂದು ಬರೆ."

ರಾಹುಲರ ಬಗ್ಗೆ ಬಹಳ ಚಿಂತಿತರಾಗಿದ್ದ ನಾಯಕಪಾದರು, ಭಿಕ್ಷು ಆನಂದರೊಡನೆ "ಲಾಸಾಕ್ಕೆ ವಿಮಾನ ಹೋಗುತ್ತದಾ ಇಲ್ಲವಾ ?"-ಎಂದು ಕೂಡ ವಿಚಾರಿಸಿಕೊಂಡರು.

ಅದೇ ಸಮಯದಲ್ಲಿನ ಇನ್ನೂ ಒಂದು ವಿಷಯವನ್ನು ಇಲ್ಲಿ ಅಗತ್ಯವಾಗಿ ಪ್ರಸ್ತಾಪಿಸಬೇಕಾಗಿದೆ. ನೇಪಾಳ-ಟಿಬೆಟ್ ಯುದ್ಧದ ಅಪಾಯದ ವೇಳೆಯಲ್ಲಿಯೇ ಕಾಶೀ-ಪಂಡಿತ ಸಭಾ 'ಶ್ರೀ ರಾಮೋದಾರ ಸಾಂಕೃತ್ಯಾಯನ'ರಿಗೆ ಅವರ ಅನುಪಸ್ಥಿತಿಯಲ್ಲಿ ಮಾನಪತ್ರ ಅರ್ಪಿಸಿ 'ಮಹಾಪಂಡಿತ' ಬಿರುದು ನೀಡಿ ಸನ್ಮಾನಿಸಿತು. ಮಾನಪತ್ರದಲ್ಲಿ ಅವರಿಗೆ ಈ ಬಿರುದನ್ನು ವಸಂತ ಪಂಚಮಿ ತಿಥಿ, ವಿಕ್ರಮವರ್ಷ 1986 (ಫೆಬ್ರುವರಿ 1930)ರಂದು ನೀಡಲಾಯಿತು ಎಂದಿದೆ. ಸ್ವಾರಸ್ಯವೆಂದರೆ ರಾಹುಲರು ತಮ್ಮ 'ಜೀವನ ಯಾತ್ರಾ' ದಲ್ಲಿ ಈ ಪದವಿಯ ಪ್ರಸ್ತಾಪವನ್ನು ಪ್ರಥಮ ಸಲ ಮಾಡುವುದೇ ತನ್ನ ದ್ವಿತೀಯ ಟಿಬೆಟು ಯಾತ್ರೆ ವೇಳೆ (1934), ಲಾಸಾದಿಂದ ಸಾಕ್ಯಾ ಮಠದ ಕಡೆ ಸಾಗುತ್ತಿರುವಾಗ. ನಂತರ 'ಮಹಾಪಂಡಿತ' ಎಂಬ ಬಿರುದು ಅವರ ಹೆಸರಿನ ಅಭಿನ್ನ ಅಂಗವಾಯಿತಲ್ಲದೆ ಅದು ಅವರ ಬೌದ್ಧಿಕ ಸಂಪನ್ನತೆಯ ಸಂಕೇತವಾಯಿತು.

ಲಾಸಾದಲ್ಲಿ ಯುದ್ಧದ ಬಿರುಗಾಳಿ ಎದ್ದಾಗಲೂ ರಾಹುಲರು ತಮ್ಮ ಕೆಲಸದಲ್ಲಿ ಮಗ್ನರಾಗಿಯೇ ಇದ್ದರು. ಅವರು ಲಾಸಾದ ಆಸುಪಾಸಿನಲ್ಲಿರುವ ಡೇ-ಪುಂಗ್ ಮತ್ತು ಸೈರಾದಂತಹ ಬೃಹತ್ ವಿಹಾರಗಳಿಗೆ ಯಾತ್ರೆ ಮಾಡಿದರು. ಅಲ್ಲಿನ ವಿದ್ವಾಂಸರನ್ನು ಭೇಟಿ ಮಾಡಿದರು. ಬೌದ್ಧಗ್ರಂಥಗಳ ಕುರಿತು ಅಪಾರ ಜ್ಞಾನ ಸಂಪಾದಿಸಿದರು. ಆ ಕಾಲದಲ್ಲಿ ಡೇ-ಪುಂಗ್ ವಿಹಾರದಲ್ಲಿ ಏಳು ಸಾವಿರಕ್ಕೂ ಹೆಚ್ಚು ಮತ್ತು ಸೇರಾದಲ್ಲಿ ಐದು ಸಾವಿರಕ್ಕೂ ಹೆಚ್ಚು ಭಿಕ್ಷುಗಳು ವಾಸಿಸುತ್ತಿದ್ದರು. ಈ ವಿಹಾರಗಳು ಸ್ವಯಂ, ಸಣ್ಣಪುಟ್ಟ ನಗರಗಳೇ ಆಗಿದ್ದುವು.

ಯುದ್ಧ ಕಾರ್ಮೋಡಗಳು ಮರೆಯಾದ ಬಳಿಕ 1930ನೇ ಏಪ್ರಿಲ್‌ನ ಪ್ರಥಮ ಪಕ್ಷದಲ್ಲಿ ರಾಹುಲರು ಮಂಗೋಲ ಭಿಕ್ಷು ಧರ್ಮಕೀರ್ತಿಯ ಜೊತೆಯಲ್ಲಿ ಲಾಸಾದಿಂದ ಸಾಕಷ್ಟು ದೂರದ ಪ್ರಖ್ಯಾತ ಸಮ್ಯೆ ವಿಹಾರಕ್ಕೆ ಯಾತ್ರೆ ಹೋದರು. ಟಿಬೆಟಿನ ಪ್ರಾಚೀನತಮ ಮಠವಾಗಿರುವ ಸಮ್ಯೆ ವಿಹಾರವನ್ನು ನಾಲಂದಾದ ಮಹಾನ್ ಆಚಾರ್ಯ ಶಾಂತರಕ್ಷಿತರು ಕ್ರಿ.ಶ.ಎಂಟನೆ ಶತಮಾನದಲ್ಲಿ ಸಮತಲ ಭೂಮಿಯ ಮೇಲೆ ನಿರ್ಮಿಸಿದ್ದರು. ತಮ್ಮ ಎಪ್ಪತ್ತೈದನೇ ವಯಸ್ಸಿನಲ್ಲಿ ಟಿಬೇಟಿಗೆ ಬಂದ ಆಚಾರ್ಯರು ಸಮ್ಯೇನಲ್ಲಿಯೇ ನಿಧನರಾದರು. "ಗಾಜಿನೊಳಗಿಂದ ಆಚಾರ್ಯ ಶಾಂತ ರಕ್ಷಿತರ ಕಪಾಲವನ್ನು ನಾನು ಕಣ್ಣಾರೆ ಕಂಡಾಗ ನಾನು ತುಂಬಾ ಪ್ರಭಾವಿತನಾದೆ. 'ತತ್ವ ಸಂಗ್ರಹ'ದಂತಹ ಮಹಾನ್ ದಾರ್ಶನಿಕ ಗ್ರಂಥ ಹೊರಟಿದ್ದು ಇದೇ ಕಪಾಲದೊಳಗಿಂದ ! ನಾನು ಸ್ವಲ್ಪ ಹೊತ್ತು ತನ್ಮಯನಾಗಿ ಅದನ್ನು ನೋಡುತ್ತ ನಿಂತೆ" ಎಂದಿದ್ದಾರೆ ರಾಹುಲಜೀ.

ಆಚಾರ್ಯ ಶಾಂತರಕ್ಷಿತರ ನಂತರ ಅನೇಕ ಭಾರತೀಯ ಪಂಡಿತರು ಸಮ್ಯೆ ವಿಹಾರಕ್ಕೆ ಬಂದಿದ್ದರು. ಹನ್ನೊಂದನೇ ಶತಮಾನದ ಮಧ್ಯದಲ್ಲಿ ಸಮ್ಯೆಯ ವಿಶಾಲ ಗ್ರಂಥ ಸಂಗ್ರಹವನ್ನು ನೋಡಿ ಆಚಾರ್ಯ ದೀಪಂಕರ ಶ್ರೀಜ್ಞಾನ (ಅತಿಶಾ) "ವಿಕ್ರಮಶಿಲಾದಲ್ಲಿಯೂ ಸಿಗದ ಎಷ್ಟು ಪುಸ್ತಕಗಳು ಇಲ್ಲಿವೆ !" ಎಂದಿದ್ದರು. ನಂತರ ಸಮ್ಯೆಗೆ ಬೆಂಕಿ ತಗಲಿ ಆ ಪುಸ್ತಕಗಳೆಲ್ಲ ನಾಶವಾದವು. ರಾಹುಲರಿಗೆ ಅಲ್ಲಿ ಯಾವ ಸಂಸ್ಕೃತ ಪುಸ್ತಕಗಳೂ ದೊರಕಲಿಲ್ಲ. ಆದರೆ ಅವರು ಅಲ್ಲಿಂದ ಇಪ್ಪತ್ತೈದು ಟಿಬೇಟೀ ಚಿತ್ರಪಟ, ಒಂದು ಪುರಾತನ ಟಿಬೇಟೀ ಪುಸ್ತಕ ಕೊಂಡುಕೊಂಡರು. ವಾಪಾಸು ಬರುವಾಗ ರಾಹುಲರು ಟಿಬೇಟಿಯನ್ ಮಹಾಪಂಡಿತ ಚೋಂಖ್-ಪಾ ನಿಂದ 1405ನೇ ಇಸವಿಯಲ್ಲಿ ಸ್ಥಾಪಿಸಲ್ಪಟ್ಟ ಪ್ರಸಿದ್ಧ ಗನ್‌ದನ್ ವಿಹಾರವನ್ನು ಸಂದರ್ಶಿಸಿ ಲಾಸಾಕ್ಕೆ ಹಿಂದಿರುಗಿದರು. ಅನಂತರ ಅವರು ಅಲ್ಲಿಂದ ಭಾರತಕ್ಕೆ ಹೊರಡುವ ತಯಾರಿಯಲ್ಲಿ ತೊಡಗಿದರು. ಈಗ ಫರೀ-ಕಾಲಿಂಪ್ರೋಂಜ ಮಾರ್ಗ ಮುಕ್ತವಾಗಿತ್ತು. ಮಂಗೋಲ ಭಿಕ್ಷು ಧರ್ಮಕೀರ್ತಿಯೂ ಜೊತೆಯಲ್ಲಿಯೇ ಭಾರತಕ್ಕೆ ಹೊರಡುವ ಸಿದ್ಧತೆ ನಡೆಸಿದರು. ಪುಸ್ತಕಗಳು, ಚಿತ್ರಪಟಗಳು, ಮತ್ತಿತರ ವಸ್ತುಗಳು ಹದಿನೇಳು-ಹದಿನೆಂಟು ಹೇಸರಗತ್ತೆಗಳ ಮೇಲೆ ಹೇರಿಕೊಂಡು ಕಾಲಿಂಪ್ರೋಂಜಗೆ ಹೊರಡಬೇಕಿತ್ತು. ಇಬ್ಬರೂ ಒಂದೊಂದು ಪಿಸ್ತೂಲು ತೆಗೆದಿರಿಸಿಕೊಂಡು, 1930ರ ಏಪ್ರಿಲ್ 24ರಂದು ಬೆಳಿಗ್ಗೆ ಲಾಸಾ ಬಿಟ್ಟರು.

ನಗಾಚೆ ಮತ್ತು ಗ್ಯಾನಚೀ ಮಾರ್ಗವಾಗಿ ಶಿಗರ್ಚೆ ತಲುಪಿ ಅಲ್ಲಿನ ಟಶೀಲುಂಪ್ರೊ ಮಹಾವಿಹಾರದಲ್ಲಿ ಕೆಲ ಪುಸ್ತಕಗಳನ್ನು ಖರೀದಿಸಿದರು. ಹಾಗೂ 'ತಂಜೂರ್'ನ್ನು ಅಚ್ಚು ಹಾಕಿಸಲಿಕ್ಕಾಗಿ ಕಾಗದ ಮತ್ತು ಶಾಯಿ ಕೊಂಡುಕೊಂಡು ನರ್ಥಂಗ್‌ಗೆ ಹೋದರು. 'ಕಂಜೂರ್'ನ್ನು ಮೊದಲೇ ಕೊಂಡುಕೊಂಡಾಗಿತ್ತು.

ಫರಿ-ಕಾಲಿಂಪ್ರೋಂಜನ ಮಾರ್ಗ ಹಿಡಿಯಲು ಮತ್ತೆ ಗ್ಯಾನಚೀಗೆ ಬರಬೇಕಾಯಿತು. ಮಾರ್ಗದಲ್ಲಿ ನರ್ಥಂಗ್‌ಗೆ ತೆರಳಿ ಅಚ್ಚಾದ 'ತಂಜೂರ್'ನ್ನು ತೆಗೆದುಕೊಂಡರು. ಗ್ಯಾನಚೀಯ ರಸ್ತೆಯಲ್ಲೇ ಮುಂದೆ ಪ್ರಸಿದ್ಧ ಶಲೂ ವಿಹಾರವಿದೆ. ಅಲ್ಲಿನ ರಿಸುರ್‌ಲಾಮಾ 'ವಜ್ರಡಾಕತಂತ್ರ'ದ ಸಂಸ್ಕೃತ ತಾಳೆಗ್ರಂಥ ಹಾಗೂ ಎರಡು ಚಿತ್ರಗಳನ್ನು ರಾಹುಲರಿಗೆ ಕಾಣಿಕೆಯಾಗಿ ಕೊಟ್ಟರು. ಇದು ರಾಹುಲರಿಗೆ ಪ್ರಥಮ ಟಿಬೆಟ್ ಯಾತ್ರೆಯಲ್ಲಿ ದೊರಕಿದ ಏಕಮೇವ ಸಂಸ್ಕೃತ ತಾಳೆಗರಿಯ ಗ್ರಂಥ. ಇದು ಸಿಕ್ಕಿದೆಯೆಂದ

ಮೇಲೆ ಟಿಬೇಟಿನಲ್ಲಿ ಇನ್ನೂ ಅನೇ ತಾಳೆಗ್ರಂಥಗಳು ಇರಬಹುದೆಂಬ ಭರವಸೆ ಅವರಿಗೆ ಉಂಟಾಯಿತು. ಎಲ್ಲ ಸಾಮಗ್ರಿಗಳನ್ನು ಹೇಸರಗತ್ತೆಗಳ ಮೇಲೆ ಹೊರಸಿ ಕಾಲಿಂಪ್ಹೋಂಜಗೆ ಆಗಲೇ ಕಳಿಸಿಬಿಟ್ಟಿದ್ದರು. ತಮಗಾಗಿ ಎರಡು ಹೇಸರಗತ್ತೆಗಳನ್ನು ಬೇರೆಯಾಗಿ ಕೊಂಡುಕೊಂಡಿದ್ದರು. 1930ರ ಮೇ 27ರಂದು ಫರೀ ತಲುಪಿದರು.

ಇಬ್ಬರು ಯಾತ್ರಿಗಳೂ ಅಂತೂ 1930ರ ಜೂನ್ ನಾಲ್ಕರಂದು ಕಾಲಿಂಪ್ಹೋಂಜ ತಲುಪಿದರು. ಅಲ್ಲಿ ಭಾಜೂರತ್ನ ಸಾಹು ಎಲ್ಲಾ ಸಾಮಾನುಗಳನ್ನು ಕಲ್ಕತ್ತಾದವರೆಗೆ ತಲುಪಿಸುವ ಜವಾಬ್ದಾರಿ ವಹಿಸಿಕೊಂಡರು. ಸಾಮಾನುಗಳೋ ಸಾಕಷ್ಟಿದ್ದುವು. ಒಟ್ಟು ಇಪ್ಪತ್ತೊಂದು ಹೇಸರಗತ್ತೆಗಳ ಮೇಲೆ ಹೇರಿಕೊಂಡು ಕಾಲಿಂಪ್ಹೋಂಜವರೆಗೆ ಸಾಗಿಸಿಕೊಂಡು ಬಂದಿದ್ದರು. ಜೂನ್ ಆರರಂದು ಇಬ್ಬರೂ ಬಸ್ ಏರಿ ಸಿಲಿಗುರಿ ತಲುಪಿದರು. ಸೆಕೆಯಿಂದಾಗಿ ಧರ್ಮಕೀರ್ತಿಯ ಆರೋಗ್ಯ ಕೆಟ್ಟಿತು. ಹಾಗಾಗಿ ರಾಹುಲರು ಅವರಿಗೆ ವೆಚ್ಚ ಕೊಟ್ಟು, ಅಲ್ಲಿಂದಲೇ ಹಿಂದಕ್ಕೆ ಕಳಿಸಿಕೊಟ್ಟರು.

ರಾಹುಲರು ತಮ್ಮ ಪ್ರಥಮ ಟಿಬೆಟ್ ಯಾತ್ರೆಯಲ್ಲಿ ಇಪ್ಪತ್ತೊಂದು ಹೇಸರಗತ್ತೆಗಳ ಮೇಲೆ ಹೊರಿಸಿಕೊಂಡು ತಂದ ಸಾಮಗ್ರಿಗಳ ಬಗ್ಗೆ ಇವತ್ತಿಗೂ ಅನೇಕರಲ್ಲಿ ತಪ್ಪು ತಿಳುವಳಿಕೆ ಇದೆ. ಆ ಸಾಮಗ್ರಿಗಳಲ್ಲಿ ಅರ್ಧದಷ್ಟು ಭಾರ ಕಂಜೂರ್-ತಂಜೂರ್‌ಗಳದೇ. ಸಿಕ್ಕಿದ್ದು ಒಂದೇ ಒಂದು ಸಂಸ್ಕೃತ ತಾಳೆ ಗ್ರಂಥ. ಇನ್ನಷ್ಟು ಹೆಚ್ಚಿನ ಹಾಗೂ ಮಹತ್ವಪೂರ್ಣ ತಾಳೆಗ್ರಂಥಗಳನ್ನು ರಾಹುಲರು ತಮ್ಮ ದ್ವಿತೀಯ ಮತ್ತು ತೃತೀಯ ಯಾತ್ರೆಗಳಲ್ಲಿ ಹುಡುಕಿಕೊಂಡರು.

ಜೂನ್ 7ರಂದು ರಾಹುಲರು ಕಲ್ಕತ್ತಾ ತಲುಪಿದರು. ಅಲ್ಲಿ ಬಡಾ ಬಜಾರಿನಲ್ಲಿ ಸತ್ಯಾಗ್ರಹಿಗಳ ಮೇಲೆ ಲಾಠೀ ಪ್ರಹಾರ ಆಗುತ್ತಿರುವುದನ್ನು ಅವರು ಕಣ್ಣಾರೆ ಕಂಡರು. "ನನ್ನ ಮನಸ್ಸು ಅತ್ತ ತೀವ್ರವಾಗಿ ಎಳೆಯಿತು. ಆದರೆ ಇಪ್ಪತ್ತೊಂದು ಹೇಸರಗತ್ತೆಗಳ ಮೇಲೆ ಹೊರಸಿಕೊಂಡು ತಂದ ಟಿಬೇಟಿನ ಗ್ರಂಥರಾಶಿಗಳನ್ನು ಸಿಲೋನಿಗೆ ತಲುಪಿಸುವವರೆಗೂ ಆಸೆಯನ್ನು ಅದುಮಿಟ್ಟುಕೊಳ್ಳುವುದೇ ಒಳಿತೆನ್ನಿಸಿತು."

ರಾಹುಲರು ಪಾಟ್ನಾ ಮತ್ತು ಬನಾರಸ್, ಸಾರನಾಥಗಳ ಕಡೆ ಒಂದು ವಾರ ಕಾಲ ಸಂಚಾರ ಹೋಗಿ ಪುನಃ ಕಲ್ಕತ್ತಾಕ್ಕೆ ಮರಳಿ ಟಿಬೇಟಿನಿಂದ ತಂದ ಎಲ್ಲಾ ಸಾಮಗ್ರಿಗಳನ್ನು ಹಡಗಿನಲ್ಲಿ ಕೊಲಂಬೋಕ್ಕೆ ಕಳಿಸಿಕೊಟ್ಟರು. ಹಾಗೂ ಅವರು ರೈಲಿನಲ್ಲಿ ಮದ್ರಾಸ್‌ಗೆ ಹೋಗಿ, ಅಲ್ಲಿಂದ ಪಯಣಿಸಿ 1930 ಜೂನ್ 20ರಂದು ಶ್ರೀಲಂಕಾದಲ್ಲಿನ ವಿದ್ಯಾಲಂಕಾರ ವಿಹಾರವನ್ನು ತಲುಪಿಕೊಂಡರು. ಹೊರಟು ಒಂದು ವರ್ಷ ಆರು ತಿಂಗಳು ಇಪ್ಪತ್ತು ದಿನಗಳ ನಂತರ "ಲಂಕೆಗೆ ಹಿಂದಿರುಗಿ ಆನಂದಜೀಯವರನ್ನು ಕಂಡ ನಂತರ ನನಗೆ ಅತ್ಯಂತ ಸಂತೋಷ ಕೊಟ್ಟ ಘಟನೆಯೆಂದರೆ ನಾಯಕಪಾದರೊಂದಿಗಿನ ಭೇಟಿ. ಟಿಬೇಟಿಗೆ ಹೋಗಲು ನನ್ನನ್ನು ಬೀಳ್ಕೊಡುವಾಗ ಭಾವಾವೇಶದಿಂದ ಅವರ ಕಣ್ಣಿನಲ್ಲಿ ಹನಿಗೂಡಿದ್ದು ನನಗೀಗಲೂ ನೆನಪಿದೆ"-ಎಂದು ಬರೆದಿದ್ದಾರೆ ರಾಹುಲಜೀ.

# ಯುರೋಪು ಪ್ರವಾಸ

ರಾಹುಲರು ಒಂದು ರೀತಿಯಿಂದ ಬೌದ್ಧ ಭಿಕ್ಷುವಿನ (ಲಾಮಾ) ವೇಷದಲ್ಲಿಯೇ ಟಿಬೇಟು ಪ್ರವಾಸ ಮಾಡಿದ್ದರು. ಆದರೆ ಶ್ರೀಲಂಕೆಗೆ ಮರಳಿದ ಮೇಲೆ ಅವರು ವಿಧಿವತ್ತಾಗಿ ಭಿಕ್ಷುವಾಗಬೇಕಿತ್ತು. ಪ್ರವ್ರಜಿತನಾಗಿ ಮೊದಲು ಶ್ರಮಣನಾಗಬೇಕಾಗುತ್ತದೆ, ಮತ್ತೆ ಉಪಸಂಪದಾದ ದೊಡ್ಡ ಕಾರ್ಯಕ್ರಮ.

ಶ್ರೀಲಂಕೆಗೆ ತಲುಪಿದ ಎರಡು ದಿನಗಳ ನಂತರ ಜೂನ್ 22 (1930)ರಂದು ವಿದ್ಯಾಲಂಕಾರ ವಿಹಾರದಲ್ಲಿ, ನಾಯಕಪಾದ ಧರ್ಮಾನಂದ ಮಹಾಸ್ಥವಿರರ ಗುರುತನದಲ್ಲಿ ರಾಹುಲರಿಗೆ ಪ್ರವ್ರಜ್ಯ ದೀಕ್ಷೆಯಾಯಿತು. ಬೌದ್ಧ ಭಿಕ್ಷುವಾಗುವ ವೇಳೆ, ಹೆಸರು ಬದಲಿಸುವ ಪರಂಪರೆ ಇದೆ. 1927ರಲ್ಲಿ ರಾಹುಲರು ಅಧ್ಯಯನ-ಅಧ್ಯಾಪನಕ್ಕಾಗಿ ಶ್ರೀಲಂಕೆಗೆ ಹೋಗಿದ್ದಾಗ 'ಸ್ವಾಮೀ ರಾಮೋದಾರ ಸಾಧು' ಹೆಸರಿನಲ್ಲಿ ಪ್ರಸಿದ್ಧರಾಗಿದ್ದರಷ್ಟೆ ? ಆದರೆ ಶ್ರೀಲಂಕಾ ಬಿಡುವ ಮೊದಲು ಅವರು ತಮ್ಮ 'ಸಾಂಕೃತ್ಯ' ಗೋತ್ರದ ಆಧಾರದ ಮೇಲೆ ತಮ್ಮ ಹೆಸರನ್ನು 'ರಾಮೋದಾರ ಸಾಂಕೃತ್ಯಾಯನ' ಎಂದು ಮಾಡಿಕೊಂಡು, ಸಂಕ್ಷೇಪವಾಗಿ "ರಾ.ಸಾ." ಎಂದು ಬರೆಯುತ್ತಿದ್ದರು. ಕಾಶೀ - ಪಂಡಿತ -ಸಭಾ "ಮಹಾಪಂಡಿತ" ಪದವಿಯನ್ನು "ಶ್ರೀ ರಾಮೋದಾರ ಸಾಂಕೃತ್ಯಾಯನ"ರಿಗೇ ನೀಡಿತ್ತು.

ಈಗ, ಪ್ರವ್ರಜ್ಯ ದೀಕ್ಷೆಗೆ ಕೆಲ ನಿಮಿಷಗಳ ಮೊದಲು, ಹೊಸ ಹೆಸರಿನ ಪ್ರಸ್ತಾಪ ಬಂತು. ಈ ಕುರಿತು ರಾಹುಲರೇ ಬರೆದಿದ್ದಾರೆ "ಹೆಸರುಗಳೇನೋ ಬಹುಶಃ ಇನ್ನೂ ಒಂದೆರಡು ಸೂಚಿಸಲ್ಪಟ್ಟವು. ಆದರೆ ನಾನು ರಾಮೋದಾರದಲ್ಲಿನ 'ರಾ'ಕ್ಕೆ ಸಾಮ್ಯತೆ ನೋಡಿ 'ರಾಹುಲ' ಹೆಸರನ್ನು ಪ್ರಸ್ತಾಪಿಸಿದೆ. ಅದು ಸ್ವೀಕೃತವಾಯಿತು. ಹೀಗೆ ರಾಹುಲ ಸಾಂಕೃತ್ಯಾಯನ ಹೆಸರಿನಲ್ಲಿ ನಾನು ಪ್ರವ್ರಜಿತನಾದೆ."

ರಾಹುಲರು ಈಗ ಶ್ರಮಣರ ಕಾಷಾಯ ವಸ್ತ್ರದಲ್ಲಿದ್ದರು. ಮೂವತ್ತೇಳು ವರ್ಷ ತುಂಬಿತ್ತು. ಹತ್ತುದಿನಗಳ ನಂತರ, ಜುಲೈ 2 (1930) ರಂದು ಶ್ರೀಲಂಕೆಯ ರಮ್ಯನಗರ ಕ್ಯಾಂಡೀಯಲ್ಲಿನ ಪ್ರಸಿದ್ಧ ಮಲವತ್ತ ವಿಹಾರದಲ್ಲಿ ಏರ್ಪಡಿಸಿದ ಒಂದು ಭವ್ಯ ಸಮಾರಂಭದಲ್ಲಿ ರಾಹುಲರ ಉಪಸಂಪದಾ ನಡೆಯಿತು. "ಶ್ರೀಲಂಕೆಯ ಗೃಹಸ್ಥರು ಹಾಗೂ ಭಿಕ್ಷುಗಳಿಗೆ ನನ್ನ ಮೇಲೆ ವಿಶೇಷ ಗೌರವವಿತ್ತು. ಭಿಕ್ಷು ಸಂಘಕ್ಕೆ ಸೇರಿಕೊಂಡ ಮೇಲೆ ಅದು ಇನ್ನೂ ಹಲವು ಪಟ್ಟು ಹೆಚ್ಚಾಯಿತು."

ಮುಂದೆ ರಾಹುಲರು ಅಧ್ಯಾಪನ ನಡೆಸುತ್ತಲೇ ಒಂದು ಹೊಸ ಪುಸ್ತಕ ಬರೆಯತೊಡಗಿದರು. "ನಾನು ಹಿಂದಿಯಲ್ಲಿ ಬುದ್ಧನ ಜೀವನ ಚರಿತ್ರೆ ಬರೆಯಲು ಕೈ ಹಚ್ಚಿದೆ. ನನ್ನ ಶಬ್ದಗಳಲ್ಲಿಯೇ ಸ್ವತಂತ್ರವಾಗಿ ಬರೆಯುವ ಬದಲು ತ್ರಿಪಿಟಕಾದಿಂದ ಸಂಗ್ರಹಿಸಿದ ಅದರದೇ ಶಬ್ದಗಳಲ್ಲಿರಲಿ, ಈ ಮೂಲಕ ಓದುಗರು ತ್ರಿಪಿಟಕಾದಲ್ಲಿರುವ ಐತಿಹಾಸಿಕ, ಭೌಗೋಲಿಕ ಮಾಹಿತಿಗಳ ಲಾಭ ಪಡೆಯುತ್ತಾ ಬುದ್ಧನ ಜೀವನವನ್ನು ಓದಿಕೊಳ್ಳಲಿ ಹಾಗೂ ಅವರೇ ಸ್ವತಂತ್ರವಾಗಿ ನಿರ್ಣಯಿಸಲಿ ಎಂದು ಇಚ್ಛಿಸಿದೆ.



ಭಿಕ್ಷು ರಾಹುಲ ಸಾಂಕೃತ್ಯಾಯನರು ಕ್ಯೋತೋ ನಗರದಲ್ಲಿ
ತಮ್ಮ ಜಪಾನೀ ಮಿತ್ರರೊಡನೆ (ಆಗಸ್ಟ್ 1935)



ಭಿಕ್ಷು ರಾಹುಲರು ಮಂಚೂರಿಯಾದ ಮುಕದನ್ ನಗರದ ಹಿಗಾಶಿ ಬೌದ್ಧ ಮಂದಿರದಲ್ಲಿ
(ಆಗಸ್ಟ್ 1935)



ಭಿಕ್ಷು ರಾಹುಲರು ಕೊರಿಯಾದ ಗೋ-ಸಾನ್ ಪರ್ವತ ಶಿಖರಗಳ ನಡುವೆ
(ಆಗಸ್ಟ್ 1935)



ಮಹಾಕವಿ ನಿರಾಲಾ ಅವರೊಡನೆ ಮಹಾಪಂಡಿತ ರಾಹುಲರು (ಅಲಹಾಬಾದ್, 27
ಡಿಸೆಂಬರ್ 1955)



ಮಧ್ಯ ಏಶಿಯಾ ಕೆ ಇತಿಹಾಸ್ ಪುಸ್ತಕಕ್ಕಾಗಿ ಜವಾಹರಲಾಲ್ ನೆಹರೂ ಅವರಿಂದ
ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸ್ವೀಕರಿಸುತ್ತಿರುವ ರಾಹುಲರು (1958)
(ಫೋಟೋ: ವೀರೇಂದ್ರ ಕುಮಾರ್)



ಚಿಕಿತ್ಸೆಗಾಗಿ ಮಾಸ್ಕೋಗೆ ಹೊರಡುತ್ತಿರುವ ರಾಹುಲರು (1961)
(ಫೋಟೋ: ಮಹೇಂದ್ರ ಆಚಾರ್ಯ ಅವರ ಸೌಜನ್ಯದಿಂದ)



ರಾಹುಲರು, ಆನಂದರು, ಕಾಶ್ಯಪರು, ಶಾಂತಿ ಭಿಕ್ಷು ಶಾಸ್ತ್ರಿ ಮತ್ತು ನಾಗಾರ್ಜುನ
ಅವರುಗಳಿಗೆ ದೀಕ್ಷೆ ನೀಡಿದ ಬೌದ್ಧ ಗುರು ನಾಯಕಪಾದ ಧಮ್ಮಾನಂದ ಮಹಾಸ್ಥವೀರ
(ಶ್ರೀಲಂಕಾ)

ಅಧ್ಯಯನದ ವೇಳೆ ಮಾಡಿಕೊಂಡ ಟಿಪ್ಪಣಿಗಳಿಂದಾಗಿ ಸಾಮಗ್ರಿ ಜೋಡಿಸಿಕೊಳ್ಳಲು ನನಗೆ ತುಂಬ ಸುಲಭವಾಗಿ ತ್ವರಿತಗತಿಯಿಂದ 'ಬುದ್ಧಚರ್ಯಾ' ಬರವಣಿಗೆ ಆರಂಭಿಸಿದೆ."

ಬುದ್ಧಚರ್ಯಾ ಒಂದು ಅದ್ಭುತ ಗ್ರಂಥ. ಪಾಲಿ ತ್ರಿಪಿಟಕಾದಲ್ಲಿ ಎಲ್ಲೆಲ್ಲಿ ಬುದ್ಧನ ಜೀವನಚರಿತ್ರೆಯ ಮತ್ತು ಉಪದೇಶಗಳ ಕುರಿತು ವಿಪುಲ ವಿವರ ಹರಡಿಕೊಂಡಿದೆಯೋ ಅವೆಲ್ಲ ಈ ಗ್ರಂಥದಲ್ಲಿ ಸಂಗ್ರಹಗೊಂಡಿವೆ. ಅಲ್ಲದೆ ರಾಹುಲರು ತ್ರಿಪಟೀಕಾದಲ್ಲಿನ ಭೌಗೋಲಿಕ, ಐತಿಹಾಸಿಕ, ಸಾಮಾಜಿಕ ಹಾಗೂ ರಾಜನೈತಿಕ ವಿಚಾರಗಳನ್ನು ಇಲ್ಲಿ ಏಕತ್ರ ಕೂಡಿಸಿಕೊಟ್ಟಿದ್ದಾರೆ.

ಟಿಬೇಟಿನಿಂದ ತಂದ ಎಲ್ಲಾ ಸಾಮಗ್ರಿಗಳು - ಪುಸ್ತಕಗಳು, ಚಿತ್ರಪಟಗಳು ಇತ್ಯಾದಿ - ವಿದ್ಯಾಲಂಕಾರ ವಿಹಾರ ತಲುಪಿದ್ದು ಅವನ್ನು ವ್ಯವಸ್ಥಿತವಾಗಿ ಜೋಡಿಸಿಡಲಾಗಿತ್ತು. ಭಾರತದಲ್ಲಿ ಸತ್ಯಾಗ್ರಹ ನಡೆಯುತ್ತಲಿತ್ತು. ರಾಹುಲರು ಮತ್ತು ಭಿಕ್ಷು ಆನಂದ ಇಬ್ಬರೂ ಅದರಲ್ಲಿ ತಾವೂ ಸೇರಿಕೊಳ್ಳಲೇಬೇಕೆಂದುಕೊಂಡವರು. ಆದುದರಿಂದ ಅನಂದರು ಮುಂಚೆಯೇ ಭಾರತಕ್ಕೆ ಬಂದರು. ರಾಹುಲರು "ಬುದ್ಧಚರ್ಯಾ" ಪುಸ್ತಕವನ್ನು ಒಟ್ಟು ಅರ್ವತ್ತೆಂಟು ದಿನಗಳಲ್ಲಿ ಪೂರ್ತಿಗೊಳಿಸಿ ಬಹಳ ಕಷ್ಟದಿಂದ ನಾಯಕಪಾದರ ಅಪ್ಪಣೆಯನ್ನು ಪಡೆದು ಡಿಸೆಂಬರ್ 15 (1930) ರಂದು, ಭಾರತ ತಲುಪಿದರು.

ಬನಾರಸು ಮೂಲಕ ರಾಹುಲರು ತನ್ನ ಕಾರ್ಯಕ್ಷೇತ್ರವಾದ ಛಪರಾಕ್ಕೆ ಹೋದರು. ಹಳೆಯ ಜೊತೆಗಾರರು ಸಿಕ್ಕಿ ಪರಿಸ್ಥಿತಿಯ ಅಂದಾಜಾಯಿತು. ಈಗ ಅವರು ಸಾಧು ರಾಮೋದಾರ ಬಾಬಾ ಅಲ್ಲ, ಮಹಾಪಂಡಿತ ರಾಹುಲ್ ಸಾಂಕೃತ್ಯಾಯನರಾಗಿದ್ದರು. ಹಿಂದೂ ಅಲ್ಲ, ಬೌದ್ಧ ಭಿಕ್ಷುವಾಗಿದ್ದರು. ಮುಸಲ್ಮಾನರ ಮನೆಗಳಲ್ಲಿ ರೊಟ್ಟಿ ಮಾಂಸ ತಿನ್ನಲು ಅವರಿಗೀಗ ಯಾವ ಸಂಕೋಚವೂ ಇರಲಿಲ್ಲ.

ರಾಹುಲರಂತೆ ಬಿಹಾರದ ಇತರ ಅನೇಕ ನಾಯಕರೂ ಗಾಂಧೀವಾದದಿಂದ ನಿರಾಶರಾಗಿ ಬಿಟ್ಟಿದ್ದರು. ಅವರೆಲ್ಲ ಸೇರಿ 1931ರಲ್ಲಿ ಬಿಹಾರ ಸೋಶಲಿಸ್ಟ್ ಪಾರ್ಟಿಯನ್ನು ಕಟ್ಟಿ ರಾಹುಲಜೀ ಅವರನ್ನು ಅದರ ಓರ್ವ ಮಂತ್ರಿಯನ್ನಾಗಿ ಮಾಡಿದರು.

ಆ ವರ್ಷ ಮಾರ್ಚ್‌ನಲ್ಲಿ ಕರಾಚಿಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಅನೇಕ ಗೆಳೆಯರೊಂದಿಗೆ ರಾಹುಲರು ಅಲ್ಲಿಗೆ ಹೋದರು. ಅಲ್ಲಿ ಭಿಕ್ಷು ಆನಂದರೂ ಸಿಕ್ಕಿದರು. ಅಲ್ಲಿಯೇ ಪ್ರಥಮವಾಗಿ ಆಚಾರ್ಯ ಧರ್ಮಾನಂದ ಕೋಸಂಬಿ (1876-1947) ಅವರೊಂದಿಗೆ ರಾಹುಲರ ಭೇಟಿಯಾಯಿತು. ಧರ್ಮಾನಂದರು ಪಾಲಿ ಬೌದ್ಧಸಾಹಿತ್ಯದ ಅಧ್ಯಯನಕ್ಕಾಗಿ ಶ್ರೀಲಂಕೆಗೆ ಹೋದವರು, ಬೌದ್ಧ ಭಿಕ್ಷುವಾದವರು, ಅಮೆರಿಕಾದ ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಮೂರು ವರ್ಷಗಳ ಕಾಲ ಸಂಪಾದನ ಕಾರ್ಯ ಮಾಡಿ, ಪ್ರೊಫೆಸರ್ ಶ್ಚೆರ್‌ವಾತ್‌ಸ್ಕೀಯವರ ಆಹ್ವಾನದ ಮೇರೆಗೆ ಲೆನಿನ್‌ಗ್ರಾಡಿಗೂ ಹೋಗಿ ಬಂದವರು. ಕರಾಚಿ ಅಧಿವೇಶನವಾದ ಕೆಲತಿಂಗಳ ಬಳಿಕ ಅವರು ಒಂದು ವರ್ಷದ ಮಟ್ಟಿಗೆಂದು ನಾಲ್ಕನೆಯ ಬಾರಿಗೆ ಮತ್ತೆ ಹಾರ್ವರ್ಡ್‌ಗೆ ಹೊರಟು ಹೋದರು.

ಕರಾಚಿ ಕಾಂಗ್ರೆಸ್ ಅಧಿವೇಶನದ ಬಳಿಕ ಆನಂದಜೀ ಶ್ರೀಲಂಕೆಗೆ ವಾಪಾಸು ಹೋದರೆ ರಾಹುಲಜೀ ಮೊಹೆಂಜೋದಾರೋ, ಹರಪ್ಪ ಮುಂತಾದೆಡೆ ಸಂಚರಿಸುತ್ತಾ ಛಪರಾ ತಲುಪಿದರು. ಕೆಲ ದಿನಗಳ ನಂತರ ವಾರಣಾಸಿಗೆ ತೆರಳಿದರು. ಅಲ್ಲಿ ಆಚಾರ್ಯ ನರೇಂದ್ರ ದೇವರ ಜೊತೆ ಕಾಶೀ

ವಿದ್ಯಾಪೀಠದಲ್ಲಿದ್ದುಕೊಂಡು 'ಬುದ್ಧಚರ್ಯಾ' ಮತ್ತು 'ಅಭಿಧರ್ಮ ಕೋಶ'ಗಳ ಮುದ್ರಣ ಕಾರ್ಯವನ್ನು ಮುಗಿಸಿದರು.

ಅದೇ ವರ್ಷ ಸಾರನಾಥದಲ್ಲಿ ಹೊಸ ಮೂಲಗಂಧ ಕುಟೀ ವಿಹಾರದ ಉದ್ಘಾಟನಾ ಮಹೋತ್ಸವ ನಡೆಯಿತು. ಅದಕ್ಕಾಗಿ ನಾಯಕಪಾದ ಧರ್ಮಾನಂದಜೀ ಕೂಡ ಸಾರನಾಥಕ್ಕೆ ಬಂದಿದ್ದರು. ಜೊತೆಯಲ್ಲಿ ಆನಂದಜೀ, ಎಲ್ಲರಿಗೂ ಶ್ರಾವಸ್ತೀ, ಕುಶೀನಗರ, ನಲಂದಾ, ರಾಜಗೃಹ ಮುಂತಾದ ಬೌದ್ಧ ಕ್ಷೇತ್ರಗಳ ಯಾತ್ರೆ ಮಾಡಿಸಿದ್ದರು. ರಾಹುಲರು ಅವರ ಜೊತೆಗೇ ಶ್ರೀಲಂಕೆಗೆ ಮರಳಿದರು.

ಶ್ರೀಲಂಕಾ ತಲುಪಿದ ಕೆಲವೇ ತಿಂಗಳುಗಳಲ್ಲಿ ರಾಹುಲರೂ ಆನಂದರೂ ಇಂಗ್ಲೆಂಡಿಗೆ ಹೋಗುವ ತಯಾರಿ ನಡೆಸಬೇಕಾಯಿತು. ಸಂಗತಿ ಏನೆಂದರೆ ಮಹಾಬೋಧ ಸಭಾ ಲಂಡನಿನಲ್ಲಿ ಪ್ರಚಾರಕ್ಕೆಂದು ಕಳಿಸಿದ ಭಿಕ್ಷುಗಳು ಹಿಂದಕ್ಕೆ ಬರುತ್ತಲಿದ್ದರು. ಸಭಾದ ಟ್ರಸ್ಟಿಯೆದುರು ಹೊಸ ಪ್ರಚಾರಕರನ್ನು ಕಳಿಸುವ ಸವಾಲು ಇತ್ತಾಗಿ ಅವರ ದೃಷ್ಟಿ ಆನಂದಜೀಯವರ ಮೇಲೆ ಬಿತ್ತು. "ಆನಂದಜೀ ಒಬ್ಬರೇ ಲಂಡನ್ನಿಗೆ ಹೋಗಲು ಸಿದ್ಧರಿರಲಿಲ್ಲ. ಆದ್ದರಿಂದ ತಮ್ಮ ಜೊತೆಗೆ ಬರುವಂತೆ ಅವರು ನನಗೂ ಹೇಳಿದರು. ನಾನು ಕೆಲ ತಿಂಗಳ ಮಟ್ಟಿಗೆ ಮಾತ್ರ ಹೋಗಲು ಬಯಸಿದ್ದೆ, ಅದೂ ಒಮ್ಮೆ ಹೊರಹೋಗಲು ಪಾಸ್‌ಪೋರ್ಟ್ ಸಿಗಲಿ ಎಂಬ ಆಸೆಯಿಂದ."

ಆದರೆ ರಾಹುಲರ ರಾಜಕೀಯ ಚಟುವಟಿಕೆಗಳ ಕಾರಣ ಅವರಿಗೆ ಬ್ರಿಟಿಷ್ ಸರಕಾರದಿಂದ ಪಾಸ್‌ಪೋರ್ಟ್ ಸಿಗುವುದು ಹೆಚ್ಚು ಕಡಿಮೆ ಅಸಂಭವವೇ ಇತ್ತು. ಪಾಸ್‌ಪೋರ್ಟ್ ದೊರಕಿಸಲು ಶ್ರೀಲಂಕೆಯ ಅಂದಿನ ಪ್ರಧಾನಮಂತ್ರಿ ಸರ್ ಜಯತಿಲಕರೇ ಸ್ವತಃ ಹಸ್ತಕ್ಷೇಪ ಮಾಡಬೇಕಾಗಿ ಬಂದಿತು. ಅಂತೂ ಅವರಿಗೆ ಪಾಸ್‌ಪೋರ್ಟ್ ಸಿಕ್ಕಿತು. ರಾಹುಲರಿಗೋ, "ಪಾಸ್‌ಪೋರ್ಟ್ ಸಿಕ್ಕಿದಾಗ ಸಿಕ್ಕಿದ್ದೆಂದರೆ ದೀರ್ಘಾವಧಿ ಬಂಧನದಲ್ಲಿರುವ ಕೈದಿಗೆ ಹೊರಹೋಗಲು ಅನುಮತಿ ಸಿಕ್ಕಿದಷ್ಟು ಸಂತೋಷವಾಯಿತು."

ಕೊಲಂಬೋ ಬಂದರಿನಿಂದ ಜುಲೈ 5, 1932ರಂದು ಪೀತ ವಸ್ತ್ರಧಾರಿಗಳಾದ ಇಬ್ಬರು ಭಿಕ್ಷುಗಳು ಒಂದು ಫ್ರೆಂಚ್ ಹಡಗಿನಲ್ಲಿ ಯುರೋಪಿಗೆ ಹೊರಟರು. ಆನಂದರು ಶುದ್ಧ ಶಾಖಾಹಾರಿಗಳು. ಸಮುದ್ರ ಪ್ರಯಾಣ ಅವರನ್ನು ಕಂಗೆಡಿಸಿತು. ಕೆಂಪು ಸಮುದ್ರ, ಸುಯೆಜ್ ಕಾಲುವೆ ಮತ್ತು ಭೂಮಧ್ಯಸಾಗರ ಮಾರ್ಗವಾಗಿ, ಹಡಗು ಜುಲೈ 23 ರಂದು ಫ್ರಾನ್ಸಿನ ಮಾರ್ಸೆ ಬಂದರು ತಲುಪಿತು. ಟ್ರೈನಿನಲ್ಲಿ ಪ್ಯಾರಿಸ್ಸಿಗೆ ಹೋಗಿ ಅಲ್ಲಿ ಎರಡು ದಿನವಿದ್ದು ಕೆಲ ಪ್ರಾಚ್ಯ ವಿದ್ವಾಂಸರನ್ನು ಭೇಟಿ ಮಾಡಿ, ಅಲ್ಲಿನ ಕೆಲ ಸ್ಮಾರಕಗಳನ್ನು ವೀಕ್ಷಿಸಿ ಪ್ಯಾರಿಸ್ಸಿನಿಂದ ಟ್ರೈನ್ ಹಾಗೂ ಹಡಿಗಿನಲ್ಲಿ ಪಯಣ ಮುಂದುವರಿಸಿದ ಈರ್ವರೂ ಜುಲೈ 27ರಂದು ಲಂಡನ್ ತಲುಪಿದರು. ಅಲ್ಲಿ ರೀಜೆಂಟ್ ಪಾರ್ಕ್‌ನ ಸಮೀಪದಲ್ಲಿಯೇ ಮಹಾಬೋಧಿ ಸಭಾಭವನ.

ಲಂಡನ್ನಿನಲ್ಲಿದ್ದ ಮೂರೂವರೆ ತಿಂಗಳ ಕಾಲ, ತಾವು ಆನಂದಜೀಯವರಂತೆ ಪ್ರಚಾರದ ಹೊಣೆ ಹೊತ್ತು ಹೋದವರಲ್ಲವಾದ್ದರಿಂದ, ಇಂಗ್ಲೆಂಡ್ ವಾಸದ ಸಂಪೂರ್ಣ ಪ್ರಯೋಜನ ಪಡೆದರು ರಾಹುಲಜೀ. ಲಂಡನ್ ಮುಟ್ಟಿದ ಮಾರನೆಯ ದಿನವೇ ಅಲ್ಲಿನ ಪತ್ರಕರ್ತರ ಕರಾಮತಿನ ಅನುಭವ. 'ಡೇಲಿ ಮೆಯ್ಲ್'ನ ಸಂದರ್ಶಕರು ರಾಹುಲರೊಡನೆ ಅವರ ಟಿಬೇಟ್ ಪ್ರವಾಸದ ಅನುಭವದ ಕುರಿತು ಕೇಳಿದಾಗ ಅವರು ಸರಳವಾಗಿ ತಿಳಿಸಿದ್ದರು. ಮಾರನೆಯ ದಿನ ಪತ್ರಿಕೆಯಲ್ಲಿ ಓದಿದ್ದು:- ಭಿಕ್ಷು ರಾಹುಲರು ಜಗತ್ತಿನ ದೊಡ್ಡದೊಡ್ಡ ನಿಬಿಡ ನಿಗೂಢ ಕಾಡುಗಳಲ್ಲಿ ಹಲವು ವರ್ಷಗಳನ್ನು ಕಳೆದವರು,

ಆದರೆ ಇದುವರೆಗೆ ಒಂದೇ ಒಂದು ಪ್ರಾಣಿ ಅವರ ಮೇಲೆ ಎಗರಿದ್ದಿಲ್ಲ, ಒಂದು ದಿನ ಈ ಭಿಕ್ಷು ಟಿಬೇಟಿನ ಒಂದು ಘೋರಾರಣ್ಯದಲ್ಲಿ ಹೋಗುತ್ತ ಇದ್ದಾಗ (ಟಿಬೇಟಿನಲ್ಲಿರುವುದು ಬೋಳುಗುಡ್ಡಗಳು. ಘನ ಅರಣ್ಯಗಳಿಲ್ಲ) ಆರೇಳು ಡಕಾಯಿತರು ನಾಲ್ಕೂ ದಿಕ್ಕುಗಳಿಂದ ಮುತ್ತಿಕೊಂಡರು. ಅವರು ಇನ್ನೇನು ಕತ್ತಿ ಬೀಸಬೇಕೆನ್ನುವಾಗ ಕಾಡಿನಿಂದ ಹುಲಿಯೊಂದು ಹೊರಬಂದು ಜೋರಾಗಿ ಗರ್ಜಿಸಿತು. ಡಕಾಯಿತರು ಪ್ರಾಣ ಕೈಯಲ್ಲಿ ಹಿಡಿದುಕೊಂಡು, ಓಟಕಿತ್ತರು-ಹೀಗೆ.

ಲಂಡನಿನಲ್ಲಿ ರಾಹುಲರು ಮೂರುನಾಲ್ಕು ಪತ್ರಿಕೆಗಳನ್ನು ತಪ್ಪದೆ ಓದುತ್ತಿದ್ದರು. ಆದರೆ ಕಮ್ಯುನಿಸ್ಟರ 'ಡೇಲಿ ವರ್ಕರ್' ಪತ್ರಿಕೆಯನ್ನೂ ಹೆಚ್ಚು ಆಸಕ್ತಿಯಿಂದ ಓದುತ್ತಿದ್ದರು. ಆಗಾಗ ಬ್ರಿಟಿಷ್ ಮ್ಯೂಸಿಯಮ್ಮಿಗೆ ಹೋಗುವರು. ಕೆಸಿಂಗ್ಟನ್ ಮ್ಯೂಸಿಯಮ್ಮಿಗೆ ಹೋಗಿ ಅಲ್ಲಿ ಈ ಇಬ್ಬರು ಬೌದ್ಧ ಭಿಕ್ಷುಗಳು ಬುದ್ಧನ ಶಿಷ್ಯ ಸಾರಿಪುತ್ರ ಮತ್ತು ದ್ಗಲ್ಯಾಯನರ ಅಸ್ಥಿ-ಧಾತುಗಳ ದರ್ಶನ ಮಾಡಿದರು. ಇಬ್ಬರೂ ಕೇಂಬ್ರಿಜ್ ಮತ್ತು ಆಕ್ಸ್‌ಫರ್ಡ್ ಯುನಿವರ್ಸಿಟಿಗಳಿಗೆ ಹೋಗಿ ಬಂದರು. ಹೈಗೇಟ್ ಸ್ಮಶಾನಕ್ಕೆ ಹೋಗಿ ಮಾರ್ಕ್ಸ್‌ನ ಸಮಾಧಿಯ ಮೇಲೆ ಹೂವೇರಿಸಿದರು.

ರಾಹುಲರು ಸುಲ್ತಾನ್‌ಗಂಜ್ (ಭಾಗಲ್ಪುರ)ನಿಂದ ಹೊರಡುವ ಪತ್ರಿಕೆ 'ಗಂಗಾ'ದ ಪುರಾತತ್ವಾಂಕದ ಸಂಪದಾನವನ್ನು ವಹಿಸಿಕೊಂಡಿದ್ದರಾಗಿ ಲಂಡನಿನಲ್ಲಿ ಈ ಪತ್ರಿಕೆಗೆ ಕೆಲ ಲೇಖನಗಳನ್ನು ಸಿದ್ಧ ಪಡಿಸಿದರು. ಟಿಬೇಟಿನಿಂದ ತಂದ ಸುಮಾರು ಮೂರು ಡಜನು ಆಯ್ದ ಚಿತ್ರಗಳನ್ನು ತನ್ನ ಜೊತೆಗೆ ಅವರು ಲಂಡನಿಗೆ ಒಯ್ದಿದ್ದರು. ಅಲ್ಲಿ ಅವುಗಳ ಪ್ರದರ್ಶನ ಏರ್ಪಟ್ಟಿತು. ಆಗಲೇ ರಾಹುಲರಿಗೆ ಅವುಗಳ ನಿಜವಾದ ಬೆಲೆ ತಿಳಿದದ್ದು.

ಆ ಚಿತ್ರಗಳಲ್ಲಿ ಕೆಲವನ್ನು ಮಾರಿ ನಾಲಂದಾದಲ್ಲಿ ಮಹಾವಿಹಾರ ನಿರ್ಮಿಸಲು ಸ್ಥಳಕೊಳ್ಳಬೇಕೆಂದು ಮೊದಲು ಅವರು ಯೋಚಿಸಿದ್ದರು. ಒಂದು ಅಮೇರಿಕನ್ ಮ್ಯೂಸಿಯಮ್ಮಿನೊಂದಿಗೆ ಚಿತ್ರ ಮಾರಾಟದ ಬಗ್ಗೆ ಮಾತುಕತೆಯೂ ನಡೆದಿತ್ತು. ಆದರೆ ಲಂಡನಿನಲ್ಲಿ ಯಾವಾಗ ಅವರಿಗೆ ಈ ಚಿತ್ರಗಳ ಬೆಲೆ ತಿಳಿಯಿತೋ ಅವತ್ತೇ ಅವುಗಳ ಮಾರಾಟದ ಯೋಚನೆಯನ್ನೇ ಅವರು ಕೈ ಬಿಟ್ಟರು. ಲಂಡನಿನಿಂದಲೇ ಅವರು ಪಾಟ್ನಾ ಮ್ಯೂಸಿಯಮ್ಮಿನ ಅಧ್ಯಕ್ಷ ಡಾ। ಕಾಶೀಪ್ರಸಾದ ಜೈಸ್ವಾಲ್ ಅವರಿಗೆ "ನಾನು ನನ್ನ ಟಿಬೇಟೀ ಚಿತ್ರಗಳನ್ನು ಮ್ಯೂಸಿಯಮ್ಮಿಗೆ ಕೊಡಲು ತಯಾರಿದ್ದೇನೆ. ಆದರೆ ನಾಲಂದಾದಲ್ಲಿ ಸುಭದ್ರ ಸ್ಥಳವಾದ ತಕ್ಷಣ ಅವನ್ನು ಅಲ್ಲಿಗೆ ಕಳಿಸಬೇಕು"-ಎಂದು ಬರೆದರು.

ಕೆಲ ದಿನಗಳ ಬಳಿಕ ರಾಹುಲರು ಪ್ಯಾರಿಸ್ಸಿನಲ್ಲಿದ್ದಾಗ ಜೈಸ್ವಾಲರ ತಂತಿ ಬಂತು. "ಟಿಬೇಟೀ ಚಿತ್ರಗಳ ಬಗ್ಗೆ ನೀವು ಅಕ್ಟೋಬರ 22ರಂದು ಬರೆದ ಪತ್ರದಲ್ಲಿನ ಷರತ್ತು ಕೃತಜ್ಞತಾ ಪೂರ್ವಕವಾಗಿ ಸ್ವೀಕೃತವಾಗಿದೆ." ಇದಕ್ಕೆ ರಾಹುಲರ ಟಿಪ್ಪಣಿ "ನಾಲಂದಾದ ಕನಸು ಕಾಣುತ್ತ ನಾನು ಒಂದು ಅಮೆರಿಕನ್ ಮ್ಯೂಸಿಯಂಗೆ ಚಿತ್ರಗಳ ಮಾರಾಟದ ಕುರಿತು ಪತ್ರ ಬರೆದಿದ್ದೆ. ನಾನೆಲ್ಲಾದರೂ ಲಂಡನ್ನಿಗೆ ಹೋಗಿರದಿದ್ದರೆ ಇಷ್ಟು ಬೇಗ ನನಗೆ ಅವುಗಳ ಮಹತ್ವದ ಅರಿವೇ ಆಗುತ್ತಿರಲಿಲ್ಲ. ಬಹುಶಃ ತಪ್ಪು ಮಾಡಿ ಬಿಡುತ್ತಿದ್ದೆ."

ರಾಹುಲರು ತಮ್ಮ ಪ್ರಥಮ ಟಿಬೇಟ್ ಪ್ರವಾಸದಲ್ಲಿ ಅಲ್ಲಿಂದ ಸುಮಾರು ನೂರೈವತ್ತು ಚಿತ್ರಗಳನ್ನು ತಂದಿದ್ದರು. ಆ ಕಾಲದಲ್ಲಿಯೇ ಅವುಗಳ ಬೆಲೆ ಒಂದು ಲಕ್ಷ ರುಪಾಯಿಗೂ ಅಧಿಕವಾಗಿತ್ತು.

ಇಂಗ್ಲೆಂಡಿನಿಂದ ರಾಹುಲರು ಅಮೆರಿಕಾಕ್ಕೆ ಹೋಗಲಿ ಎಂದು ಮಹಾಬೋಧಿ ಸಂಘದವರು ಬಯಸುತ್ತಿದ್ದರು. ಆದರೆ ಅವರಿಗೆ ಧರ್ಮಬೋಧೆಯಲ್ಲಿ ಏನೂ ಆಸಕ್ತಿ ಇರಲಿಲ್ಲ. ಈಗಂತೂ ಸಾಮ್ಯವಾದದ ಕಡೆಗೆ ಮನಸ್ಸು ಹೆಚ್ಚು ವಾಲುತ್ತ ಇತ್ತು. ಸಾಧ್ಯವಾದರೆ ಸೋವಿಯತ್ ರಷ್ಯಾ ಪ್ರವಾಸ ಮಾಡಬೇಕೆಂದುಕೊಂಡಿದ್ದರು. 1932ರ ನವೆಂಬರ್ 14ರಂದು ಆನಂದಜೀ ಮತ್ತಿತರರಿಂದ ಬೀಳ್ಕೊಂಡು ಪ್ಯಾರಿಸ್ಸಿಗೆ ತೆರಳಿದರು.

ಪ್ಯಾರಿಸ್ಸಿನ ಸಂಗ್ರಹಾಲಯದಲ್ಲಿಯೂ ಟಿಬೇಟ್ ಚಿತ್ರಗಳು ಪ್ರದರ್ಶನಗೊಂಡವು. ಅಲ್ಲಿಯ ಕಲಾವಿಮರ್ಶಕರ ಮುಕ್ತ ಪ್ರಶಂಸೆ ಪಡೆದವು. ಪ್ಯಾರಿಸ್ಸಿನ ಈ ಸಂಗ್ರಹಾಲಯದಲ್ಲಿ ಅನೇಕ ಭಾರತೀಯ ಕಲಾಕೃತಿಗಳಿವೆ.

ರಾಹುಲರ ಪ್ಯಾರಿಸ್ ಸಂದರ್ಶನದ ಒಂದು ಮಹತ್ವಪೂರ್ಣ ಘಟನೆಯೆಂದರೆ ಪ್ರೊ. ಸಿಲ್ವಾನ್ ಲೇವೀಯವರೊಂದಿಗೆ ನಡೆದ ಭೇಟಿ. ಇವರು ಭಾರತೀಯ ಸಂಸ್ಕೃತಿ ಕುರಿತಂತೆ ಜಗತ್ತಿನಲ್ಲೇ ಅತ್ಯಂತ ಶ್ರೇಷ್ಠ ವಿದ್ವಾಂಸರಲ್ಲೊಬ್ಬರು. ಎಪ್ಪತ್ತು ವರ್ಷ ವಯಸ್ಸಿನಲ್ಲಿಯೂ ಏನೋ ಸಂಶೋಧನಾ ಕಾರ್ಯದಲ್ಲಿ ಮಗ್ನರಾಗಿದ್ದರು. ರಾಹುಲರು ಅವರೊಂದಿಗೆ ನಾಲ್ಕು ಗಂಟೆಗಳ ಕಾಲ ಮಾತುಕತೆಯಾಡಿದರು. 'ಅಭಿಧರ್ಮಕೋಶ'ದ ಒಂದು ಪ್ರತಿಯನ್ನು ಅವರಿಗೆ ಕಾಣಿಕೆಯಾಗಿ ನೀಡಿದರು. 'ಗಂಗಾ' ಪತ್ರಿಕೆಯ ಪುರಾತತ್ತ್ವ ಅಂಕಕ್ಕಾಗಿ ಬರೆದ 'ಮಹಾಯಾನ ಕೀ ಉತ್ಪತ್ತಿ' ಹಾಗೂ 'ಚೌರಾಸೀ ಸಿದ್ಧ' ಎಂಬ ಎರಡು ಲೇಖನಗಳನ್ನೂ ಲಂಡನ್ನಿನಲ್ಲಿದ್ದಾಗ ಮಾಡಿದ ಇವುಗಳ ಇಂಗ್ಲಿಷ್ ಅನುವಾದವನ್ನೂ ಪ್ರೊ. ಸಿಲ್ವಾನ್ ಲೇವೀಯವರಿಗೆ ತೋರಿಸಿದಾಗ ಅವರಿಗವು ಬಹಳ ಮೆಚ್ಚಿಗೆಯಾಗಿ ಜರ್ನಲ್ ಏಶಿಯಾಟಿಕ್‌ನಲ್ಲಿ ಪ್ರಕಟಿಸಲು ಕೇಳಿ ಪಡೆದರು. ಮುಂದೆ ಆ ಜರ್ನಲ್‌ನಲ್ಲಿ ಅವು ಪ್ರಕಟವಾದವು ಕೂಡ.

ಆ ಎರಡೂ ಮೂಲ ಹಿಂದೀ ಲೇಖನಗಳು ರಾಹುಲರ ಪ್ರಸಿದ್ಧ ಪುಸ್ತಕ 'ಪುರಾತತ್ತ್ವ ನಿಬಂಧಾವಲೀ'ಯಲ್ಲಿ ಸೇರಿವೆ. ಇಂಗ್ಲಿಷ್ ಅನುವಾದಗಳು ಅವರ 'ಸಿಲೆಕ್ಟೆಡ್ ಎಸ್ಸೇಸ್' ಪುಸ್ತಕದಲ್ಲಿವೆ.

ಪ್ಯಾರಿಸ್ ವಾಸದ ವೇಳೆ ರಾಹುಲರು ಅಲ್ಲಿನ ಪ್ರಖ್ಯಾತ ರಾಷ್ಟ್ರೀಯ ಪುಸ್ತಕಾಲಯ, ವಾರ್ಸಾ ಅರಮನೆ ಹಾಗೂ ಮೇಡಂಕ್ಯೂರಿಯ ಪ್ರಯೋಗ ಶಾಲೆಯನ್ನೂ ನೋಡಿದರು. ಸೊರ್ಬೋನ್ ಯುನಿವರ್ಸಿಟಿಗೆ ಹೋಗಿ ಅಲ್ಲಿ ಪ್ರೊ. ಫೂಶೆ ಮೊದಲಾದ ಅನೇಕ ಇಂಡಾಲಜಿ (ಭಾರತೀಯ ಸಂಸ್ಕೃತಿ ಶಾಸ್ತ್ರ) ವಿದ್ವಾಂಸರನ್ನು ಭೇಟಿಯಾಗಿದ್ದರು.

ಸೋವಿಯತ್ ರಷ್ಯಾಕ್ಕೆ ಹೋಗುವ ಉತ್ಸುಕತೆಯಿಂದ ನವೆಂಬರ್ ಮೂವತ್ತರಂದು ಜರ್ಮನಿಯ ಫ್ರಾಂಕ್‌ಫರ್ಟ್ ನಗರ ತಲುಪಿದರು. ಸುಮಾರು ಐದು ವರ್ಷಗಳ ಹಿಂದೆ ಶ್ರೀಲಂಕಾದ ವಿದ್ಯಾಲಂಕಾರ ವಿಹಾರದಲ್ಲಿ ಅವರು ಮಾರ್ಬುರ್ಗ್ ವಿಶ್ವವಿದ್ಯಾಲಯದ ಡಾ। ರುಡಾಲ್ಫ್ ಒಟ್ಟೋ ಅವರನ್ನು ಭೇಟಿಯಾಗಿದ್ದರಷ್ಟೆ. ಈಗ ಅವರನ್ನು ನೋಡಿ ಬರಲು ರಾಹುಲರು ಮಾರ್ಬುರ್ಗ್‌ಗೆ ಹೋದರು. ಇಬ್ಬರೂ ವಿದ್ವಾಂಸರು ಐದು ಗಂಟೆಗಳ ಕಾಲ ಶಾಸ್ತ್ರದ ಬಗ್ಗೆ ಚರ್ಚೆ ನಡೆಸಿದರು.

ರಾಹುಲರು ಅಲ್ಲಿಂದ ಬರ್ಲಿನ್‌ಗೆ ಹೋಗಿ ಸೋವಿಯತ್ ರಷ್ಯಾದ ವೀಸಾ ದೊರಕಿಸಿಕೊಳ್ಳುವ ಪ್ರಯತ್ನ ಮಾಡಿದರು. ಆದರೆ ಅದು ಸಿಗಲು ಇನ್ನೂ ತಡವಿತ್ತು. ಆದುದರಿಂದ ಬರ್ಲಿನ್‌ನ ಪ್ರಮುಖ ಸ್ಥಳಗಳನ್ನು ನೋಡಿ ಮಾರ್ಸೆಯಿಕ್ಕೆ (ಫ್ರಾನ್ಸ್) ಹಿಂತಿರುಗಿದರು. 1932ರ ಡಿಸೆಂಬರ್ 30ರಂದು

ಹಡಗನ್ನೇರಿ, ಸುಮಾರು ಆರು ತಿಂಗಳು ಯುರೋಪು ಪ್ರವಾಸ ಮಾಡಿದ ನಂತರ, 1933ರ ಜನವರಿ 16ರಂದು ಶ್ರೀಲಂಕೆಗೆ ಬಂದು ತಲುಪಿದರು.

ಈಗ ಅವರಿಗೆ ಭಾರತಕ್ಕೆ ಹಿಂದಿರುಗಬೇಕಿತ್ತು. ಜನವರಿ 30ರಂದು ಭಾರತಕ್ಕೆ ಹೊರಡುವ ಮುನ್ನ ನಾಯಕಪಾದರಿಗೆ ಪ್ರಣಾಮ ಸಲ್ಲಿಸಲು ಹೋದರು. "ಬೀಳ್ಕೊಡುವಾಗ ಅವರು ಕಂಬನಿಗರೆದರು. ದೊಡ್ಡ ಪ್ರೀತಿ ಅವರದು. ಯಾರು ಬಲ್ಲರು, ಇದೇ ಕೊನೆಯ ದರ್ಶನವಾಗಿರಬಹುದು"-ಎಂದು ರಾಹುಲರು ಡೈರಿಯಲ್ಲಿ ಬರೆದ ಈ ಮಾತು ಸತ್ಯವಾಯಿತು. ಆ ನಂತರ ರಾಹುಲರು ಶ್ರೀಲಂಕೆಗೆ ಹೋಗಲು ಸಾಧ್ಯವಾದದ್ದು 1959ರಲ್ಲಿಯೇ. 1946ರಲ್ಲಿ ನಾಯಕಪಾದರ ನಿಧನದ ಸಮಾಚಾರ ತಲುಪಿದಾಗ ಅವರು ಲೆನಿನ್‌ಗ್ರಾಡ್‌ನಲ್ಲಿದ್ದರು.

# ಭೂಕಂಪ ಪೀಡಿತರ ನಡುವೆ

ರಾಹುಲರಿಗೆ ಪ್ರಾಚ್ಯ ಇತಿಹಾಸದಲ್ಲಿ ಅತೀವ ಆಸಕ್ತಿ. ಈಗ ಅವರು ಭಾರತದಲ್ಲಿ ಇರುವವರಾಗಿ ತಮ್ಮ ಪುಸ್ತಕಗಳನ್ನು ಹಾಗೂ ಟಿಬೇಟಿನಿಂದ ತಂದ ಸಾಮಗ್ರಿಗಳನ್ನು ಕಟ್ಟಿ ಕಲ್ಕತ್ತಾಗೆ ಕಳಿಸಿಬಿಟ್ಟರು. 'ಗಂಗಾ'ದ ಪುರಾತತ್ವಾಂಕವನ್ನು ನೋಡಿಕೊಳ್ಳಬೇಕಿತ್ತು. ಅದಕ್ಕಾಗಿ ಮದ್ರಾಸ್, ಕಲ್ಕತ್ತಾ ಮಾರ್ಗವಾಗಿ ಸುಲ್ತಾನ್‌ಗಂಜ್‌ಗೆ ಅಲ್ಲಿಂದ ಮತ್ತೆ ಪಾಟ್ನಾಕ್ಕೆ ಹೋದರು. ಸ್ಟೇಶನ್ನಿನಲ್ಲಿ ಡಾ. ಕಾಶೀನಾಥ ಜೈಸ್ವಾಲರು ಭಿಕ್ಷು ರಾಹುಲರನ್ನು ಎದುರುಗೊಂಡು ತಮ್ಮ ಮನೆಗೆ ಕರೆದೊಯ್ದರು. ಅವರಿಬ್ಬರಲ್ಲಿಯೂ ಗಾಢ ಸ್ನೇಹ ಬೆಳೆಯಿತು.

ಭಾರತದಿಂದ ಮಹಾಯಾನ ಬೌದ್ಧ ಧರ್ಮದ ಸುಮಾರು ಎಲ್ಲಾ ಗ್ರಂಥಗಳೂ ಮರೆಯಾಗಿ ಹೋಗಿದ್ದುವು. ಕೆಲ ಸಂಸ್ಕೃತ ಬೌದ್ಧಗ್ರಂಥಗಳು ನೇಪಾಳ ಮತ್ತು ಮಧ್ಯ ಏಶಿಯಾದಲ್ಲಿ ದೊರಕಿದ್ದರೆ, ಅನೇಕವು ಟಿಬೇಟ್ ಹಾಗೂ ಚೀನೀ ಅನುವಾದದಲ್ಲಿ ಸಿಗುತ್ತಿದ್ದುವು. ಇಂತಹ ಪರಿಸ್ಥಿತಿಯಲ್ಲಿ ಅಂದಿನ ಕಾಶ್ಮೀರ ರಾಜ್ಯದ ಗಿಲ್ಗಿತ್ ಸ್ಥಾನದಲ್ಲಿನ ಒಂದು ಪುರಾತನ ಸ್ತೂಪದಲ್ಲಿ 1931ನೇ ಇಸವಿಯಲ್ಲಿ ಜಗತ್ತಿನ ಪುರಾತತ್ವ ವಿದ್ವಾಂಸರು ಹುಚ್ಚೆದ್ದು ಕುಣಿಯುವಷ್ಟು ಬೌದ್ಧ ತಾಳೆಗರಿ ಗ್ರಂಥಗಳು ದೊರೆತವು. ರಾಹುಲರು ಪ್ಯಾರಿಸ್ಸಿನಲ್ಲಿದ್ದಾಗ ಪ್ರೊ. ಸಿಲ್ವಾನ್ ಲೇವೀಯವರು ಆ ಗಿಲ್ಗಿತ್ ಪಾಂಡುಲಿಪಿಗಳನ್ನು ಹೋಗಿ ನೋಡಿ ಬರಲು ಒತ್ತಾಯಿಸಿದ್ದರು. ಈಗ ಮತ್ತೆ ಲೇವೀಯವರಿಂದ ಪತ್ರ ಬಂತು.

ಭಾರತದಲ್ಲಿ ದೊಡ್ಡ ಸಂಖ್ಯೆಯಲ್ಲಿ ದೊರೆತ ಮಹಾಯಾನದ ಮೂಲಗ್ರಂಥಗಳನ್ನು ನೋಡಲು ರಾಹುಲರೂ ಉತ್ಸುಕರಾಗಿದ್ದರು. ಗಿಲ್ಗಿತ್ ಪಾಂಡು ಲಿಪಿಗಳು ಗಾಥಾ-ಸಂಸ್ಕೃತ (ಪಾಲಿ ಮಿಶ್ರ ಸಂಸ್ಕೃತ)ದಲ್ಲಿದ್ದುವು. ಹಾಗೂ ಭೋಜ ಪತ್ರದಲ್ಲಿನ ಬರಹಗಳು ಐದನೇ ಮತ್ತು ಆರನೇ ಶತಮಾನದ ಗುಪ್ತಕಾಲೀನ ಬ್ರಾಹ್ಮೀ ಲಿಪಿಯಲ್ಲಿದ್ದುವು. ರಾಹುಲರು ಗಿಲ್ಗಿತ್‌ಗೆ ಹೋಗಿ ಬರುವುದೆಂದು ನಿಶ್ಚಯಿಸಲು, ಜೈಸ್ವಾಲರು ಒಂದು ಕೆಮೆರಾ ಮತ್ತು ಸ್ವಲ್ಪ ಹಣದ ವ್ಯವಸ್ಥೆ ಮಾಡಿಕೊಟ್ಟರು. ಇನ್ನೂ ಪಾಟ್ನಾದಲ್ಲಿರುವಾಗಲೇ ಸಾರನಾಥದಲ್ಲಿ ಅನಾಗಾರಿಕ ಧರ್ಮಪಾಲರು ನಿಧನ ಹೊಂದಿದ ಸುದ್ದಿ ಸಿಕ್ಕಿ ರಾಹುಲರು ಕೂಡಲೇ ಅಲ್ಲಿಗೆ ಹೋಗಿ ಧರ್ಮಪಾಲರ ಪಾರ್ಥಿವ ಶರೀರಕ್ಕೆ ಗೌರವ ಸಲ್ಲಿಸಿ ಅಲ್ಲಿಂದ ಲಾಹೋರ್ ಮತ್ತು ಜಮ್ಮು ಹಾದು, ಮೋಟರಿನಲ್ಲಿ ಶ್ರೀನಗರ ತಲುಪಿದರು. ಗಿಲ್ಗಿತ್ ಪಾಂಡು ಲಿಪಿಯ ಕೆಲ ಪುಸ್ತಕಗಳು ಶ್ರೀ ನಗರದಲ್ಲಿ ಅತ್ಯಂತ ದುರವಸ್ಥೆಯಲ್ಲಿ ಇದ್ದುವು. ಆ ಅತ್ಯಂತ ಮಹತ್ವಪೂರ್ಣ ಹಸ್ತಪ್ರತಿಗಳನ್ನು ಹೇಗೆ ಗಂಟುಕಟ್ಟಿ ಇಟ್ಟಿದ್ದರೆಂದರೆ ಅವು ಯಾವುದೋ ವ್ಯಾಪಾರಿಯ ಲೆಕ್ಕದ ಪುಸ್ತಕಗಳಂತೆ ಕಾಣಿಸುತ್ತಿದ್ದವು. ಹಾಗೆ ಹನ್ನೆರಡು ಹದಿಮೂರು ಶತವರ್ಷಗಳಷ್ಟು ಹಳೆಯ ಆ ಭೋಜ ಪತ್ರಗಳೋ ಅವನ್ನು ಮುಟ್ಟಿದರೆ ಸಾಕು ಎಲ್ಲಿ ಪುಡಿಯಾಗುತ್ತವೋ ಎನಿಸುವಂತಿದ್ದವು. ಎಷ್ಟೋ ಇಟ್ಟಇಟ್ಟಲ್ಲೇ ಚೂರಾಗಿದ್ದುವು. ಹಳೆಯ ಭೋಜ ಪತ್ರಗಳು ಸ್ವಲ್ಪ ಒತ್ತಿದರೂ ಸಾಕು ತುಂಡಾಗುತ್ತವೆ.

ರಾಹುಲರಿಗೆ ಗಿಲ್ಗಿತ್‌ಗೆ ಹೋಗಲು ರಹದಾರಿ ಸಿಗಲಿಲ್ಲವಾಗಿ ಅವರು ಲಡಾಖ್ ಸಂಚಾರ ಕೈಗೊಳ್ಳಲು ನಿಶ್ಚಯಿಸಿದರು. 1926ನೇ ಇಸವಿಯಲ್ಲಿ ಮೊದಲ ಬಾರಿಗೆ ಲಡಾಖ್ ಪ್ರವಾಸ ಮಾಡಿದ್ದರಷ್ಟೆ. ಶ್ರೀನಗರದಲ್ಲಿ ಜರ್ಮನ್ ಬೌದ್ಧ ಅನಾಗಾರಿಕ ಬ್ರಹ್ಮಚಾರೀ ಗೋವಿಂದರನ್ನು ರಾಹುಲರು ಭೇಟಿಯಾಗಿ ಅವರೂ ಲಡಾಖ್ ಪ್ರವಾಸದಲ್ಲಿ ಜೊತೆಗೂಡಲು ಬಯಸಿದರು.

ಬ್ರಹ್ಮಚಾರೀ ಗೋವಿಂದ ಒಬ್ಬ ಉತ್ತಮ ಚಿತ್ರಕಾರ. ಒಳ್ಳೆಯ ಫೊಟೋಗ್ರಾಫರ್ ಸಹ. ಯುರೋಪ್ಪು, ಆಫ್ರಿಕಾ ಮತ್ತು ಏಶಿಯಾದ ಅನೇಕ ಕಡೆ ಪ್ರವಾಸ ಮಾಡಿದ ಅನುಭವಿ. ದಾರ್ಶನಿಕ ಪ್ರವೃತ್ತಿಯವರು, ಮೃದು ಸ್ವಭಾವಿ. ಇಬ್ಬರು ಅಲೆಮಾರಿಗಳೂ ಸೇರಿ ಹೊರಟ ಈ ಲಡಾಖಿ ಯಾತ್ರೆ ಭಾರೀ ಉಲ್ಲಾಸದಿಂದ ಕೂಡಿತ್ತು. ಈ ಸಲ ರಾಹುಲರಿಗೆ ಲಡಾಖ್‌ನಲ್ಲಿ ತಿರುಗಲು ಏನೂ ಅಂತಹ ವಿಶೇಷ ಇರಲಿಲ್ಲ. ಹೀಗಾಗಿ ಜುಲೈ 4ರಿಂದ ಸೆಪ್ಟೆಂಬರ್ 16ರ ವರೆಗೆ (1933) ಲೇಹ್‌ನಲ್ಲಿ ಹೇಮಿಸ್ ವಿಹಾರದಲ್ಲಿದ್ದುಕೊಂಡು 'ಮಜ್ಝಿಮ್‌ನಿಕಾಯ'ದ ಹಿಂದೀ ಅನುವಾದವನ್ನು ಚುರುಕಿನಿಂದ ಮಾಡಿದರು. ಟಿಬೇಟಿನಲ್ಲಿ 'ಬೌದ್ಧ ಧರ್ಮ' ಪುಸ್ತಕ ಬರೆದರು. ಟಿಬೇಟ್ ಭಾಷೆ ಕಲಿಯುವವರಿಗಾಗಿ ಕೆಲ ಪ್ರಾಥಮಿಕ ಪುಸ್ತಕಗಳನ್ನು ಸಿದ್ಧಪಡಿಸಿದರು. ಲಡಾಖ್ ಪ್ರವಾಸದ ಕುರಿತು ಹಲವು ಲೇಖನಗಳನ್ನು ಬರೆದರು.

ಹಿಂದೆ ಬರುತ್ತ ಲಾಹೋರ್ ದಾರಿಯಾಗಿ ಪಾಟ್ನಾಕ್ಕೆ ಬಂದವರು 'ಮಜ್ಝಿಮ್ ನಿಕಾಯ'ದ ಮುದ್ರಣ ಪ್ರಯಾಗದಲ್ಲಿ ಆಗಲಿರುವುದರಿಂದ ಅಲ್ಲಿಗೆ ಹೋದರು. ದಾರಾಗಂಜ್‌ನಲ್ಲಿ ಒಂದು ತಿಂಗಳವರೆಗೆ ಪಂಡಿತ ಉದಯ ನಾರಾಯಣ ತಿವಾರಿಯವರ ಮನೆಯಲ್ಲಿ ಅವರ ವಾಸ, "ಟಿಬೇಟ್‌ನಲ್ಲಿ ಬೌದ್ಧಧರ್ಮ"ವನ್ನು ಪ್ರಯಾಗದ ಹಿಂದೂಸ್ತಾನೀ ಎಕಾಡೆಮಿ ತನ್ನ ಪತ್ರಿಕೆಯಲ್ಲಿ ಪ್ರಕಟಿಸಲು ತೆಗೆದುಕೊಂಡಿತು.

ಆ ವರ್ಷ (1933)ದ ಡಿಸೆಂಬರ್ ಕೊನೆಯಲ್ಲಿ ಬಡೋದೆಯಲ್ಲಿ ಪ್ರಾಚ್ಯ ಶೋಧನಾ ತಜ್ಞರ ಸಮ್ಮೇಳನ ನಡೆಯಿತು. ಜೈಸ್ವಾಲರು ಅಧ್ಯಕ್ಷರಾಗಿದ್ದರು. ರಾಹುಲರನ್ನು ಹಿಂದೀ ವಿಭಾಗದ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಪಂಡಿತ ಜಯಚಂದ್ರ ವಿದ್ಯಾಲಂಕಾರ, ಜೈಸ್ವಾಲರು ಮುಂತಾದ ಅನೇಕರೊಂದಿಗೆ ಅಜಂತಾ, ಎಲ್ಲೋರಾ, ಕಾರ್ಲಾ-ಭಾಜಾ, ಮುಂಬಯಿ, ಅಹಮದಾಬಾದ್ ಪ್ರವಾಸ ಮಾಡುತ್ತ ರಾಹುಲರು ಬಡೋದೆ ತಲುಪಿದರು. ಅಲ್ಲಿ ಸಮ್ಮೇಳನಕ್ಕೆಂದು ಬಂದಿದ್ದ ಡಾ. ಹೀರಾಲಾಲ್, ಡಾ. ಹೀರಾನಂದ, ಪಂಡಿತ ಗೌರೀಶಂಕರ ಹೀರಾನಂದ ಓಝಾ, ಫಾದರ್ ಹೆರಾಸ್ ಮುಂತಾದ ವಿದ್ವಾಂಸರ ಭೇಟಿಯಾಯಿತು. ದಿಸೆಂಬರ್ 29 (1933)ರಂದು ಸಮ್ಮೇಳನದ ಹಿಂದೀ ವಿಭಾಗದ ಅಧ್ಯಕ್ಷ ಸ್ಥಾನದಲ್ಲಿ ನಿಂತು ಅವರು ತಮ್ಮ ಭಾಷಣವನ್ನು ಓದಿದರು. ಅಲ್ಲಿ "ಇತರ ವಿದ್ವಾಂಸರೂ ಕೆಲ ಪ್ರಬಂಧಗಳನ್ನು ಓದಿದರು. ಆದರೆ ಪ್ರಾಚ್ಯ ಸಮ್ಮೇಳನದಲ್ಲಿ ಕಾರ್ಯಕಲಾಪಗಳೆಲ್ಲವೂ ಇಂಗ್ಲಿಷ್‌ನಲ್ಲೆ ನಡೆದಿತ್ತು. ಅಲ್ಲಿ ಹಿಂದಿಯನ್ನು ಕೇಳುವವರಾರು?" ರಾಹುಲರು ಪ್ರಯಾಗಕ್ಕೆ ಹಿಂದಿರುಗಿದರು. ದಾರಾಗಂಜ್‌ನಲ್ಲಿದ್ದಾಗ, ಜನವರಿ ಮಧ್ಯಭಾಗದ ಒಂದು ಮಧ್ಯಾಹ್ನ, ಭೂಮಿ ಕಂಪಿಸಿದಂತೆ ಭಾಸವಾಯಿತು. ಮರುದಿನ ಪತ್ರಿಕೆ ನೋಡಿದಾಗಲೇ ಬಿಹಾರದ ಮುಜಫರ್‌ಪುರ್, ದರ್ಭಂಗಾ, ಜಮಾಲ್ಪುರ್, ಮ್ಹುಂಗೇರ್ ಕ್ಷೇತ್ರಗಳಲ್ಲಿ ಪ್ರಳಯ ತಾಂಡವ ನಡೆದಿದೆ ಎಂದು ತಿಳಿದದ್ದು. ಇಂತಹ ಹೊತ್ತಿನಲ್ಲಿ ಭೂಕಂಪ ಪೀಡಿತ ಜನರೊಂದಿಗೆ ಇರುವುದು

ಯೋಗ್ಯವೆಂದು ಭಾವಿಸಿ, ಅವರು ಸೀದಾ ಪಾಟ್ನಾಕ್ಕೆ ಹೊರಟರು. ದೇಶದ ಇತರ ಅನೇಕ ಮಂದಿ ನೇತಾರರೂ ಈಗಾಗಲೇ ಪಾಟ್ನಾದಲ್ಲಿ ರಾಜೇಂದ್ರ ಬಾಬೂ ಅವರ ಬಳಿ ತಲುಪಿದ್ದರು.

ಭೂಕಂಪ ಪೀಡಿತ ಕ್ಷೇತ್ರಕ್ಕೆ ಪಾಟ್ನಾದಿಂದ ರಾತ್ರಿ ಹೊರಟು ಗಂಗಾನದಿ ದಾಟಿದ ಮೊದಲ ತಂಡದಲ್ಲಿ ರಾಹುಲರೂ ಅಲ್ಲದೆ ಪಂಡಿತ ಜವಾಹರಲಾಲ್ ನೆಹರೂ ಅವರೂ ಇದ್ದರು. ಮುಜಫರ್‌ಪುರ, ಸೀತಾಮಢೀ, ಚಂಪಾರನ್ ಹಾಗೂ ಸಾರನ್ ಪ್ರಾಂತ್ಯಗಳಿಗೆಲ್ಲ ಹೋಗಿ ಭೂಕಂಪ ಪೀಡಿತರ ಸೇವೆಗೆ ಯಥಾ ಸಾಮರ್ಥ್ಯ ದುಡಿದರು ರಾಹುಲಜೀ. ಸುಮಾರು ಒಂದೂವರೆ ತಿಂಗಳು ಹೀಗೆ ಭೂಕಂಪ ಪೀಡಿತ ಕ್ಷೇತ್ರಗಳಲ್ಲಿಯೇ ಇದ್ದು ಬಿಟ್ಟರು. ಈ ಸಂತ್ರಸ್ತರ ನೆರವಿಗಾಗಿ ಗಾಂಧೀಜಿಯವರೂ ಪಾಟ್ನಾಕ್ಕೆ ಬಂದಿದ್ದರು. ಅವರ ಪರಿಚಯದ ಒಬ್ಬ ಆಂಗ್ಲ ಮಹಿಳೆ ಶ್ರೀಲಂಕಾ ಮುಖಾಂತರ ಸ್ವದೇಶಕ್ಕೆ ಮರಳಬೇಕೆಂದು ಇಚ್ಛಿಸಿದ್ದಳು. ಈ ಬಗ್ಗೆ ರಾಹುಲರು ಸಹಾಯ ಮಾಡಬಹುದೆಂದು ರಾಜೇಂದ್ರ ಬಾಬೂ. ಆಗ ರಾಹುಲರು ಶ್ರೀಲಂಕೆಯ ಸರ್ ಜಯತಿಲಕ್ ಅವರಿಗೆ ಒಂದು ಪತ್ರ ಹಾಗೂ ತಂತಿ ಕಳಿಸಿದರು.

ಇಲ್ಲಿ ಗಾಂಧೀಜಿಯವರ ಕುರಿತು ರಾಹುಲರು ವಿಚಾರಗಳನ್ನು ಅವರ ಮಾತಿನಲ್ಲಿಯೇ ತಿಳಿಯುವುದು ಸಮಂಜಸವಾದೀತೇನೋ, "ಇದೇ ಕೆಲಸದ ಸಲುವಾಗಿ (ಸರ್ ಜಯತಿಲಕರಿಗೆ ಪತ್ರ ಹಾಗೂ ತಂತಿ ಕಳಿಸಲು) ನಾನು ಗಾಂಧೀಜಿಯವರ ಬಳಿಗೆ ಹೋಗಿದ್ದೆ. ಇದಕ್ಕೆ ಮೊದಲು ಕೂಡ ಗಾಂಧೀಜಿಯವರನ್ನು ಭೇಟಿ ಮಾಡುವ ಅವಕಾಶ ಒಂದಕ್ಕಿಂತಲೂ ಹೆಚ್ಚು ಬಾರಿ ನನಗೆ ದೊರಕಿತ್ತು. ಆದರೆ ನನಗೆ ಎಂದೂ ಹೆಚ್ಚಿಗೇನನ್ನೂ ತಿಳಿಯಬೇಕೆಂಬ ಆಸೆಯಾಗಲಿಲ್ಲ. ಅವರ ಆದರ್ಶವಾದವನ್ನು ಗೌರವಿಸುತ್ತಲೇ, ಬೌದ್ಧಿಕ ವಿಚಾರವಾಗಿ ನಾನವರಿಂದ ಬಹಳ ದೂರದಲ್ಲಿದ್ದೆ. ಹಾಗಾಗಿ ಎಂದಾದರೂ ಅವರ ಬಳಿಗೆ ಹೋಗಿದ್ದರೂ ಕೆಲ ನಿಮಿಷಗಳಿಗಿಂತ ಹೆಚ್ಚು ಹೊತ್ತು ಅಲ್ಲಿ ಉಳಿದವನಲ್ಲ."

ಪ್ರಥಮ ಟಿಬೇಟು ಸಂಚಾರದಲ್ಲಿ ಲಾಸಾದಿಂದ ಹಿಂದಿರುಗುವಾಗ ಮಂಗೋಲ ಭಿಕ್ಷು ಧರ್ಮಕೀರ್ತಿ ರಾಹುಲರ ಜೊತೆ ಸಿಲಿಗುರಿ ತನಕ ಬಂದವರು ಸೆಕೆಗೆ ಕಂಗೆಟ್ಟು ವಾಪಾಸು ಹೋಗಿದ್ದರಷ್ಟೆ ? ನಂತರ ಅವರು ಪುನಃ ಭಾರತಕ್ಕೆ ಬಂದರು ಹಾಗೂ ಈ ಕೆಲ ತಿಂಗಳುಗಳಿಂದ ರಾಹುಲರ ಜೊತೆಗೇ ಇದ್ದರು. ರಾಹುರಲರೀಗ ಎರಡನೆಯ ಬಾರಿಗೆ ಟಿಬೇಟು ಯಾತ್ರೆಗೆ ಹೊರಟಿರುವರೆಂದರೆ ಧರ್ಮಕೀರ್ತಿಯೂ ಜೊತೆಗೂಡಿದರು.

ಈ ಎರಡನೆಯ ಸಲದಲ್ಲಿ ಮರೆಸಿ ಹೋಗುವ ಅಗತ್ಯವಿರಲಿಲ್ಲ. ಬಿಹಾರ್ – ಒರಿಸ್ಸಾ ರಿಸರ್ಚ್ ಸೊಸೈಟಿ ರಾಹುಲರಿಗೆ ಗೌರವ ಸದಸ್ಯತ್ವ ನೀಡಿತ್ತು. ರಾಹುಲರು ಹಾಗೂ ಹೀಗೂ ಐನೂರು ರೂಪಾಯಿ ಸಂಗ್ರಹಿಸಿದ್ದರು. ಇಷ್ಟೇ ದುಡ್ಡಿನಬಲದ ಮೇಲೆ ಧರ್ಮಕೀರ್ತಿಯವರನ್ನೂ ಜೊತೆಗೆ ಕರೆದುಕೊಂಡು ಭಿಕ್ಷು ರಾಹುಲ ಸಾಂಕೃತ್ಯಾಯನರು ದ್ವಿತೀಯ ಟಿಬೇಟ್ ಯಾತ್ರೆಗೆಂದು 1934ರ ಮಾರ್ಚ್ 21ರಂದು ಕಾಲಿಂಪೋಂಚ ತಲುಪಿಕೊಂಡರು.

# ದ್ವಿತೀಯ ಟಿಬೇಟ್ ಯಾತ್ರೆ

ಬೌದ್ಧ ಸಾಹಿತ್ಯ ಹಾಗೂ ಬೌದ್ಧ ಧರ್ಮದ ಅಧ್ಯಯನದ ಉದ್ದೇಶದಿಂದ ಪ್ರಥಮ ಸಲ ಟಿಬೇಟಿಗೆ ಹೋಗಿ ಬಂದಿದ್ದ ರಾಹುಲರು 'ಟಿಬೇಟಿನಲ್ಲಿ ಬೌದ್ಧ ಧರ್ಮ' ಪುಸ್ತಕ ರಚನೆಯ ವೇಳೆಗೆ ಗ್ರಂಥಗಳನ್ನು ಮಗುಚುತ್ತಿರುವಾಗ ಭಾರತದಿಂದ ಹೊರ ಹೋದ ಅನೇಕ ಸಾವಿರ ತಾಳೆಗ್ರಂಥಗಳಲ್ಲಿ ಹಲವಾದರೂ ಇವತ್ತಿಗೂ ಅಲ್ಲಿ ಇದ್ದೇ ಇರಬೇಕು ಎಂಬ ವಿಶ್ವಾಸ ತಾಳಿದರು.

ಎಲ್ಲಿಗೇ ಆಗಲಿ, ರಾಹುಲರು ಎರಡನೆಯ ಸಲಕ್ಕೆ ಹೊರಟರೆಂದರೆ ಮಾರ್ಗ ಬದಲಿಸಿ ಹೋಗಲು ಇಷ್ಟಪಡುತ್ತಿದ್ದರು. ಹಿಂದಿನ ಸಲ ನೇಪಾಳ ಮಾರ್ಗವಾಗಿ ಟಿಬೇಟಿಗೆ ಹೋಗಿ ಫರಿ – ಕಾಲಿಂಪ್ರೋಂಜ ದಾರಿಯಾಗಿ ಮರಳಿದ್ದರೆ, ಈ ಬಾರಿ ಕಾಲಿಂಪ್ರೋಂಜ–ಫರೀ ಮಾರ್ಗವಾಗಿ ಹೊರಟಿದ್ದರು. ಹಿಂದಿನ ಸಲ ಮಹಾಯಾನಿ ಲಾಮಾನ ಮಾರುವೇಷದಲ್ಲಿ ಮರೆಸಿಕೊಂಡು ಹೋಗಿದ್ದವರು, ಈ ಸಲ ಥೇರವಾದೀ (ಹೀನಯಾನಿ) ಬೌದ್ಧ ಭಿಕ್ಷುವಿನ ಉಡುಗೆಯಲ್ಲಿ ಮುಕ್ತವಾಗಿ ಹೊರಟಿದ್ದರು. ಹಿಂದಿನ ಸಲ ದಸರತನ ಸಾಹು, ಡುಕ್ಪಾಲಾಮಾ, ಮಂಗೋಲ ಭಿಕ್ಷು 'ಸುಮತಿ' ಮುಂತಾದವರ ಸಹಾಯ ಪಡೆಯುತ್ತ ಅಂತೂ ಲಾಸಾ ತಲುಪಿದ್ದರು. ಈ ಬಾರಿ ರಾಹುಲರ ಜೊತೆ ಇರುವವರು – ರಾಜನಾಥ ಪಾಂಡೇಯ ಹಾಗೂ ಭಿಕ್ಷು ಧರ್ಮಾಲೋಕ. ರಾಜನಾಥ ಪಾಂಡೇಯರು ಎಂ.ಎ. ಮಾಡಿದ ತರುಣ ಎಂಬುದು ಬಿಟ್ಟರೆ ಅವರ ಕುರಿತು ರಾಹುಲರಿಗೆ ಇನ್ನೇನೂ ತಿಳಿದಿರಲಿಲ್ಲ. ಮೊದಲ ಟಿಬೇಟು ಪ್ರವಾಸದಲ್ಲಿ ರಾಹುಲರನ್ನು ಎಲ್ಮೋಗಾಂವ್ ತನಕ ತಲುಪಿಸಲು ಹೊರಟಿದ್ದ ದಸರತನ ಸಾಹುವೇ ಈಗ ಭಿಕ್ಷು ಧರ್ಮಾಲೋಕರು, ಕಾಲಿಂಪ್ರೋಂಜ ನಿವಾಸಿ. ರಾಹುಲರು ಸುಮಾರು ಒಂದು ತಿಂಗಳು ಕಾಲಿಂಪ್ರೋಂಜನಲ್ಲಿ ಇರಬೇಕಾಗಿ ಬಂದುದರಿಂದ ಮಂಗೋಲಭಿಕ್ಷು ಧರ್ಮಕೀರ್ತಿ ಮುಂಚಿತವಾಗಿಯೇ ಟಿಬೇಟಿಗೆ ಹೊರಟು ಹೋದರು.

ಟಿಬೇಟಿಗೆ ಹೋಗಬೇಕಾದರೆ ಗಂಗೋಟಕ್‌ನಲ್ಲಿರುವ ಪೊಲಿಟಿಕಲ್ ಆಫೀಸರನ ಆಜ್ಞಾಪತ್ರ ಪಡೆಯಲೇ ಬೇಕಿತ್ತು. ಆದರೆ ಅದು ಸಿಗುವುದರಲ್ಲಿ ವಿಳಂಬವಾಗುತ್ತ ಇತ್ತು. ಸ್ವತಃ ರಾಹುಲರೇ ಗಂಗೋಟ್‌ಕ್‌ಗೆ ಹೋದರು, ಇಂಗ್ಲಿಷ್ ಆಫೀಸರನನ್ನು ಭೇಟಿ ಮಾಡಿ ಆಜ್ಞಾಪತ್ರ ಪಡೆದುಕೊಂಡರು. ರಾಜನಾಥ ಪಾಂಡೇಯ ಅವರು ಅಜ್ಞಾಪತ್ರವಿಲ್ಲದೇನೇ ನೇಪಾಳೀ ವೇಷದಲ್ಲಿ ಹೊರಟಿದ್ದರು. ದಾರಿ ಬಳಕೆಗಾಗಿ ಕೆಲ ಅಗತ್ಯ ಸಾಮಗ್ರಿಗಳನ್ನು, ಔಷಧಿಗಳನ್ನು ಜೋಡಿಸಿಕೊಂಡರು. ಸಾಮಾನುಗಳು ಮತ್ತು ಸವಾರಿಗಾಗಿ ಹೇಸರಗತ್ತೆಗಳನ್ನು ಗೊತ್ತು ಮಾಡಿಕೊಂಡು 1934 ಏಪ್ರಿಲ್ 23ರ ಮುಂಜಾವು ಯಾತ್ರಾತಂಡ ಕಾಲಿಂಪ್ರೋಂಗ್ ಬಿಟ್ಟಿತು. ಪರಿಚಿತ ಮಾರ್ಗ, ನೇಪಾಳ ಮಾರ್ಗಕ್ಕಿಂತ ಸುಲಭದ್ದು. ಈ ಬಾರಿ 'ವಿನಯ ಪೀಟಿಕಾ'ದ ಹಿಂದೀ ಅನುವಾದ ಮಾಡಬೇಕೆಂದು ಇದ್ದುದರಿಂದ ರಾಹುಲರು ದಾರಿಯಲ್ಲಿಯೇ ಈ ಕೆಲಸ ಸುರು ಮಾಡಿಬಿಟ್ಟರು.

ರಾಜನಾಥ ಎರಡು ಬಾರಿ ಹೇಸರ ಕತ್ತೆಯಿಂದ ಕೆಳಗೆ ಬಿದ್ದರು. ಒಂದು ಸಲವಂತೂ ಸಾವಿನಿಂದ ಕೂದಲೆಳೆಯಷ್ಟು ಅಂತರದಲ್ಲಿ ಪಾರಾದರು. ಗ್ಯಾನ್‌ಚೀಯಲ್ಲಿ ನಾಲ್ಕು ದಿನವಿದ್ದು ಯಾತ್ರಿಗಳು ಮೇ 19ರ ಬೆಳಗ್ಗೆ ಲಾಸಾದಲ್ಲಿನ ಧರ್ಮಸಾಹುವಿನ ಮನೆ ತಲುಪಿಕೊಂಡರು. ಮರುದಿನವೇ ರಾಹುಲರ ಬರವಣಿಗೆ ಆರಂಭವಾಯಿತು. 'ವಿನಯ ಪೀಟಿಕಾ'ದ ಅನುವಾದ ಸಾಗುತ್ತ ಇದ್ದಂತೆಯೇ 'ಸಾಮ್ಯವಾದ ಹೀ ಕ್ಯೋಂ ?' ಎಂಬ ಬರಹಕ್ಕೆ ಕೈ ಹಚ್ಚಿದರು. ಈ ಸಲ ನೋಡಲು ಬಂದು ಹೋಗುವವರ ಸಂಖ್ಯೆ ಹೆಚ್ಚಾಗಿತ್ತು. ಹಾಗಾಗಿ ರಾತ್ರಿ ಗಂಟೆ ಎರಡರವರೆಗೂ ಜಾಗರಣೆಯಿಂದಿದ್ದು ನಿಶ್ಚಿತ ಕೆಲಸವನ್ನು ಮುಗಿಸುತ್ತಿದ್ದರು. ರಾಹುಲರ ಬರವಣಿಗೆಯ ಕೆಲಸದಲ್ಲಿ ಸಹಾಯ ಮಾಡುತ್ತಿದ್ದ ರಾಜನಾಥರು ಲಾಸಾದಲ್ಲಿ ಇಪ್ಪತ್ತು ದಿನಗಳಿದ್ದು ಭಾರತಕ್ಕೆ ವಾಪಾಸು ಹೋಗಿ ಬಿಟ್ಟರು. ಭಿಕ್ಷು ಧರ್ಮಾಲೋಕರು ಲಾಸಾ ತಲುಪಿದ ಮರುದಿನವೇ ಎತ್ತಲೋ ಬೇರೆ ಕಡೆ ಹೊರಟು ಹೋಗಿದ್ದರು.

ರಾಹುಲರು ಸ್ವತಃ ಸಂಸ್ಕೃತದ ತಾಳೆ ಗ್ರಂಥಗಳ ಹುಡುಕಾಟ ನಡೆಸಿದ್ದರಲ್ಲದೆ ತನ್ನ ಕೆಲ ಮಿತ್ರರಿಗೂ ಶೋಧಿಸಲು ಹೇಳಿಟ್ಟಿದ್ದರು. ಒಂದೆರಡು ತಾಳೆಗ್ರಂಥಗಳು ಅವಲೋಕನಕ್ಕಾಗಿ ಬರತೊಡಗಿದವು. ಲಾಸಾದ ಆಸುಪಾಸಿನಲ್ಲಿನ ಶೇರಾ, ಡೇ-ಪುಂಗ್ ಮುಂತಾದ ಪ್ರಸಿದ್ಧ ಬೌದ್ಧ ಮಠಗಳಿಗೆ ಯಾತ್ರೆ ಹೋಗಿ ಬರುತ್ತ ರಾಹುಲರು ಕುಂದೇಲಿಂಗ್ ವಿಹಾರಕ್ಕೆ ತೆರಳಿ ಅಲ್ಲಿ ಭೋಟ್ ಭಾಷೆಯ ವಿದ್ವಾಂಸ ಗೇಶೇ-ಶೇರಬ್‌ರನ್ನು ಭೇಟಿಯಾದರು. ಆ ವಿಹಾರದಲ್ಲಿ ಒಂದು ಅಮೂಲ್ಯ ಗ್ರಂಥ-ಧರ್ಮಕೀರ್ತಿಯವರ 'ವಾದನ್ಯಾಯ'ದ ಮೇಲೆ ಆಚಾರ್ಯ ಶಾಂತ ರಕ್ಷಿತರ ಟೀಕೆ-ದೊರಕಿತು. ರಾಹುಲರು ಅದರ ಫೋಟೋ ತೆಗೆದುಕೊಂಡರು. ನಂತರ ಇದೇ ಯಾತ್ರೆಯಲ್ಲಿ ಗ್ಯೋರ್ ವಿಹಾರದಲ್ಲಿ ಅವರಿಗೆ ಈ ಪುಸ್ತಕದ ಮೂಲಪ್ರತಿ ಕೂಡ ಸಿಕ್ಕಿತು. ಅದನ್ನವರು 1936ರಲ್ಲಿ ಪ್ರಕಟಿಸಿದರು.

ಈ ಯಾತ್ರೆಯಲ್ಲಿ ರಾಹುಲರಿಗೆ ಡೇಪುಂಗ್ ವಿಹಾರದಲ್ಲಿ ವಾಸಿಸುತ್ತಿದ್ದ ಗೇಶೇ ಧರ್ಮವರ್ಧನ ಎಂಬ ಹೆಸರಿನ ಒಬ್ಬ ಚಿತ್ರಕಾರನ ಪರಿಚಯವಾಯಿತು. 'ಈ ತೆಳ್ಳಗಿನ ಸೀದಾ ಮನುಷ್ಯ ಭೋಟ್ ಸಾಹಿತ್ಯ ಹಾಗೂ ದರ್ಶನದ ಒಬ್ಬ ಒಳ್ಳೆಯ ಪಂಡಿತ, ಕುಶಲ ಚಿತ್ರಕಾರ, ಮೇಲ್ದರ್ಜೆಯ ಕವಿ, ಹಾಗೂ ಉದಾರ ಚರಿತನಾದ ಆದರ್ಶವಾದಿ ಪುರುಷ. ಸಾಹಿತ್ಯದ ತಿಳುವಳಿಕೆಯುಳ್ಳವ. 'ಪ್ರಮಾಣವಾರ್ತಿಕ'ವನ್ನು ಚೆನ್ನಾಗಿ ಓದಿಕೊಂಡಿದ್ದಾನೆ. ಗೇಶೇ ಧರ್ಮವರ್ಧನರಂಥ ವಿದ್ವಾಂಸ, ಸದ್ಗುಣಿ, ತ್ಯಾಗಿ, ಸುಸಂಸ್ಕೃತ, ಸಹೃದಯ ಪುರುಷ ಟಿಬೇಟಿನಲ್ಲಿ ಸಿಗುವುದು ಬಹಳ ಕಷ್ಟ' ಎಂದು ರಾಹುಲರು ಈತನ ಕುರಿತು ಬರೆಯುತ್ತಾರೆ. ಮುಂದೆ ಟಿಬೇಟ್ ಯಾತ್ರೆ ಪೂರ್ತಿ ಅವರು ಗೇಶೇ ಧರ್ಮವರ್ಧನರ ಜೊತೆಗೇ ಇದ್ದರು; ಗೇಶೇ ಧರ್ಮವರ್ಧನರು ರಾಹುಲರೊಂದಿಗೆ ಭಾರತಕ್ಕೂ ಬಂದರು.

ಲಾಸಾದ ಉತ್ತರ ದಿಸೆಯಲ್ಲಿ ಸಾಕಷ್ಟು ದೂರದಲ್ಲಿರುವ ರೇರಿಂಗ್ ವಿಹಾರದಲ್ಲಿ ಕೆಲ ತಾಳೆ ಗ್ರಂಥಗಳಿವೆ ಎಂಬ ಸುಳಿವು ದೊರೆತು ರಾಹುಲರು ಅಲ್ಲಿಗೆ ಹೋಗಿ ಬರಲು ನಿರ್ಧರಿಸಿದರು. ಈ ಪಯಣ ಕಠಿಣವಷ್ಟೇ ಅಲ್ಲ, ಅಪಾಯಕಾರಿಯಾದದ್ದು ಸಹ. ಗೇಶೇ ಧರ್ಮವರ್ಧನ, ನೇಪಾಳೀ ಫೋಟೋಗ್ರಾಫರ್ ನಾತೀಲಾ ಹಾಗೂ ಒಬ್ಬ ಟಿಬೇಟ್ ಹೇಸರಗತ್ತೆವಾಲ ಎಲ್ಲರೊಂದಿಗೆ ಅವರು ಮೂರು ಪಿಸ್ತೂಲು ಮತ್ತು ಒಂದು ರೈಫಲ್ ಇಟ್ಟುಕೊಂಡು ಹೊರಟರು.

ಈ ಪ್ರಯಾಣದಲ್ಲಿ ರಾಹುಲರು ಎದುರಿಸಿದ ಸಂಕಷ್ಟಗಳು ಒಂದೆರಡಲ್ಲ. ಅಷ್ಟಾಗಿಯೂ ರೇರಿಂಗ್ ವಿಹಾರದಲ್ಲಿ ಏನೂ ಸಿಗಲಿಲ್ಲ. ಅಲ್ಲಿನ ವ್ಯವಸ್ಥಾಪಕ, ಗ್ರಂಥಗಳನ್ನು ತೋರಿಸಲು ನಿರಾಕರಿಸಿ ಬಿಟ್ಟ. ಅಲ್ಲಿಂದ ಅವರು ಸಮ್ಯೆ ವಿಹಾರಕ್ಕೆ ಹೋಗುವುದೆಂದುಕೊಂಡರು. ಆದರೆ ಈಗ ಬಳಿಯಲ್ಲಿ ಹೆಚ್ಚಿಗೆ

ಹಣವೂ ಇರಲಿಲ್ಲ. ಹೇಸರಗತ್ತೆಗಳೂ ಸಿಗುತ್ತಿರಲಿಲ್ಲವಾಗಿ ಆ ಯೋಚನೆಯನ್ನು ಅಲ್ಲಿಗೇ ಬಿಟ್ಟರು. ಟಶೀಲುಂಪ್ರೋ ಮತ್ತು ಸಾಕ್ಯಾ ವಿಹಾರಗಳಲ್ಲಿ ತಾಳೆಗ್ರಂಥಗಳು ಸಿಗಬಹುದೆಂಬ ಸುದ್ದಿ ಸಿಕ್ಕಿತು. ನೇಪಾಳದ ಮಾರ್ಗ ಇರುವುದೂ ಆ ಕಡೆಯಿಂದಲೇ. ಚಳಿಗಾಲದಲ್ಲಿ ರಾಹುಲರು ಭಾರತಕ್ಕೆ ಹಿಂದಿರುಗಬೇಕಾಗಿತ್ತು. ಆದುದರಿಂದ ಬೇಗ ಬೇಗನೆ 'ಸಾಮ್ಯವಾದ ಹೀ ಕ್ಯೋಂ ? ಬರೆಹವನ್ನು ಮುಗಿಸಿ ಹೇಸರಗತ್ತೆಗಳನ್ನು ಗೊತ್ತು ಮಾಡಿಕೊಂಡು 1934ರ ಸೆಪ್ಟೆಂಬರ್ 18ರಂದು ರಾಹುಲರು ಮತ್ತು ಗೇಶೇ ಧರ್ಮವರ್ಧನರು ಸಾಕ್ಯಾದ ಕಡೆಗೆ ಹೊರಟರು.

ಮಾರ್ಗದಲ್ಲಿ ಅನೇಕ ಸಣ್ಣ ಪುಟ್ಟ ವಿಹಾರಗಳನ್ನು ಸಂದರ್ಶಿಸುತ್ತ ಗ್ಯಾನ್-ಚೇಯಿಂದ ಸುಮಾರು ಮೂವತ್ತೈದು ಕಿಲೋ ಮೀಟರು ಪಶ್ಚಿಮದಲ್ಲಿರುವ ಫೋಯೀಖಂಗ್ ವಿಹಾರ ತಲುಪಿದರು. ವಿಕ್ರಮ ಶಿಲೆಯ ಕೊಟ್ಟ ಕೊನೆಯ ಸಂಘರಾಜ ಶಾಕ್ಯ ಶ್ರೀ ಭದ್ರ (1127-1235) ವಾಸವಾಗಿದ್ದ ವಿಹಾರವಿದು. ರಾಹುಲರು ಇಲ್ಲಿ ನೋಡಲು ದೊರೆತ ಕೆಲ ಮಹತ್ವಪೂರ್ಣ ತಾಳೆಗ್ರಂಥಗಳ ಸೂಚಿ ತಯಾರಿಸಿ, ಫೋಟೋ ತೆಗೆದುಕೊಂಡರು.

ಅಲ್ಲಿಂದ ಮುಂದೆ ಶಲೂ ವಿಹಾರಕ್ಕೆ ಹೋದಾಗ ಹಿಂದಿನ ಸಲ ಪರಿಚಯವಾಗಿದ್ದ ರಿಸುರ್ ರಿಂಪೋಛೆ ಬಹಳ ಪ್ರೀತಿಯಿಂದ ಭೇಟಿಯಾದರು. ಅಲ್ಲಿ ನೋಡಲು ದೊರೆತ ಕೆಲ ತಾಳೆಗ್ರಂಥಗಳಲ್ಲಿ ವಿಕ್ರಮ ಶಿಲೆಯ ನೈಯಾಯಿಕ ಜ್ಞಾನಶ್ರೀಯ ಏಳು ನ್ಯಾಯಗ್ರಂಥಗಳೂ ಇದ್ದುವು.

ಗ್ಯೋರ್ ವಿಹಾರದಲ್ಲಿ ಏಳುನೂರಕ್ಕೂ ಮಿಕ್ಕಿ ತಾಳೆಗ್ರಂಥಗಳಿವೆ ಎಂದು ತಿಳಿದು ಬಂದದ್ದೇ ರಾಹುಲರು ಗೇಶೇ ಸಂಗಡ ಅಲ್ಲಿಗೆ ಹೋದರು. ಅಲ್ಲಿನ ವ್ಯವಸ್ಥಾಪಕನೋ ದೊಡ್ಡ ಒರಟ. ಅಂತೂ ಏನೇನೋ ಕಷ್ಟಪಟ್ಟು ಒಪ್ಪಿಸಿದ ಮೇಲೆ ಆತ ಗ್ರಂಥಗಳನ್ನು ತೋರಿಸಿದ. ಅಲ್ಲಿ ಒಟ್ಟು ಮೂವತ್ತೆಂಟು ಕಟ್ಟು ತಾಳೆಗ್ರಂಥಗಳಲ್ಲಿ ಧರ್ಮಕೀರ್ತಿಯ 'ವಾದನ್ಯಾಯ'ದ ಎರಡು ಮೂಲಗ್ರಂಥಗಳಿದ್ದುವು. ರಾಹುಲರು ಭೋಟ್ ಅನುವಾದದಿಂದ 'ವಾದನ್ಯಾಯ'ವನ್ನು ಸಂಸ್ಕೃತಕ್ಕೆ ಮಾಡಲು ಆರಂಭಿಸಿದ್ದರು. ಆದರೆ ಈಗ ನೋಡಿದರೆ ಮೂಲ ಪುಸ್ತಕವೇ ಇಲ್ಲಿದೆ ! ರಾಹುಲರು ನಾಲ್ಕು ದಿನ ತೆಗೆದುಕೊಂಡು ಆ ಇಡೀ ಪುಸ್ತಕವನ್ನೇ ಬರೆದುಕೊಂಡರು. ಅಲ್ಲಿ ಧರ್ಮಕೀರ್ತಿಯವರ 'ಹೇತುಬಿಂದು' ಮತ್ತು 'ನ್ಯಾಯ ಬಿಂದು' ಎಂಬ ಎರಡು ಗ್ರಂಥಗಳ ಮೇಲೆ ದುರ್ವೇಕ ಮಿಶ್ರರು ಬರೆದ ಟೀಕೆಗಳೂ ದೊರಕಿದುವು. "ಧರ್ಮಕೀರ್ತಿಯ ಈ ಗ್ರಂಥಗಳನ್ನು ನೋಡಿ ಖುಷಿಯಾಗಿ ನಾನು ಕುಣಿಯತೊಡಗಿದೆ" ಎಂದು ರಾಹುಲರು ತನಗಾದ ಆನಂದವನ್ನು ವರ್ಣಿಸಿದ್ದಾರೆ. ಅಲ್ಲಿ ಅವರಿಗೆ ಮೂವತ್ತೈದಕ್ಕೂ ಹೆಚ್ಚು ಸಂಸ್ಕೃತ ಪುಸ್ತಕಗಳು ನೋಡಲು ಸಿಕ್ಕಿದುವು.

ಗ್ಯೋರ್ ವಿಹಾರದ ಬಳಿಕ ಆ ಇಬ್ಬರು ಸಾಕ್ಯಾ ವಿಹಾರ ತಲುಪಿದರು. ಅಲ್ಲಿ ಮಹಂತರಾಜರ ಪ್ರೀತಿಪಾತ್ರ ಗುಮಾಸ್ತ ಡೋನಿರ್ ಛೇನ್‌ಪೋ ಅವರನ್ನು ಸ್ವಾಗತಿಸಿದ. ಅಲ್ಲಿ ಈರ್ವರೂ ಹದಿನೇಳು ದಿನಗಳ ಕಾಲ (ಅಕ್ಟೋಬರ್ 1934) ಉಳಿದರು. ವಿದ್ಯಾಪ್ರೇಮಿ ಡೋನಿರ್ ಛೇನ್‌ಪೋನ ಪತ್ನಿ ಛೇರಿಂಚ ಪಲ್ಮೊ ಈ ಇಬ್ಬರು ಯಾತ್ರಿಕರಿಗೆ ಯಾವ ತೊಂದರೆಯು ಆಗದಂತೆ ನೋಡಿಕೊಂಡಳು. ಸಾಕ್ಯಾದ ಮಹಂತರಾಜ ಗ್ರಂಥಗಳನ್ನು ನೋಡಲು ಅನುಮತಿ ನೀಡಿದ. ಅತ್ಯಂತ ಮಹತ್ವಪೂರ್ಣ ಪುಸ್ತಕವೊಂದು ಅಲ್ಲಿ ರಾಹುಲರಿಗೆ ಸಿಕ್ಕಿತು. 'ಪ್ರಮಾಣ ವಾರ್ತಿಕ'ದ ಒಂದೂವರೆ ಪರಿಚ್ಛೇದಗಳ ಮೇಲೆ ಪ್ರಜ್ಞಾಕರ ಗುಪ್ತನ ಭಾಷ್ಯ ಅದು-'ವಾರ್ತಿಕಾಲಂಕಾರ'. ರಾಹುಲರು ಅದನ್ನು ಬರೆದಿಟ್ಟುಕೊಂಡರು.

ಸಾಕ್ಯಾದಲ್ಲಿ ಇನ್ನೂ ಅನೇಕ ಸಂಸ್ಕೃತ ಗ್ರಂಥಗಳು ಸಿಕ್ಕಿದರೂ ಅವು ಹೆಚ್ಚೇನೂ ಮಹತ್ವದವಲ್ಲ. ಒಂದು ದಿನ ಸಮೀಪದ ಪುರಾತನ ಲಖಂಗ್ ವಿಹಾರವನ್ನು ನೋಡಲು ಹೋದರು. ಅಲ್ಲೊಂದು ಕೊಠಡಿಯಲ್ಲಿ ಅನೇಕ ಅಮೂಲ್ಯ ಸಂಸ್ಕೃತ ಗ್ರಂಥಗಳು ಇದ್ದವಾದರೂ ಅವುಗಳ ಕುರಿತು ಅಲ್ಲಿನ ಅಧಿಕಾರಿಗಳಿಗೇ ಏನೂ ತಿಳಿದಿರಲಿಲ್ಲ. 1936ರಲ್ಲಿ ಮಾಡಿದ ತೃತೀಯ ಟಿಬೇಟ್ ಯಾತ್ರೆಯಲ್ಲಿ ರಾಹುಲರಿಗೆ ಅವುಗಳ ಸುಳಿವು ದೊರಕಿತು.

ಈಗ ರಾಹುಲ ಮತ್ತು ಗೇ ಶೇ ಇಬ್ಬರೂ ಭಾರತಕ್ಕೆ ಹೊರಡಬೇಕಿತ್ತು. ನಾಲ್ಕು ಹೇಸರಗತ್ತೆಗಳು ಮತ್ತು ಇಬ್ಬರು ಆಳುಗಳ ವ್ಯವಸ್ಥೆಯಾಯಿತು. 1934ರ ಅಕ್ಟೋಬರ್ 27ರಂದು ಸಾಕ್ಯಾ ಬಿಟ್ಟರು. "ಸಾಕ್ಯಾ ಬಿಡುವಾಗ ನಮಗೆ ಬೇಸರವಾಯಿತು. ಟಿಬೇಟಿನಲ್ಲಿ ಎಂದೂ ಸಿಗದಷ್ಟು ಪ್ರಿಯ ಜನರು ಇಲ್ಲಿ ಸಿಕ್ಕಿದ್ದರು. ಈ ಸಲದ ಪ್ರವಾಸದಲ್ಲಷ್ಟೇ ಅಲ್ಲ, ಮತ್ತೆರಡು ಸಲ ನಾನು ಟಿಬೇಟಿಗೆ ಬಂದಾಗಲೂ ಈ ಸ್ನೇಹ ಅದೇ ಬಗೆಯಲ್ಲಿತ್ತು. ಮುಂದಂತೂ ಅಲ್ಲಿ ನಲ್ವತ್ತಕ್ಕೂ ಮಿಕ್ಕಿ ಸಂಸ್ಕೃತ ಗ್ರಂಥಗಳ ಪತ್ತೆಯಾಗಿ ಸಾಕ್ಯಾ ನನ್ನ ಮಟ್ಟಿಗೆ ಒಂದು ತೀರ್ಥಕ್ಷೇತ್ರವಾಗಿ ಬಿಟ್ಟಿತು" ಎಂದು ಸಾಕ್ಯಾವನ್ನು ರಾಹುಲರು ಪ್ರೀತಿಯಿಂದ ನೆನೆಯುತ್ತಾರೆ.

ಹಿಂದಿರುಗುವ ಮಾರ್ಗ ಸುಪರಿಚಿತವಾದದ್ದೇ, ಕಳೆದ ಬಾರಿ ಈ ದಾರಿಯಾಗಿಯೇ ಲಾಸಾ ತಲುಪಿದ್ದಷ್ಟೆ ? ಈ ಸಲವೇನು ಛದ್ಮವೇಷದ ಅಗತ್ಯವೂ ಇರಲಿಲ್ಲ, ಸ್ನಾನಗೀನ ಮಾಡದೆ ಗಬ್ಬು ಅವಸ್ಥೆಯಲ್ಲಿರಬೇಕಾದ ಅಗತ್ಯವೂ ಇರಲಿಲ್ಲ. ನವೆಂಬರ್ 16ರ ಸೂರ್ಯಾಸ್ತದ ವೇಳೆ ಮಹಾಬೋಧಾ (ಕಾಠ್ಮಂಡೂ) ತಲುಪಿ ಮರುದಿನ ಧರ್ಮಸಾಹು ಅವರ ಮನೆಗೆ ಹೋದರು.

ಕಾಠ್ಮಂಡೂನಲ್ಲಿ ಇಬ್ಬರೂ ಹದಿನೇಳು ದಿನವಿದ್ದರು. ಅಲ್ಲಿ ಪಂಡಿತ ಹೇಮರಾಜ ಶರ್ಮ ಅವರನ್ನು ಭೇಟಿ ಮಾಡಿ ಅವರಿಂದ 'ಪ್ರಮಾಣ ವಾರ್ತಿಕ'ದ ಭಾಗಗಳ ಫೋಟೋ ಪ್ರತಿ ಪಡೆದರು. ಕಾಠ್ಮಂಡೂನಲ್ಲಿನ ಬೌದ್ಧ ವಿಹಾರಗಳಲ್ಲಿ ಸಂಸ್ಕೃತ ಪುಸ್ತಕಗಳ ಕುರಿತಂತೆ ಚರ್ಚೆ ನಡೆಸಿ, ಕೆಲ ರಾಜಪುರುಷರನ್ನೂ ಸಂಧಿಸಿ, ಜ್ವರದಲ್ಲಿಯೇ ರಾಹುಲರು ಕಾಠ್ಮಂಡೂ ಬಿಟ್ಟು ದಶಂಬರ 5ರಂದು ಪಾಟ್ನಾ ಸೇರಿ ಜೈಸ್ವಾಲರ ಮನೆ ತಲುಪಿದರು.

ಮತ್ತೆ ನಾಲ್ಕು ತಿಂಗಳು (1935 ಏಪ್ರಿಲ್ 2ರ ತನಕ) ಭಾರತದಲ್ಲೇ ಇದ್ದ ಅವಧಿಯ ಮಹತ್ವದ ಘಟನೆಗಳೆಂದರೆ: ಪಾಟ್ನಾದಲ್ಲಿ ಟಾನ್ಸಿಲ್ಸ್ ಆಪರೇಶನ್, ಪ್ರಯಾಗದಲ್ಲಿ ಡಾ. ಬದರೀನಾಥ ಪ್ರಸಾದರ ಮನೆಯಲ್ಲಿದ್ದುಕೊಂಡು 'ವಾದನ್ಯಾಯ' ಮತ್ತು 'ಸಾಮ್ಯವಾದ ಹೀ ಕ್ಯೋಂ ?' ಪುಸ್ತಕಗಳ ಮುದ್ರಣ ವ್ಯವಸ್ಥೆ, ಪ್ರಯಾಗದಲ್ಲಿಯೇ ಪಂಡಿತ ಅವಧ ಉಪಧ್ಯಾಯರನ್ನು ಗಣಿತ ಸಂಬಂಧ ಸಂಶೋಧನೆಗಾಗಿ ಯುರೋಪಿಗೆ ಕಳಿಸುವ ಏರ್ಪಾಟು ಮಾಡಿದ್ದು, ನಲ್ವತ್ತೆರಡನೆಯ ವಯಸ್ಸಿಗೆ ಕನ್ನಡಕ, ಅಮೆರಿಕಾದ ಪತ್ರಿಕೆ 'ಏಶಿಯಾ'ಕ್ಕಾಗಿ ಟಿಬೇಟಿಯನ್ ಚಿತ್ರಕಲೆಯ ಮೇಲೆ ಲೇಖನ, ಕೆಲ ಬೌದ್ಧ ಕ್ಷೇತ್ರಗಳ ಯಾತ್ರೆ, ಪ್ರಥಮ ಟಾಕೀ ಸಿನೆಮಾ 'ಚಂಡೀದಾಸ' ವೀಕ್ಷಣೆ. ಆ ಚಿತ್ರ ಏನೇನೂ ಇಷ್ಟವಾಗಲಿಲ್ಲ. ಇದಕ್ಕೂ ಪೂರ್ವದಲ್ಲಿ 1930ರಲ್ಲಿ ಕೇವಲ ಒಂದು ಇಂಗ್ಲಿಷ್ ಸಿನೆಮಾ ನೋಡಿದ್ದರು. ಆದರದು ಮೂಕಿ ಸಿನೆಮಾ. 1935 ಮಾರ್ಚ್ 28ರಂದು ಜಪಾನು ಪ್ರವಾಸಕ್ಕಾಗಿ ಕಲ್ಕತ್ತಾಕ್ಕೆ ಹೋದರು. ಗೇಶೇ ಧರ್ಮವರ್ಧನರು ಡಾರ್ಜಿಲಿಂಗಿಗೆ ತೆರಳಿದ್ದರು. ಪೆನಾಂಗ್‌ವರೆಗೆ ರಾಹುಲರ ಜೊತೆ ಹೊರಟವರು ಭಿಕ್ಷು ಜಗದೀಶ ಕಾಶ್ಯಪ.

# ಏಶಿಯಾದ ಮಹಾಯಾತ್ರೆ

ಎದುರು ಏಶಿಯಾ ನಕ್ಷೆ ತೆರೆದಿಟ್ಟುಕೊಳ್ಳಿ. ನಲ್ವತ್ತೆರಡು ವರ್ಷ ಪ್ರಾಯದ ಪೀತ ವಸ್ತ್ರಧಾರಿಯಾದ ಒಬ್ಬ ಬೌದ್ಧ ಭಿಕ್ಷು ಒಂದು ದಿನ ಕಲ್ಕತ್ತೆಯಲ್ಲಿ ಹಡಗು ಏರಿದವ ರಂಗೂನ್ ತಲುಪಿ ಅಲ್ಲಿಂದ ಪೆನಾಂಗ್‌ನಲ್ಲಿಳಿದು, ಮತ್ತೆ ಸಿಂಗಾಪುರದಲ್ಲಿ ಹಡಗು ಹತ್ತಿ ಹಾಂಕಾಂಗ್ ಮತ್ತು ಶಂಘ್ಯಾ ಹಾದು ಜಪಾನು ತಲುಪಿದ. ಸುಮಾರು ಮೂರು ತಿಂಗಳು ಜಪಾನಿನಲ್ಲಿದ್ದು ಅಲ್ಲಿನ ಶಹರೀ ಮತ್ತು ಗ್ರಾಮೀಣ ಸಂಸ್ಕೃತಿಯ ಅಧ್ಯಯನ ಮಾಡಿದ, ಮಠ-ಮಂದಿರಗಳ ದರ್ಶನ ಮಾಡಿದ, ಜಪಾನಿನ ಬೌದ್ಧ ವಿದ್ವಾಂಸರನ್ನು ಭೇಟಿಯಾದ.

ಭಾರತ ಬಿಡುವಾಗ ಆ ಭಿಕ್ಷು-ಯಾತ್ರಿಯ ಬಳಿ ಜಪಾನು ತಲುಪುವಷ್ಟು ಮಾತ್ರ ಹಣವಿತ್ತು. ಇನ್ನೊಂದಿಷ್ಟು ಹಣದ ವ್ಯವಸ್ಥೆಯಾಗಿ ಆತ ಕೊರಿಯಾಕ್ಕೆ, ಮಂಚೂರಿಯಾಕ್ಕೆ ಹೋದ. ಅಲ್ಲಿಂದ ಮುಂದೆ ಸೈಬೀರಿಯಾದ ಪ್ರಸಿದ್ಧವಾದ ದೀರ್ಘ ರೈಲು ಮಾರ್ಗದಲ್ಲಿ ಒಂದು ವಾರ ಕಾಲ ಪಯಣಿಸಿ ಮಾಸ್ಕೋ ತಲುಪಿದ. ಲೆನಿನ್‌ಗ್ರಾಡ್‌ಗೆ ಹೋಗಲು ಅನುಮತಿ ಸಿಗದೆ ರೈಲಿನಲ್ಲೇ ಬಾಕೂಗೆ ತೆರಳಿ, ಹಡಗನ್ನೇರಿ ಕ್ಯಾಸ್ಪಿಯನ್ ಸಮುದ್ರ ದಾಟಿಕೊಂಡು ಇರಾನಿನ ಪ್ರಸಿದ್ಧ ನಗರಗಳ ಪ್ರವಾಸ ಕೈಕೊಂಡ. ಬಲೂಚಿಸ್ತಾನದ ಅತ್ಯಂತ ದುರ್ಗಮ ಮಾರ್ಗವಾಗಿ, ಸ್ವದೇಶಕ್ಕೆ ಹಿಂತಿರುಗಿದ.

-ಇದು ರಾಹುಲ ಸಾಂಕೃತ್ಯಾಯನರ ಏಶಿಯಾದ ಮಹಾಯಾತ್ರೆ. ಒಂದು ರೀತಿಯಲ್ಲಿ ಏಶಿಯಾದ ಸುತ್ತ ಹಾಕಿದ ದೊಡ್ಡ ಪ್ರದಕ್ಷಿಣೆ. ಹೊರಟಿದ್ದು ಆಗ್ನೇಯ ಭಾರತದಿಂದ, ಹಿಂದಿರುಗಿದ್ದು ವಾಯುವ್ಯ ಭಾರತದ ಮೂಲಕ. ಸಾಧಾರಣ ಆರೂವರೆ ತಿಂಗಳ ಈ ಮಹಾಯಾತ್ರೆಯಲ್ಲಿ ರಾಹುಲರಿಗೆ ಅನೇಕ ಕಡೆ ಅನೇಕ ವ್ಯಕ್ತಿಗಳ ಸ್ನೇಹ ಸೌಹಾರ್ದದ ಲಾಭವಾಯಿತು. ಇರಾನ್ ಹಾಗೂ ಬಲೂಚಿಸ್ತಾನದ ಕೆಲವೆಡೆಗಳಲ್ಲಿ ಅಷ್ಟೇ ಕಷ್ಟಗಳನ್ನೂ ಸಹಿಸಬೇಕಾಗಿ ಬಂತು. ಸುಮಾರು ಇನ್ನೂರು ದಿನಗಳ ಈ ಸಮಗ್ರ ಯಾತ್ರೆಯುದ್ದಕ್ಕೂ ಅಧ್ಯಯನ ಹಾಗೂ ಬರವಣಿಗೆ ತಡೆಯಿಲ್ಲದೆ ಸಾಗುತ್ತಲೇ ಇತ್ತು. ರಾಹುಲರಿಗಿಂತ ಮೊದಲಾಗಲೀ ನಂತರವಾಗಲೀ ಇಷ್ಟು ದೊಡ್ಡ ಸುತ್ತಿನ ಏಷ್ಯಾ ಪ್ರವಾಸವನ್ನು ಬೇರೆ ಯಾವುದೇ ಸಂಚಾರಿ ಕೈಗೊಂಡಿದ್ದುಂಟೆ ?

1935ರ ಏಪ್ರಿಲ್ 2ರಂದು, ರಾಹುಲರು ಕಲ್ಕತ್ತಾದಿಂದ 'ಗಂಗಾಸಾಗರ' ಹಡಗನ್ನೇರಿ ಹೊರಟರು. ಜೊತೆಗಿದ್ದ ಜಗದೀಶ ಕಾಶ್ಯಪರು ಪೆನಾಂಗ್‌ನಲ್ಲಿ ಇಳಿಯುವವರು. ವಿಶ್ವವಿದ್ಯಾಲಯದ ಶಿಕ್ಷಣ ಪೂರ್ತಿಯಾದ ಬಳಿಕ 1933ರಲ್ಲಿ ಕಾಶ್ಯಪ್ ರಾಹುಲ್‌ಜೀಯ ಸಂಪರ್ಕಕ್ಕೆ ಬಂದಿದ್ದರು. ರಾಹುಲರು ಅವರಿಗೆ ಪಾಲಿಭಾಷೆ ಮತ್ತು ಸಾಹಿತ್ಯಾಧ್ಯಯನಕ್ಕಾಗಿ ವಿದ್ಯಾಲಂಕಾರ ವಿಹಾರಕ್ಕೆ ಕಳಿಸಿದ್ದರು. ಅಲ್ಲಿ ಅವರು ಬೌದ್ಧ ಭಿಕ್ಷುವಾದರು. ರಾಹುಲರ ಗುರುಬಂಧುವಾದರು. ಶ್ರೀಲಂಕೆಯಲ್ಲಿ ಅಧ್ಯಯನ ಮುಗಿಸಿ ಈಗ ರಾಹುಲರ ಜೊತೆ ಪೆನಾಂಗ್ ತನಕ ಹೊರಟಿದ್ದರು.

ಡೆಕ್ ಪಯಣಿಗರಾದ ಈ ಇಬ್ಬರು ಭಿಕ್ಷುಗಳಿಗೆ ರಂಗೂನ್‌ವರೆಗಿನ ಸಮುದ್ರಯಾನದಲ್ಲಿ ಕಷ್ಟ ಸಾಕಷ್ಟಾಯಿತು. ರಂಗೂನ್‌ನಲ್ಲಿ ಐದು ದಿನಗಳ ಕಾಲ ಹಡಗು ತಂಗಿತು. ಹಾಗಾಗಿ ಟ್ರೈನು ಹತ್ತಿ ಉತ್ತರದ ಕಡೆ ಪಯಣಿಸಿ ಬರ್ಮಾದ ಪುರಾತನ ಸ್ಥಳಗಳಾದ ಅಮರಪುರ ಮತ್ತು ಆವಾಗಳಿಗೆ ಹೋಗಿ ಅಲ್ಲಿನ ಭಗ್ನಾವಶೇಷಗಳನ್ನು ನೋಡಿದರು. ರಂಗೂನಿಗೆ ಹಿಂದಿರುಗಿ ಅಲ್ಲಿನ ಹಿಂದೀ ವಾರ್ಷಿಕ ಉತ್ಸವದಲ್ಲಿ ಭಾಗವಹಿಸಿ ಭಾಷಣವನ್ನು ನೀಡಿದರು.

ಮತ್ತೆ ಹಡಗು ಪ್ರಯಾಣ ಮುಂದುವರಿದು ಏಪ್ರಿಲ್ 14ರಂದು ಪೆನಾಂಗ್ ತಲುಪಿದರು. ಅಲ್ಲಿ ಬುದ್ಧಿಸ್ಟ್ ಎಸೋಸಿಯೇಶನ್‌ನ ಸುಂದರ ಮಂದಿರ-ವಿಹಾರವಿತ್ತು. ಕಾಶ್ಯಪರು ಉಳಿಯಬೇಕಾದ ಜಾಗ ಅದೇ. ರಾಹುಲರು ಅಲ್ಲಿಂದ ಮುಂದೆ ಟ್ರೈನಿನಲ್ಲಿ ಸಿಂಗಾಪುರ ತಲುಪಿದರು. ಈ ದ್ವೀಪ-ನಗರಿಯ ಮುಖ್ಯ ಪ್ರದೇಶಗಳನ್ನೆಲ್ಲ ನೋಡಿ ಅಲ್ಲಿಂದ ಏಪ್ರಿಲ್ 21ರಂದು (1935) 'ಅನ್ಯೊಮಾರು' ಹಡಗಿನಲ್ಲಿ ಜಪಾನಿಗೆ ಹೊರಟರು. ಈಗವರು ಏಕಾಂಗಿ. 'ವಾದನ್ಯಾಯ'ದ ಪ್ರೂಫ್ ಜೊತೆಗಿತ್ತು. ಜಪಾನ್ ಕುರಿತ ಪುಸ್ತಕಗಳ ಓದು ಕೂಡ ಸಾಗಿತ್ತು.

ಏಳನೆಯ ದಿನ ಹಡಗು ಹಾಂಗ್‌ಕಾಂಗ್ ತಲುಪಿತು. ರಾಹುಲರು ಕೆಳಗಿಳಿದು ಟ್ಯಾಕ್ಸಿಯಲ್ಲಿ ದ್ವೀಪದ ಸುತ್ತ ತಿರುಗಾಡಿ ಬಂದರು. ಅಲ್ಲಿಂದ ಆರು ದಿನಕ್ಕೆ ಶಾಂಘ್ಯಾ ತೀರ ಸೇರಿದ ರಾಹುಲರು ಚೀನದ ಈ ಬೃಹತ್ ನಗರವನ್ನು ವೀಕ್ಷಿಸಿದರು. ಮುನ್ನಡೆಯಿತು ಹಡಗು, ಮೇ 3ರಂದು ಎರಡೂ ಕಡೆ ಜಪಾನೀ ನೆಲ ಕಾಣತೊಡಗಿತು. ಬಲಕ್ಕೆ ಕ್ಯೂಶೂ ದ್ವೀಪ. ಎಡಕ್ಕೆ ಹೋನ್ಸ್ಯೂ ದ್ವೀಪ. ಒಂದು ಫಯರ್ ಬೋಟಿನಲ್ಲಿ ಡಾಕ್ಟರು ಮತ್ತು ಇನ್ನಿತರ ಕೆಲ ಅಧಿಕಾರಿಗಳು ಹಡಗಿನೊಳಗೆ ಬಂದರು. ಪ್ರವಾಸದ ಗುರಿ ಕೇಳಿದರೆ "ನಾನೊಬ್ಬ ಬೌದ್ಧ ಭಿಕ್ಷು. ನಿಮ್ಮ ಬೌದ್ಧ ದೇಶದ ಅಧ್ಯಯನಕ್ಕೆ ಬಂದಿದ್ದೇನೆ" ಎಂದು ಉತ್ತರಿಸಿದರು ರಾಹುಲಜೀ. ಯೋಕೋಹಾಮಾ ತನಕ ಹಡಗಿನ ಟಿಕೆಟ್ ಆಗಿತ್ತು. ಕೋಬೇ ಬಂದರಿನಲ್ಲಿ ನಾಲ್ಕು ದಿನ ತಂಗಿದಾಗ ಒಸಾಕಾ ಮುಂತಾದ ಆಸುಪಾಸಿನ ನಗರಗಳನ್ನು ಐತಿಹಾಸಿಕ ಸ್ಥಳಗಳನ್ನು ನೋಡಿದರು. ಸಮೀಪದ ಹೊರಿಯೋಜೀ ಬೌದ್ಧ ಮಂದಿರ ನೋಡಿ ಬಂದರು. ಇದು ಜಪಾನಿನ ಅತಿ ಪುರಾತನ ವಿಹಾರ. ಇಲ್ಲಿನ ಅತಿ ಪುರಾತನ ದೇಗುಲ ಕ್ರಿ.ಶ.ಆರನೇ ಶತಮಾನದ್ದು. ಪ್ರಧಾನ ದೇಗುಲದ ಗೋಡೆಯ ಮೇಲೆ ಅಜಂತಾ ಶೈಲಿಯ ಚಿತ್ರಗಳಿವೆ. ಹರ್ಷಕಾಲೀನ ಮೋಡಿ ಅಕ್ಷರಗಳ ಪೂರ್ಣ ವರ್ಣಮಾಲೆಯಿ ರುವ ಭಾರತೀಯ ಹಸ್ತಲಿಪಿಯೊಂದು ಇಲ್ಲಿ ಸುರಕ್ಷಿತವಾಗಿದೆ.

ಕ್ಯೋಟೋ ನಗರದಲ್ಲಿನ ವಿಶಾಲವಾದ ಹಿಗಾಶೀ ಹೋಂಗ್ ಗನಜೀ ಮಂದಿರವನ್ನು ನೋಡಿದರು. ಅಲ್ಲಿನ ಓತಾನಿ ಯುನಿವರ್ಸಿಟಿಗೆ ಹೋದರು. ಪ್ರಸಿದ್ಧ ಬೌದ್ಧ ವಿದ್ವಾಂಸ ಡಾ। ಸುಜುಕಿ ಅವರು ಮನೆಗೆ ಹೋದರೆ ಅವರಿರಲಿಲ್ಲ. ಅವರನ್ನು ಶ್ರೀಮತಿ ಸುಜುಕಿ ಸ್ವಾಗತಿಸಿದರು.

ಹಡಗು ಮೇ 10 (1935)ರಂದು ಯೋಕೋಹಾಮಾ ಬಂದರು ತಲುಪಿತು. ಅಲ್ಲಿಂದ ಅವರು ಇಲೆಕ್ಟ್ರಿಕ್ ಟ್ರೈನು ಹಿಡಿದು ಟೋಕಿಯೋಗೆ ಹೋದರು. 1932ರಲ್ಲಿ ಬರ್ಲಿನ್‌ನಲ್ಲಿ ಜಪಾನಿನ ಶ್ರೀ ಸಕಾಕೀಬಾರ ಅವರ ಪರಿಚಯವಾಗಿತ್ತು. ಟೋಕಿಯೋಕ್ಕೆ ಬಂದಾಗ ತಮ್ಮಲ್ಲುಳಿಯಲು ಅವರು ಆಮಂತ್ರಣ ನೀಡಿದ್ದರು. ರಾಹುಲರು ಅವರಲ್ಲಿಗೆ ಹೋದರು. ಜೂನ್ 26ರ ವರೆಗೆ ಟೋಕಿಯೋದಲ್ಲಿ ಸಕಾಕೀಬಾರಾ ಅವರೊಂದಿಗೇ ಉಳಿದುಕೊಂಡರು. ಸಕಾಕಿಬಾರಾ ರಾಹುಲರ ಆರಾಮಕ್ಕಾಗಿ ತುಂಬ ಕಾಳಜಿ ವಹಿಸಿದರು.

ಟೋಕಿಯೋದಲ್ಲಿ ಇದ್ದಷ್ಟು ಕಾಲವೂ ವಿದ್ವಾಂಸರನ್ನು ಕಾಣುವುದು, ವಿದ್ಯಾಸಂಸ್ಥೆಗಳಿಗೆ ಭೇಟಿ, ಇತ್ಯಾದಿಗಳಲ್ಲೇ ಕಳೆದುಹೋಯಿತು. ಜಪಾನಿನ ಪ್ರೊ. ಇನೋಯೆ, ನಾಗಾಯೀ, ಕಾವಾಗೂಚೀ, ಕಿಮೂರಾ, ವತನಬೇ, ತಾಕೇದಾ ಮುಂತಾದ ಬೌದ್ಧ ವಿದ್ವಾಂಸರ ಭೇಟಿಯಾಯಿತು. ಕಾವಾಗೂಚೀ ಅವರ ಟಿಬೆಟ್ ಪ್ರವಾಸಕಥನವನ್ನು ರಾಹುಲರು ಮೊದಲೇ ಓದಿಕೊಂಡಿದ್ದರು. ಪ್ರೊ. ಕಿಮೂರಾ ಟೋಕಿಯೋದಲ್ಲಿ ರಿಶ್ಯೋ ಬೌದ್ಧ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದರು.

ರಾಹುಲರ ಈ ಅಲೆಮಾರಿ ಬದುಕಿನಿಂದಾದ ಒಂದು ಒಳ್ಳೆಯದೆಂದರೆ ಅವರು ಸ್ಥಳೀಯ ರೀತಿ-ರಿವಾಜುಗಳೊಂದಿಗೆ ಸಹಜವಾಗಿ ಹೊಂದಿಕೊಂಡು ಬಿಡುತ್ತಿದ್ದರು. ಹಡಗಿನಲ್ಲಿಯೇ ಅವರು ಪೆನ್ಸಿಲಿನಂತಹ ಎರಡು ಕಡ್ಡಿಗಳಿಂದ ತಿಂಡಿ ತಿನ್ನುವ ಅಭ್ಯಾಸ ಆರಂಭಿಸಿದ್ದರು. ಇದರಿಂದಾಗಿ ಜಪಾನಿ ನಮೂನೆಯ ಭೋಜನ ಕ್ರಮಕ್ಕೆ ಬೇಗನೇ ಒಗ್ಗಿಕೊಳ್ಳಲು ಸಾಧ್ಯವಾಯಿತು. ಅವರ ಅಭಿಪ್ರಾಯದಲ್ಲಿ "ಊಟ ಮತ್ತು ಸಂಗೀತದ ರುಚಿ" ಹುಟ್ಟುವುದೇ ಹೆಚ್ಚಾಗಿ ಅಭ್ಯಾಸದಿಂದ .

ಟೋಕಿಯೋದ ನಗರ ಸಂಸ್ಕೃತಿಯನ್ನು ಕಂಡರಿತ ಮೇಲೆ ರಾಹುಲರಿಗೆ ಜಪಾನಿನ ಗ್ರಾಮೀಣ ಬದುಕು ನೋಡಬೇಕೆಂದೆನಿಸಿತು. ದ್ವತೀಯ ಟಿಬೆಟ್ ಪ್ರವಾಸದ ಸಮಯ ಕಾಲಿಂಪೋಂಜನಲ್ಲಿ ಅವರಿಗೆ ಜಪಾನಿ ಬೌದ್ಧ ವಿದ್ವಾಂಸ ಬ್ಯೋದೋ ಅವರ ಪರಿಚಯವಾಗಿತ್ತು. ಬ್ಯೋದೋ ರಾಹುಲರನ್ನು ತನ್ನ ಹಳ್ಳಿ ನಿತ್ತಾಕ್ಕೆ ಬಂದಿರುವಂತೆ ಒತ್ತಾಯಿಸಿದರು. ನಿತ್ತಾದಲ್ಲಿ ಬ್ಯೋದೋ ಕುಟುಂಬದ ತುಂಬ ರಮಣೀಯ ಹಾಗೂ ಪ್ರಶಾಂತವಾದ ದೇಗುಲ ನಿವಾಸದಲ್ಲಿ ಅವರು ಸುಮಾರು ಒಂದೂವರೆ ತಿಂಗಳು ಉಳಿದುಕೊಂಡರು.

ಬ್ಯೋದೋ ಕುಟುಂಬ ಬೌದ್ಧ ಪುರೋಹಿತರದು. ಅವರು ಸಂಸ್ಕೃತವನ್ನೂ ತಿಳಿದಿದ್ದರು. ರಾಹುಲರ ಹೆಚ್ಚಿನ ಸಮಯವೆಲ್ಲ 'ದೀರ್ಘನಿಕಾಯ'ದ ಹಿಂದೀ ಅನುವಾದ ಮಾಡುವುದರಲ್ಲಿ ಹಾಗೂ ಪ್ರೂಫ್ ನೋಡುವುದರಲ್ಲಿ ಕಳೆದು ಹೋಗುತ್ತಿತ್ತು. ಉಳಿದ ಸಮಯದಲ್ಲಿ ಅವರು ಅಲ್ಲಿನ ಗ್ರಾಮೀಣ ಜನಜೀವನವನ್ನರಿಯಲು ಪ್ರಯತ್ನಿಸುತ್ತಿದ್ದರು. ಒಂದು ದಿನ ಜಪಾನಿನಲ್ಲಿ ಬಲು ದೊಡ್ಡ ಸಂಸ್ಕೃತ ಪಂಡಿತ ವೋಗಿಹಾರಾ ಅವರನ್ನೂ ಭೇಟಿ ಮಾಡಿ ಬಂದರು.

ಜಪಾನೀಯರು ಹಿಮಾಲಯದ ದೇವದಾರುವಿನ ಸೌಂದರ್ಯಕ್ಕೆ ಮುಗ್ಧರಾಗುತ್ತಾರೆ. ಅಲ್ಲಿ ನಿತ್ತಾದಲ್ಲಿಯೂ ಹಿಮಾಲಯದಿಂದ ತಂದ ದೇವದಾರು ಗಿಡಗಳು ಮಾರಟಕ್ಕಿದ್ದುವು. ನಿತ್ತಾ ಬಿಡುವ ಮೊದಲು ತಮ್ಮ ಮಂದಿರದೆದುರು ರಾಹುಲರು ನೆನಪಿಗಾಗಿ ಒಂದು ದೇವದಾರು ಗಿಡ ನೆಡಬೇಕೆಂದು ಬ್ಯೋದೋ ಒತ್ತಾಯಿಸಿದರು. ಈ ಕುರಿತು ರಾಹುಲರು ಟಿಪ್ಪಣಿ ಬರೆಯುತ್ತಾರೆ. "ಸ್ಮೃತಿಯಲ್ಲಿ ನನಗೆ ಅಂತಹ ವಿಶ್ವಾಸವೇನಿಲ್ಲ. ಆದರೆ ಹತ್ತಾರು ಪೀಳಿಗೆಗಳಿಗಾಗಿ ಒಂದು ಸುಂದರ ವಸ್ತು ಬಿಟ್ಟು ಹೋಗಲು ಮನಸ್ಸಿಗೆ ತುಂಬ ಸಂತೋಷವಾಗುತ್ತದೆ." ರಾಹುಲರು ಟೋಕಿಯೋಗೆ ಹಿಂದಿರುಗಿದರು. ಸಕಾಕೀಬಾರಾ ಅವರನ್ನೂ ಜೊತೆ ಮಾಡಿಕೊಂಡು ಪುನಃ ಒಂದು ವಾರ ಕಾಲ ಕ್ಯೋಟೋ, ನಾರಾಗಳನ್ನು ಸುತ್ತಿ ಬಂದರು. ಸಕಾಕೀ ಬಾರಾ ಅವರಿಂದ ಬೀಳ್ಕೊಳ್ಳುವಾಗ ರಾಹುಲರಿಗೆ ತುಲಸೀದಾಸರ ಚೌಪದಿ ನೆನಪಾಯಿತು, "ಬಿಛುರತ ಏಕ ಪ್ರಾಣ ಹರಿ ಲೇಯೀ", ಅಲ್ಲಿಂದ ಏಕಾಂಗಿಯಾಗಿ ಕೋಯಾಸಾನ್‌ಗೆ ತೆರಳಿದರು.

ಹಿಮಾಲಯ ಪರ್ವತವನ್ನು ನೆನಪಿಸುವ ಕೋಯಾಸಾನ್‌ನ ಸೌಂದರ್ಯಕ್ಕೆ ರಾಹುಲರು ಮಾರು ಹೋದರು. "ನಾನೆಲ್ಲೋ ದೂರ ದೇಶಕ್ಕೆ ಬಂದಿದ್ದೇನೆಂತ ಅನಿಸುತ್ತಲೇ ಇಲ್ಲ" ಎಂದು ಅವರು

ಬರೆದಿದ್ದಾರೆ. ಕೋಯೂಸಾನ್‌ನ ಸಂಗ್ರಹಾಲಯ, ಬೌದ್ಧ ಸಂಸ್ಥೆಗಳಿಗೆ ಭೇಟಿ ನೀಡಿದ್ದಲ್ಲದೆ ವಿದ್ವಾಂಸರನ್ನೂ ಕಂಡು ಬಂದರು.

'ಹೋದ ದಾರಿಯಲ್ಲೇ ಹಿಂತಿರುಗುವುದಲ್ಲ' ಎಂಬುದು ರಾಹುಲರ ಸಂಚಾರಿ ಬದುಕಿನ ನಿಯಮ. ಅವರು ಮಂಚೂರಿಯಾ ಹಾದೂ ಸೋವಿಯತ್ ರಷ್ಯಾಕ್ಕೆ ಹೋಗಲು ಬಯಸುತ್ತಿದ್ದರು. ಯುರೋಪಿಗೆ ಹೋದಾಗ (1932) ಅಲ್ಲಿಂದ ರಷ್ಯಾಕ್ಕೆ ಹೋಗಲು ಪ್ರಯತ್ನಿಸಿದ್ದರೂ ಅದು ಕೈಗೂಡಿರಲಿಲ್ಲ. ಈ ಸಲ ರಷ್ಯಾ ಮಾರ್ಗವಾಗಿ ಸ್ವದೇಶಕ್ಕೆ ಹಿಂದಿರುಗಲು ಹಣ ಸಾಕಷ್ಟಿರಲಿಲ್ಲ. ಇದೇ ವೇಳೆ ಅಮೆರಿಕಾದ ಪತ್ರಿಕೆ 'ಏಶಿಯಾ'ಕ್ಕೆ ಟಿಬೇಟಿನ ಚಿತ್ರಕಲೆಯ ಕುರಿತು ರಾಹುಲರು ಬರೆದುಕೊಟ್ಟ ಲೇಖನಕ್ಕೆ ಎಂಭತ್ತು ಡಾಲರ್ (ಮುನ್ನೂರು ರುಪಾಯಿ) ಸಂಭಾವನೆ ಬಂತು. ಭಾರತದಿಂದ ಆನಂದಜೀ ಕೂಡ ಸುಮಾರು ಅಷ್ಟೇ ಹಣ ಕಳಿಸಿದ್ದು, ಅದೂ ಬಂತು. ರಷ್ಯಾಕ್ಕೆ ಹೋಗುವುದು ನಿಶ್ಚಯವಾಯಿತು. ಆಗ ಕೊರಿಯಾದಲ್ಲಿ ಜಪಾನೀ ಆಡಳಿತವಿದ್ದುದರಿಂದ ಅಲ್ಲಿಗೆ ಹೋಗಲು ಯಾವ ಅಡ್ಡಿ ಆತಂಕಗಳಿರಲಿಲ್ಲ.

ಆಗಸ್ಟ್ 9 (1935)ರಂದು ಹಡಗು ಹತ್ತಿ ಒಂಭತ್ತು ಗಂಟೆಯ ಸಮುದ್ರ ಯಾನದ ಬಳಿಕ ರಾಹುಲರು ಕೊರಿಯಾದ ಫ್ಯೂಸಾನ್ ಬಂದರು ತಲುಪಿಕೊಂಡರು. ಅಲ್ಲಿಂದ ರೈಲು ಹಿಡಿದು ರಾಜಧಾನಿ ಕೆಈಜೋಗೆ ಹೋಗಿ ಹೀಗಾಶೀ ದೇವಾಲಯಕ್ಕೆ ತೆರಳಿದರು. ಮರುದಿನ ಅಲ್ಲಿನ ಧರ್ಮಗುರುಗಳೊಂದಿಗೆ ಕೊಜಶಾನ್ (ವಜ್ರ ಪರ್ವತ) ನೋಡಲು ಹೊರಟರು. ಅವರ ಆಗಮನದಿಂದ ಏಳೆಂಟು ಶತಮಾನಗಳ ದೀರ್ಘ ಅವಧಿಯ ಬಳಿಕ ಭಾರತೀಯ ಭಿಕ್ಷುವೊಬ್ಬ ರಾಹುಲರ ರೂಪದಲ್ಲಿ ಕೊರಿಯಾಕ್ಕೆ ಆಗಮಿಸಿದಂತಾಯಿತು.

ಕೊಜಶಾನ್ ಪರ್ವತ ಕ್ಷೇತ್ರದ ಶಿಖರಗಳನ್ನು, ಬೌದ್ಧ ವಿಹಾರಗಳನ್ನೆಲ್ಲ ನೋಡುತ್ತ ಕೆಈಜೊಗೆ (ಸಿಯೋಲ್) ಹೋಗಿ ನಗರ ದರ್ಶನ ಮಾಡಿ ಪುನಃ ರೈಲಿನಲ್ಲಿ ಕೊರಿಯಾ ಗಡಿ ದಾಟಿ ಮಂಚೂರಿಯಾದ ರಾಜಧಾನಿ ಮುಕ್ದನ್ (ಶೇನ್‌ಯಾಜ)ಗೆ. ಅಲ್ಲಿಯೂ ಬೌದ್ಧ ವಿಹಾರಗಳನ್ನು ನೋಡಿ, ಒಂದು ಲಾಮಾ ಮಂದಿರದಲ್ಲಿ ಮಂಗೋಲ ಭಿಕ್ಷುಗಳನ್ನು ಭೇಟಿ ಮಾಡಿ ಮತ್ತೆ ರೈಲು ಹಿಡಿದು ಸಿಂಕಿಜ ಮತ್ತು ಹರ್‌ಬಿನ್‌ಗೆ. ಅಲ್ಲಿನ ಬೌದ್ಧ ಮಠಗಳಲ್ಲಿ ಭಾರತೀಯ ಭಿಕ್ಷುಗಳು ಸಂಭ್ರಮದಿಂದ ಸ್ವಾಗತಿಸಿದರು. ಆಗಸ್ಟ್ 28ರಂದು ಮಂಚೂರಿಯಾದ ಕೊನೆಯ ಸ್ಟೇಶನ್ ಮಂಚೂಲಿಗೆ. ಇನ್ನು ಮುಂದಿನದು ಮಾಸ್ಕೋ ವರೆಗಿನ ದೀರ್ಘ ಪ್ರಯಾಣ. ಬೇರೆ ಟ್ರೈನು ಹಿಡಿಯಬೇಕು. ಸೈಬೀರಿಯಾದ ಚಳಿಗೆ ಮುನ್ನೆಚ್ಚರಿಕೆಯಾಗಿ ಬೇರೆ ಬಟ್ಟೆಗಳನ್ನು, ಒಂದು ಓವರ್‌ಕೋಟನ್ನೂ ಖರೀದಿಸಿದರು. ಭಿಕ್ಷು ಉಡುಗೆ ಸಧ್ಯಕ್ಕೆ ಪೆಟ್ಟಿಗೆ ಸೇರಿತು.

ಮಂಚೂಲಿಯಿಂದ ಆಗಸ್ಟ್ 29ರಂದು (1935)ರಂದು ರೈಲು ಹೊರಟಿತು. ಮಾಸ್ಕೋ ತನಕ ಒಂದು ವಾರದ ಪ್ರಯಾಣ. ಸೋವಿಯತ್ ದೇಶದ ಮೊದಲ ಸ್ಟೇಶನ್ನಿನಲ್ಲಿ ಸಾಮಾನುಗಳ ತಪಾಸಣೆ ಮಾಡಿದ್ದಲ್ಲದೆ, ವೀಸಾದ ಅವಧಿ ಹೆಚ್ಚಿಸಿದರು. ರಾಹುಲರ ರೋಲ್‌ಫ್ಲೆಕ್ಸ್ ಕೆಮರಾವನ್ನು ಕಟ್ಟಿ ಅದರ ಮೇಲೆ ಸೀಲು ಹಾಕಿದರು.

ಸೆಪ್ಟೆಂಬರ್ 4ರ ನಡುರಾತ್ರಿ ರೈಲು ಮಾಸ್ಕೋ ತಲುಪಿತು. ಮಾಸ್ಕೋದಲ್ಲಿ ಡಾಲರನ್ನು ರಶ್ಯನ್ ಕರೆನ್ಸಿಗೆ ಬದಲಿಸಿಕೊಳ್ಳಲು ಬಿಡುವಾಗಲೇ ಇಲ್ಲ. ಹಾಗಾಗಿ ಊಟ ಪಾನೀಯಕ್ಕೆ ಬೇಕಾದ ಸಾಮಗ್ರಿ ಕೊಳ್ಳಲು ಕೂಡ ಹತ್ತಿರ ರಷ್ಯನ್ ಹಣದ ಬಿಡಿಗಾಸೂ ಇರಲಿಲ್ಲ. ಒಳ್ಳೆಯ ಸಹ ಪ್ರಯಾಣಿಕರು

ಸಿಕ್ಕದ್ದರು. ಕಷ್ಟವಾಗದಂತೆ ನೋಡಿಕೊಂಡರು. ಸೆಪ್ಟಂಬರ್ 8ರಂದು ರಾತ್ರಿ ರೈಲು ಬಾಕೂ ತಲುಪಿತು. ಮೂರು ದಿನ ಅಲ್ಲಿದ್ದು, ಅಲ್ಲಿನ ಪ್ರೇಕ್ಷಣೀಯ ಸ್ಥಳಗಳನ್ನೆಲ್ಲ ನೋಡಿದರು. ಬಾಕೂ ಸಮೀಪದ ಜ್ವಾಲಾದೇವಿ ದೇವಾಲಯಕ್ಕೆ (ಅಗ್ನಿಪೂಜಕರ ದೇವಾಲಯ) ಹೋಗಿ ಅಲ್ಲಿ ನಾಗರೀ ಲಿಪಿಯ ಶಿಲಾ ಲೇಖಗಳನ್ನು ಅವರು ಸರಾಗವಾಗಿ ಓದತೊಡಗಿದ್ದಾಗ ಅದನ್ನು ಕಂಡು ಮಾರ್ಗದರ್ಶಿಗೆ ಅಚ್ಚರಿಯೋ ಅಚ್ಚರಿ.

–ಇನ್ನು ತೈಲ ಬಾವಿಯ ಈ ನಗರದಿಂದ ಹಡಗು ಹಿಡಿದು ಕ್ಯಾಸ್ಪಿಯನ್ ಸಮುದ್ರ ದಾಟಿ ಇರಾನನ್ನು ಪ್ರವೇಶಿಸಬೇಕು. ಸೆಪ್ಟಂಬರ್ 11ರ ಮುಂಜಾವು ಇರಾನಿನ ಮೊದಲ ಬಂದರು 'ಪಹಲವೀ'ಯಲ್ಲಿ ಹಡಗಿನಿಂದ ಇಳಿದ ರಾಹುಲರಿಗೆ ಭಾಷೆಯ ತೊಡಕಿರಲಿಲ್ಲ. ಪಾರ್ಸಿ ಭಾಷೆ ಚೆನ್ನಾಗಿಯೇ ಬರುತ್ತಿತ್ತು. ಇರಾನ್ ತಲುಪಿದರೂ ಉಡುಗೆ ಬದಲಿಸದೆ ಇನ್ನೂ ಕೋಟು ಪ್ಯಾಂಟಿನಲ್ಲಿಯೇ ಇದ್ದರು. ಮೋಟರನ್ನೇರಿ ಟೆಹರಾನ್ ತಲುಪಿ ಒಂದು ಹೋಟೆಲಿನಲ್ಲಿ ತಂಗಿದರು. ಆ ಕಾಲದಲ್ಲಿ ಇರಾನಿನಲ್ಲಿ ವಸ್ತುಗಳು ಬಹಳ ಅಗ್ಗಕ್ಕೆ ದೊರೆಯುತ್ತಿದ್ದುವು.

ರಾಹುಲರಿಗೆ ಅಲ್ಲಿನ ಪ್ರಮುಖ ನಗರ ನೋಡುವ ಆಸಕ್ತಿ. ಇಸ್ಲಾಮ್ ಆಗಮಿಸುವ ಮೊದಲು 'ಇಸಫಹಾನ್' ನಗರ ಇರಾನಿನ ಬಹಳ ಪ್ರಸಿದ್ಧ ಪಟ್ಟಣವಾಗಿತ್ತು. ಇಸಫಹಾನ್‌ನಲ್ಲಿ ಪ್ರಾಚೀನ ಸ್ಮಾರಕಗಳಿವೆ, ಅಲ್ಲಿಂದ ದಕ್ಷಿಣಕ್ಕೆ ಶೀರಾಜ್. ಹತ್ತಿರದಲ್ಲೇ ಪುರಾತನ ಅವಶೇಷಗಳಿರುವ, ಹಖಾಮನೀ ಸಾಮ್ರಾಟರ ನಗರವಾದ ಪರಸೇಪುಲೀಸ್ (ಪಾರಸಪುರಿ). ಬೋಳು ಗುಡ್ಡಗಳು, ನೀರಸ ದೃಶ್ಯಗಳು. "ಪ್ರಾಕೃತಿಕ ಸೌಂದರ್ಯದಿಂದ ವಂಚಿತವಾದ ಈ ಪ್ರದೇಶದಲ್ಲಿ ಹಾಫಿಜ್ ಮತ್ತು ಶಾದೀಯಂತಹ ಕವಿಗಳು ಕವಿಗಳಾದದ್ದು ಹೇಗೆ ಎಂದು ಆಶ್ಚರ್ಯವಾಗುತ್ತದೆ. ಇರಾನಿನ ಮಹಾಮಹಾ ಶೆಹನ್‌ಶಾರ ಕಾಲದಲ್ಲಿಯೂ ಇದು ಹೀಗೆಯೇ ಒಣಗಿ ಬೋಳಾಗಿ ರಾಚುವಂತಿತ್ತೆ ? ಆ ಕಾಲದಲ್ಲಿ ಪಾರಸಪುರೀ ಸಮಸ್ತಸಭ್ಯ ಜಗತ್ತಿನ ರಾಜಧಾನಿಯಾಗಿತ್ತು. ದಾರಾನ ರಾಜ್ಯಕ್ಕೆ ಪೂರ್ವದ ಸಿಂಧೆ, ಪಶ್ಚಿಮದ ಗ್ರೀಸ್, ಈಜಿಪ್ಟ್ ಕೂಡ ಸೇರಿದ್ದುವು. ಪರ್ವತದ ಬುಡದಲ್ಲಿ ದಾರಾನ ಅರಮನೆಯಿತ್ತು. ಈಗಲೂ ಅದರ ಕುರುಹಾಗಿ ದೊಡ್ಡ ದೊಡ್ಡ ಕಂಬಗಳು ಅಲ್ಲಿ ನಿಂತಿದ್ದುವು".

ಸೆಪ್ಟೆಂಬರ್ 26ರಂದು ಟೆಹರಾನ್‌ಗೆ ಹಿಂದಿರುಗಿ ಅಲ್ಲಿ ಎರಡು ದಿನವಿದ್ದರು. ಮಶಹದ್ (ಈಶಾನ್ಯ ಇರಾನ್)ನಿಂದ ಕಾಬೂಲು ಮಾರ್ಗವಾಗಿ ಭಾರತಕ್ಕೆ ಹಿಂದಿರುಗಬೇಕೆಂದಿದ್ದರು. ಆದರೆ ವೀಸಾ ಸಿಗಲಿಲ್ಲ. ಮಶಹದ್‌ಗೆ ಹೋಗುವುದೆಂದುಕೊಂಡರು, ಅಲ್ಲಿಂದಲಾದರೂ ಬಹುಶಃ ವೀಸಾ ಸಿಕ್ಕೀತೇನೋ ಎಂಬ ನಿರೀಕ್ಷೆಯಿಂದ. ಟೆಹರಾನ್‌ನಿಂದ ಮಶಹದ್‌ವರೆಗೆ ಮೂರು ದಿನ ಹಗಲು ರಾತ್ರಿ ಸಾಕುಸಾಕೆನಿಸುವ ಪ್ರಯಾಣ. ಡ್ರೈವರನ ಹತ್ತಿರವೇ ಕುಳಿತಿದ್ದರಿಂದ ಕಾಲು ಇಡಲೂ ಅಥವಾ ಒರಗಲು ಕೂಡ ಜಾಗ ಇರಲಿಲ್ಲ.

ಮಾರ್ಗ ಮಧ್ಯೆ ಫಿರೋಜ್‌ಕುಹ, ಶಾಹರೂದ್, ನೇಶಾಪೋರ್ ಪಟ್ಟಣಗಳು ಸಿಕ್ಕಿದುವು. ಎಂದೋ ಒಂದು ಕಾಲದಲ್ಲಿ ನೇಶಾಪೋರ್ ಇರಾನಿನ ಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು. ಇಲ್ಲಿ ಪ್ರಸಿದ್ಧ ಕವಿ ಹಾಗೂ ಗಣಿತಜ್ಞ–ಜ್ಯೋತಿಷಿ ಉಮರ್‌ಖಯ್ಯಾಮ್‌ನ (ಸುಮಾರು 1100ನೇ ಇಸವಿ) ಸಮಾಧಿ ಇದೆ. ಅಲ್ಲಿಗೆ ಕರೆದೊಯ್ಯಲು ಬಸ್ಸಿನವನಿಗೆ ರಾಹುಲರು ಹೆಚ್ಚು ದುಡ್ಡು ಕೊಡಲು ತಯಾರಿದ್ದರೂ, ಆತ ಬಸ್ಸನ್ನು ಆ ಕಡೆಗೆ ತಿರುಗಿಸಲು ತಯಾರಿರಲಿಲ್ಲ.

ಮಶಹದ್‌ನಿಂದ ಹಿರಾತ್-ಕಾಬುಲ್ (ಅಫ್‌ಘಾನಿಸ್ತಾನ) ರಸ್ತೆ ತೆರೆದಿತ್ತು. ರಾಹುಲ್‌ಜಿ ಈ ಮಾರ್ಗವಾಗಿಯೇ ಹಿಂದಿರುಗಬಯಸಿದ್ದರು. ಆದರೆ ವೀಸಾ ಸಿಗಲು ಇನ್ನೂ ಹತ್ತು ದಿನ ಬೇಕು ಎಂದು ಮಶಹದ್‌ನಲ್ಲಿ ತಿಳಿಯಿತು. ಬೇರೆ ಉಪಾಯ ಕಾಣದೆ ಬಲೂಚಿಸ್ತಾನದ ಬೋಲನ್ ದರ್ರೆಯ ಕಷ್ಟಕರ ಮಾರ್ಗದಿಂದ ಹಿಂದಿರುಗುವ ಸಿದ್ಧತೆ ಮಾಡಿಕೊಳ್ಳಬೇಕಾಯಿತು.

ಮಶಹದ್ ಶಿಯಾ ಜನರ ಪ್ರಸಿದ್ಧ ಯಾತ್ರಾಸ್ಥಳ-ಸುಂದರ ಪಟ್ಟಣ. ಅಲ್ಲಿಂದ ಇಪ್ಪತ್ತೆಂಟು ಕಿಲೋಮೀಟರ್ ದೂರದಲ್ಲಿರುವ ಮಹಾಕವಿ ಫಿರ್‌ದೌಸೀಯ ಸಮಾಧಿ ನೋಡಿ ಬಂದು, ರಾತ್ರಿ ಮಶಹದ್ ಪಟ್ಟಣವನ್ನು ಒಂದು ಸುತ್ತು ವೀಕ್ಷಿಸಿ ಬರೋಣವೆಂದು ಹೊರಟಿದ್ದಾಗ ಯಾರೋ ಅವರ ದುಡ್ಡಿನ ಚೀಲವನ್ನು ಹಾರಿಸಿಬಿಟ್ಟರು. ಅದರಲ್ಲಿ ಸುಮಾರು ತೊಂಭತ್ತು ರುಪಾಯಿಯಷ್ಟು ಅಮೇರಿಕಾ ಮತ್ತು ಇರಾನ್ ನಾಣ್ಯಗಳಿದ್ದುವು. ಚೆಕ್ ಮುರಿಸಿ ದುಡ್ಡಿನ ವ್ಯವಸ್ಥೆ ಮಾಡಿಕೊಳ್ಳಬೇಕಾಗಿ ಬಂತು.

1935 ಅಕ್ಟೋಬರ್ 3ರ ರಾತ್ರಿ ಒಂಭತ್ತು ಗಂಟೆಗೆ ಬಸ್ಸು ಮಶಹದ್‌ನಿಂದ ಹೊರಟಿತು. ಐದು ದಿನಗಳ ಈ ಬಸ್ ಪ್ರಯಾಣ ಹೇಗಿತ್ತೆಂದರೆ "ಕೇಳಬೇಡಿ. ಬಹುಶಃ ನನ್ನ ಇಡೀ ಜೀವಮಾನದಲ್ಲಿ ಇನ್ನು ಯಾವ ಪ್ರಯಾಣದಲ್ಲಿಯೂ ಇಷ್ಟು ತೊಂದರೆ ಆಗಿರಲಿಕ್ಕಿಲ್ಲ. ಸಾಮಾನು ಹೇರಿಕೊಂಡು ಹೋಗುವ ಲಾರಿ ಇದು. ಕೆಳಗೆ ಎರಡು ಭಾಗದಲ್ಲಿ ಸಾಮಾನು ತುಂಬಿಸಿದ್ದರು. ಹಿಂದಿನ ಕಾಲುಭಾಗವಿಡೀ ಮಾಲು ತುಂಬಿ ಬಿರಿಯುತ್ತಿತ್ತು. ಟಾಪು ಕೂಡ ಭಾರದಿಂದ ಒಡೆದೇ ಹೋಗುವಂತಿತ್ತು. ಲಾರಿ ಮೇಲೆ "ಮಖ್‌ಸೂಸ್ ಹಮ್ಲ್-ಬಾರ್-" (ಭಾರ ಒಯ್ಯಲು ಮಾತ್ರ) ಎಂದು ಬರೆದಿದ್ದರೂ ಹದಿನೆಂಟು ಪ್ರಯಾಣಿಕರನ್ನು ತುರುಕಿದ್ದರು. ಒಂಭತ್ತು ಹಿಂದುಸ್ತಾನೀ, ಒಂಭತ್ತು ಇರಾನಿ. ಮೊದಲ ರಾತ್ರಿ ಕುಳಿತೇ ಕಳೆದು ನಂತರ ಮಲಗುವ ಮಾತು ಬಂತು. ನಾನು 'ನಾವು ನಮ್ಮ ತಲೆಯನ್ನು ಮಾತ್ರ ನಮ್ಮದೆಂದು, ಬಾಕಿ ಶರೀರವನ್ನು ಮೂಟೆರಾಶಿ ಎಂದೇ ಅಂದುಕೊಳ್ಳೋಣ' ಎಂದೆ. ಹಾಗೇ ಆಯಿತು.

ತುರ್ಬತೇ-ಹೈದರೀ, ಕಾಈನ್, ವಿರಜಂದ್ ಮೂಲಕ ಹಾದು ಅಕ್ಟೋಬರ್ 7ರಂದು ಲಾರಿ ಜಾಹಿದಾನ್‌ಗೆ ಬಂದು ತಲುಪಿತು. ದಾರಿಯಲ್ಲಿ ಇರಾನ್ ಮತ್ತು ಅಂದಿನ ಬ್ರಿಟಿಶ್ ಭಾರತದ (ಬಲೂಚಿಸ್ತಾನ್) ಗಡಿ ಸಿಕ್ಕಿತು. ಮುಂದೆ ಸಾಗುತ್ತಿದ್ದಾಗ ಲಾರಿ ಉಸುಕಿನಲ್ಲಿ ಸಿಕ್ಕಿಕೊಂಡಿತು. "ಶತಮಾನಗಳಿಂದ ಈ ನೂರಾರು ಮೈಲು ಚಾಚಿಕೊಂಡಿರುವ ನಿರ್ಜಲ ನಿರ್ಜನ ಕಾಂತಾರ ಹಿಂದೂಸ್ತಾನದ ರಕ್ಷಣೆ ಮಾಡುತ್ತಿತ್ತು. ದೊಡ್ಡ ಸೈನ್ಯ ತೆಗೆದುಕೊಂಡು ಈ ಕಡೆಯಿಂದ ಬರಲು ಶತ್ರುಗಳಿಗೆ ಧೈರ್ಯವಾಗುತ್ತಿರಲಿಲ್ಲ. ಆದರೆ ಈಗ ಲಾರಿಗಳು ಈ ನಿರ್ಜನ ಪ್ರದೇಶದ ಪ್ರಯಾಣವನ್ನು ಕೆಲವು ಗಂಟೆಗಳಿಗೆ ಇಳಿಸಿವೆ. ನಾವು ಅಕ್ಟೋಬರ್ 10ರಂದು ಒಂದು ಗಂಟೆಗೆ ನೋಕಕುಂಡೀ ತಲುಪಿಕೊಂಡೆವು."

ನೋಕಕುಂಡೀಯಿಂದ ರೈಲಿನಲ್ಲಿ ಪ್ರಯಾಣ ಮುಂದುವರಿಯಿತು. ಹೊರಗಿಣಿಕಿದರೆ ಬರಿದು ಗುಡ್ಡಗಳು, ಮರಳುಗಾಡು. ಮಧ್ಯಾಹ್ನದ ಹೊತ್ತಿಗೆ ರೈಲು ಬೋಲನ್ ದರ್ರೆ ಪ್ರವೇಶಿಸಿ ಅನೇಕ ಸುರಂಗಗಳನ್ನು ಹೊಕ್ಕು ಹೊರಟಿತು. ಮುಂದಿನ ಸ್ಪೇಜನ್ಸ್ ಜಂಕ್ಷನಿನಲ್ಲಿ ಕ್ವೆಟ್ಟಾದ ಕಡೆ ತೆರಳುವ ಗಾಡಿಯಲ್ಲಿ ಕುಳಿತು 1935ರ ಅಕ್ಟೋಬರ್ 12ರಂದು ಸಂಜೆ ರಾಹುಲರು ಲಾಹೋರ್‌ಗೆ ಬಂದಿಳಿದರು. ಲಾಹೋರಿನಲ್ಲಿ ಆರು ದಿನವಿದ್ದು, ದಿಲ್ಲಿಯಲ್ಲಿ ತುಸು ವಿಶ್ರಮಿಸಿ, ಪ್ರಯಾಗ ತಲುಪಿದರು. ಲಾಹೋರ್ ತಲುಪುವ ಮೊದಲೇ ಕೋಟು ಪ್ಯಾಂಟು ಬಿಟ್ಟು ರಾಹುಲರು ಭಿಕ್ಷುವಿನ ಉಡುಗೆ ಧರಿಸಿರಬೇಕು.

ಈ ಯಾತ್ರೆಯಲ್ಲಿ ರಾಹುಲರು 'ದೀರ್ಘನಿಕಾಯ'ದ ಹಿಂದೀ ಅನುವಾದವನ್ನು ಪೂರ್ತಿಗೊಳಿಸಿದರು. 'ಜಪಾನ್' ಪುಸ್ತಕವನ್ನು ಕೂಡ. ಈ ಎರಡನ್ನೂ ಪ್ರಯಾಗದಲ್ಲಿ ಪ್ರೆಸ್ಸಿಗೆ ಕೊಟ್ಟರು. ಆ ದಿನಗಳಲ್ಲಿ ರಾಹುಲರು ಪುಸ್ತಕಗಳನ್ನು ಸ್ವತಃ ಅಲಹಾಬಾದಿನ ಪ್ರಸಿದ್ಧ ಲಾ ಜರ್ನಲ್ ಪ್ರೆಸ್ಸಿನಲ್ಲಿ ಅಚ್ಚು ಹಾಕಿಸಿ ಆ ಬಳಿಕ ಯಾವುದಾದರೂ ಪ್ರಕಾಶಕರನ್ನು ಗೊತ್ತು ಮಾಡಿಕೊಳ್ಳುತ್ತಿದ್ದರು.

ಟಾನ್ಸಿಲ್ಸ್ ಉಲ್ಬಣಿಸಿತು. ಆಪರೇಶನ್‌ಗಾಗಿ ರಾಹುಲರು ಪಾಟ್ನಾಕ್ಕೆ ಹೋದರು, ಜೈಸ್ವಾಲರ ಮನೆಗೆ. ಧೂಪನಾಥಜೀ ಮತ್ತು ಆನಂದಜೀ ಕೂಡ ಆಗ ಅಲ್ಲಿಯೇ ಇದ್ದರು. ಮೂವರೂ ಸೇರಿ ಸಾರನಾಥಕ್ಕೆ ಹೋದಾಗ ಅಲ್ಲಿ ರಾಹುಲರು, ಹದಿನೆಂಟು ವರ್ಷಗಳ ಬಳಿಕ, ತನ್ನ ಮೂವರು ಸಹೋದರರರನ್ನು (ಶ್ಯಾಮಲಾಲ್, ಗಿರಿಧಾರಿ ಮತ್ತು ಶ್ರೀನಾಥ) ನೋಡಿದರು.

ನಂತರದ ಸುಮಾರು ಒಂದು ತಿಂಗಳ ಕಾಲ ಪ್ರಯಾಗದಲ್ಲಿ ಪುಸ್ತಕಗಳ ಪ್ರೂಫ್ ನೋಡುವುದರಲ್ಲಿ ಕಳೆಯಿತು. ಮತ್ತೆ ಜೈಸ್ವಾಲರೊಂದಿಗೆ ಪಾಟ್ನಾಕ್ಕೆ ನಡೆದರು. ಮುಂಬರುವ ಬೇಸಿಗೆಯಲ್ಲಿ ಪುನಃ ಅವರು ಟಿಬೇಟಿಗೆ ಹೋಗಬೇಕಿತ್ತು.

1935 ದಶಂಬರ 23ರಂದು, ಪಾಟ್ನಾದಲ್ಲಿ ಇದ್ದಾಗಲೇ, ರಾಹುಲರಿಗೆ ಜ್ವರ ಬರತೊಡಗಿತು. ಮೈಸೂರಿನಲ್ಲಿ ನಡೆಯಲಿರುವ ಪ್ರಾಚ್ಯ ಸಮ್ಮೇಳನವೊಂದಕ್ಕೆ ಹೋಗಬೇಕಿದ್ದ ಜೈಸ್ವಾಲರು. 'ನಾನು ಇದ್ದು ಬಿಡಲೇ', ಎಂದು ಕೇಳಿದರು ಕೂಡ. ಆದರೆ ಆ ಹೊತ್ತಿಗೆ ಅಂತಹ ಅಪಾಯದ ಸೂಚನೆಯೇನೂ ಕಾಣಿಸಿರಲಿಲ್ಲ.

ಸಣ್ಣಗೆ ಬರುತ್ತಿದ್ದ ಜ್ವರ ಏರುತ್ತ ಏರುತ್ತ ಮೂರು ದಿನಗಳ ಬಳಿಕ ನೂರೈದು ಡಿಗ್ರಿ ತಲುಪಿತು. ಆಸ್ಪತ್ರೆಗೆ ಸೇರುವುದೇ ಸರಿ ಎಂದು ರಾಹುಲರು ಅಂದುಕೊಳ್ಳುತ್ತಿದ್ದಂತೆ ಹೇಳಿ ಕಳಿಸಿದ ಹಾಗೆ ಧೂಪನಾಥರು ಬಂದರು. ಜ್ವರ ಕೊಂಚವೂ ಇಳಿಯದೆ ಮುಖ ಕೆಂಪೇರಿತ್ತು. ಇದು ಟೈಫಾಯ್ಡ್ ಎಂದು ಸ್ಪಷ್ಟವಾಯಿತು.

ಐದು ದಿನವಿಡೀ ಮೂರ್ಛಾವಸ್ಥೆಯಲ್ಲಿದ್ದರು ರಾಹುಲಜೀ. ಮಲಮೂತ್ರ ಯಾವುದರ ಪ್ರಜ್ಞೆ ಇಲ್ಲದೆ ಹೀಗೆ ಮಲಗಿದ ಅವರನ್ನು ಧೂಪನಾಥರು ಹಗಲು ರಾತ್ರಿ ನೋಡಿಕೊಂಡರು. ಪೇಪರಿನಲ್ಲಿ ಸುದ್ದಿ ಓದಿ ಅನೇಕ ಮಿತ್ರರು ನೋಡಲು ಬಂದರು. ರಾಹುಲರ ಮಾತುಗಳಲ್ಲೇ ಕೇಳಬೇಕೆಂದರೆ-"1936ರ ದಶಂಬರ 30ರಿಂದ ಜನವರಿ 3ರ ವರೆಗೆ ಐದು ದಿನಗಳ ಕಾಲ ಸಾವು-ಬದುಕಿನ ನಡುವೆ ತುಯ್ದಾಡುತ್ತಿದ್ದೆ. ಯಾವ ಕ್ಷಣದಲ್ಲಾಗಲಿ ನನ್ನ ಜೀವ ಹೋಗಬಹುದೆನಿಸುವ ಸ್ಥಿತಿ ನೋಡಿ ಧೂಪನಾಥರು ಬಹಳ ಖಿನ್ನರಾದರು. ಅವರಂತೂ ಎಲ್ಲಿಯವರೆಗೆ ಯೋಚಿಸಿದ್ದರೆಂದರೆ ಶವ ಸುಟ್ಟು ಅಸ್ಥಿಯನ್ನು ತನ್ನೂರಿಗೆ ಕೊಂಡೊಯ್ದು ಅಲ್ಲಿ ಸ್ತೂಪ ನಿರ್ಮಿಸಬೇಕು ಎಂಬಲ್ಲಿವರೆಗೂ. ಅಷ್ಟು ಕಾಹಿಲೆಯಲ್ಲಿಯೂ ನಾನು ಬೊಬ್ಬಿಡುತ್ತಿರಲಿಲ್ಲ, ಒಂದು ಹಾಹಾ ಇಲ್ಲ, ಅಸಂಬದ್ಧ ಮಾತಿಲ್ಲ, ಏನಿಲ್ಲ. ಮೂರ್ಛಾವಸ್ಥೆಯಲ್ಲಿಯೂ ನಾನು ರಾಮ ಅಥವಾ ದೇವರ ಹೆಸರೆತ್ತಲಿಲ್ಲ ಎಂದು ಕೇಳಿ ನನಗಂತೂ ತುಂಬಾ ಸಂತೋಷವಾಯ್ತು. ನಾನು ನಾಸ್ತಿಕನಾಗಿರುವುದಕ್ಕೆ ಒಂದು ಗಟ್ಟಿ ಸಾಕ್ಷಿಯಾಗಿತ್ತು ಇದು. 'ಒಮ್ಮೆ ನಿಮ್ಮ ಬಾಯಿಯಿಂದ ಧರ್ಮಕೀರ್ತಿಯ ಹೆಸರು ಬಂದಿತ್ತು' ಎಂದು ಧೂಪನಾಥರು ಹೇಳಿದರು. ಇದು ಸ್ವಾಭಾವಿಕ. ಮರಣದ ಬಗ್ಗೆ ನನಗೆ ಹರ್ಷವಾಗಲೀ ವಿಷಾದವಾಗಲೀ ಸ್ವಲ್ಪವೂ ಇರಲಿಲ್ಲ. ಆದರೆ ಧರ್ಮಕೀರ್ತಿಯ

'ಪ್ರಮಾಣ ವಾರ್ತಿಕ'ವನ್ನು ಪೂರ್ಣ ಸಂಪಾದಿಸಿ ಪ್ರಕಟಿಸಲು ನನ್ನಿಂದಾಗಲಿಲ್ಲವೆಂಬ ಚಿಂತೆ ಮಾತ್ರ ಕಾಡುತ್ತಿತ್ತು."

ಇಪ್ಪತ್ತು ದಿನ ಆಸ್ಪತ್ರೆಯಲ್ಲಿದ್ದು ರಾಹುಲರು ಜೈಸ್ವಾಲರ ಮನೆಗೆ ಮರಳಿದರು. ಜೈಸ್ವಾಲರು ಕೂಡ ಮೈಸೂರಿನಿಂದ ಹಿಂದಿರುಗಿದರು. ಇನ್ನೂ ನಿಶ್ಶಕ್ತಿ ಇದ್ದರೂ ಮಹಾಶಿವರಾತ್ರಿಯಂದು ರಾಹುಲರು ನೇಪಾಳ ತಲುಪಲೇ ಬೇಕಿತ್ತು. ಫೆಬ್ರವರಿಯಲ್ಲಿ ನಡೆಯಲಿರುವ ಮುಂಗೇರ್ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷ ಭಾಷಣ ಮಾಡಿ ಹಾಗೆಯೇ ನೇಪಾಳ ಪ್ರವೇಶಿಸಿ ಬಿಡಲು, ಅಂತಹ ನಿತ್ರಾಣ ಸ್ಥಿತಿಯಲ್ಲಿಯೂ, 1936 ಫೆಬ್ರವರಿ 17ರಂದು ರಕ್ಸೌಲ್‌ಗೆ ತೆರಳಿದರು. ಜೊತೆಗೆ ಧೂಪನಾಥರೂ ನೇಪಾಳಕ್ಕೆ ಹೊರಟಿದ್ದರು.

# ತೃತೀಯ ಟಿಬೇಟ್ ಯಾತ್ರೆ

ಹಿಂದಿನ ಸಲ (1934 ಇ) ರಾಹುಲರು ಕಾಲಿಂಪ್ಪೋಂಜ – ಫರಿ ದಾರಿಯಾಗಿ ಟಿಬೇಟಿಗೆ ಹೋಗಿ ನೇಪಾಳ ಮಾರ್ಗವಾಗಿ ಭಾರತಕ್ಕೆ ಮರಳಿದ್ದರಷ್ಟೆ. ಈಗ ತೃತೀಯ ಬಾರಿಗೆ, ಪ್ರಥಮ ಸಲದಂತೆ, ನೇಪಾಳ ಮಾರ್ಗದಿಂದ ಹೊರಟಿದ್ದರು. ಎರಡನೇ ಟಿಬೆಟ್ ಪ್ರವಾಸದಲ್ಲಿ ಫೊಈಖಜ, ಶಲೂ, ಗ್ಜೋರ್ ಮತ್ತು ಸಾಕ್ಯಾ ಮಠಗಳಲ್ಲಿ ಅನೇಕ ಮಹತ್ತ್ವಪೂರ್ಣ ತಾಳೆ ಗ್ರಂಥಗಳು ದೊರಕಿದ್ದುವು. ಈ ಮೂರನೇ ಪ್ರವಾಸದಲ್ಲಿಯೂ ಸಾಕ್ಯಾ ಸಮೀಪದ ಲಖಜ ಛೆನಪ್ಪೋ ವಿಹಾರದ ಹಳೆಯ ಕೊಠಡಿಯಲ್ಲಿ 'ಪ್ರಮಾಣವಾರ್ತಿಕ' (ಟೀಕೆ ಮತ್ತು ಭಾಷ್ಯ) ಹಾಗೂ 'ಯೋಗಾಚಾರ ಭೂಮಿ'ಯಂತಹ ಅತ್ಯಂತ ಮಹತ್ವದ ಗ್ರಂಥಗಳ ತಾಳೆಕಟ್ಟುಗಳು ದೊರೆತವು.

ಈಚೆಗಷ್ಟೇ ಸಾವಿನ ದವಡೆಯಿಂದ ಪಾರಾಗಿ ಬಂದಿದ್ದರಿಂದ ಇನ್ನೂ ಪರ್ವತಗಳನ್ನು ಬರಿಗಾಲಿನಲ್ಲಿ ಏರಿ ದಾಟುವಷ್ಟು ಶಕ್ತಿ ಅವರಲ್ಲಿ ಇರಲಿಲ್ಲ. ಆದುದರಿಂದ ನಾಲ್ಕು ಕೂಲಿಗಳು ಹೊರುವ ಮಂಚಲು ಬಾಡಿಗೆಗೆ ಪಡೆದು ರಾಹುಲರು ಕಾಠ್ಮಂಡೂ ತಲುಪಿದರು–ಧರ್ಮಮಾನ ಸಾಹು ಅವರ ಮನೆಗೆ; ಫೆಬ್ರವರಿ 18 (1936)ರ ರಾತ್ರಿ ಅದು. ಏಪ್ರಿಲ್ 14ರ ವರೆಗೆ ಸುಮಾರು ಎರಡು ತಿಂಗಳು ಕಾಠ್ಮಂಡೂನಲ್ಲೇ ಉಳಿದರು. "ನಾನು ನನ್ನ ಎರಡು ತಿಂಗಳ ವಾಸದಲ್ಲಿ 'ದೀರ್ಘನಿಕಾಯ' ಮತ್ತು 'ಜಪಾನ್' ಪ್ರಸ್ತಕಗಳ ಕರಡು ತಿದ್ದುವ ಕೆಲಸದೊಂದಿಗೆ ಅಲ್ಲಿಯೇ ನೇಪಾಳದ ವಂಶಾವಳಿ, ನಾಣ್ಯ, ತಾಳೆ ಪತ್ರಗಳದೂ ಅಧ್ಯಯನ ನಡೆಸುತ್ತ ಇದ್ದೆ"– ಮುಂದೆ ನೇಪಾಳದ ಇತಹಾಸದ ಕುರಿತಂತೆ ರಾಹುಲರು ಒಂದು ದೊಡ್ಡ ಪುಸ್ತಕವನ್ನೇ ಬರೆದರು. ನೇಪಾಳಕ್ಕೆ ರಾಹುಲರ ಜೊತೆಗೆ ಧೂಪನಾಥರೂ ಹೋಗಿದ್ದರಲ್ಲ, ನಂತರ ಜೈಸ್ವಲರೂ ಅಲ್ಲಿಗೆ ಬಂದು ತಲುಪಿಕೊಂಡರು. ರಾಹುಲರು, ಅವರಿಗೆ ಕಾಠ್ಮಂಡೂ ಮತ್ತು ಆಸುಪಾಸಿನ ಐತಿಹಾಸಿಕ ಸ್ಮಾರಕಗಳನ್ನು ತೋರಿಸಿದರು. ಸ್ವಯಂಭೂ ಚೈತ್ಯದ ಒಂದು ಶಿಲಾಲೇಖದಲ್ಲಿ–ಬಂಗಾಳದ ಸುರತ್ರಾಣ ಶಮಸದೀನ ಭಾಂಗರಾ (ಸುಲ್ತಾನ್ ಶಮ್ಸುದ್ದೀನ್ ಬಾಗರಾ) 1350ನೇ ಇಸವಿಯಲ್ಲಿ ನೇಪಾಳಕ್ಕೆ ಬಂದ, ಅಲ್ಲಿನ ಅನೇಕ ದೇವಾಲಯಗಳನ್ನು ಕೆಡವಿ ನಾಶಪಡಿಸಿದ–ಎಂದಿತ್ತು. ಆದರೆ ರಾಜಗುರು ಪಂಡಿತ್ ಹೇಮರಾಜ ಶರ್ಮಾ ಅವರ ಪ್ರಕಾರ ನೇಪಾಳಕ್ಕೆ ಯಾವುದೇ ಮುಸಲ್ಮಾನ್ ವಿಜಯಿ ಕಾಲಿಟ್ಟಿದ್ದಿಲ್ಲ. ಇರಲಿ, ಭಾರತಕ್ಕೆ ಮರಳಿದ ಜೈಸ್ವಾಲರು ಈ ಐತಿಹಾಸಿಕ ಸತ್ಯವನ್ನು ಪ್ರಕಾಶಕ್ಕೆ ತಂದರು.

ಈ ಬಾರಿ ಟಿಬೇಟ್ ಯಾತ್ರೆಯಲ್ಲಿ ರಾಹುಲರೊಡನೆ ಶ್ರೀಲಂಕೆಯ ಅಭಯಸಿಂಹ ಪರೇರಾ ಹೊರಟಿದ್ದರು. ಶ್ರೀ ಪರೇರಾ ಹತ್ತು ಹನ್ನೆರಡು ವರ್ಷಗಳಿಂದ ವಾರಣಾಸಿಯಲ್ಲಿ ಸಂಸ್ಕೃತ ಅಧ್ಯಯನ ನಡೆಸಿ ಈಗ 'ನ್ಯಾಯಾಚಾರ್ಯ'ದ ಅಂತಿಮ ಪರೀಕ್ಷೆಗೆ ಕುಳಿತಿದ್ದರು. ರಾಹುಲರು ಅವರಿಗೆ "ಭೋಟ್ ಭಾಷೆಯಲ್ಲಿ ಬೌದ್ಧ ನ್ಯಾಯದ ಎಷ್ಟೋ ಮಹತ್ವಪೂರ್ಣ ಹಾಗೂ ದುರ್ಲಭ ಗ್ರಂಥಗಳಿವೆ.

ಭಾರತೀಯ ನ್ಯಾಯ ವಿಕಾಸವನ್ನು ಚೆನ್ನಾಗಿ ತಿಳಿಯಬೇಕೆಂದರೆ, ಅವುಗಳ ಸಂಸ್ಕೃತ ಮೂಲಗಳು ಮರೆಯಾಗಿ ಹೋಗಿರುವುದರಿಂದ, ಈ ಗ್ರಂಥಗಳನ್ನು ಓದಿಕೊಳ್ಳುವುದು ತುಂಬ ಮುಖ್ಯ–ಒಂದು ವೇಳೆ ನೀವು ಟಿಬೇಟಿಗೆ ಹೋಗಬೇಕೆಂದಿದ್ದರೆ ಪರೀಕ್ಷೆ ಮುಗಿಸಿದವರು ನೇಪಾಳಕ್ಕೆ ಬಂದುಬಿಡಿ. ನಾನು ನಿಮ್ಮನ್ನು ಜೊತೆಗೆ ಕರೆದುಕೊಂಡು ಹೋಗುತ್ತೇನೆ. ಟಶೀಲುಂಪ್ಪೋದಲ್ಲಿ ಒಬ್ಬ ವಿದ್ವಾಂಸರ ಬಳಿ ಓದುವ ಏರ್ಪಾಟು ಮಾಡಿಸುತ್ತೇನೆ" ಎಂದಿದ್ದರು. ಅಭಯಸಿಂಹ ಟಿಬೇಟಿಗೆ ಹೋಗಲು ಕಾಠ್ಮಂಡೂ ತಲುಪಿಕೊಂಡರು.

ರಾಹುಲರಿಗೀಗ ಶಕ್ತಿ ತುಂಬಿಕೊಂಡಂತೆ ಅನಿಸಿದರೂ ಗಡಿಯ ಕಡೆಗಿನ ಪ್ರಯಾಣಕ್ಕಾಗಿ ರಾಜಗುರುಗಳು ಎರಡು ಕುದುರೆಗಳ ವ್ಯವಸ್ಥೆ ಮಾಡಿಕೊಟ್ಟರು. ಭಿಕ್ಷುವಿನ ಪೀತವಸ್ತ್ರಧಾರಿಯಾಗಿದ್ದರು ರಾಹುಲರು. ರಸ್ತೆ ಪರಿಚಯವಿತ್ತು. ತಾತಪಾನಿಯಿಂದ ಮುಂದೆ ಭೋಟಿನ (ಟಿಬೇಟಿನ) ಗಡಿ ಮುಟ್ಟುತ್ತಲೇ ಪರ್ವತದ ಏರು ಪ್ರಾರಂಭವಾಯಿತು. ಗ್ಲೇನಮ್ ತಲುಪಿದರು. ಅಲ್ಲಿ ಶಿಗರ್ಚೆಯ ಫೋಟೋಗ್ರಾಫರ್ ತೇಜರತನ ತನ್ನ ಟಿಬೇಟೀ ಪತ್ನಿಯ ಜೊತೆ ಹಿಂದಿರುಗುತ್ತಾ ಇದ್ದರು. ಮಾರ್ಗದಲ್ಲಿ ಮತ್ತಿಬ್ಬರು ಜೊತೆ ಸಿಕ್ಕಿದರು. ಅಭಯಸಿಂಹ ಟಿಬೇಟಿನ ಪರಿಸ್ಥಿತಿ ರೀತಿ ರಿವಾಜುಗಳಿಗೆ ಹೊಂದಿಕೊಳ್ಳಲು ಪದ್ಯಾಡುತ್ತಿದ್ದರು.

ಮೇ ಆರರ ಪ್ರಾತಃಕಾಲದಲ್ಲಿ ರಾಹುಲರು ಮತ್ತು ಅಭಯಸಿಂಹರು ಸಾಕ್ಯಾ ತಲುಪಿದರು. ಈ ಬಾರಿಯೂ ಡೋನಿರ್ ಛೇನ್–ಫ್ರೋ ಅವರ ಹಾರ್ದಿಕ ಸ್ವಾಗತ ದೊರೆಯಿತು. ಸುಮಾರು ಐದುವಾರಗಳ ನಂತರ ಅಭಯ ಸಿಂಹರನ್ನು ಟಶೀಲುಂಪ್ಪೋಗೆ ಹೊರಡಿಸಿ ತಾನು ಎರಡೂವರೆ ತಿಂಗಳು ಅಲ್ಲಿ ಉಳಿದುಕೊಂಡು ರಾಹುಲರು ಶೋಧನೆ ಮುಂದುವರಿಸಿದರು. ಕಳೆದ ಬಾರಿ ಸಾಕ್ಯಾದಲ್ಲಿದ್ದಾಗ ಅವರಿಗೆ 'ವಾತಿಕಾಲಂಕಾರ' (ಪ್ರಜ್ಞಾಕರ ಗುಪ್ತಕೃತ ಪ್ರಮಾಣ ವಾರ್ತಿಕ–ಭಾಷ್ಯ)ದ ಒಂದೂವರೆ ಪರಿಚ್ಛೇದವುಳ್ಳ ಹಸ್ತಪ್ರತಿ ಸಿಕ್ಕಿತ್ತು. ಆದರೆ ಅವರು ಅರ್ಧ ಪರಿಚ್ಛೇದವನ್ನು ಮಾತ್ರ ಬರೆದುಕೊಂಡು ಹೋಗಿದ್ದರು. ಈ ಸಲ ನೆಗಡಿ ಹಾಗೂ ಜ್ವರದ ಬಳಲಿಕೆಯಲ್ಲಿಯೂ ಗ್ರಂಥದ ಉಳಿದ ಭಾಗಗಳನ್ನು ಬರೆದಿಟ್ಟುಕೊಂಡರು.

ಡೋನಿರ್ ಛೇನ್–ಫ್ರೋ, ಆತನ ಪತ್ನಿ (ಚಾಮ ಕುಶೋ) ಛೇರಿಜ ಪಲ್ಮೋ ಮತ್ತು ಕುಟುಂಬದ ಇತರರು ಭಿಕ್ಷು ರಾಹುಲರಿಗೆ ಏನೊಂದೂ ಅನಾನುಕೂಲವಾಗದಂತೆ ಕಾಳಜಿಯಿಂದ ನೋಡಿಕೊಂಡರು. ಸಾಕ್ಯಾಮಠದ ಮಹಂತ ರಾಜರು (ಮಠಾಧೀಶರು) ಎಲ್ಲ ಬಗೆಯ ಸಹಾಯ ನೀಡಲೂ ಸಿದ್ಧವಿದ್ದರು. ಒಂದು ದಿನ ಆತ "ಒಮ್ಮೆ ಲಾಖಜ ಛೇನ್ಮೋ ಗೃಹದಲ್ಲಿ ಛಗ್ಪೇ–ಲ್ಹಾಖಜ ಹೆಸರಿನ ಪುಸ್ತಕಾಲಯದ ಬಾಗಿಲು ತೆರೆಸಿ ನೋಡಿ ಬಿಡಿ"–ಎಂದರು. ಕಳೆದ ಸಲ ರಾಹುಲರು ಈ ಮನೆಯ ಬಾಗಿಲ ತನಕ ಹೋಗಿದ್ದರು. ಆದರೆ ಒಳಗಡೆ ಅಮೂಲ್ಯ ಗ್ರಂಥ ರಾಶಿ ಇರಬಹುದೆಂಬ ಅಂದಾಜು ಕೂಡ ಅವರಿಗೆ ಕಿಂಚಿತ್ತೂ ಇರಲಿಲ್ಲ. ಅವರ ನಾಲ್ಕು ಟಿಬೆಟು ಪ್ರವಾಸಗಳಲ್ಲಿ ಅತ್ಯಂತ ಮಹತ್ವದ ತಾಳೆಗ್ರಂಥಗಳು ದೊರಕಿದ್ದು ಇಲ್ಲಿಯೇ. ಇದರ ವಿವರಣೆಯನ್ನು ಅವರ ಮಾತುಗಳಲ್ಲಿಯೇ ಕೇಳಬೇಕು. ಮೇ 25 (1936)ರ ಸ್ಮರಣೀಯ ದಿನ ಬಂತು.....ನಾನು ಛಗ್ಪೇ – ಲ್ಹಾಖಜಗೆ ಮಧ್ಯಾಹ್ನ ಹೋದೆ. ಆ ನೇರ, ಉದ್ದಾನುದ್ದ, ಭಯ ಹುಟ್ಟಿಸುವಂತಹ ಮೆಟ್ಟಲುಗಳನ್ನು ಏರುವಾಗ ಅಲ್ಲಿ ಯಾವುದೇ ಸಂಸ್ಕೃತ ಪುಸ್ತಕ ಇರಬಹುದೆಂಬ ಬಗ್ಗೆ ಅಂತಹ ಆಸೆಯೇನೂ ಇರಲಿಲ್ಲ. ಮನೆ ತಲುಪಿ

ಬಲಕ್ಕೆ ತಿರುಗಿದರೆ ಮೊದಲ ಕೋಣೆ ಕಾಣಿಸಿತು. ಹೊರಗಿಂದ ನೋಡಿದರೆ ಮಾಮೂಲಿ ಅಂದರೆ ಬರೀ ಮಾಮೂಲಿ ಅನಿಸುವಂತಿತ್ತು. ನೂರಾರು ವರ್ಷ ಹಳೆಯ ಬಾಗಿಲು ಮತ್ತು ಚೌಕಟ್ಟುಗಳು ವಿಕಾರವಾಗಿ ಕಾಣುತ್ತಿದ್ದುವು. ಭಿಕ್ಷು ಆಫೀಸರ್ ಬೀಗದ ಸೀಲ್ ಒಡೆದ, ಬೀಗಕ್ಕೆ ಸುತ್ತಿದ ಬಟ್ಟೆ ಬಿಡಿಸಿದ, ಬೀಗದ ಕೈ ತಿರುಗಿಸಿದ – ಕೀಲಿ ತೆರೆದುಕೊಂಡಿತು. ಬಾಗಿಲನ್ನು ಹಿಂದಕ್ಕೆ ತಳ್ಳಿದ. ಎಷ್ಟು ವರ್ಷಗಳಿಂದ ತುಂಬಿಕೊಂಡ ಧೂಳೋ ಒಮ್ಮೆಗೇ ಮೇಲೆದ್ದು ಇಡೀ ಕೊಠಡಿಯಲ್ಲಿ ಹೊಗೆಯಂತೆ ತುಂಬಿಕೊಂಡಿತು. ಸ್ವಲ್ಪ ತಡೆದು ನಾವು ಒಳ ಹೊಕ್ಕೆವು. ನೆಲದ ಮೇಲೆ ಕಾಲಿಟ್ಟರೆ ಹೆಜ್ಜೆ ಮೂಡುವಷ್ಟು ಧೂಳಿತ್ತು. ನಾಲ್ಕೂ ದಿಕ್ಕಲ್ಲಿ ಗೋಡೆಗೊರಗಿ ಮರದ ಸ್ಟ್ಯಾಂಡುಗಳು ನಿಂತಿದ್ದುವು. ಇವುಗಳ ಮೇಲೆ ಬಟ್ಟೆಯಲ್ಲಿ ಸುತ್ತಿಟ್ಟ ಅಥವಾ ಬಿಡಿಸಿಟ್ಟ ಸಾವಿರಾರು ಪುಸ್ತಕಗಳು. ಟಿಬೇಟಿನ ಇತಿಹಾಸ ವಿದ್ವಾಂಸರು ಕೈಯಿಂದಲೇ ಬರೆದ, ಓದಿದ ಪುಸ್ತಕಗಳು. ಟಿಬೇಟೀ ಸಾಹಿತ್ಯ ಮತ್ತು ಇತಿಹಾಸದ ಅಮೂಲ್ಯ ರತ್ನಗಳು.

'ಆದರೆ ನಾನು ನನ್ನ ಸಮಯ ಮತ್ತು ಶಕ್ತಿಗನುಗುಣವಾಗಿ ಮಾತ್ರ ಕೆಲಸ ಮಾಡಬಲ್ಲವನಾಗಿದ್ದೆ. ಅಗತ್ಯವಾಗಿ ನನಗೆ ಬೇಕಾದದ್ದು ಸಂಸ್ಕೃತ ತಾಳೆಗ್ರಂಥಗಳು. ಅಲ್ಲಿ ಇಲ್ಲಿ ಹುಡುಕುತ್ತ ಕೈ ತಾಳೆಗ್ರಂಥಗಳ ಮೇಲೋಡಿತು. ಇವುಗಳನ್ನು ಬಟ್ಟೆಯಲ್ಲಿ ಸುತ್ತಿರಲಿಲ್ಲ. ಆಚೆಯಿಂದ ಈಚೆವರೆಗು ತೂತುಬಿದ್ದ ಗಂಟಿನೊಳಗೆ ದಪ್ಪ ದಾರದಿಂದ ಕಟ್ಟಿಟ್ಟ ಇವು ಒಂದೇ ಸ್ಥಳದಲ್ಲಿ ಸಿಕ್ಕಿದುವು – ಒಂದು, ಎರಡು, ಮೂರು, ನಾಲ್ಕು....ಇಪ್ಪತ್ತು ಗ್ರಂಥಗಳು.' ಕೆಲವು ಕಟ್ಟುಗಳು ಟಿಬೇಟೀ ಗ್ರಂಥಗಳ ನಡುವೆ ಇದ್ದುವು. ನಾನು ತೆರೆದು ನೋಡಲಾರಂಭಿಸಿದೆ. 'ವಾರ್ತಿಕಾಲಂಕಾರ' (ಪ್ರಮಾಣವಾರ್ತಿಕ-ಭಾಷ್ಯ) ಪೂರ್ತಿಯಾಗಿ ಅಲ್ಲಿರುವುದು ನೋಡಿ ನನ್ನ ಆನಂದಕ್ಕೆ ಪಾರವಿಲ್ಲವಾಯ್ತು. ಕರ್ಣಕಗೋಮಿಕೃತ 'ಸ್ವವೃತ್ತಿ ಟೀಕಾ' ಕೂಡ ಅಲ್ಲಿತ್ತು. ಅಂದರೆ 'ಪ್ರಮಾಣ ವಾರ್ತಿಕದ ಟೀಕಾ ಮತ್ತು ಭಾಷ್ಯ'. ಮಹಾ ದಾರ್ಶನಿಕ ಅಸಂಗನ ಮಹತ್ವಪೂರ್ಣ ಪುಸ್ತಕ 'ಯೋಗಾಚಾರ ಭೂಮಿ' ಕೂಡ. 'ಚಾಂದ್ರ-ವ್ಯಾಕರಣ'ದ ಟೀಕೆಯನ್ನೂ ನೋಡಿದೆ. ಇನ್ನಿರುವುದು ಬರವಣಿಗೆಯ ಗುಂಗು ಮಾತ್ರ.

ಬೌದ್ಧ ದಾರ್ಶನಿಕ ಅಸಂಗ(350 ಇ)ನ 'ಯೋಗಾಚಾರ ಭೂಮಿ' ಚೀನೀ ಮತ್ತು ಟಿಬೇಟೀ ಅನುವಾದದಲ್ಲಿ ದೊರೆಯುತ್ತಿತ್ತು. ರಾಹುಲರಿಗೆ ಸಾಕ್ಯಾದಲ್ಲಿ ಅದರ ಸಂಸ್ಕೃತ ಮೂಲ ಸಿಕ್ಕಿತು.

ಅಸಂಗನ ತಮ್ಮ ವಸುಬಂಧು (400 ಇ.)ವಿನ ಉದ್ಗ್ರಂಥ 'ಅಭಿಧರ್ಮಕೋಶ'ದ ಬಗ್ಗೆ ತನ್ನ ಸಂಸ್ಕೃತ ಟೀಕೆ(ವೃತ್ತಿ)ಯನ್ನು ರಾಹುಲರು ತಮ್ಮ ಪ್ರಥಮ ಟಿಬೆಟ್ ಪ್ರವಾಸಕ್ಕೆ ಮೊದಲೇ ಬರೆದಾಗಿತ್ತು. ಎರಡನೇ ಪ್ರವಾಸದಲ್ಲಿ ಅವರಿಗೆ ಸಾಕ್ಯಾದಲ್ಲಿಯೇ ಅಭಿಧರ್ಮ ಕೋಶ-ಮೂಲ ಸಿಕ್ಕಿತ್ತು.

ಮೂರನೇ ಪ್ರವಾಸದಲ್ಲಿ ಗ್ಞೋರ್‌ನ ವಿಹಾರದಲ್ಲಿ ವಸುಬಂಧುವೇ ತನ್ನ 'ಅಭಿಧರ್ಮ ಕೋಶ'ದ ಮೇಲೆ ಬರೆದ ವಿಸ್ತಾರವಾದ ಭಾಷ್ಯವೂ ದೊರೆಯಿತು. ರಾಹುಲರು ಅದರ ಫೋಟೋ ತೆಗೆದುಕೊಂಡರು.

ವಸುಬಂಧುವಿನ ಶಿಷ್ಯ ದಿಙನಾಗ (425 ಇ)ನ 'ಪ್ರಮಾಣ ಸಮುಚ್ಚಯ' ಗ್ರಂಥ ಟಿಬೇಟೀ ಅನುವಾದದಲ್ಲಿ ಮಾತ್ರ ಸಿಗುತ್ತದೆ. ರಾಹುಲರು ತನ್ನ ನಾಲ್ಕೂ ಟಿಬೇಟ್ ಯಾತ್ರೆಗಳಲ್ಲಿ ಈ ಗ್ರಂಥಕ್ಕಾಗಿ ಬಹಳ ಹುಡುಕಾಡಿದರೂ ಸಿಗಲಿಲ್ಲ. ಮೂಲ 'ಪ್ರಮಾಣ ಸಮುಚ್ಚಯ' ಟಿಬೇಟಿನ ಯಾವುದಾದರೂ

ಮಠ, ಸ್ತೂಪ ಅಥವಾ ಮೂರ್ತಿಯ ಒಳಗೆ ಒಂದಲ್ಲ ಒಂದು ದಿನ ಸಿಕ್ಕಿಯೇ ಸಿಗುತ್ತದೆಂದು ಅವರ ಭರವಸೆಯಾಗಿತ್ತು. ಧರ್ಮಕೀರ್ತಿ(600 ಇ)ಯ 'ವಾರ್ತಿಕ'ವು ದಿಙನಾಗನ 'ಪ್ರಮಾಣ ಸಮುಚ್ಚಯ'ದ ಮೇಲಿನ ಸ್ವತಂತ್ರ ವ್ಯಾಖ್ಯಾನ. ಪ್ರಮಾಣ ವಾರ್ತಿಕವು ಬೌದ್ಧ ನ್ಯಾಯದ ಒಂದು ಪ್ರೌಢ ಗ್ರಂಥ. ಧರ್ಮಕೀರ್ತಿಯ ಪ್ರತಿಸ್ಪರ್ಧಿಗಳು ಕೂಡ ಅವನ ಪ್ರತಿಭೆಯನ್ನು ಒಪ್ಪಿಕೊಂಡಿದ್ದಾರೆ. ರಷ್ಯಾದ ಪ್ರೊ। ಶ್ಚೆರ್‌ವಾತ್‌ಸ್ಕೀ ಧರ್ಮಕೀರ್ತಿಯನ್ನು ಭಾರತದ ಕ್ಯಾಂಟ್ ಎಂದರೆ ಅವರ ದರ್ಶನ ಹೆಗೆಲ್‌ಗೆ ಸಮೀಪವೆಂದು ಗಣಿಸಿದ್ದರು ರಾಹುಲ್‌ಜೀ.

ಧರ್ಮಕೀರ್ತಿ ಚೋಳ (ತಮಿಳು) ದೇಶದ ಬ್ರಾಹ್ಮಣ. ಬ್ರಾಹ್ಮಣರ ಶಾಸ್ತ್ರಗಳು, ವೇದ ವೇದಾಂಗಗಳನ್ನು ಅಧ್ಯಯನ ಮಾಡಿದ ಬಳಿಕ ಆತ ಬೌದ್ಧ ಶಾಸ್ತ್ರಾಧ್ಯಯನಕ್ಕೆ ತೊಡಗಿದರು. ಬ್ರಾಹ್ಮಣರು ಆತನಿಗೆ ಬಹಿಷ್ಕಾರ ಹಾಕಿದಾಗ ನಾಲಂದಾ ಮಹಾವಿಹಾರಕ್ಕೆ ತೆರಳಿ ಬೌದ್ಧ ಸಂಘಕ್ಕೆ ಸೇರಿಕೊಂಡ.

ಧರ್ಮಕೀರ್ತಿಯ 'ನ್ಯಾಯ ಬಿಂದು' ಗ್ರಂಥ ಸಿಗುತ್ತಿತ್ತು. ತನ್ನ ಎರಡನೇ ಟಿಬೇಟ್ ಯಾತ್ರೆಯಲ್ಲಿ ರಾಹುಲರು ಅವನ 'ವಾದನ್ಯಾಯ'ದ ತಾಳೆಗ್ರಂಥವನ್ನು ಹುಡುಕಿ ತೆಗೆದು, ಪ್ರಕಟಿಸಿದ್ದರು. ಮೂರನೇ ಯಾತ್ರೆಯಲ್ಲಿ ಅವನ ಪ್ರಮುಖ ಗ್ರಂಥ 'ಪ್ರಮಾಣ ವಾರ್ತಿಕ'ದ ಸಂಸ್ಕೃತ ಮೂಲ ಪೂರ್ತಿಯಾಗಿ ಸಿಕ್ಕಿತು. ಅಷ್ಟೇ ಅಲ್ಲ, ಅದರ ಮೇಲೆ ಲೇಖಕನ ವೃತ್ತಿ (ಸ್ವವೃತ್ತಿ), ಕರ್ಣಕಗೋಮಿಯ ಟೀಕೆ, ಪ್ರಜ್ಞಾಕರ ಗುಪ್ತನ ಭಾಷ್ಯ (ವಾರ್ತಿಕಾಲಂಕಾರ) ಮತ್ತು ಶಲೂ ಮಠದಲ್ಲಿ ಮನೋರಥ ನಂದಿ ಬರೆದ ಒಂದು ಬಹು ಸುಂದರ ವೃತ್ತಿ ಸಹ ದೊರಕಿತು. ಧರ್ಮಕೀರ್ತಿಯ ಇನ್ನೊಂದು ಗ್ರಂಥ 'ಹೇತು ಬಿಂದು'ವನ್ನು ನಂತರ ರಾಹುಲರು ಟಿಬೇಟ್ ಅನುವಾದ ಹಾಗೂ ಸಂಸ್ಕೃತ ಟೀಕೆಯ ಆಧಾರದ ಮೇಲೆ ಮೂಲ ಸಂಸ್ಕೃತದಲ್ಲಿ ಸಿದ್ಧಪಡಿಸಿದರು. ಹೀಗೆ ಧರ್ಮಕೀರ್ತಿಯ ಏಳು ಗ್ರಂಥಗಳಲ್ಲಿ ಐದು ಗ್ರಂಥಗಳು ದೊರೆತಂತಾಯಿತು. ಉಳಿದ ಎರಡು ಗ್ರಂಥಗಳ ಟಿಬೇಟೀ ಅನುವಾದ ಸಹ ಲಭ್ಯ.

ಈ ರೀತಿ, ಧರ್ಮಕೀರ್ತಿಯನ್ನು ಉಳಿಸಿಕೊಳ್ಳಬೇಕೆಂಬ ರಾಹುಲರ ಒಂದು ದೊಡ್ಡ ಕನಸೂ ಪೂರ್ಣಗೊಂಡಿತು. ಈ ಮೂರನೇ ಯಾತ್ರೆಯಲ್ಲಿ ಗ್ಯೆನಮ್‌ನಿಂದ ಹೊರಟ ಬಳಿಕ ಒಂದು ರಾತ್ರಿ ಅವರಿಗೆ ಯಾರೋ ದಿಙನಾಗನ 'ಪ್ರಮಾಣ ಸಮುಚ್ಚಯ' ಮತ್ತು ಧರ್ಮಕೀರ್ತಿಯ 'ಪ್ರಮಾಣವಾರ್ತಿಕ'ಗಳನ್ನು ತನ್ನ ಕೈಯಲ್ಲಿಟ್ಟಂತೆ ಕನಸಾಗಿತ್ತು. ಸಾಕ್ಯಾ ಸಲುಪಿದ ಮೇಲೆ ಅರ್ಧ ಕನಸು ನನಸಾಯಿತು.

ಧರ್ಮಕೀರ್ತಿಯನ್ನು ಭಾರತೀಯ (ಬೌದ್ಧ) ನ್ಯಾಯದ ಮಹಾನ್ ಉದ್ಧಾರಕನೆಂದು ಗಣಿಸುತ್ತಾರೆ. ಆಧುನಿಕ ಕಾಲದಲ್ಲಿ ಧರ್ಮಕೀರ್ತಿಯ ಪುನರುದ್ಧಾರದ ಮಹತ್ಕಾರ್ಯವನ್ನು ರಾಹುಲರು ಮಾಡಿದರು.

ಮುಂದಿನ ಒಂದು ತಿಂಗಳಿಡೀ ಸಾಕ್ಯಾದಲ್ಲಿ ದೊರಕಿದ ಗ್ರಂಥಗಳನ್ನು ಬರೆಯುವುದರಲ್ಲಿ ರಾಹುಲರು ಮುಳುಗಿ ಹೋದರು. ಪುಸ್ತಕಗಳ ಸೂಚಿಪತ್ರವನ್ನೂ ತಯಾರಿಸಿದರು. ಜುಲೈ 23ರಂದು ಒಬ್ಬ ಮಾರ್ಗದರ್ಶಕನನ್ನು ಜೊತೆಗೆ ಕರೆದುಕೊಂಡು ಮತ್ತೆ ಶಲೂ ಕಡೆಗೆ ಹೊರಟರು. ಶಲೂ ವಿಹಾರದಲ್ಲಿ ರಿಸುರಲಾಮಾ ಸ್ವಾಗತಿಸಿದರು. ಅಲ್ಲಿಗೆ ಹತ್ತಿರದ ವಿಹಾರದ ಪುಸ್ತಕಾಲಯದಲ್ಲಿ ರಾಹುಲರಿಗೆ ಸಿಕ್ಕಿದ ತಾಳೆ ಗ್ರಂಥಗಳಲ್ಲಿ ಎರಡು ಮಹತ್ವಪೂರ್ಣ ಪುಸ್ತಕಗಳಿದ್ದುವು–ಮನೋರಥ

ನಂದೀ ಬರೆದ 'ಪ್ರಮಾಣವಾರ್ತಿಕ-ವೃತ್ತಿ' ಮತ್ತು 'ಪ್ರಮಾಣ ವಾರ್ತಿಕ-ಮೂಲ'ದ ಮೂರನೇ ಪರಿಚ್ಛೇದ.

ಟಿಬೇಟಿನಲ್ಲಿ ರಾಹುಲರು ಸಂಚರಿಸುವ ರೀತಿಯಲ್ಲಿ ಅನೇಕ ತರಹದ ಅಪಾಯಗಳಿದ್ದುವು. ಸಾಕ್ಯಾದ ಮಹಂತರಾಜನ ತಮ್ಮ ಅವರಿಗೆ ತಿಳಿ ಹೇಳಿದನು ಕೂಡ "ಟಿಬೇಟಿನ ಅಪಾಯದ ಪ್ರದೇಶಗಳಲ್ಲಿ ಎಲ್ಲೆಲ್ಲೂ ಕಟುಕ ದರೋಡೆಕೋರರಿರುತ್ತಾರೆ. ನೀವು ಹೀಗೆ ಒಬ್ಬಿಬ್ಬರನ್ನು ಕರೆದುಕೊಂಡು ತಿರುಗುತ್ತೀರಿ, ಇದು ಒಳ್ಳೆಯದಲ್ಲ".

ಅದಕ್ಕೆ ರಾಹುಲರು "ಇಷ್ಟರವರೆಗೆ ಅಂತಹ ಡಾಕೂ ಸಿಕ್ಕಿಲ್ಲ. ಈ ಹೆದರಿಕೆಗಳನ್ನೆಲ್ಲ ಮನಸ್ಸಲ್ಲಿಟ್ಟುಕೊಂಡಿದ್ದರೆ ಟಿಬೆಟಿಗೆ ಹೊರಡಲಿಕ್ಕೇ ನನ್ನಿಂದ ಆಗುತ್ತಿರಲಿಲ್ಲ. ಅಪಾಯಕ್ಕೆ ಸಿದ್ಧವಿದ್ದುಕೊಂಡೇ ನಾನೇನೆಲ್ಲ ಮಾಡಲು ಸಾಧ್ಯವಾಯಿತೋ ಅದರ ಬಗ್ಗೆ ನನಗೆ ಪೂರ್ಣ ಸಂತೋಷವಿದೆ. ಸಾಯುವ ಮಾತಿರಲಿ, ಹಾಗೆ ನೋಡಿದರೆ ನಾನು ಈ ವರ್ಷ ಈಗಷ್ಟೇ ಸತ್ತು ಬದುಕಿದ್ದೇನೆ. ಆ ಹೊತ್ತಿನಲ್ಲಿ ನನಗೆ ಧರ್ಮಕೀರ್ತಿಯ ಉದ್ಗ್ರಂಥ 'ಪ್ರಮಾಣ ವಾರ್ತಿಕ'ವನ್ನು ಜಗತ್ತಿನೆದುರು ಇಡಲಾರದೇ ಹೋದೆನಲ್ಲ ಎಂಬ ಒಂದೇ ದುಃಖ ಕೊರೆಯುತ್ತಿತ್ತು"- ಎಂದು ಉತ್ತರಿಸಿದರು.

ಶೀಘ್ರವೇ ರಾಹುಲರು ಡಾಕೂಗಳನ್ನು ಎದುರಿಸಬೇಕಾಗಿ ಬಂತು, ಅವರು ಶಲೂವಿನಿಂದ ಶಿಗರ್ಚೆಗೆ ಹೋದಾಗ. ಅಲ್ಲಿಂದ ಕೇವಲ ಮೂರು ಗಂಟೆ ದಾರಿಯಲ್ಲಿ ಸಿಗುವ ನೇರೀಕಾಭಾ ವಿಹಾರದಲ್ಲಿ ಕೆಲ ತಾಳೆಗ್ರಂಥಗಳು ಇವೆ ಎಂಬ ಸುಳಿವು ಸಿಕ್ಕಿತು. ಕುದುರೆಯೇರಿ ಏಕಾಂಗಿಯಾಗಿ ಅಲ್ಲಿಗೆ ಹೋಗಿ ನೋಡಿದರೆ ಗ್ರಂಥಗಳೂ ಸಿಗಲಿಲ್ಲ, ಅರ್ಧ ದಾರಿಯಲ್ಲಿ ಕುದುರೆಯನ್ನು ಅದರ ಮಾಲಿಕ ಜಬರ್ದಸ್ತಿನಿಂದ ಎಳೆದುಕೊಂಡು ಹೋದ. ಬೌದ್ಧ ಭಿಕ್ಷುವಿನ ಪೀತವಸ್ತ್ರದಲ್ಲಿ ಈಗ ಏಕಾಂಗಿ ರಾಹುಲರು. ಅವರೇ ಬರೆದಂತೆ-

"ಗಂಟೆ ಐದೂವರೆ ಹೊಡೆದಿತ್ತು. ದಾರಿಯಲ್ಲಿ ಕತ್ತಲಾಗಿ ಬಿಡುವ ಭಯವಿತ್ತು. ನಾನೊಬ್ಬನೆ. ಟಿಬೇಟಿನಲ್ಲಿ ಗ್ರಾಮದ ಹೊರವಲಯದಲ್ಲಿ ಎಲ್ಲಾ ಕಡೆ ಪ್ರಾಣಾಪಾಯವಿರುತ್ತದೆ. ನಾನು ಬೇಗಬೇಗನೇ ಹೆಜ್ಜೆ ಹಾಕಿದೆ. ಟಿಬೇಟ್ ಭಿಕ್ಷುವಿನ ವೇಷದಲ್ಲಿದ್ದಿದ್ದರೆ ಯಾರಿಗೂ ನನ್ನನ್ನು ನೋಡಲು ಕೂಡ ಧೈರ್ಯ ಬರುತ್ತಿರಲಿಲ್ಲ. ಆದರೆ ನಾನೋ ಹಳದಿ ಬಣ್ಣದ ಕಾಷಾಯದಲ್ಲಿದ್ದೆ. ಮುಂದೆ ಇಬ್ಬರು ವ್ಯಕ್ತಿಗಳು, ಬಹುಶಃ ಪಕ್ಕದಲ್ಲೇ ಕುರಿ ಮೇಯಿಸುತ್ತಿದ್ದರು, ನನ್ನ ಬಳಿಗೆ ಬಂದು "ವ್ಯಾಪಾರಿ, ಶರಾಬಿಗೆ ಕಾಸು ಕೊಡು" ಎನ್ನತೊಡಗಿದರು. ಅವರು ಭಿಕ್ಷೆ ಬೇಡುತ್ತಿಲ್ಲವೆಂದು ಸ್ವರದಲ್ಲೇ ತಿಳಿಯುತ್ತಿತ್ತು. ನಾನು ದುಡ್ಡು ಕೊಟ್ಟು ನನ್ನ ಬಳಿ ದುಡ್ಡಿದೆ ಎಂದು ಯಾಕೆ ತೋರಿಸಿಕೊಳ್ಳಬೇಕು ? ನನ್ನ ಹತ್ತಿರ ದುಡ್ಡಿಲ್ಲ ಎಂದೆ. ಅವರು ಬೆದರಿಸುವ ದನಿಯಲ್ಲಿ ಮತ್ತೆ ಅದನ್ನೇ ಹೇಳಿದರು. ನಾನು ನಿಲುವಂಗಿಯನ್ನು ತುಸು ಸರಿಸಿದೆ, ಆಗ ಕೆಮರಾದ ಚರ್ಮದ ಬೆಲ್ಟ್ ಚೆನ್ನಾಗಿ ಕಾಣಿಸಿತು. ಬಲಗೈಯನ್ನು ಬಗಲಿಗಿಳಿಸಿದೆ. ಕೂಡಲೆ ಅವರ ಚಹರೆ ಬದಲಾಗಿ ಜಾಗ ಖಾಲಿ ಮಾಡಿದರು. ಅದು ಪಿಸ್ತೂಲು ಅಲ್ಲ ಕೆಮರಾ ಅಂತ ಅವರಿಗೇನು ಗೊತ್ತಿತ್ತು. ನನ್ನ ರೋಲ್‌ಫ್ಲೆಕ್ಸ್ ಆ ದಿನ ಅದ್ಭುತ ತಾಯತದ ಕೆಲಸ ಮಾಡಿತೆಂಬುದಕ್ಕೆ ಯಾವ ಸಂಶಯವಿಲ್ಲ. ನನ್ನ ಹತ್ತಿರ ಆಯುಧವೇ ಇರಲಿಲ್ಲ. ಅವರ ಬಳಿಯೋ ಟಿಬೇಟ್ ಚಾಕುಗಳಿದ್ದುವು. ಅಂತೂ ನಾನು ಕಾಲು ಬೀಸಿ ಬೀಸಿ ಹಾಕುತ್ತಾ ಕತ್ತಲೆಗೆ ಮುಂಚೆ ಶಿಗರ್ಚೆ ತಲುಪಿಕೊಂಡೆ."

ಶಿಗರ್ಚೆಯಲ್ಲಿ ಆಗಲೇ ಅಭಯಸಿಂಹರಿದ್ದರು. ಫೋಟೋಗ್ರಾಫರ್ ಮತ್ತು ಅಭಯಸಿಂಹರನ್ನೂ ಕರೆದುಕೊಂಡು ರಾಹುಲರು ಶಲೂಗೆ ಹೋದರು. ಸುಮಾರು ಒಂದು ವಾರದ ತನಕ ಗ್ರಂಥಗಳ ಫೋಟೋ ತೆಗೆಯುವ ಕಾರ್ಯ ಸಾಗಿತು. ಉಳಿದ ಕೆಲ ಮಹತ್ವಪೂರ್ಣ ಗ್ರಂಥಗಳನ್ನು ಮೂರು ತಿಂಗಳ ಕಾಲ ಇಟ್ಟುಕೊಳ್ಳಲು ಗುಂಬಾದ ಅಧಿಕಾರಿ ಲಾಮಾಗಳು ಅನುಮತಿ ಕೊಟ್ಟದ್ದೊಂದು ವಿಶೇಷದ ಮಾತು.

ರಾಹುಲರು ಗ್ಯಾನಚಿ ತಲುಪಿದರು. ಅಲ್ಲಿಯೂ ಗ್ರಂಥಗಳ ಬರವಣಿಗೆ, ಅವುಗಳ ಫೋಟೋ ತೆಗೆಯುವಿಕೆ ಇತ್ಯಾದಿ ಕಾರ್ಯ ನಡೆಯಿತು. ಗ್ಯಾನ್‌ಚಿಯಿಂದ ಭಾರತಕ್ಕೆ ಸಂಪರ್ಕ ಸೌಲಭ್ಯವೂ ಇದ್ದುದರಿಂದ ಸಾಕ್ಯಾದಲ್ಲಿ ಅಮೂಲ್ಯವಾದ ಗ್ರಂಥಗಳು ಸಿಕ್ಕಿದ ವಾರ್ತೆ ಜೈಸ್ವಾಲರಿಗೂ ರಷ್ಯಾದ ಪ್ರೊಫೆಸರ್ ಶ್ಚೆರೊವೆಸ್ಕಿಯವರಿಗೂ ಆಗಲೇ ತಲುಪಿತ್ತು. ಜೈಸ್ವಾಲರು ವಾರ್ತೆಯನ್ನು ಎಸೋಸಿಯೇಟೆಡ್ ಪ್ರೆಸ್ಸ್‌ಗೆ ಕೊಟ್ಟು ಅಲ್ಲಿಂದ ಅದು ದೇಶವಿಡೀ ಪತ್ರಿಕೆಗಳಲ್ಲೆಲ್ಲ ಸುದ್ದಿಯಾಗಿತ್ತು. ತಾನು ಆ ಪುಸ್ತಕಗಳನ್ನು ನೋಡಲು ಡಾ। ವ್ರೋಸ್ತಿಕೋಫರೊಂದಿಗೆ ಭಾರತಕ್ಕೆ ಬರಬೇಕೆಂದಿದ್ದೇನೆ ಎಂದು ಶ್ಚೆರ್‌ವಾತ್‌ಸ್ಕೀಯಿಂದ ಪತ್ರ ಬಂತು. ರಾಹುಲರು ಗ್ಯಾನಚಿಯಿಂದ ಮಹತ್ವದ ಪುಸ್ತಕಗಳ ಹಸ್ತಲೇಖನ ಮತ್ತು ಫೋಟೋಗಳನ್ನು ಜೈಸ್ವಾಲರಿಗೆ ಕಳಿಸಿಕೊಟ್ಟರು. ಅವನ್ನು ಹಿಡಿದುಕೊಂಡು ಟಿಬೇಟಿನಲ್ಲಿ ಸಂಚರಿಸುವುದು ಸರಿಯಲ್ಲ ಎನಿಸಿತು.

ಗ್ಸೋರ್‌ಗೆ ಹೋಗಿ ಅಲ್ಲಿಂದ ನರ್ಥಾಂಗ್, ಅಲ್ಲಿಂದ ಶಿಗರ್ಚೆಗೆ ಹೋಗಿ ಮತ್ತೆ ಗ್ಸೋರ್‌ಗೆ ಬಂದರು - ರಾಹುಲಜೀ. ಈ ಬಾರಿ ಅಲ್ಲಿ ವಸುಬಂಧುವಿನ 'ಅಭಿಧರ್ಮ ಕೋಶ-ಭಾಷ್ಯ'ದ ಸಂಪೂರ್ಣ ಗ್ರಂಥ ಹಾಗೂ ಇತರ ಕೆಲ ನ್ಯಾಯ ಗ್ರಂಥದ ಭಾಗಗಳು ದೊರೆತವು. ಪುನಃ ಸಾಕ್ಯಾಕ್ಕೆ ತೆರಳಿದರು. ಅಲ್ಲಿ 'ಯೋಗಾಚಾರ್ಯ ಭೂಮಿ'ಯ ಬರವಣಿಗೆಯ ಕೆಲಸ ಮುಗಿಯಿತು. ಡೋನಿರ್-ಛೇನ್‌ಪ್ರೋ ಅವರ ಜಾಮ್‌ಕುಶೋ (ಪತ್ನಿ) ಮತ್ತು ಕುಟುಂಬದ ಇತರರು ತುಂಬ ಸ್ನೇಹದಿಂದ ನೋಡಿಕೊಂಡರು, ನೆರವು ನೀಡಿದರು.

1936ರ ಅಕ್ಟೋಬರ್ 30ರಂದು ಸಾಕ್ಯಾದಿಂದ ರಾಹುಲರು ಭಾರತಕ್ಕೆ ಹೊರಟರು. ಜೊತೆಗೊಂದು ಜನ ಮಾಡಿಕೊಟ್ಟರು ಡೊನಿರ್‌ಲಾ. ಸಾಕ್ಯಾದ ಮಹಂತರಾಜರು ಕೂಡ ಒಂದು ಜನ ಹಾಗೂ ಮೂರು ಹೇಸರಗತ್ತೆಗಳನ್ನು ಗೊತ್ತು ಮಾಡಿಸಿಕೊಟ್ಟರು. ಈ ಬಾರಿ ರಾಹುಲರು ಲಾಛೇನ್-ಗಂಗೋಟಕ್ (ಸಿಕ್ಕಿಂ)ನ ಕಿರಿದಾದ ರಸ್ತೆಯಲ್ಲಿ ಹಿಂದಿರುಗುತ್ತ ಇದ್ದರು. ಲಾಛೇನ್‌ನಲ್ಲಿ ಸಾಕ್ಯಾದಿಂದ ಜೊತೆಗೆ ಬಂದವರು ರಾಹುಲರನ್ನು ಏಕಾಂಗಿ ಬಿಟ್ಟು ವಾಪಾಸು ಹೋದರು. ನವೆಂಬರ್ 7ರಂದು ರಾಹುಲರು ಬರೆದದ್ದು: "ನಾನವತ್ತು ಸಾಬೂನು ಹಚ್ಚಿಕೊಂಡು ಬಿಸಿ ನೀರಿನಲ್ಲಿ ಬೆಳಿಗ್ಗೆ ಸಂಜೆ ಎರಡು ಬಾರಿ ಮಿಂದೆ. ತಿಂಗಳುಗಳಿಂದ ಶೇಖರವಾದ ಕೊಳೆ ಶರೀರದಿಂದ ಅದೇ ದಿನ ತೊಳೆದು ಹೋಯಿತೇ ಹೇಳಲಾರೆ. ಬಟ್ಟೆ ಒಗೆದುಕೊಂಡೆ. ಆದರೆ ಇನ್ನೂ ಹೇನು ಪೂರ್ತಿ ಹೋಗಿರಲಿಲ್ಲ."

ಪಯಣ ಗಂಗೋಟಕ್ ಕಡೆಗೆ ಸಾಗಬೇಕಿತ್ತು. ಕುದುರೆ ಸಿಗುವ ಯಾವ ಆಸೆಯೂ ಇರಲಿಲ್ಲ. ಭಿಕ್ಷು ರಾಹುಲರು ಲಾಛೇನ್‌ನಲ್ಲಿ ಉಳಿದುಕೊಂಡ ಮನೆಯ ವೃದ್ಧರು "ನನ್ನ ಬಳಿ ಎರಡು ಕತ್ತೆಗಳಿವೆ. ನನ್ನ ಮಗಳು ಮೇತೋಕ್ (ಹೂವು) ಕತ್ತೆಗಳ ಜೊತೆಗೆ ಬಂದಾಳು, ಆದರೆ ಸಾಮಾನು ಹೇರುವಾಗ ಇಳಿಸುವಾಗ ನೀವು ಸಹಾಯ ಮಾಡಬೇಕಾದೀತು" ಎಂದರು. ಮುಂದಿನ ಪಯಣದ ಕುರಿತು

ರಾಹುಲರೇ ಸ್ವತಃ ಬರೆದಿರುವುದನ್ನು ಓದೋಣ. "ನವೆಂಬರ್ 8ರಂದು ಚಹ ಕುಡಿದು ಏಳೂವರೆ ಗಂಟೆಗೆ ನಾವು ನಾಲ್ಕು ಜೀವಗಳು – ನಾನು, ಮೇತೋಕ್ (ಇಪ್ಪತ್ತು ವರ್ಷದ ಆರೋಗ್ಯವಂತ ತರುಣಿ), ಹಾಗೂ ನೋರ್ಬು (ಮಣಿ), ಛೇರಿಜಿ (ದೀರ್ಘಾಯು) ಎಂಬ ಹೆಸರಿನ ಕತ್ತೆಗಳು – ಲಾಥೇನ್‌ನಿಂದ ಹೊರಟೆವು. ನಾನು ಯೋಚಿಸುತ್ತಿದ್ದೆ: ಅನೇಕ ವರ್ಷಗಳಿಂದ ಒಂದು ಆಸೆಯಿತ್ತು. ಕತ್ತೆ, ಹೇಸರಗತ್ತೆ ಅಥವಾ ಕುರಿಗಳ ಮೇಲೆ ನನ್ನ ಸ್ವಲ್ಪವೇ ಸಾಮಾನುಗಳನ್ನು ಹೇರಿಕೊಂಡು ಸ್ವಚ್ಛಂದ ಸಂಚರಿಸಬೇಕು ಎಂದು. ಕಾಲ ಕಳೆದಂತೆ ಕೆಲಸ ಎಷ್ಟು ಜಾಸ್ತಿಯಾಯಿತೆಂದರೆ ಆ ಇಚ್ಛೆಯನ್ನು ಪೂರೈಸಿಕೊಳ್ಳುವ ಆಸೆ ಮುಂದೆಮುಂದೆ ಹೋಯಿತು. ಆದರೆ ಈಗ ಮೂರು–ನಾಲ್ಕು ದಿನಗಳ ಮಟ್ಟಿಗೆ ನನ್ನ ಕತ್ತೆ–ಕುಟುಂಬ ರಚನೆಯಾಗಿ ಬಿಟ್ಟಿತ್ತು. ನಾನೋ ಸಿದ್ಧ ಗದಹಪಾ–84 ಸಿದ್ದರ ಕಾಲದಲ್ಲಿ ಒಂದು ವೇಳೆ ನಾನು ಹೀಗೆಯೇ ಕೆಲ ವರ್ಷ ಸ್ವಚ್ಛಂದ ವಿಹರಿಸಿದ್ದೇ ಆದರೆ ಜನ ನನ್ನನ್ನು ಅದೇ ಹೆಸರಿನಿಂದ ಕರೆಯುತ್ತಿದ್ದರು."

ಮಾರ್ಗದಲ್ಲಿ ಮೇತೋಕಳಿಗೆ ವಿಪರೀತ ಜ್ವರ ಬಂತು. ರಾಹುಲರು ಅವಳ ಆರೈಕೆಯನ್ನಲ್ಲದೆ ಕತ್ತೆ ಚಾಕರಿಯನ್ನೂ ಮಾಡಬೇಕಾಗಿ ಬಂತು. ಹೇಗೋ ದಿಕ್‌ಛೂ ತಲುಪಿದರು. ಅಲ್ಲಿಂದ ಮೇತೋಕ್ ಮತ್ತು ಅವಳ ಕತ್ತೆಗಳನ್ನು ಲಾಥೇನ್‌ಗೆ ವಾಪಾಸು ಕಳಿಸಿ ಬಿಟ್ಟು, ಪಯಣ ಮುಂದುವರಿಸಿ ಗಂಗೋಟಕ್ ಹಾದು ನವೆಂಬರ್ 14ರಂದು ಸಿಲಿಗುರಿ ತಲುಪಿದರು. ಡಾರ್ಜಿಲಿಂಗ್‌ನಿಂದ ಅದೇ ಹೊತ್ತಿಗೆ ಗೇಶೇ ಧರ್ಮವರ್ಧನರೂ ಬಂದರು. ಇಬ್ಬರೂ ರೈಲುಗಾಡಿಯೇರಿ ಕಲ್ಕತ್ತೆಗೆ ಹೊರಟು ಹೋದರು.

ಕಲ್ಕತ್ತಾದಿಂದ ಪಾಟ್ನಾಕ್ಕೆ ತೆರಳಿ ಅಲ್ಲಿಯೇ ಏಪ್ರಿಲ್ 21ರ ತನಕ (1937) ಐದು ತಿಂಗಳ ಕಾಲ, ಜೈಸ್ವಾಲರ ಮನೆಯಲ್ಲಿ ಉಳಿದುಕೊಂಡರು. ಪಂಡಿತರೀರ್ವರೂ ಸಂಶೋಧನೆಯಲ್ಲಿ ಮಗ್ನರಾದರು. ರಾಹುಲರ ಪ್ರಯತ್ನದಿಂದ ಪಾಟ್ನಾದ ಬಿಹಾರ ರಿಸರ್ಚ್ ಸೆಂಟರಿನಲ್ಲಿ ಟಿಬೇಟಿ ಸಾಹಿತ್ಯದ ಎಷ್ಟು ಒಳ್ಳೆಯ ಸಂಗ್ರಹ ಸಿದ್ಧವಾಯಿತೆಂದರೆ ಟಿಬೇಟಿನಿಂದ ಹೊರಗೆ ಬೇರೆಲ್ಲೂ ಅಂತಹ ಸಂಗ್ರಹವಿರಲಿಲ್ಲ.

ಪ್ರೊ। ಶ್ಚೆರ್‌ವಾತ್‌ಸ್ಕೀ ರಾಹುಲರನ್ನು ರಷ್ಯಾಕ್ಕೆ ಕರೆಯಿಸಿಕೊಳ್ಳುವ ಪ್ರಯತ್ನದಲ್ಲಿದ್ದರು. ಇತ್ತ ರಾಹುಲರೂ ಆ ಸಿದ್ಧತೆಯಲ್ಲಿ ತೊಡಗಿದ್ದರು. ಪ್ರಯಾಗಕ್ಕೆ ಹೋಗಿ ಅಲ್ಲಿ ಪುಸ್ತಕಗಳ ಮುದ್ರಣ ಕಾರ್ಯ ನೋಡಿಬಂದರು. ನಂತರ ಬೇಸಗೆಯಲ್ಲಿ ಆನಂದಜೀ ಅವರನ್ನು ಕರೆದುಕೊಂಡು ಲಾಹುಲ್ ಕಡೆಗೆ ಹೊರಟರು. ಜೂನ್ ತಿಂಗಳ ಎರಡು ವಾರ ಉರುಸ್ವಾತೀ(ನಗರ)ಯಲ್ಲಿ ರ್‍ಯೋರಿಕ್ ಕುಟುಂಬದೊಂದಿಗೆ ಉಳಿದುಕೊಂಡರು. ಅಲ್ಲಿದ್ದಾಗಲೇ ಜೈಸ್ವಾಲರ ಅಸ್ವಾಸ್ಥ್ಯದ ತಂತಿ ಬಂತು, ರಾಹುಲರು ಪಾಟ್ನಾಕ್ಕೆ ಹೊರಟು ಹೋದರು.

ಜೈಸ್ವಾಲರ ಆರೋಗ್ಯ ತುಸು ಸುಧಾರಿಸಿದೊಡನೆ ರಾಹುಲರು ಸಾರನಾಥ, ಪ್ರಯಾಗ, ಲಕ್ನೋ ಮುಂತಾದ ಕಡೆಗೆ ಸಂಚಾರ ಹೊರಟು ಆಗೋಸ್ತು 5 (1937)ರ ಮುಂಜಾನೆ ವಾಪಸ್ ಪಾಟ್ನಾಕ್ಕೆ ಬಂದು, ಜೈಸ್ವಾಲರ ಮನೆಯೊಳಗೆ ಕಾಲಿಟ್ಟರೆ ಬಿದಿರಿನ ಚಟ್ಟ ಕಾಣಿಸಿತು.

ಹಿಂದಿನ ಸಂಜೆ ಜೈಸ್ವಾಲರು ತೀರಿಕೊಂಡಿದ್ದರು. ರಾಹುಲರು ಅವರ ಚಟ್ಟಕ್ಕೆ ಹೆಗಲು ಕೊಟ್ಟರು. ಅವತ್ತಿನ ಡೈರಿಯಲ್ಲಿ ಅವರು ಬರೆದಿರುವ ಸಾಲುಗಳು: "ಹಾ ಮಿತ್ರ ! ಹಾ ಬಂಧು ! ಹಾ ಗುರುವೆ !...ನಿನ್ನಿಂದ ನಾನೆಷ್ಟು ಕಲಿತೆ ಎಂದು ನಿನಗೇ ತಿಳಿದಿಲ್ಲ. ಇಷ್ಟು ಶೀಘ್ರ ಪ್ರಯಾಣ ! ಈಗಷ್ಟೇ ಸಂದರ್ಭ ಬಂದಿತ್ತು...ಎಲ್ಲಾ ಆಸೆ ಬೂದಿಯಲ್ಲಿ ಸೇರಿ ಹೋಯಿತು–ಜಗತ್ತಿಗಾಗಿ ಏನಾದರೂ ಮಾಡಲೇ ಬೇಕು–ನಿನ್ನ ಸ್ನೇಹ ಪಡೆದವರು ಅನೇಕರು–ಅವರಲ್ಲಿ ನಾನೂ ಒಬ್ಬನಾಗಿದ್ದೆ."

# ಸೋವಿಯತ್ ದೇಶಕ್ಕೆ ಎರಡನೆಯ ಬಾರಿ

ರಾಹುಲರಿನ್ನೂ ಪಾಟ್ನಾದಲ್ಲಿ ಇರುವಾಗಲೇ ಸೋವಿಯತ್ ರಷ್ಯಾಕ್ಕೆ ಬರಲು ಟೆಹರಾನ್ (ಇರಾನ್)ನಲ್ಲಿ ವೀಸಾ ಸಿದ್ಧವಿದೆ ಎಂದು ಡಾ। ಶ್ಚೆರ್‌ವಾತ್‌ಸ್ಕೀಯಿಂದ ಪತ್ರ ಬಂತು. ರಷ್ಯಾಕ್ಕೆ ಹೋಗುವ ತಯಾರಿಗಾಗಿ ಅವರು ಪ್ರಯಾಗಕ್ಕೆ ಹೋದರು. ಅಲ್ಲಿ ವಿಶ್ವವಿದ್ಯಾಲಯದಲ್ಲಿ ಪಂಡಿತ ಜವಾಹರಲಾಲ ನೆಹರೂ ಅವರ ಅಧ್ಯಕ್ಷತೆಯಲ್ಲಿ "ಹಮಾರೀ ಕಮಜೋರಿಯಾಂ" (ನಮ್ಮ ದೌರ್ಬಲ್ಯಗಳು) ಎಂಬ ವಿಚಾರವಾಗಿ ಮಾಡಿದ ಭಾಷಣದ ಪ್ರಸ್ತಾಪ ಈ ಪುಸ್ತಕದ ಆರಂಭದಲ್ಲೇ ಬಂತಷ್ಟೆ ?

ಅಲ್ಲಿಂದ ದೆಹಲಿ ಹಾದು ಸಿಮ್ಲಾಕ್ಕೆ ಹೋಗಿ ಇರಾನಿನ ವೀಸಾ ಪಡೆದರು. ಸೆಪ್ಟಂಬರ್ 19, 1937ರಂದು ಟ್ರೈನಿನಲ್ಲಿ ಪಯಣಿಸಿ ಕ್ವೆಟ್ಟಾ ತಲುಪಿದರು. ಇಲ್ಲಿಯೇ ಅವರು ಭಿಕ್ಷುವಿನ ಪೀತವಸ್ತ್ರ ಕಳಚಿಟ್ಟು ಪ್ಯಾಂಟು ಕೋಟು ತೊಟ್ಟಿರಬೇಕು. ಮುಂದೆ ನೋಕಕುಂಡೀ ತನಕ ಟ್ರೈನಿನಲ್ಲಿ ಪಯಣಿಸಿದರು. ಎರಡು ವರ್ಷಗಳ ಹಿಂದೆ ಬಿರ್ಜಂದ್, ಮಶಹದ್ ಮತ್ತು ಜಾಹಿದಾನ್ ದಾಟಿ ನೋಕಕುಂಡೀ ತಲುಪಿದ ಆ ಜಟಿಲ ಮಾರ್ಗದಲ್ಲಿಯೇ ಲಾರಿಯಲ್ಲಿ ಪಯಣಿಸಿ ಸೆಪ್ಟಂಬರ 1937ರಂದು ಟೆಹರಾನ್ ತಲುಪಿದರು.

ಅಲ್ಲಿ ಸೋವಿಯತ್ ರಷ್ಯಾದ ವೀಸಾ ತರಲೆಂದು ಹೋದರೆ, ಅದನ್ನು ಜೂನ್‌ನಲ್ಲೇ ನೀಡಲಾಗಿತ್ತೆಂದೂ, ಅದು ಈಗ ರದ್ದಾಗಿದೆಯೆಂದೂ ತಿಳಿದು ಬಂತು. ಅತ್ತ ಇತ್ತ ಅಲೆದಾಡಿ ತಂತಿ ಕಟಕಟಾಯಿಸಿದ ಮೇಲೇಯೇ ಮತ್ತೆ ವೀಸಾ ಸಿಕ್ಕಿತು. ಇದಕ್ಕಾಗಿ ಟೆಹಾರನ್‌ನಲ್ಲಿ ಒಂದೂವರೆ ತಿಂಗಳ ಕಾಲ ಉಳಿದುಕೊಳ್ಳಬೇಕಾಯಿತು. ಸಮಯ ಕಳೆಯುವುದೇ ಕಷ್ಟವಾಗಿ ಬಹುಶಃ ಪ್ರತಿ ದಿನ ಒಂದಲ್ಲ ಒಂದು ಭಾಷೆಯ ಸಿನೆಮಾ ನೋಡಲು ಹೋಗುತ್ತಿದ್ದರು. ಕೆಲ ದಿನಗಳ ಬಳಿಕ ಪಾರ್ಸಿ ಭಾಷೆಯ ಪ್ರೊಫೆಸರ್ ಆಗಾ ಹುಮಾಯಿಯ ಒಳ್ಳೆಯ ಜೊತೆ ಸಿಕ್ಕಿ ಅವರೊಡನೆ ಪಾರ್ಸಿ ಮತ್ತು ಸಂಸ್ಕೃತ ವಿಚಾರವಾಗಿ ಚರ್ಚೆ ಮಾಡುತ್ತ ರಾಹುಲರ ಸಮಯ ಚೆನ್ನಾಗಿ ಕಳೆಯಿತು.

ಟೆಹರಾನಿನಿಂದ ರಾಹುಲರು ಮೋಟರು ಹತ್ತಿ ಪಹಲವೀ ಬಂದರಿಗೆ ಹೋದರು. ಹಡಗನ್ನೇರಿ ಕ್ಯಾಸ್ಪೀಯನ್ ಸಮುದ್ರ ದಾಟಿ ಬಾಕೂನಲ್ಲಿ ಇಳಿದರು. ಎರಡು ವರ್ಷಗಳಲ್ಲಿ ಬಾಕೂ ಸಾಕಷ್ಟು ಬದಲಾಗಿತ್ತು. ಅಲ್ಲಿಂದ ಮೂರು ದಿನಗಳ ರೈಲು ಪ್ರವಾಸದ ನಂತರ, 1937ರ ನವೆಂಬರ್ 15ರಂದು, ಮಾಸ್ಕೋ. ಅವರು ಹೋಗಬೇಕಾದ್ದು ಲೆನಿನ್‌ಗ್ರಾಡಿಗೆ, ಸೋವಿಯತ್ ಅಕಾಡೆಮಿಯ ಆಮಂತ್ರಣದ ಮೇರೆಗೆ. ಆದುದರಿಂದ ಸೋವಿಯತ್ ನೆಲದಲ್ಲಿ ಕಾಲಿಟ್ಟ ಬಳಿಕ ಅವರಿಗೆ ಸಕಲ ಸೌಕರ್ಯಗಳೂ ಸಹಜವಾಗಿ ಲಭ್ಯವಿದ್ದುವು. ಒಂದು ದಿನ ಮಾಸ್ಕೋದಲ್ಲಿದ್ದು ಅಲ್ಲಿನ ಕೆಲ ಸ್ಮಾರಕಗಳನ್ನು ನೋಡಿ ರೈಲಿನಲ್ಲಿ ನವೆಂಬರ್ 17ರಂದು ಲೆನಿನ್‌ಗ್ರಾಡ್ ತಲುಪಿದರು. ಅಲ್ಲಿ ಒಂದು ಒಳ್ಳೆಯ ಹೋಟೆಲಿನಲ್ಲಿ ಉಳಿಯುವ ವ್ಯವಸ್ಥೆಯಾಯಿತು.

ಡಾ। ಶ್ಚೆರ್‌ವಾತ್‌ಸ್ಕೀಯವರ ಜೊತೆಗಿದ್ದು ಬೌದ್ಧ ನ್ಯಾಯದ ಕೆಲ ಗ್ರಂಥಗಳನ್ನು ಬೆಳಕಿಗೆ ತರಬೇಕು, ಕೆಲವು ಗ್ರಂಥಗಳು ಐರೋಪ್ಯ ಭಾಷೆಗಳಿಗೆ ಅನುವಾದವಾಗಬೇಕು ಎಂಬೆಲ್ಲ ಹಂಬಲದಿಂದ ಲೆನಿನ್‌ಗ್ರಾಡ್‌ಗೆ ಬಂದಿದ್ದರು ರಾಹುಲಜೀ. ಸೋವಿಯತ್ ವಿಜ್ಞಾನ ಅಕಾಡೆಮಿಯ ಪ್ರಾಚ್ಯ ಸಂಸ್ಥಾನದ ಇಂಡೋ-ಟಿಬೆಟಿಯನ್ ವಿಭಾಗದಲ್ಲಿ ರಾಹುಲರಿಗೆ ಕುರ್ಚಿ-ಮೇಜಿನ ವ್ಯವಸ್ಥೆಯಾಯಿತು.

ಡಾ। ಶ್ಚೆರ್‌ವಾತ್‌ಸ್ಕೀ ಎಲ್ಲಾ ವ್ಯವಸ್ಥೆ ಮಾಡಿ ಜೂನ್‌ನಲ್ಲಿ ರಾಹುಲರಿಗೆ ತಂತಿ ಕಳಿಸಿದ್ದರು. ಆದರೆ ಅದು ತಲುಪುವುದು ವಿಳಂಬವಾಗಿ ಅಕಾಡೆಮಿ ಎಲ್ಲ ವಿಚಾರಕ್ಕೂ ಪುನಃ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಅತ್ತ ಭಾರತದಲ್ಲಿ ಬಿಹಾರ ಸರಕಾರ ರಾಹುಲರ ಟಿಬೇಟ್ ಅಭಿಯಾನಕ್ಕಾಗಿ ಆರುಸಾವಿರ ರುಪಾಯಿ ಮಂಜೂರು ಮಾಡಿತ್ತು. ಚಳಿಗಾಲ ಮುಗಿಯುತ್ತಲೂ ಟಿಬೇಟಿಗೆ ಹೊರಡಬೇಕಾಗಿತ್ತು. ಇತ್ತ ಸೋವಿಯತ್ ಅಕಾಡೆಮಿಯೂ ಬೇಗ ನಿರ್ಧಾರ ತೆಗೆದುಕೊಳ್ಳದೆ ಮಂದಗತಿ ಅನುಸರಿಸುತ್ತಿದ್ದುದರಿಂದ ಕೊನೆಯಲ್ಲಿ ರಾಹುಲರು ಭಾರತಕ್ಕೆ ಹಿಂದಿರುಗಲು ನಿರ್ಧರಿಸಿದರು. ಎರಡೇ ಎರಡು ತಿಂಗಳು, ಅದೂ ಕಷ್ಟದಲ್ಲಿ, ಲೆನಿನ್‌ಗ್ರಾಡಿನಲ್ಲಿದ್ದರೂ ಅಷ್ಟೇ ಸಮಯವನ್ನು ಅವರು ಚೆನ್ನಾಗಿ ಉಪಯೋಗಿಸಿಕೊಂಡರು.

ಲೆನಿನ್‌ಗ್ರಾಡ್ ಮುಟ್ಟಿದ ದಿನವೇ ಅವರು ಡಾ। ಶ್ಚೆರ್‌ವಾತ್‌ಸ್ಕೀಯವರನ್ನು ಹೋಗಿ ಭೇಟಿಮಾಡಿದರು. ಕಾಲಿಗೆ ಪೆಟ್ಟು ಬಿದ್ದ ಕಾರಣ ಮಂಚದ ಮೇಲೆ ಒರಗಿಕೊಂಡಿದ್ದ ಡಾ। ಶ್ಚೆರ್‌ವಾತ್‌ಸ್ಕೀ "ಸ್ವಾಗತಮ್ ಇದಮಾಸನಂ ಉಪವಿಶ್ಯತಾಮ್"ಎಂದು ಹೇಳಿ ಅವರನ್ನು ಸ್ವಾಗತಿಸಿದರು. ತನ್ನ ಶಿಷ್ಯ ರೆವಿನೋವಿಚ್ ಅವರಿಗೆ ರಾಹುಲರ ದೇಖಾರೇಖಿಯ ಜವಾಬ್ದಾರಿ ವಹಿಸಿದರು. ಲೆನಿನ್‌ಗ್ರಾಡಿನ ಸ್ಮಾರಕಗಳು, ಸಂಗ್ರಹಾಲಯವನ್ನೆಲ್ಲ ನೋಡಿಬಂದ ರಾಹುಲರು ನಾಲ್ಕನೇ ದಿನದಿಂದ ಸಂಸ್ಥಾನಕ್ಕೆ ಹೋಗತೊಡಗಿದರು. ಅಲ್ಲಿ ಟಿಬೇಟ್ ಅನುವಾದದೊಡನೆ 'ವಾರ್ತಿಕಾಲಂಕಾರ'ದ ಸಂಸ್ಕೃತ ಗ್ರಂಥವನ್ನು ಸೇರಿಸುವ ಕಾರ್ಯ ಆರಂಭಿಸಿದರು. ತನ್ನ ಟಿಬೆಟಿಯನ್ ಉಣ್ಣೆಯ ಬಿಳೀ ಸೂಟು ಧರಿಸಿ ಅದರ ಮೇಲೆ ಚರ್ಮದ ಓವರ್‌ಕೋಟ್ ಹಾಕಿಕೊಂಡು ಹೋಟೆಲಿನಿಂದ ಸಂಸ್ಥಾನಕ್ಕೆ ಹೆಚ್ಚಾಗಿ ಕಾಲ್ನಡೆಯಲ್ಲಿಯೇ ಹೋಗುತ್ತಿದ್ದರು.

ಇಂಡೋ-ಟಿಬೇಟಿಯನ್ ವಿಭಾಗದ ಎಲೇನಾ (ಲೋಲಾ) ಕೊಜೆರೊವಸ್ಕಾಯಾಳ ಆರೋಗ್ಯ ಸರಿಯಿರಲಿಲ್ಲ. ಹಾಗಾಗಿ ಹತ್ತು ದಿನಗಳ ಮೇಲಷ್ಟೇ ರಾಹುಲರಿಗೆ ಅವಳ ಭೇಟಿಯಾಯಿತು. ರಾಹುಲಜೀ ಬರದಂತೆ ಆಕೆಗೆ ಫ್ರೆಂಚ್, ಇಂಗ್ಲಿಷ್, ರಷ್ಯನ್ ಮತ್ತು ಮಂಗೋಲಿಯನ್ ಭಾಷೆಗಳಲ್ಲಿ ಮಾತಾಡಲು ಬರುತ್ತಿತ್ತು. ಭೋಟ್-ರಷ್ಯನ್ ಕೋಶವನ್ನು ಕೂಡ ಆಕೆ ಸಿದ್ಧಪಡಿಸುತ್ತ ಇದ್ದಳು. ರಾಹುಲರು ಆಕೆಗೆ ಸಂಸ್ಕೃತ ಕಲಿಸುವುದು, ಆಕೆ ಅವರಿಗೆ ರಷ್ಯನ್ ಕಲಿಸುವುದು ಎಂದು ಮಾತಾಯಿತು.

ರಾಹುಲರು ಲೋಲಾಳಿಗಾಗಿ ಸಂಸ್ಕೃತ ಪಾಠಗಳನ್ನು ಬರೆದರು. ನಿಧಾನವಾಗಿ ಇಬ್ಬರೂ ನಿಕಟವಾಗುತ್ತ ಬಂದರು. ಕೊನೆಗೆ ಅವರು ಒಂದಾಗುವ ದಿನವೂ ಬಂತು. ರಾಹುಲರು ಹೋಟೆಲಿನಲ್ಲಿಯೇ ಉಳಿದುಕೊಂಡಿದ್ದರೂ ಆಗಾಗ ಲೋಲಾಳ ಮನೆಗೂ ಹೋಗುತ್ತಿದ್ದರು. ಲೆನಿನ್‌ಗ್ರಾಡ್ ವಾಸದಲ್ಲಿ ಅವರು ಅನೇಕ ಸಿನೆಮಾಗಳನ್ನು ನೋಡಿದರು, "ಸೋವಿಯತ್ ಭೂಮಿ" ಪುಸ್ತಕಕ್ಕಾಗಿ ಸಾಕಷ್ಟು ಸಾಮಗ್ರಿ ಸಂಗ್ರಹಿಸಿದರು.

ಸೋವಿಯತ್ ಎಕಾಡೆಮಿ ನಿರ್ಧಾರ ತೆಗೆದುಕೊಳ್ಳಲು ಇನ್ನೂ ತಡವಾಗುತ್ತಲೇ ಇತ್ತು. ಅತ್ತ ಟಿಬೇಟ್-ಅಭಿಯಾನದ ಸಮಯ ಹತ್ತಿರ ಬಂದದ್ದರಿಂದ ರಾಹುಲರು ಭಾರತಕ್ಕೆ ವಾಪಸಾಗಬೇಕೆಂದು ಕೊಂಡರು. 1938 ಜನವರಿ 13ರಂದು ರಾಹುಲರನ್ನು ಬೀಳ್ಕೊಡುವ ದಿನ, ಅವರಿಗಾಗಿ ಒಂದು ಸ್ಥಾಯೀ ವ್ಯವಸ್ಥೆ ಮಾಡಲಿಕ್ಕಾಗಲಿಲ್ಲವಲ್ಲಾ ಎಂದು ಡಾ। ಶ್ಚೆರ್‌ವಾತ್‌ಸ್ಕೀಗೆ ಸ್ವಾಭಾವಿಕವಾಗಿಯೇ ದುಃಖವಾಗಿತ್ತು. ರಾಹುಲರನ್ನು ಬೀಳ್ಕೊಡುವಾಗ ಎಲ್ಲರಿಗಿಂತಲೂ ಹೆಚ್ಚು ದುಃಖಿಸಿದವಳು-ಲೋಲಾ.

ಆದರೆ ಬಹುಶಃ ಆ ಹೊತ್ತಿನಲ್ಲಿ ಯಾರಿಗೂ ಇನ್ನೆಂಟು ತಿಂಗಳಲ್ಲಿ ಆಕೆ ರಾಹಲ-ಪುತ್ರನಿಗೆ ತಾಯಿಯಾಗಲಿರುವಳೆಂಬ ಕಲ್ಪನೆ ಇದ್ದಿರಲಿಕ್ಕಿಲ್ಲ; ರಾಹುಲರಿಗೆ ಮಗ ಇಗೋರ್ ಹುಟ್ಟಿದ ವಾರ್ತೆ (ಸೆಪ್ಟೆಂಬರ್ 5, 1938) ಮೊದಲು ತಿಳಿದದ್ದೇ ಬಹುಶಃ 1939ರ ಮಾರ್ಚ್ 14ರಂದು. ಅವತ್ತು ಅವರು ಹೀಗೆ ಬರೆದರು: "ಪ್ರೊ. ಶ್ಚೆರ್‌ವಾತ್‌ಸ್ಕೀಯ ಪತ್ರ ಬಂತು-ಅದರಲ್ಲಿ ಲೋಲಾಳಿಗೆ ಆರೋಗ್ಯವಂತ ಸುಂದರ ಗಂಡು ಮಗು ಜನಿಸಿದೆ ಎಂದು ಬರೆದಿದ್ದಾರೆ. ಮಗ ಹುಟ್ಟಿದ ಸುದ್ದಿ ಕೇಳಿ ಸಂತೋಷವಾಗಲೇ ಬೇಕು. ಯಾಕೆಂದರೆ ಪುತ್ರನೇ ಮನುಷ್ಯನ ಪುನರ್ಜನ್ಮ ಹಾಗೂ ಪರಲೋಕ. ಪತ್ರದೊಂದಿಗೆ ಫೋಟೋ ಕೂಡಾ ಇತ್ತು" - ಆ ವೇಳೆ ರಾಹುಲರು ಅಮವಾರಿ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಛಪರಾದ ಜೈಲಿನಲ್ಲಿ ಬಂದಿಯಾಗಿದ್ದರು.

1945ರ ಜೂನ್‌ನಲ್ಲಿ ರಾಹುಲರು ಪುನಃ ಲೆನಿನ್‌ಗ್ರಾಡಿಗೆ ಹೋದಾಗಲೇ, ಅವರು ಮಗ ಇಗೋರ್‌ನನ್ನು ನೋಡಿದ್ದು. ಆ ಸಲ ಅಲ್ಲಿ ಎರಡು ವರ್ಷ ಕಾಲ ಅವರ 'ಗಾರ್ಹಸ್ಥ್ಯ' ನಡೆಯಿತು. ರಾಹುಲರು ಭಾರತದಲ್ಲಿಯೇ ಲೋಲಾಳನ್ನು ತಮ್ಮ ಪತ್ನಿ ಮತ್ತು ಇಗೋರ್‌ನನ್ನು ತನ್ನ ಮಗನೆಂದು ಮುಚ್ಚುಮರೆಯಿಲ್ಲದೆ ಒಪ್ಪಿಕೊಂಡಿದ್ದರು. ಆದರೆ ಲೋಲಾಳೊಂದಿಗೆ ವಿಧಿಬದ್ಧವಾಗಿ ವಿವಾಹವಾಗುವ ಯಾವ ಅಗತ್ಯವಿಲ್ಲವೆಂದು ಅವರಿಗೆ ಕಂಡಿತೇನೋ. ಆನಂದಜೀ ಬರೆದ ಮೀರತ್ ಸಮ್ಮೇಳನ ಕಾಲದ (ದಶಂಬರ 1948) ಒಂದು ನೆನಪು. ಯಾರೋ ಒಬ್ಬ ಬಿಹಾರೀ ಸಜ್ಜನ ಕೇಳಿದ: "ಬಾಬಾ, ಮದುವೆಯಾದಿರಂತೆ ?"

ರಾಹಲರೆಂದರು "ಯಾರು ಹೇಳುತ್ತಾರೆ ? ಬಿಲ್ಕುಲ್ ಸುಳ್ಳು"

"ಅಲ್ಲ ಬಾಬಾ, ತಂದೆಯೂ ಆಗಿಬಿಟ್ಟೀದ್ದೀರಂತೆ ?"

"ಆದಾದರೆ ನಿಜ, ಬಿಲ್ಕುಲ್ ನಿಜ"

ಇದಕ್ಕೆ ಆನಂದಜೀ ಟಿಪ್ಪಣಿ: "ಈ ರೀತಿಯ ಸತ್ಯವನ್ನು ಎಲ್ಲೋ ಒಬ್ಬ ಉಪನಿಷತ್ ಕಾಲದ ಋಷಿ ಮಾತ್ರ ನುಡಿಯಬಲ್ಲ"

ಕಳೆದ ಸಲದ ರಷ್ಯಾ ಯಾತ್ರೆಯಲ್ಲಿ ರಾಹುಲರು ಬಾಕೂ ತಲುಪಿ ಇರಾನ್-ಬಲೂಚಿಸ್ತಾನದ ದಾರಿಯಾಗಿ ಭಾರತಕ್ಕೆ ಹಿಂದಿರುಗಿದ್ದರು. ಈ ಸಲ ಕಾಬೂಲ್ (ಅಫ್‌ಘಾನಿಸ್ತಾನ) ಮತ್ತು ಖೈಬರ್ ಕಣಿವೆ ಮುಖಾಂತರ ಹಿಂದಿರುಗಬೇಕಾಗಿತ್ತು. ಆದ್ದರಿಂದ ಮಾಸ್ಕೋದಿಂದ ತೆರ್ಮಿಜ್‌ವರೆಗೆ ದೀರ್ಘ ರೈಲು ಪ್ರಯಾಣ ಮಾಡಿದರು. ಐದು ದಿನಗಳ ಕಾಲ ತೆರ್ಮಿಜ್ ಮತ್ತು ಆಸುಪಾಸಿನ ಪ್ರದೇಶಗಳನ್ನು ನೋಡಿಯಾದ ಮೇಲೆ ಅಮೂ ನದಿ ದಾಟಿ ಅಫ್‌ಘಾನಿಸ್ತಾನದ ಗಡಿಯೊಳಗೆ ಪ್ರವೇಶಿಸಿದರು. ಮುಂದೆ ದಾರಿಯಲ್ಲಿ ಸಿಗುವ ಐತಿಹಾಸಿಕ ಸ್ಥಳಗಳನ್ನು ವೀಕ್ಷಿಸುತ್ತಾ ಫೆಬ್ರವರಿ 3 (1938)ರಂದು, ಕಾಬುಲ್ ತಲುಪಿದರು. ಅಲ್ಲಿ ಐದು ದಿನವಿದ್ದು ಆ ನಗರದಲ್ಲಿ ಚೆನ್ನಾಗಿ ಸುತ್ತಾಡಿದರು.

ಕಾಬೂಲ್‌ನಿಂದ ಪೇಶಾವರದ ವರೆಗೆ ಲಾರಿಗೆ ಐದು ರುಪಾಯಿ ಟಿಕೆಟು ತೆತ್ತು ಫೆಬ್ರವರಿ 9ರಂದು ಪೇಶಾವರ ತಲುಪಿದ್ದಾಯಿತು. "ಗ್ರಂಥಾನ್ವೇಷಣೆ ಮತ್ತು ಫೋಟೋ ತೆಗೆಯುಕೊಳ್ಳಲು ಟಿಬೇಟಿಗೆ ಹೋಗಬೇಕಾಗಿದ್ದ ಕಾರಣ ಸೋವಿಯತ್‌ನಿಂದ ಇಷ್ಟು ಬೇಗ ಹಿಂದಿರುಗಬೇಕಾಯಿತು. ಈಗ ನಾನು ಭಿಕ್ಷು ವೇಷದಲ್ಲಿರಲು ಇಷ್ಟಪಡುತ್ತಿರಲಿಲ್ಲ. ಆದರೆ ಟಿಬೇಟಿಗೆ ಹೋಗಲು ಅದು ಬಹಳ ಅಗತ್ಯವಾಗಿತ್ತು. ಇಲ್ಲವಾದರೆ ಅಲ್ಲಿನ ವಿಹಾರಗಳ ಕತ್ತಲು ತುಂಬಿದ ಪುಸ್ತಕಾಲಯಗಳನ್ನು ತೆರೆಯುವುದು ಸುಲಭವಾಗುವುದಿಲ್ಲ. ಆದುದರಿಂದ ಪೇಶಾವರಕ್ಕೆ ಬಂದು ಕೋಟು-ಪ್ಯಾಂಟು ಕಳಚಿ, ಪುನಃ ಪೀತವಸ್ತ್ರಧಾರಿಯಾದೆ"

ರಾಹುಲರು ಪೇಶಾವರದಿಂದ ರೈಲಿನಲ್ಲಿ ಸಹರಾನ್‌ಪುರಕ್ಕೆ ಪಯಣಿಸಿ ಅಲ್ಲಿ ಪಂಡಿತ ಕನ್ಹೈಯಾಲಾಲ್ ಮಿಶ್ರ-"ಪ್ರಭಾಕರ" - ರ ಮನೆಗೆ ಹೋದರು. ಆಗ ಅವರು ಹೇಗಿದ್ದರೆಂದರೆ - ತಲೆಯ ಮೇಲೆ ಉಣ್ಣೆಯ ದೊಡ್ಡ ಟೋಪಿ, ಬೆಲೆಬಾಳುವ ಬಟ್ಟೆಯ ಚೆಸ್ಟರ್ ಅಂತಹದೇ ಪ್ಯಾಂಟು, ಚಕಚಕ ಮಿಂಚುವ ಬೂಟು ! ರಾಹುಲರ ಮತ್ತು ಮಿಶ್ರ ಭೇಟಿ ಇದೇ ಪ್ರಥಮ.

ಯಾವುದು ಸತ್ಯ ? ಪೇಶಾವರದಲ್ಲಿಯೇ ಪುನಃ ಪೀತವಸ್ತ್ರಧಾರಿಯಾದದ್ದೇ ಅಥವಾ ಮುಂದೆ ಸಹರಾನ್‌ಪುರ ತಲುಪಿ ಬೂಟು - ಪ್ಯಾಂಟು ತೊಟ್ಟಿರುವುದೇ ?

ಇಂತಹ ಅನೇಕ ಪ್ರಸಂಗಗಳು ರಾಹುಲರ ಜೀವನದಲ್ಲಿವೆ. ಅವುಗಳ ಬಗ್ಗೆ ಸ್ವಯಂ ಅವರೇ ಬರೆದ ಮಾತುಗಳು ಬೇರೆಯವರು ಬರೆದಿರುವುದಕ್ಕಿಂತ ತುಸು ಭಿನ್ನವಿವೆ. ಇಂತಹ ವಿಷಯಗಳಲ್ಲಿ ರಾಹುಲರು ಬರೆದ ಡೈರಿಗಳೇ ನಿರ್ಣಾಯಕ.

ಭಿಕ್ಷು ರಾಹುಲರು ಸಹರಾನ್‌ಪುರದಿಂದ ಪಾಟ್ನಾಕ್ಕೆ ಹೋದರು. ಅಲ್ಲಿ ಟಿಬೇಟ್-ಅಭಿಯಾನದ ಕುರಿತು ಏನೇನು ವ್ಯವಸ್ಥೆಯಾಗಿದೆ ಎಂದು ತಿಳಿದುಕೊಂಡು ಸಾರನಾಥಕ್ಕೆ ಬಂದು "ಸೋವಿಯತ್ ಭೂಮಿ" ಪುಸ್ತಕ ಬರವಣಿಗೆಯಲ್ಲಿ ಮಗ್ನರಾದರು. ಒಂದೇ ತಿಂಗಳಲ್ಲಿ ಮುಗಿಸಿ, ಪ್ರಯಾಗಕ್ಕೆ ಹೋಗಿ ಪಾಂಡು ಲಿಪಿ ಲಾ ಜರ್ನಲ್ ಪ್ರೆಸ್ಸಿಗೆ ಕಂಪ್ಪೋಸಿಂಗ್‌ಗೆ ಕೊಟ್ಟುಬಿಟ್ಟರು. ರಾಹುಲರಿಗೆ ಈ ಪ್ರೆಸ್ಸು ಬಹಳ ಅನುಕೂಲದ್ದೆಂದು ಹಿಂದೆಯೇ ನೋಡಿದ್ದೇವಷ್ಟೆ ? ಅಲ್ಲಿ ಒಮ್ಮೆಗೇ ಅನೇಕ ಫಾರ್ಮುಗಳ ಮ್ಯಾಟರ್ ಕಂಪ್ಪೋಸ್ ಆಗಿ ಸಿಗುತ್ತಿತ್ತು. ಉತ್ತಮ ಮುದ್ರಣ ಕೂಡ. ಪ್ರಾಯಶಃ ಪುಸ್ತಕವನ್ನು ಪ್ರೆಸ್ಸಿಗೆ ಕೊಟ್ಟ ಮೇಲೆಯೇ ಪ್ರಕಾಶಕರನ್ನು ಹುಡುಕುತ್ತಿದ್ದರು ರಾಹುಲಜೀ.

ಗೇಶೇ ಧರ್ಮವರ್ಧನರು ಸಾರನಾಥದಲ್ಲಿಯೇ ಇದ್ದರು. ಅವರೂ ಟಿಬೇಟಿಗೆ ಹಿಂದಿರುಗಬೇಕಿತ್ತು. ಏಪ್ರಿಲ್ 18, 1938ರಂದು ಈ ಇಬ್ಬರೂ ಯಾತ್ರಿಕರು ಕಾಲಿಂಪ್ಪೋಂಜ ತಲುಪಿದರು.

# ಚತುರ್ಥ ಟಿಬೇಟ್ ಯಾತ್ರೆ

ಟಿಬೇಟಿಗೆ ಮೊದಲ ಮೂರು ಬಾರಿ ರಾಹುಲರು ತನ್ನ ಸಾಮರ್ಥ್ಯದ ಮೇಲೆಯೇ ಹೋಗಿ ಬಂದಿದ್ದರೆ ಈ ಸಲ ಬಿಹಾರ ಮತ್ತು ಟಿಬೇಟ್ ಎರಡೂ ಸರಕಾರಗಳ ಸವಲತ್ತು ದೊರೆಯಿತು. ಬಿಹಾರ ಸರಕಾರ ಆರು ಸಾವಿರ ರುಪಾಯಿ ನೀಡಿತ್ತು. ಹಾಗಾಗಿ ಈ ಸಲ ಬೇಕಾದ ಎಲ್ಲ ಸಾಧನಗಳಿಂದ ಸುಸಜ್ಜಿತರಾಗಿ ಹೊರಟಿದ್ದರು. ಅತ್ತ ಟಿಬೆಟ್ ಸರಕಾರ ಪುರಾತನ ಗ್ರಂಥಾಲಯಗಳಿಗೆ ಹಾಕಿದ ಮೊಹರು ಒಡೆದು ಒಳಗಿರುವುದನ್ನೆಲ್ಲ ತೋರಿಸಬೇಕೆಂದು ಆಜ್ಞಾಪಿಸಿತ್ತಲ್ಲದೆ ಸವಾರಿ ಮಾಡಲು ಮತ್ತು ಸಾಮಾನುಗಳನ್ನು ಹೊರಲು ಮೂರು ಕುದುರೆ ಮತ್ತು ಮೂರು ಕತ್ತೆಗಳನ್ನು ಒದಗಿಸುವ ಆಜ್ಞೆ ಕೂಡಾ ಹೊರಡಿಸಿತ್ತು.

ಕಾಲಿಂಪ್ಪೋಂಜ ತಲುಪಿದ ಮೇಲೆ ಪರ್ಮಿಟ್ ಪಡೆಯಲು ರಾಹುಲರು ಗಂಗ್ಟೋಟಕ್‌ಗೆ ಹೋಗಬೇಕಾಗಿ ಬಂದು, ನಂತರ ಅಲ್ಲಿಂದ ಕಲ್ಕತ್ತಾಕ್ಕೆ ಹೋಗಿ ಫೋಟೋಗ್ರಫಿ ಸಾಮಗ್ರಿಗಳ ವ್ಯವಸ್ಥೆ ಮಾಡಿಕೊಂಡರು. "ಮೇರೀ ಜೀವನ ಯಾತ್ರಾ"ದ ಎರಡನೇ ಭಾಗದಲ್ಲಿ ಹೀಗೆ ಬರೆದಿದ್ದಾರೆ: "ಕಾಲಿಂಪ್ಪೋಂಜನಿಂದ ಗೇಶೇ ಮತ್ತು ಇತರ ಸಂಗಡಿಗರೊಂದಿಗೆ ನಾನು 1938ರ ಮೇ 4ರಂದು ಹೊರಟಿದ್ದೆ ಮತ್ತು ಆರು ತಿಂಗಳ ಬಳಿಕ ಅಕ್ಟೋಬರ್‌ನಲ್ಲಿ ಗಂಗ್ಟೋಟಕ್‌ಗೆ ಹಿಂದಿರುಗಿ ಬಂದೆ".

ಈ ನಾಲ್ಕನೆಯ ಯಾತ್ರೆಯಲ್ಲಿ ಗೇಶೇ ಧರ್ಮವರ್ಧನರಲ್ಲದೆ "ಇತರ ಸಾಥೀ" ಆಗಿ ಯಾರಿದ್ದರು ? 'ಜೀವನ-ಯಾತ್ರಾ'ದ ನಾಲ್ಕನೇ ಟಿಬೆಟ್ ಪ್ರವಾಸದ ಪ್ರಸಂಗದಲ್ಲಿ ಈ ಇತರ ಸಂಗಡಿಗರ ಯಾರ ಹೆಸರೂ ಇಲ್ಲ. ಇಷ್ಟೇ ಬರೆದಿದ್ದಾರೆ "ಸಾಕಷ್ಟು ಕೆಲಸವೂ ಆಯಿತಾದರೂ ನನ್ನ ಬಳಿ ಇದ್ದ ಸಲಕರಣೆಗಳಿಂದಾಗುವಷ್ಟು ಕೆಲಸ ಆಗಲಿಲ್ಲ. ಈ ಇಡೀ ಯಾತ್ರೆಯಲ್ಲಿ ಎಷ್ಟೆಲ್ಲ ತೊಂದರೆ ಹಾಗೂ ಮಾನಸಿಕ ಯಾತನೆ ಅನುಭವಿಸಬೇಕಾಗಿ ಬಂತು ಎಂದರೆ ಅದನ್ನು ಬರೆದು ಪುಸ್ತಕವನ್ನು ಇನ್ನೂ ದೊಡ್ಡದು ಮಾಡುವ ಅಗತ್ಯ ಕಾಣುವುದಿಲ್ಲ. ಬಿಡಿಬಿಡಿಯಾಗಿ ದೋಷ ಹೆಕ್ಕುವುದೇ ವ್ಯರ್ಥ. ಸರಿಯಾದ ಸಾಧನಗಳು ಏಕತ್ರವಾಗದೆ ಇದ್ದದ್ದೇ ದೋಷ...

ಯಾವ ಯಾವ ವಿಷಯಗಳಿಗೆ ಗಮನ ಕೊಡಬೇಕಾಗಿತ್ತೋ, ಅವಕ್ಕೆ ಗಮನ ಕೊಡದಿದ್ದ ಕಾರಣ ಈ ಯಾತ್ರೆ ಅಸಫಲವಾಯಿತೆಂದು ಹೇಳಿ, ಆ ಕಾರಣಗಳನ್ನು ಹೀಗೆ ತಿಳಿಸಿದ್ದಾರೆ.

(1) ಟಿಬೇಟಿಗೆ ಸುಕುಮಾರ ವ್ಯಕ್ತಿಗಳನ್ನು ಕರೆದುಕೊಂಡು ಹೋಗಕೂಡದು. ಮೊದಲೇ ಊಹಿಸಿಕೊಂಡು ಹೊರಡಲು ಆಗದ ಇಂತಹ ಸ್ಥಳಗಳಲ್ಲಿಯೂ ಯಾರು ತನ್ನ ಮುಂಚಿನ ಜೀವನದ ಇಡೀ ವಾತಾವರಣವನ್ನೇ ಒಯ್ಯಲು ಬಯಸುತ್ತಾನೋ ಆತ ಖಂಡಿತ ಬೇಸರ ಪಡಬೇಕಾದೀತು.

(2) ಹೋಗುವಾತ ಆ ವೃತ್ತಿಗೆ ಎಷ್ಟು ಬಲವಾಗಿ ಅಂಟಿಕೊಂಡಿರಬೇಕೆಂದರೆ ತಾನೊಬ್ಬ ಅಯೋಗ್ಯನಾಗಿ ಸಾಬೀತಾದರೆ ಆಗುವ ಶಾಶ್ವತ ಕೆಡುಕಿನ ಭಯವಿರಬೇಕು ಅಥವಾ ಆತ ಆ ಪಥದ ಫಕೀರನಂತಿರಬೇಕು. ಆತನಿಗೆ ಕೆಲಸದ ಪ್ರಾಮುಖ್ಯತೆಯ ಅರಿವಿರಬೇಕು.

(3) ತಂಡದ ಶಿಸ್ತನ್ನು ಗೌರವಿಸಬೇಕು. ಇಲ್ಲವಾದರೆ ಅನುಶಾಸನವನ್ನು ನಿಂದಿಸುವ ರೋಗ ಇನ್ನೊಬ್ಬರಿಗೂ ತಗಲುತ್ತದೆ.

(4) ಟಿಬೇಟಿನಲ್ಲಿ ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಹೋಗಲು ಸವಾರಿಗೆ ಮತ್ತು ಸಾಮಾನು ಹೊರಲಿಕ್ಕೆ ಹೇಸರಕತ್ತೆಯಾಗಲೀ, ಕುದುರೆಗಳಾಗಲೀ ಸಿಗುವುದು ಸುಲಭವಲ್ಲ.

(5) ಕೆಲಸದಲ್ಲಿ ನಿಮಗಿದ್ದಷ್ಟೇ ಅಭಿರುಚಿ ಜೊತೆಗಾರನಿಗೂ ಇರಬೇಕು.

ರಾಹುಲರು ತಮ್ಮ ಒಬ್ಬೊಬ್ಬ ಜೊತೆಗಾರನ ಹೆಸರನ್ನು ಪ್ರತ್ಯೇಕವಾಗಿ ಪ್ರಸ್ತಾಪಿಸಿ, ಅವನ ದೌರ್ಬಲ್ಯಗಳನ್ನು ಬಯಲು ಮಾಡಲು ಇಷ್ಟ ಪಡಲಿಲ್ಲ. ಆದುದರಿಂದ ಅವರು "ಜೀವನ-ಯಾತ್ರಾ"ದಲ್ಲಿ ಗೇಶೇ ಒಬ್ಬರನ್ನು ಬಿಟ್ಟು ಉಳಿದ ಯಾರ ಹೆಸರನ್ನೂ ಉಲ್ಲೇಖಿಸಲಿಲ್ಲ. ಆದರೆ ನಾಲ್ಕನೆಯ ಟಿಬೆಟ್ ಪ್ರವಾಸದ ಕುರಿತು ಆ ನಂತರದಲ್ಲಿ ಅವರು ಒಂದು ಇಂಗ್ಲಿಷ್ ಸಂಶೋಧನಾ-ಪತ್ರಿಕೆಗಾಗಿ ಒಂದು ಲೇಖನ ಬರೆದು ಈ "ಇತರ ಸಂಗಡಿಗರ" ಹೆಸರುಗಳನ್ನು ಕೊಟ್ಟಿದ್ದಾರೆ. ಹೊರಡುವ ಆರಂಭದಲ್ಲಿ ಇದ್ದವರು ರಾಹುಲರು ಮತ್ತು ಗೇಶೇ, ಹಾಗೂ ಮೂರನೆಯಾತ ಫೋಟೋ ಆರ್ಟಿಸ್ಟ್ ಫಣೀ ಮುಖರ್ಜಿ. ಆ ನಂತರ ತಂಡಕ್ಕೆ ಕೂಡಿಕೊಂಡ ಮತ್ತಿಬ್ಬರು: ಮೂರನೇ ಪ್ರವಾಸದಲ್ಲಿ ಜೊತೆಗಿದ್ದ ಅಭಯಸಿಂಹ ಪರೇರಾ ಹಾಗೂ ಫಣೀ ಮುಖರ್ಜಿಯ ಸಹಾಯಕ ಕಂವಲ ಕೃಷ್ಣ.

ಕಾಲಿಂಪೋಂಙ - ಫರೀ -ಗ್ಯಾನ್‌ಚೀ ಮಾರ್ಗ ರಾಹುಲರಿಗಾಗಲೇ ಪರಿಚಿತವಾಗಿದ್ದ ಮಾರ್ಗ. ಮೊದಲ ಸಲ ಟಿಬೇಟಿಗೆ ಹೋದಾಗ ಅವರು ಈ ಮಾರ್ಗವಾಗಿಯೇ ಹಿಂದಿರುಗಿದ್ದರಷ್ಟೆ. ಎರಡನೆಯ ಸಲ ಈ ಮಾರ್ಗವಾಗಿ ಟಿಬೇಟಿಗೆ ಹೋಗಿದ್ದರು. ಈ ಸಲ ಫರೀ ತಲುಪಿದಾಗ ರಾಹುಲರಿಗೆ ಜ್ವರ ಬಂತು. ಆದುದರಿಂದ ಗ್ಯಾನ್‌ಚೀವರೆಗೆ ಚಕ್ಕಡಿಯಲ್ಲಿ ಪಯಣಿಸಿ ಊರು ತಲುಪಿದ್ದೇ ಮೂರು ನಾಲ್ಕು ದಿನ ವಿಶ್ರಾಂತಿ ತೆಗೆದುಕೊಂಡರು. ಈ ಮಧ್ಯೆ ಲಾಸಾದಲ್ಲಿ ಖರೀದಿ ಮಾಡಿ ಕಳಿಸಿದ ಮೂರು ಹೇಸರಕತ್ತೆಗಳೂ ಬಂದವು. ಟಿಬೇಟ್ ಸರಕಾರದ ಪತ್ರವೂ ಬಂದಿತು. ಈ ಅಧಿಕೃತ ಪತ್ರ ತೋರಿಸಿ ಟಿಬೇಟಿನಲ್ಲಿ ಎಲ್ಲಿ ಬೇಕಾದರೂ ಮೂರು ಕುದುರೆ ಹಾಗು ಮೂರು ಕತ್ತೆಗಳನ್ನು ನಿಶ್ಚಿತ ಬಾಡಿಗೆಗೆ ಪಡೆಯಬಹುದಿತ್ತು.

ರಾಹುಲರ ತಂಡ ಮೇ 27ಕ್ಕೆ ಶಲೂ ತಲುಪಿತು. ರಿಸೂರ್ ಲಾಮಾ ತಂಡವನ್ನು ಎದುರುಗೊಂಡರು. ಇಲ್ಲಿನ ಪುಸ್ತಕಾಲಯದಲ್ಲಿ ಈ ಸಲ ಕೆಲ ಹೊಸ ಗ್ರಂಥಗಳು ದೊರೆತವು. ಇವುಗಳಲ್ಲಿ ನೈಯಾಯಿಕ ಜ್ಞಾನಶ್ರೀ (725 ಇ)ಯ ಹನ್ನೆರಡು ಪುಸ್ತಕಗಳಿದ್ದುವು. "ಯೋಗಾಚಾರ ಭೂಮಿ" (ಅಸಂಗ)ಯ ಎರಡು ಪ್ರಕರಣಗಳು, ಮತ್ತೂ ಕೆಲ ಸಂಸ್ಕೃತ ಗ್ರಂಥಗಳು ಸಿಕ್ಕಿದುವು.

ಶಲೂವಿನಲ್ಲಿಯೇ ರಾಹುಲರಿಗೆ ಭಾರತೀಯ ಇತಿಹಾಸದ ಸ್ರೋತ-ಸಾಮಗ್ರಿಯಾಗಿ ಒಂದು ಮಹತ್ವದ ಟಿಬೇಟಿಯನ್ ಗ್ರಂಥ- "ಛಗ-ಲೋಚವಾ' (ಅನುವಾದಕ) ಧರ್ಮಸ್ವಾಮಿ (1197-1264 ಇ)ಯ ಒಬ್ಬ ಶಿಷ್ಯನಿಂದ ಬರೆಯಲ್ಪಟ್ಟ ಅವರ ಜೀವನ ಚರಿತ್ರೆ - ಸಿಕ್ಕಿತು. "ಈ ಟಿಬೇಟೀ ವಿದ್ವಾಂಸ 1220ನೇ ಇಸವಿಯ ಸುಮಾರಿನಲ್ಲಿ ಭಾರತಕ್ಕೆ ಹೋಗಿದ್ದ, ಮತ್ತು ನಾಲಂದಾದಲ್ಲಿ ರಾಹುಲ ಶ್ರೀಭದ್ರರ ಬಳಿ ಇದ್ದ. ತುರ್ಕಿಯವರು ನಾಲಂದಾವನ್ನೂ ನಾಶಮಾಡಿದರು ಕೆಲ ಮನೆಗಳು ಉಳಿದುಕೊಂಡಿದ್ದುವು ಎಂದು ಆತ ಬರೆದಿದ್ದಾನೆ."

ಧರ್ಮಸ್ವಾಮಿಯ ಈ ಜೀವನ ವೃತ್ತಾಂತ ಹದಿಮೂರನೇ ಶತಮಾನದ ಪೂರ್ವಾರ್ಧದ ಬಿಹಾರದಲ್ಲಿನ ರಾಜಕೀಯ, ಧಾರ್ಮಿಕ ಹಾಗೂ ಸಾಮಾಜಿಕ ಸ್ಥಿತಿಗತಿಗಳ ಮೇಲೆ ಚೆನ್ನಾಗಿ ಬೆಳಕು ಚೆಲ್ಲುತ್ತದೆ. ನಂತರ ಈ ಟಿಬೇಟೀ ಪುಸ್ತಕವನ್ನು (ರಾಹುಲರು ತಂದ ಇದರ ಫೋಟೋ ಪ್ರತಿಯಿಂದ) ಡಾ। ಜಾರ್ಜ್ ರ್ಯೋರಿಕ್ ಇಂಗ್ಲಿಷಿಗೆ ಅನುವಾದಿಸಿದರು. ಡಾ। ಅಲತೇಕರರು ಒಂದು ವಿಸ್ತಾರವಾದ ಪೀಠಿಕೆ ಬರೆದರು. ಕೆ.ಪಿ.ಜೈಸ್ವಾಲ್ ಇನ್ಸ್‌ಟಿಟ್ಯೂಟ್ (ಪಾಟ್ನಾ)ನಿಂದ ಇದು ಪ್ರಕಟವಾಯಿತು (1959). ಆದರೆ ಈ ಇಬ್ಬರು ವಿದ್ವಾಂಸರೂ ಆ ಗ್ರಂಥ ರಾಹುಲರಿಗೆ ತಮ್ಮ ಮೂರನೇ ಟಿಬೇಟ್ ಯಾತ್ರೆಯಲ್ಲಿದ್ದಾಗ ನರ್ಥಂಗ್‌ನಲ್ಲಿ ಸಿಕ್ಕಿತು ಎಂದು ಯಾಕೆ ಬರೆದಿದ್ದಾರೋ ತಿಳಿಯುತ್ತಿಲ್ಲ. ರಾಹುಲರ ತಂಡ ಶಲೂವಿನಿಂದ ಶಿಗರ್ಚೆ ಮತ್ತು ಅಲ್ಲಿಂದ ಫ್ರೋಯೀಖಜ ತಲುಪಿತು. ಅಲ್ಲಿ ಕೆಲ ಪುಸ್ತಕಗಳನ್ನು, ಚಿತ್ರ ಪಟಗಳ ಫೋಟೋ ಇತ್ಯಾದಿ ತೆಗೆದುಕೊಂಡು ಶಿಗರ್ಚೆಗೆ ಮರಳಿತು. "ಜುಲೈ 5ರಿಂದ 30ರ ತನಕ ಸುಮ್ಮನೆ ಕುಳಿತುಕೊಳ್ಳಬೇಕಾಗಿ ಬಂತು. ಯಾಕೆಂದರೆ ಗ್ಯಾನ್‌ಚೀಯಿಂದ ಸಾಮಾನು ತರಲು ಕಳಿಸಿದವರು ಅಲ್ಲಿಯೇ ಕುಳಿತು ಬಿಟ್ಟಿದ್ದರು. "ರಾಹುಲರಿಗೆ ಇಪ್ಪತ್ತೈದು ದಿನಗಳ ಈ ಅಪವ್ಯಯದಿಂದ ಮಾನಸಿಕ ಕ್ಲೇಶ ಎಷ್ಟಾಗಿರಬಹುದು ಎಂಬುದನ್ನು ಯಥಾರ್ಥವಾಗಿ ಊಹಿಸಬಹುದು.

ರಾಹುಲರ ತಂಡ ಗ್ಯೋರ್ ತಲುಪಿತು. ಅಲ್ಲಿ ಈ ಸಲ ಇಂಧನ ಮತ್ತು ಹೇಸರಗತ್ತೆಗಳ ಮೇವಿಗೆ ಬಹಳ ತೊಂದರೆಯುಂಟಾಯಿತು. ಯಾರೋ ಅವರ ಎರಡು ಹೇಸರಗತ್ತೆಗಳಿಗೆ ಕಲ್ಲು ಹೊಡೆಹೊಡೆದು ಕುಂಟು ಮಾಡಿಬಿಟ್ಟರು.

ಅಗೋಸ್ತು 16ರಿಂದ 28ರ ವರೆಗೆ ತಂಡದ ಮೊಕ್ಕಾಂ ನರ್ಥಂಗ್‌ನಲ್ಲಿ. ಅಲ್ಲಿ ಯಾವ ತಾಳೆಯೋಲೆಗಳು ಸಿಗಲಿಲ್ಲವಾದರೂ ಆಲಿಕಲ್ಲು, ಮಳೆ, ನೆರೆಗಳಿಂದಾಗಿ ಅಷ್ಟೊಂದು ದಿನ ಅಲ್ಲಿರಲೇ ಬೇಕಾಯಿತು. ಅಲ್ಲಿ ಬಳಪದ ಕಲ್ಲಿನ ಮೇಲೆ ಕೊರೆದ ಚೌರಾಸೀ ಸಿದ್ಧರ ಮತ್ತು ಕೆಲ ಭಾರತೀಯ ಚಿತ್ರಪಟಗಳ ಫೋಟೋ ತೆಗೆದುಕೊಂಡರು.

ಮುಂದೆ ತಂಡ ಸಾಕ್ಯಾ ತಲುಪಿ ಅಲ್ಲಿ ಹದಿನೈದು ದಿನ ತಂಗಿತು. ಫೋಟೋ ತೆಗೆಯುವ ಕೆಲಸ ಇದ್ದುದರಿಂದ ರಾಹುಲರು ಈ ಸಲ ತನ್ನ ಪೂರ್ವ-ಪರಿಚಿತ ಡೋನಿರ್-ಛೇನ್‌ಫ್ರೋ ಅವರಲ್ಲಿ ಉಳಿಯದೆ ಮಹಂತರಾಜರ ಪ್ರಾಸಾದದಲ್ಲಿ ಮೊಕ್ಕಾಂ ಹೂಡಿದರು. ಆದರೆ ಸಾಕ್ಯಾದಿಂದ ಹೊರಡುವ ಮುನ್ನ ಡೋನಿರ್ ಛೇನ್ ಫ್ರೋ ಮತ್ತು ಅವರ ಹೆಂಡತಿಯನ್ನು ಭೇಟಿಮಾಡಹೋದಾಗ ಅವರೊಂದಿಗೆ ಉಳಿದುಕೊಂಡಿಲ್ಲ ಎಂದು ಸಹಜವಾಗಿ ಕೋಪಿಸಿಕೊಂಡಳು ಡೋನಿರ್‌ನ ಮಡದಿ. ಮಕ್ಕಳಿಲ್ಲದ ಡೋನಿರ್‌ಗೆ ಈಗ ಒಂದು ಹೆಣ್ಣು ಮಗುವಿತ್ತು – ಅನಾಮಿಕಾ.

ಅಭಿಯಾನ ತಂಡ ಸೆಪ್ಟೆಂಬರ್ 16ರಂದು ಸಾಕ್ಯಾದಿಂದ ಭಾರತಕ್ಕೆ ಹೊರಟಿತು ಮಬ್ಜಾದಿಂದ ಮುಂದರಿಯುತ್ತಿದ್ದಂತೆ ಅವರಿಗೆ ಡಾಕೂಗಳ ಸುಳಿವು ಸಿಕ್ಕಿ, ಸ್ವಲ್ಪ ಹೊತ್ತಿಗೇ ಅವರು ಎದುರು ಬಂದಾಯಿತು. ತಂಡ ಮೂರು ಗುಂಪಾಗಿ ಸಾಗುತ್ತ ಇತ್ತು. ಮುಂದಿನ ಗುಂಪಿನವರು ಡಾಕೂಗಳ ಪ್ರಶ್ನೆಗೆ "ಸಾಕ್ಯಾದ ಮಹಂತರ ಸಾಮಾನುಗಳಿವೆ. ನಾವು ಮುಂದೆ ಹೊರಟಿದ್ದೇವೆ" ಎಂದರು. ಎರಡನೆಯ ಗುಂಪಿನಲ್ಲಿ ರಾಹುಲರು ಮತ್ತು ಸಾಕ್ಯಾದ ಒಬ್ಬ ವ್ಯಕ್ತಿ, ಇಬ್ಬರೂ ಕುದುರೆಯೇರಿ ಸಾಗುತ್ತಾ ಇದ್ದರು. ರಾಹುಲರ ಹತ್ತಿರ ಪಿಸ್ತೂಲು ಇತ್ತು. ಜೊತೆಯವರ ಬಳಿ ಖಡ್ಗ ಇತ್ತು. ಹಿಂದಿನಿಂದ ಸುಮಾರು ಒಂದೂವರೆ ಕಿ.ಮೀ. ದೂರದಲ್ಲಿ ಮೂರು ಜನರಿರುವ ಮೂರನೇ ಗುಂಪು ಬರುತ್ತಾ ಇತ್ತು.

ರಾಹುಲರಿಗೆ ಮೊದಲ ಗುಂಪಿನವರ ಚಿಂತೆಯಾಯಿತು. ಏಕೆಂದರೆ ತಾವು ತೆಗೆದಿದ್ದ ಎಲ್ಲ 1400 ಫೋಟೋಗಳು ಮೊದಲ ಗುಂಪಿನವರ ಬಳಿಯಲ್ಲಿಯೇ ಇದ್ದವು. ಕೈಯಲ್ಲಿ ಪಿಸ್ತೂಲು ಹಿಡಿದು ಕುದುರೆ ಮುಂದೋಡಿಸಿದರು. "ಒಂದು ಸಣ್ಣ ಝರಿ ದಾಟಿದ ಮೇಲೆ ಮಳಲದಿನ್ನೆ ಸಿಕ್ಕಿತು. ಅದರಿಂದ ಮುಂದೆ ಹೋದರೆ ರಸ್ತೆ ಹತ್ತಿರದಲ್ಲೇ ಡಾಕೂಗಳ ಡೇರೆ ಕಾಣಿಸಿತು. ಅವರ ಎಂಟು ಕುದುರೆಗಳು ಅಲ್ಲಿ ಮೇಯುತ್ತಿದ್ದುವು. ನಾನು ಕೈಯಲ್ಲಿ ಪಿಸ್ತೂಲನ್ನು ಎಚ್ಚರದಿಂದ ಹಿಡಿದುಕೊಂಡು ಮುಂದುವರಿಯುತ್ತಿದ್ದೆ. ಡಾಕೂಗಳಲ್ಲಿ ಒಬ್ಬ ನಮ್ಮ ಹತ್ತಿರಕ್ಕೆ ಬಂದ. ನನ್ನ ಜೊತೆಯವರ ಸೊಂಟದಲ್ಲಿ ಉದ್ದವಾಗಿದ್ದ ಖಡ್ಗ ಹಾಗೂ ನನ್ನ ಕೈಯಲ್ಲಿ ಪಿಸ್ತೂಲು ಇರುವುದನ್ನು ನೋಡಿದ. ಅವನ ಪ್ರಶ್ನೆಗೆ ನನ್ನ ಜೊತೆಯಾತ 'ಸಾಕ್ಯಾದಿಂದ ಬಂದಿದ್ದೇವೆ' ಎಂದರು. ನಮ್ಮನ್ನು ಅವನು ಅಲ್ಲಿಯೇ ಬಿಟ್ಟು ಪರಾರಿಯಾದ."

ರಾಹುಲರು ಕುದುರೆಯನ್ನು ಮುಂದೋಡಿಸಿದರು. ಮೊದಲ ಗುಂಪನ್ನು ತಲುಪಿದರು. ಅಲ್ಲಿ ಆ ಗುಂಪಿನವರು, ಸಾಮಾನುಗಳ ಸಹಿತ ಸುರಕ್ಷಿತವಿದ್ದರು. ಈಗ ಅವರಿಗೆ ಹಿಂದಿನ ತಂಡದವರ ಚಿಂತೆಯಾಯಿತು, ಅವರಲ್ಲಿ ಇಬ್ಬರ ಬಳಿ ಪಿಸ್ತೂಲು ಇದ್ದರೂ ತನ್ನ ಜೊತೆಯವನನ್ನು ಮೊದಲ ಗುಂಪಿನಲ್ಲಿ ಬಿಟ್ಟು ಕುದುರೆಯನ್ನು ಹಿಂದಕ್ಕೆ ಓಡಿಸಿದರು. ಸ್ವಲ್ಪ ದೂರದಲ್ಲಿ ಒಂದು ದಿನ್ನೆಯ ಮರೆಯಲ್ಲಿ ಪಿಸ್ತೂಲನ್ನು ಭದ್ರವಾಗಿ ಹಿಡಿದು ನಿಂತುಕೊಂಡರು. ಯಾರಾದರೂ ಕೂಗುವುದು ಕೇಳಿಸಿದ್ದೇ ತಡ, ಅವರ ಮೇಲೆ ಆಕ್ರಮಣ ಮಾಡುವುದು ಅವರ ಉದ್ದೇಶವಾಗಿತ್ತು. "ನಾನೆಣಿಸಿದ್ದೆ ಇವತ್ತು ಸಾವಿನೊಂದಿಗೆ ಮುಖಾಮುಖಿಯಾಗುತ್ತದೆ ಎಂದು. ಅಪಾಯ ಎಷ್ಟು ತೀವ್ರವಿತ್ತೋ ಅಷ್ಟೇ ತೀವ್ರವಾಗಿ ನನ್ನೊಳಗೆ ಧೈರ್ಯೋತ್ಸಾಹ ತುಂಬಿಕೊಳ್ಳುತ್ತ ಇತ್ತು. ರಕ್ತಸಂಚಾರ ವೇಗಗೊಂಡಿತು. ಸ್ವಲ್ಪ ಹೊತ್ತಿನ ಮೇಲೆ ಆ ಗುಂಪಿನವರೆಲ್ಲ ಬಂದರು. ಕೇಳಿದರೆ "ಸಾಕ್ಯಾಲಾಮಾರ ಜನರು ಈಗ ಇಲ್ಲೇ ಹಿಂದಿನಿಂದ ಬರುತ್ತಿದ್ದಾರೆ ಎಂದೆ ಎಂದು ತಿಳಿಸಿದರು ಗೇಶೇ."

ತಂಡ ಮುಂದೆ ತಜಗರಾ ತಲುಪಿತು. ಅಷ್ಟರೊಳಗೆ ಡಾಕೂಗಳಿಗೆ ಇವರು ಸಾಕ್ಯಾ ಲಾಮಾರ ಜನರು ಎಂದು ಹೇಳಿದ್ದೆಲ್ಲ ಸುಳ್ಳು ಎಂದು ತಿಳಿದು ಬಿಟ್ಟಿತ್ತು. ತಂಡವನ್ನು ಬೆನ್ನಟ್ಟಿ ಬಂದು ಅವರು ತಜಗರಾ ಹಳ್ಳಿಯ ಸಮೀಪ ಬಿಡಾರ ಮಾಡಿದರು. ರಾಹುಲರ ತಂಡ, ಹಳ್ಳಿಗರ ಸಹಾಯದಿಂದ ಭಾರೀ ಪ್ರಯಾಸಪಟ್ಟು ಮಾರನೆಯ ದಿನ ಅಲ್ಲಿಂದ ಮುಂದಕ್ಕೆ ಸಾಗಿತು.

ಭಾರತಕ್ಕೆ ಹಿಂದಿರುಗಲು ಎರಡು ರಸ್ತೆಗಳಿದ್ದುವು. ಒಂದು ಸ್ವಲ್ಪ ದೀರ್ಘವಾಗಿದ್ದ ಫರಿ-ಕಾಲಿಂಪೋಂಜನ ರಸ್ತೆ. ಎರಡನೆಯದು ಲಾಛೇನ್-ಗಂಗೋಟಕ್‌ನ ಶೀಘ್ರದ ರಸ್ತೆ. ಡಾಕೂಗಳು ಹಿಂಬಾಲಿಸುತ್ತ ಇದ್ದರು. ಹಾಗಾಗಿ ತಂಡ ಲಾಛೇನ್ ರಸ್ತೆ ಹಿಡಿಯಿತು. ಸಾಕಷ್ಟು ದೂರದವರೆಗೆ ಡಾಕೂಗಳು ಬಿಡದೆ ಹಿಂಬಾಲಿಸಿದರು. ಕೊನೆಗೂ ಸೆಪ್ಟಂಬರ್ 28ರಂದು ಲಾಛೇನ್ ಮತ್ತು 1938ರ ಅಕ್ಟೋಬರ್ 2ರಂದು ಗಂಗೋಟಕ್‌ಗೆ ತಂಡ ತಲುಪಿಕೊಂಡಿತು. ಅಲ್ಲಿ ರಾಹುಲರು ಪಿಸ್ತೂಲನ್ನು ಪೋಲೀಸರಿಗೆ ಒಪ್ಪಿಸಿದರು.

ಅಲ್ಲಿಂದ ಸಿಲಿಗುರಿಗೆ ಹೋಗಿ ಕಲ್ಕತ್ತಾದ ರೈಲು ಹಿಡಿದರು.

# ರೈತ-ಕಾರ್ಮಿಕರ ಪರ ಸಂಘರ್ಷ

ಕಲ್ಕತ್ತಾ ತಲುಪಿದ ಮೊದಲ ದಿನವೇ ರಾಹುಲರು ಪತ್ರಿಕಾ ವರದಿಗಾರರಿಗೆ ಇನ್ನು ಮುಂದೆ ತಾವು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಲಿರುವುದಾಗಿ ತಿಳಿಸಿದರು.

ಅವರು ಈ ತೀರ್ಮಾನ ಯಾಕೆ ಮಾಡಿದರು ? ಓದು-ಬರವಣಿಗೆ ಹಾಗೂ ಸಂಶೋಧನೆಯ ಅವಕಾಶ ತೆರೆದಿತ್ತು; ಟಿಬೇಟಿನಿಂದ ಅತ್ಯಮೂಲ್ಯ ಸಾಮಗ್ರಿಗಳನ್ನು ತಂದಿದ್ದರು. ಅದಕ್ಕೆ ಸಂಬಂಧ ಪಟ್ಟಂತೆ ದಶಕಗಳ ಕಾಲ ಕೆಲಸ ಮಾಡುತ್ತಲೇ ಇದ್ದುಬಿಡಬಹುದಾಗಿತ್ತು. ನಾಲ್ಕು ಸಲ ಟಿಬೇಟು ಯಾತ್ರೆ ಹಾಗೂ ಯುರೇಶಿಯಾದ ಇತರ ಅನೇಕ ದೇಶಗಳ ಪರ್ಯಟನ ಇವನ್ನೆಲ್ಲ ಮಾಡಿ ಮುಗಿಸಿದ ಹನ್ನೊಂದು ವರ್ಷಗಳ ದೀರ್ಘ ಅವಧಿಯ ಬಳಿಕವೂ, ಸಕ್ರಿಯವಾಗಿ ರಾಜಕೀಯಕ್ಕೆ ಧುಮುಕುವ ಕಾರಣವಾದರು ಇನ್ನು ಏನಿತ್ತು ?

ರಾಹುಲರಿಗೆ ಅಧ್ಯಯನ ಸಂಶೋಧನೆಗಳಲ್ಲಿ ನೆಟ್ಟುಕೊಂಡ ಸಂಚಾರಿ ಬದುಕೇ ಅತ್ಯಂತ ಪ್ರಿಯವಾದದ್ದೇನೋ ನಿಜ. ಆದರೆ ಶೋಷಿತ ಜನರಿಗಾಗಿ ದುಡಿಯುವ ಸಾಮಾಜಿಕ ಹಾಗೂ ರಾಜನೈತಿಕ ಕಾರ್ಯಗಳು ಅದೆಲ್ಲಕ್ಕಿಂತಲೂ ಹೆಚ್ಚಿಗೆ ಮಹತ್ವದೆಂದು ಅವರು ಭಾವಿಸಿದ್ದರು. ರಾಹುಲರು ಶುದ್ಧವಾಗಿ ಸಂಶೋಧನೆಯಲ್ಲಿಯೇ ತೊಡಗಿಕೊಂಡಿರುವಂತೆ ಮಾಡಲು ಪ್ರಯತ್ನಿಸುತ್ತಿದ್ದ ಡಾ। ಕಾಶೀಪ್ರಸಾದ ಜೈಸ್ವಾಲರು ಕೂಡ ಅವರು ವಾಸ್ತವವಾಗಿ ಜನತೆಯ ಮನುಷ್ಯ ಎಂದು ಬರೆದಿದ್ದಾರೆ.

ಟಿಬೇಟಿಗೆ ನಾಲ್ಕನೇ ಸಲದ ಭೇಟಿಯ ನಂತರ ನೇರ ರಾಜಕೀಯ ಕ್ಷೇತ್ರ ತಲುಪಿದ ಕಾರಣವನ್ನು ಸ್ವಯಂ ರಾಹುಲರೇ ಹೀಗೆ ಸ್ಪಷ್ಟ ಪಡಿಸುತ್ತಾರೆ: "ನಾನು ಮೊದಲು ಕೂಡ ನನ್ನ ಮನಸ್ಸಿನ ವೇದನೆ ದೂರ ಮಾಡಿಕೊಳ್ಳಲು ರಾಜಕೀಯಕ್ಕೆ ಬಂದಿದ್ದೆ. ಬಡತನ ಮತ್ತು ಅವಮಾನವನ್ನು ದೊಡ್ಡ ಅಭಿಶಾಪವೆಂದು ತಿಳಿದಿದ್ದೆ. ಅಸಹಕಾರದ ವೇಳೆಯಲ್ಲಿಯೂ (1921) ನಾನು ಯಾವ ಸ್ವರಾಜ್ಯದ ಕಲ್ಪನೆಯಲ್ಲಿದ್ದೆನೋ ಅದು ಕಾಳಸಂತೆ ಸೇಠರುಗಳ ಹಾಗೂ ಬಾಬುಗಳ ರಾಜ್ಯವಾಗಿರಲಿಲ್ಲ. ಅದು ರೈತರ ಹಾಗೂ ಕಾರ್ಮಿಕರ ರಾಜ್ಯ; ಯಾಕೆಂದರೆ ಆಗಲೇ ಜನತೆ ಬಡತನ, ಅವಮಾನಗಳಿಂದ ಮುಕ್ತವಾಗಲು ಸಾಧ್ಯ. ಈಗಾದರೋ, ದೇಶ-ವಿದೇಶ ನೋಡಿ ಬಂದ ಪರಿಣಾಮವಾಗಿ ಮನಸ್ಸು ಇನ್ನಷ್ಟು ನೋಯುತ್ತಿದೆ."

1921ರಿಂದ 27ರ ವರೆಗೆ ರಾಹುಲರ ರಾಜಕೀಯ ಚಟುವಟಿಕೆಗಳ ಮೊದಲ ಘಟ್ಟ. ಆಗ, ಅವರು ರಾಷ್ಟ್ರೀಯ ಕಾಂಗ್ರೆಸ್‌ನ ಜೊತೆ ಕೆಲಸ ಮಾಡಿದ್ದರು. ಬಿಹಾರದ ಒಬ್ಬ ಪ್ರಮುಖ ನಾಯಕನಾಗಿ ಮಿಂಚಿದ್ದರು. ಬಕ್ಸರ್ ಮತ್ತು ಹಜಾರೀಬಾಗ್ ಜೈಲುಗಳಲ್ಲಿ ಎರಡು ವರ್ಷ ಕಳೆದಿದ್ದರು. ಅವರ ಅಂದಿನ ಆರಂಭಿಕ ಲೇಖನಗಳು ಮುಖ್ಯವಾಗಿ ರಾಜಕೀಯದಿಂದಲೇ ಪ್ರೇರಿತವಾದವುಗಳು.

ಆಗ (1938) ಬಿಹಾರದಲ್ಲಿ ಕಾಂಗ್ರೆಸ್ ಮಂತ್ರಿಮಂಡಲದ ಆಡಳಿತವಿತ್ತು. ಕಾಂಗ್ರೆಸ್ ನೇತಾರರು ರೈತ-ಕಾರ್ಮಿಕ ಬಲದಿಂದ ಬ್ರಿಟಿಶರ ತಾಕತ್ತನ್ನು ಸ್ವಲ್ಪ ಅಡಗಿಸಿದ್ದರು. ಆದರೆ ಕುರ್ಚಿಯಲ್ಲಿ ಕುಳಿತದ್ದೇ ತಡ, ಅವರು ರೈತ-ಕಾರ್ಮಿಕರನ್ನು ಮರೆತು ಬಿಟ್ಟರು. ಇಷ್ಟೇ ಅಲ್ಲ ದೊಡ್ಡ ದೊಡ್ಡ ಜಮೀನ್ದಾರ ಕಾಂಗ್ರೆಸ್ ನಾಯಕರು, ಕಾರ್ಮಿಕರಿಗೆ ಹಾಗೂ ರೈತರಿಗೆ ಅನ್ಯಾಯವೆಸಗತೊಡಗಿದರು. ರಾಹುಲರು ಕಲ್ಕತ್ತಾ ತಲುಪುವ ಮೊದಲೇ ಈ ನರಪಿಶಾಚಿಗಳನ್ನು ಕಟುವಾಗಿ ವಿರೋಧಿಸಬೇಕೆಂದು ನಿಶ್ಚಯಿಸಿಕೊಂಡಿದ್ದರು.

ಆ ಕಾಲದಲ್ಲಿ ಕಮ್ಯೂನಿಸ್ಟ್ ಪಕ್ಷ, ಕಾನೂನು ಬಾಹಿರವಾಗಿತ್ತು. ರಾಹುಲರು ಕಲ್ಕತ್ತಾದಲ್ಲಿ ಸೋಮನಾಥ ಲಾಹಿರಿ, ಮುಜಫ್ಫರ್ ಅಹ್ಮದ್, ಭವಾನೀ ಸೇನ್ ಮುಂತಾದ ಕೆಲ ಕಮ್ಯೂನಿಸ್ಟ್ ನಾಯಕರನ್ನು ಭೇಟಿ ಮಾಡಿದರು. ನಂತರ ಪಾಟ್ನಾ ಮಾರ್ಗವಾಗಿ ತನ್ನ ಕಾರ್ಯಕ್ಷೇತ್ರವಾದ ಛಪರಾಕ್ಕೆ ಹೊರಟು ಹೋದರು. ಹಳ್ಳಿ-ಹಳ್ಳಿ ತಿರುಗಿ ಪರಿಸ್ಥಿತಿಯ ಅಧ್ಯಯನ ನಡೆಸಿದರು. ರೈತ ಸಭೆಗಳಲ್ಲಿ ಅವರು ಛಪರಾದ ಜನಭಾಷೆಯಾದ ಭೋಜಪುರಿಯಲ್ಲಿಯೇ (ಮಲ್ಲಿಕಾ) ಭಾಷಣ ಮಾಡುತ್ತಿದ್ದರು ಮಾತ್ರವಲ್ಲ ಅದೇ ವರ್ಷ ರಾಂಚಿಯಲ್ಲಿ ನಡೆದ ಪ್ರಾಂತೀಯ ಹಿಂದೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಮಾಡಿದ ಭಾಷಣದಲ್ಲಿಯೂ ಅವರು ಜನಭಾಷೆ ಮತ್ತು ಜನಗೀತೆಗಳ ಮೇಲೆ ಹೆಚ್ಚು ಒತ್ತು ಕೊಟ್ಟಿದ್ದರು.

1939ರ ಜನವರಿಯಲ್ಲಿ ಛಪರಾದಲ್ಲಿ ರೈತ ಕಾರ್ಯಕರ್ತರ ಒಂದು ಸಮ್ಮೇಳನ ನಡೆಯಿತು. ರೈತರು ರಾಹುಲರಲ್ಲಿ ತಮ್ಮ ಅಳಲು ತೋಡಿಕೊಂಡರು. ಅಮವಾರೀ ಗಾಂವ್‌ನ ರೈತರದು "ನಮ್ಮ ಗದ್ದೆ ಕಸಿದುಕೊಂಡಿದ್ದಾರೆ. ನಾವು ಬಹಳ ಓಡಾಡಿದೆವು. ಕಾಂಗ್ರೆಸ್ ನಾಯಕರನ್ನು ಕಂಡೆವು. ಆದರೆ ಕೇಳುವವರು ಯಾರೂ ಇಲ್ಲ" ಎಂಬ ಗೋಳು.

ಹೆಚ್ಚಿನ ಜಗಳಗಳು "ಹರೀ-ಬೇಗಾರೀ" ಕಾರಣದಿಂದ ನಡೆದಿದ್ದುವು. ಬಿಹಾರದಲ್ಲಿ ಹಿಂದಿನ ಕಾಲದಿಂದಲೂ ರೈತ ತನ್ನ ಎತ್ತು-ನೊಗದಿಂದ ಮೊದಲು ಮಾಲಿಕನ ಗದ್ದೆ ಉತ್ತು ಆಮೇಲೆ ತನ್ನ ಗದ್ದೆ ಉಳುವ ರೂಢಿ ಬೆಳೆದು ಬಂದಿತ್ತು. ಆದರೆ ಈಗ ಯಾವುದೇ ರೈತ ಈ ರೀತಿಯ ಬಿಟ್ಟಿಗೆ – ಇದನ್ನು ಬಿಹಾರದಲ್ಲಿ 'ಹರೀ-ಬೇಗಾರೀ' ಎಂದು ಕರೆಯುತ್ತಾರೆ – ತಯಾರಿರಲಿಲ್ಲ. ಈ ಜಮೀನ್ದಾರರು ಅಂತಹ ರೈತರ ಜಮೀನುಗಳನ್ನು ಅನ್ಯಾಯದಿಂದ ಕಸಿದುಕೊಳ್ಳುತ್ತಿದ್ದರು. ಕಾಂಗ್ರೆಸ್ ನಾಯಕರು ಮಾತ್ರವಲ್ಲ ಆಡಳಿತ ಕೂಡ ಜಮೀನ್ದಾರ ಪಕ್ಷಪಾತಿಯಾಗಿತ್ತು. ರಾಹುಲರು ಹಳ್ಳಿಹಳ್ಳಿಗೆ ಹೋಗಿ ರೈತರನ್ನು ಸಂಘಟಿಸತೊಡಗಿದರು. ಜಮೀನ್ದಾರರ ಅನ್ಯಾಯಗಳನ್ನು ಅಧಿಕಾರಿಗಳಿಗೆ ತಿಳಿಸಿದರು. ಆದರೆ ಏನೂ ಉಪಯೋಗವಾಗಲಿಲ್ಲ. ಕೊನೆಯಲ್ಲಿ ಅವರು ಕಿಸಾನ್ ಸತ್ಯಾಗ್ರಹವನ್ನು ಯೋಜಿಸಲು ನಿರ್ಧರಿಸಿದರು.

ಟಿಬೇಟ್‌ಗೆ ನೀಡಿದ ನಾಲ್ಕನೇ ಪ್ರವಾಸದಿಂದ ಮರಳಿದ ರಾಹುಲರು ಮೊದಲು ಪಾಟ್ನಾ ನಂತರ ಛಪರಾಕ್ಕೆ ಹೋದಂದಿನಿಂದಲೂ ಕವಿ ನಾಗಾರ್ಜುನರು ಅವರ ಜೊತೆಗಿದ್ದರು. ನಾಗಾರ್ಜುನರು (ವೈದ್ಯನಾಥ ಮಿಶ್ರ, ಜನ್ಮ: 1911 ಅಥವಾ 1913 ಇಸವಿ) 1931 - 33ರಲ್ಲಿ ಬನಾರಸಿನಲ್ಲಿದ್ದು ಸಂಸ್ಕೃತ ಅಧ್ಯಯನ ಮಾಡಿದವರು. 1931ರಲ್ಲಿಯೇ ಅವರ ವಿವಾಹವಾಗಿ ಬಿಟ್ಟಿತ್ತು. ರಾಹುಲರ ಪ್ರೇರೇಪಣೆಯಿಂದ ಪಾಲಿ ಬೌದ್ಧ ಸಾಹಿತ್ಯದ ಅಧ್ಯಯನಕ್ಕಾಗಿ 1936ರಲ್ಲಿ ವಿದ್ಯಾಲಂಕಾರ ವಿಹಾರಕ್ಕೆ

(ಶ್ರೀಲಂಕೆ) ಹೋದವರು ಅಲ್ಲಿಯೇ ಬೌದ್ಧ ಭಿಕ್ಷುವಾದರು. ನಾಗಾರ್ಜುನರು ರಾಹುಲರ ಗುರುಬಂಧುವಾದರು. ಭಿಕ್ಷು ನಾಗಾರ್ಜುನ 1938ರಲ್ಲಿ ಶ್ರೀಲಂಕೆಯಿಂದ ಹಿಂದಿರುಗಿ ಬಿಹಾರಿನ ಕಿಸಾನ್ ಆಂದೋಲನದಲ್ಲಿ ರಾಹುಲರ ಸಹಾಯಕರಾದರು. ಮುಂದೆ ಜೈಲು ಸೇರುವವರೆಗೂ ರಾಹುಲರು ಕೂಡ ಬೌದ್ಧ ಭಿಕ್ಷುವಿನ ಪೀತವಸ್ತ್ರದಲ್ಲಿಯೇ ಇದ್ದರು.

ಛಪರಾದ ಅತಿ ದೊಡ್ಡ ಜಮೀನ್ದಾರಿ ಹಥುವಾದಿಂದ ಕಿಸಾನ್ ಸತ್ಯಾಗ್ರಹವನ್ನು ಆರಂಭಿಸುವುದೆಂದು ರಾಹುಲರು ಯೋಚಿಸಿದ್ದರು. ಆದರೆ ಕೆಲ ಘಟನೆಗಳು ಜರುಗಿ ಸತ್ಯಾಗ್ರಹವನ್ನು ಅಮವಾರಿ ಗಾಂವ್‌ನಲ್ಲಿ ಸುರು ಮಾಡಬೇಕಾಯಿತು. ರಾಹುಲರು ಮತ್ತು ಅವರ ಸಂಗಡಿಗರಿಗೆ ಅಮವಾರಿ ಗಾಂವ್ ತಲುಪಿಕೊಳ್ಳಲು ಸಾಧ್ಯವಾಗದೇ ಹೋಗಲಿ ಎಂದು ಅಲ್ಲಿ ಸೆಕ್ಷನ್ 144 ಜಾರಿಯಾಗುವುದೆಂಬ ಗಾಳಿ ಸುದ್ದಿ ಹಬ್ಬಿಸಿದರು. ಅಲ್ಲಿನ ಜಮೀನ್ದಾರರು ರಾಹುಲರನ್ನು ಮಟ್ಟ ಹಾಕಲು ತಮ್ಮ ಎರಡು ಆನೆಗಳನ್ನು ಸಿದ್ಧವಾಗಿಟ್ಟಿದ್ದರು. ಭಾರೀ ಸಂಖ್ಯೆಯಲ್ಲಿ ಲಾಠಿ ಕೂಡ ಸಂಗ್ರಹವಾಗಿತ್ತು. ಹಲವು ಮಂದಿ ಸಶಸ್ತ್ರ ಪೋಲೀಸರು, ಪೋಲಿಸ್ ಅಧಿಕಾರಿಗಳು ಎಲ್ಲ ಅಲ್ಲಿಗೆ ಬಂದು ಬಿಟ್ಟಿದ್ದರು.

1939ರ ಫೆಬ್ರವರಿ 24ರಂದು ಭಿಕ್ಷು ರಾಹುಲ ಸಾಂಕೃತ್ಯಾಯನರು ನಾಗಾರ್ಜುನ ಮತ್ತು ಜಲೀಲ್‌ರಂತಹ ನಾಯಕರಿರುವ ತನ್ನ ಕಿಸಾನ್ ಸತ್ಯಾಗ್ರಹಿ ತಂಡದೊಂದಿಗೆ ಅಮವಾರಿ ತಲುಪಿದರು. ಒಬ್ಬ ರೈತನ ಗದ್ದೆಗಿಳಿದು ಕಬ್ಬು ಕೊಯ್ಯುವುದೇ – ಸತ್ಯಾಗ್ರಹ. ಜಮೀನ್ದಾರನೊಬ್ಬ ರೈತನಿಂದ ಆ ಗದ್ದೆ ಕಸಿದುಕೊಂಡು ತನ್ನ ಹೆಂಡತಿಯ ಹೆಸರಿಗೆ ಬರೆಸಿಟ್ಟುಕೊಂಡಿದ್ದ. ಸತ್ಯಾಗ್ರಹಿಗಳು ಬಂದು ಗದ್ದೆಯಲ್ಲಿ ಒಟ್ಟು ಸೇರಿದರು. ಹತ್ತುಹತ್ತು ಜನರಿಗೆ ಗುಂಪಿನಂತೆ, ಸತ್ಯಾಗ್ರಹಿಗಳನ್ನು ಅನೇಕ ಗುಂಪುಗಳಾಗಿ ವಿಭಜಿಸಲಾಯಿತು. ಪ್ರತಿ ಗುಂಪಿಗೂ ಒಬ್ಬ ನಾಯಕನನ್ನು ನೇಮಿಸಿದರು. ಶರಾಬು ಕುಡಿಸಿ ಮತ್ತೇರಿಸಿದ ಜಮೀನ್ದಾರನ ಎರಡು ಆನೆಗಳನ್ನು ಅಲ್ಲಿಯೇ ಆಚೆ ನಿಲ್ಲಿಸಿದ್ದರು. ಅವುಗಳ ಹಿಂದೆ ದೊಣ್ಣೆ ಹಿಡಿದು ನಿಂತ ನೂರಾರು ಜನರು ಸಾಲಾಗಿ ನಿಂತಿದ್ದರು. ಮೂರು ನಾಲ್ಕು ಮಂದಿ ಪೋಲೀಸರೂ ಸಮಯದಲ್ಲಿ ಹಾಜರಿದ್ದರು. ಉಳಿದ ಪೋಲೀಸ್‌ರಳ ದೂರದ ಒಂದು ತೋಟದಲ್ಲಿ ತಡೆದು ನಿಂತಿತ್ತು. ಪೊಲೀಸರು ಜಮೀನ್ದಾರರೊಂದಿಗೆ ಸೇರಿಕೊಂಡಿದ್ದಾರೆಂಬುದು ಇದೀಗ ಜಾಹೀರಷ್ಟೆ ?

ರಾಹುಲರ ಪ್ರಥಮ ಗುಂಪು ಕಬ್ಬುಕೊಯ್ಯಲು ಗದ್ದೆಗಿಳಿಯಿತು. ಜಮೀನ್ದಾರ ಕುಟುಂಬದ ಇಬ್ಬರು ಲಾಠಿಧಾರಿಗಳಿಗೆ ಲಾಠಿ ಎತ್ತಲು ಕುಮ್ಮಕ್ಕು ಕೊಟ್ಟರು. ಆದರೆ ಅವರಿಗೆ ಭಿಕ್ಷುಗಳ ಮೇಲೆ ಕೈಯೆತ್ತಲು ಧೈರ್ಯವಾಗಲಿಲ್ಲ. ರಾಹುಲರು ತನ್ನ ಕುಡುಗೋಲಿನಿಂದ ಎರಡು ಕಬ್ಬು ಕೊಯ್ದರು. ಠಾಣೆದಾರ ಅವರನ್ನು ಕೈದು ಮಾಡಿದ. ಉಳಿದವರನ್ನೂ ಬಂಧಿಸಲು ತೊಡಗಿದಾಗ ರಾಹುಲರು ಇನ್ನೊಂದು ಕಡೆ ತಲೆ ತೂರಿಸಿದರು. ಆಗ ಜಮೀನ್ದಾರನ ಕಡೆಯ ಮಾವುತ ಕುರ್ಬಾನ್ ಆನೆ ಮೇಲಿಂದ ಕೆಳಗಿಳಿದು ರಾಹುಲರ ತಲೆಗೆ ಲಾಠಿ ಬೀಸಿ ಜೋರಾಗಿ ಹೊಡೆದ. ಆಗ ಅವರ ತಲೆ ಒಡೆಯಿತು. ರಕ್ತದ ಧಾರೆ ಹರಿಯಿತು ! ರಾಹುಲರನ್ನೂ, ನಾಗಾರ್ಜುನರನ್ನೂ ಮತ್ತು ತಂಡದ ಸುಮಾರು ಇಪ್ಪತ್ತು ಇಪ್ಪತ್ತೈದು ಜನರನ್ನು ರಾತ್ರಿ ಸೀವಾನ್‌ಗೆ ಕರೆದೊಯ್ದು ಬಂಧಿಸಿಟ್ಟರು. ಜಮೀನ್ದಾರರ ಹೇಳಿಕೆ ಮೇರೆಗೆ ಇನ್ಸ್‌ಪೆಕ್ಟರ್ ಕುರ್ಬಾನ್‌ನನ್ನು ಬಿಟ್ಟುಬಿಟ್ಟ.

ಮಾರನೇ ದಿನ ಸತ್ಯಾಗ್ರಹಿಗಳನ್ನು ಛಪರಾದ ದೊಡ್ಡ ಜೈಲಿಗೆ ಸ್ಥಾನಾಂತರಿಸಿದರು. ರಾಹುಲರು ಮತ್ತು ಅವರ ಮೊದಲ ಗುಂಪಿನವರನ್ನು ಹಗ್ಗದಿಂದ ಬಿಗಿದು ಸೀವಾನ್‌ನ ರಸ್ತೆಯ ಮೇಲೆ ಸ್ಟೇಶನ್ನಿಗೆ

ಕರೆದೊಯ್ಯುವಾಗ ಜನರು ಜೋರಾಗಿ "ಇಂಕ್ವಿಲಾಬ್ ಜಿಂದಾಬಾದ್" , "ಕಿಸಾನ್ ರಾಜ್ ಕಾಯಂ ಹೋ", "ಜಮೀನ್ದಾರಿ ಪ್ರಥಾ ನಾಶ್ ಹೋ" ಎಂದೆಲ್ಲ ಘೋಷಣೆ ಕೂಗಿದರು. ರಾಹುಲ ಬಾಬಾರವರ ಒಡೆದ ತಲೆ, ಹಗ್ಗದಿಂದ ಬಿಗಿದ ಕೈಗಳನ್ನು ನೋಡಿ ಜನ ಕಾಂಗ್ರೆಸ್ ಆಡಳಿತವನ್ನು ನಿಂದಿಸತೊಡಗಿದರು. ನಾಲ್ಕೈದು ದಿನಗಳಲ್ಲಿಯೇ ರಾಹುಲ ಬಾಬಾ ಅವರ ತಲೆ ಒಡೆದ ಸಂಗತಿ ಹಳ್ಳಿಹಳ್ಳಿಗೂ ತಿಳಿಯಿತು. ಛಪರಾದ ರಾಜೇಂದ್ರ ಕಾಲೇಜಿನ ಅಧ್ಯಾಪಕ ಮನೋರಂಜನ್ ಅವರ ಕವಿತೆ. "ರಾಹುಲ್‌ಕಾ ಖೂನ್ ಪುಕಾರ್ ರಹಾ" ಪತ್ರಿಕೆಗಳಲ್ಲಿ ಪ್ರಕಟವಾಯಿತು. ಅದರ ನಾಲ್ಕು ಸಾಲು ಹೀಗಿದೆ.

"ರಾಹುಲ್ ಕೇ ಸರ್ ಸೆ ಖೂನ್ ಗಿರೇ,
ಫಿರ್ ಕ್ಯೋಂ ವಹ ಖೂನ್ ಉಬಲ್ ನ ಉಠೇ,
ಸಾಧೂ ಕೆ ಶೋಣಿತ ಸೇ ಫಿರ್ ಕ್ಯೋಂ,
ಸೋನೇ ಕೀ ಲಂಕಾ ಜನ ನ ಉಠೇ ?"
ರಾಹುಲರ ಶಿರದಿಂದ ಹರಿದರೂ ರಕ್ತ
ಆ ರಕ್ತ ಕುದಿಯ ಬೇಕೆ ?
ಸಾಧು ನೆತ್ತರಿನಿಂದಲೂ ಮತ್ತೆ
ಸುವರ್ಣ ಲಂಕೆ ಉರಿಯಬೇಕೆ ?

ಛಪರಾ ಜೈಲಿನಲ್ಲಿ ಸತ್ಯಾಗ್ರಹಿಗಳಿಗೆ ಅಗತ್ಯ ಅನುಕೂಲಗಳು ಕೂಡ ಇರಲಿಲ್ಲ. ರಾಹುಲರು ಉಪವಾಸ ಹರತಾಳ ಸುರುಮಾಡಿದರು. ರಾಹುಲರು "ತುಮ್ಹಾರೀ ಕ್ಷಯ" ಪುಸ್ತಕ ಬರೆದದ್ದು ಅವರು ಛಪರಾ ಜೈಲಿನಲ್ಲಿದ್ದ ಈ ಸಮಯದಲ್ಲಿಯೇ. ಅದು ಪೂರ್ತಿಯಾಗುತ್ತಲೇ "ಜೀನೇ ಕೇ ಲಿಯೇ" ಕಾದಂಬರಿಗೆ ತೊಡಗಿದರು. ಅವರು ಹೇಳುತ್ತ ಹೋಗುತ್ತಿದ್ದರು, ನಾಗಾರ್ಜುನರು ಬರೆದುಕೊಳ್ಳುತ್ತಿದ್ದರು.

ಅಲ್ಲಿದ್ದಾಗಲೇ ಡಾ। ಶ್ಚೆರ್‌ವಾತ್‌ಸ್ಕೀಯಿಂದ ಪತ್ರ ಬಂದು ಲೋಲಾ ಗಂಡು ಮಗುವಿಗೆ ಜನ್ಮವಿತ್ತಿದ್ದಾಳೆ ಎಂಬ ಸುದ್ದಿ ತಿಳಿದದ್ದು.

"ತುಮ್ಹಾರೀ ಕ್ಷಯ" ಸಣ್ಣ ಪುಸ್ತಕವಾದರೂ ರಾಹುಲರು ಅದರಲ್ಲಿ ತನ್ನ ವಿಚಾರಗಳನ್ನು ದೃಢ ಮಾತುಗಳಲ್ಲಿ ಪ್ರಸ್ತುತಪಡಿಸುತ್ತಾರೆ. ಸಮಾಜ, ಧರ್ಮ, ದೇವರು, ಸದಾಚಾರ, ಜಾತಿ ಪಾತಿ, ಶ್ರೀಮಂತ ಶೋಷಕರು ಮುಂತಾದವಕ್ಕೆ ಸಂಬಂಧಿಸಿ ಹಳೆಯ ವ್ಯವಸ್ಥೆಗಳನ್ನು ಬಲವಾಗಿ ಟೀಕಿಸುತ್ತ ಹೊಸ ಸಮಾಜವಾದೀ-ಸಾಮ್ಯವಾದೀ ವ್ಯವಸ್ಥೆಯನ್ನು ಸ್ವೀಕರಿಸಲು ಆಹ್ವಾನಿಸುತ್ತಾರೆ. "ತುಮ್ಹಾರೇ ಭಗವಾನ್ ಕೀ ಕ್ಷಯ"ದಲ್ಲಿ ಹೀಗೆನ್ನುತ್ತಾರೆ. "ಅಜ್ಞಾನದ ಇನ್ನೊಂದು ಹೆಸರೇ ದೇವರು. ನಾವು ನಮ್ಮ ಅಜ್ಞಾನವನ್ನು ಸುಮ್ಮನೆ ಒಪ್ಪಿಕೊಳ್ಳಲು ನಾಚುತ್ತೇವೆ. ಅದಕ್ಕಾಗಿ ದೇವರನ್ನು ಹುಡುಕಿ ತೆಗೆದಿದ್ದೇವೆ. ದೇವರ ಮೇಲಿನ ವಿಶ್ವಾಸಕ್ಕೆ ಇನ್ನೊಂದು ಕಾರಣವೆಂದರೆ ಮನುಷ್ಯನ ಅಸಾಮರ್ಥ್ಯ ಹಾಗೂ ವಿವಶತೆ."

ಪುರಾತನದ ಅಭಿಮಾನ ಕುರಿತು: "ಇತಿಹಾಸ-ಇತಿಹಾಸ" "ಸಂಸ್ಕೃತಿ-ಸಂಸ್ಕೃತಿ" ಎಂದು ಬೊಬ್ಬೆ ಇಡುತ್ತಾರೆ. ಇತಿಹಾಸ ಮತ್ತು ಸಂಸ್ಕೃತಿಗಳು ಸದಾ ಮಧುರವಾಗಿ ಸುಖಮಯವಾಗಿ ಇರುವಂಥವೋ

ಎಂಬಂತೆ. ನಮ್ಮ ಇತಿಹಾಸವಾದರೋ ರಾಜರುಗಳ, ಪುರೋಹಿತರ ಇತಿಹಾಸವೇ. ಇಂದಿನಂತೆ ಅಂದು ಕೂಡ ಅವರು ಮಜಾ ಮಾಡುತ್ತಿದ್ದರು."

ಕಳ್ಳತನದ ಅಪವಾದ ಹಚ್ಚಿ ಮೊಕದ್ದಮೆಗಾಗಿ ರಾಹುಲರನ್ನು ಛಪರಾದಿಂದ ಸೀವಾನ್‌ಗೆ ಕರೆದುಕೊಂಡು ಹೋಗುತ್ತಿದ್ದ ವೇಳೆ ಮೊದಲ ಬಾರಿಗೆ ಅವರಿಗೆ ಬೇಡಿ ತೊಡಿಸಿದರು. ಛಪರಾ ಸ್ಟೇಶನಿನಲ್ಲಿ ಇದ್ದಾಗ ಯಾರೋ ಅವರು ಬೇಡಿ ತೊಟ್ಟಂತೆಯೇ ತೆಗೆದಿದ್ದ ಫೋಟೋ (ಏಪ್ರಿಲ್ 2, 1939) ಅನೇಕ ಪತ್ರಿಕೆಗಳಲ್ಲಿ ಅಚ್ಚಾಗಿತ್ತು. ಈ ಸಲ ಜೈಲಿಗೆ ಹೋದಾಗ ಅವರು ಅರೆತೋಳಿನ ಕುರ್ತಾ ಹಾಗೂ ಮೊಣಕಾಲ ವರೆಗಿನ ಚಡ್ಡಿ ತೊಡಲಾರಂಭಿಸಿದ್ದರು. ನಂತರ ಜೈಲಿನಲ್ಲಿ ಕೈದಿಗಳ ಉಡುಗೆ ಸಿಕ್ಕಿದಾಗ ಡೈರಿಯಲ್ಲಿ ಬರೆದರು "ನಡೆ, ಧರ್ಮದೊಡನೆ ಈಗ ನಾಮಮಾತ್ರದ ಸಂಬಂಧವೂ ಉಳಿಯಲಿಲ್ಲ."

ಮೊಕದ್ದಮೆ ನಡೆಯುತ್ತ ಇತ್ತು. ಕಳ್ಳತನದ ಅಪರಾಧದ ಮೇಲೆ ಆರು ತಿಂಗಳ ಕಠಿಣ ಸಜೆಯಾಯಿತು. ಜೈಲಿನ ಅವ್ಯವಸ್ಥೆಯ ವಿರುದ್ಧ ರಾಹುಲರು ಮತ್ತೆ ಉಪವಾಸ ಹರತಾಳ ಮಾಡಿದರು. ಕಾಂಗ್ರೆಸ್ ಆಡಳಿತಕ್ಕೆ ಚಿಂತೆಯಾಗಿ ಅವರನ್ನು ಬಿಡುಗಡೆ ಮಾಡುವಂತೆ ಆಜ್ಞೆ ಹೊರಡಿಸಿತು. ಖಾಕಿ ಚಡ್ಡಿ ಮತ್ತು ಹಾಫ್ ಶರ್ಟ್ ತೊಟ್ಟು ಜೇಲಿನಿಂದ ಹೊರಬಿದ್ದವರು ಮತ್ತೆ ಹಳ್ಳಿ ಹಳ್ಳಿ ತಿರುಗಿ ಸತ್ಯಾಗ್ರಹದ ಸ್ಥಿತಿಯ ಅವಲೋಕನ ಮಾಡತೊಡಗಿದರು. ರಾಹುಲರಿಂದಾಗಿ ಜನತೆಯಲ್ಲಿ ತಮ್ಮ ಹೆಸರು ಕೆಡುವುದನ್ನು ಕಂಡ ಕಾಂಗ್ರೆಸ್ ನೇತಾರರು ಹಾಗೂ ಮಂತ್ರಿಗಳಲ್ಲಿ ಅವರು ತಮ್ಮ 'ಶತ್ರು' ಎಂಬ ಭಾವನೆಯುಂಟಾಗ ಹತ್ತಿತು.

ಮತ್ತೆ ಛಿತೌಲಿಯಲ್ಲಿ ಸತ್ಯಾಗ್ರಹದ ನೇತೃತ್ವವಹಿಸಿದ ರಾಹುಲರು ಬಂಧನಕ್ಕೊಳಗಾದರು. ಮೊಕದ್ದಮೆ ನಡೆದು ಒಟ್ಟು ಎರಡು ವರ್ಷಗಳ ಕಠಿಣ ಸಜೆಯಾಯಿತು. ಅವರನ್ನು ಸೀವಾನ್‌ನಿಂದ ಹಜಾರೀಬಾಗ್ ಜೈಲಿಗೆ ಕರೆದೊಯ್ಯಬೇಕಾಗಿತ್ತು. ಆದರೆ ಛಪರಾ-ಪಾಟ್ನಾ ನೇರ ಮಾರ್ಗವಾಗಿ ಕರೆದೊಯ್ದರೆ ಜನರನ್ನು ಕೆರಳಿಸಿದಂತಾದೀತೆಂದು ಭಟನೀ, ಮವ್ಹೂ, ಬನಾರಸ್ ಮತ್ತು ಮುಗಲ್‌ಸರಾಯ್‌ಯ ಸುತ್ತು ಮಾರ್ಗವಾಗಿ ಹಜಾರಿಬಾಗ್ ತಲುಪಿಸಿದರು. ಜೂನ್ 23 (1939)ರಂದು ಮವ್ಹೂ (ಆಜಮಗಢ) ಮಾರ್ಗವಾಗಿ ರೈಲು ಹೊರಟರೆ ಪಯಣದುದ್ದಕ್ಕೂ ರಾಹುಲರು ಯಾವ ಸ್ಟೇಶನಿನಲ್ಲಿಯೂ, ಎಲ್ಲಿಯೂ, ಇಳಿಯಲಿಲ್ಲ. ಹೊರಗೆ ಹಣಕಿಯೂ ನೋಡಲಿಲ್ಲ. ಯಾಕೆ ?

ಐವತ್ತು ವರ್ಷವಾಗುವವರೆಗೂ ಆಜಮಗಢ ಜಿಲ್ಲೆಯಲ್ಲಿ ಕಾಲಿಡುವುದಿಲ್ಲವೆಂದು ಅವರು ಪ್ರತಿಜ್ಞೆ ಮಾಡಿದ್ದರಲ್ಲ ! ಆಗ ರಾಹುಲರಿಗೆ 46 ವರ್ಷ ವಯಸ್ಸು.

ಹಜಾರೀಬಾಗ್ ಜೈಲು ತಲುಪುವ ಮೊದಲೇ ಕೋರ್ಟ್‌ನಲ್ಲಿಯೇ ಆರಂಭಿಸಿದ ಉಪವಾಸ ಹರತಾಳ ಅಲ್ಲಿಗೆ ತಲುಪಿದ ಮೇಲೆಯೂ ಹದಿನೇಳು ದಿನಗಳವರೆಗೆ ನಡೆಯಿತು. ನಾಗಾರ್ಜುನ, ಜಲೀಲ್, ಕಾರ್ಯಾನಂದ ಶರ್ಮಾ ಮುಂತಾದವರು ಹಜಾರೀಬಾಗ್‌ನಲ್ಲಿಯೆ ಸೆರೆಯಲ್ಲಿದ್ದರು. ಕೊನೆಯಲ್ಲಿ ಸರಕಾರ ವಿವಶವಾಗಿ ರಾಹುಲರ ಬಿಡುಗಡೆಗೆ ಆದೇಶ ನೀಡಿತು. ಸೆರೆಮನೆಯ ದ್ವಾರದಿಂದ ಹೊರಬಂದ ಮೇಲೆಯೇ ಅವರು ಉಪವಾಸ ತ್ಯಜಿಸಿದ್ದು.

ಅಮವಾರಿ ಸತ್ಯಾಗ್ರಹದ ವೇಳೆ ರಾಹುಲಜೀಯ ತಲೆಗೆ ಹೊಡೆದ ಆ ಜಮೀನ್ದಾರನ ಕಥೆಯ

ಮಾವುತ ಕುರ್ಬಾನನ ಮೇಲೆ ಸರಕಾರ, ಮೊಕದ್ದಮೆ ಹೂಡಿದ ನಾಟಕವಾಡಿತು. 1939ರ ಆಗಸ್ಟ್ 29ರಂದು ಮೊಕದ್ದಮೆಯ ದಿನ. ರಾಹುಲರು ಸಾಕ್ಷಿ ಹೇಳಬೇಕು. "ಕುರ್ಬಾನನದು ಏನು ತಪ್ಪು ? ಅವನನ್ನು ಜೈಲಿಗೆ ಕಳುಹಿಸಿದರೆ ಏನು ಬಂತು ? ಲಾಠಿ ಬೀಸಿದ್ದು ಅವನ ಯಜಮಾನ" ಎಂದು ಯೋಚಿಸಿದರು. ಕೋರ್ಟ್‌ಗೆ ಹೋಗಿ "ಕುರ್ಬಾನ್‌ನನ್ನು ಬಿಟ್ಟು ಬಿಡಿ, ಅವನ ಮೇಲೆ ಮೊಕದ್ದಮೆ ಹೂಡುವುದು ನನಗಿಷ್ಟವಿಲ್ಲ" ಎಂದು ಕೋರಿಕೆ ಬರೆದುಕೊಟ್ಟರು.

ಹೀಗಿದ್ದರು ರಾಹುಲ ಬಾಬಾ. ಬಿಹಾರಿನ ರೈತ-ಕಾರ್ಮಿಕರು ಅವರಿಗಾಗಿ ಜೀವಕೊಡಲು ಸಹ ಮನಃಪೂರ್ವಕವಾಗಿ ತಯಾರಿದ್ದರು.

ಒಂದೂವರೆ ತಿಂಗಳ ನಂತರ ರಾಹುಲರು ವಾರ್ಧಾಕ್ಕೆ ಹೋದರು. ಇಡೀ ದೇಶದ ಕಮ್ಯುನಿಸ್ಟರು ಅಲ್ಲಿ ಸೇರಿದ್ದರು. ರಾಹುಲರು ಅವರನ್ನು ಹತ್ತಿರದಿಂದ ನೋಡಿದರು. ಪರಿಚಯ ಮಾಡಿಕೊಂಡರು, ಅವರೊಡನೆ ಚರ್ಚಿಸಿದರು. ಬಿಹಾರಕ್ಕೆ ಹಿಂದಿರುಗಿದ ಬಳಿಕ 1939ರ ಅಕ್ಟೋಬರ್ 19ರಂದು, ಮುಂಗೇರ್‌ನಲ್ಲಿ ಬಿಹಾರದ ಕಮ್ಯೂನಿಸ್ಟ್ ಪಾರ್ಟಿಯ ಸ್ಥಾಪನೆಯಾಯಿತು. ಅದೊಂದು ಸ್ಮರಣೀಯ ದಿನವೆನ್ನುತ್ತ ತಾನು ಕಮ್ಯುನಿಸ್ಟ್ ಪಾರ್ಟಿಯ ಸದಸ್ಯನಾಗಿರುವುದರ ಬಗ್ಗೆ ಅವರ ಟಿಪ್ಪಣಿ ಹೀಗಿದೆ. "ಶಿಸ್ತಿಲ್ಲದ ಗುಂಪಿನ ಸೇನಾಪತಿಯಾಗುವ ಬದಲು ಅನುಶಾಸನಬದ್ಧ ಸೇನೆಯ ಸಾಮಾನ್ಯ ಸೈನಿಕನಾಗಿರುವುದು ಮೇಲು". ಆ ಮೇಲೆ ಸುಮಾರು ಎರಡು ತಿಂಗಳ ಕಾಲ ರಾಹುಲರು ಒಂದು ಬಗೆಯ ಅಜ್ಞಾತವಾಸದಲ್ಲಿದ್ದರು. ಪೂರ್ವಜರ ಸ್ಥಳವಾದ ಮಲಾಂವ್‌ಗೆ (ಗೋರಖಪುರ್) ಹೋಗಿ ಅಲ್ಲಿ ಸಗೋತ್ರ ಕುಟುಂಬದಲ್ಲಿ ಉಳಿದುಕೊಂಡರು. ಅಲ್ಲಿ ಇದ್ದ ಕೆಲದಿನಗಳಲ್ಲಿ ಮಲಾಂವ್‌ನ ಇತಿಹಾಸ, ಸಾಂಕೃತ್ಯಾಯನ ವಂಶದ ಕುರಿತು ಸಾಮಗ್ರಿ ಸಂಗ್ರಹವಾಯಿತು. ಅವುಗಳನ್ನು ಅವರು 'ಮೇರೀ ಜೀವನ ಯಾತ್ರಾ'ದ ಪ್ರಥಮ ಭಾಗದಲ್ಲಿ ಪರಿಶಿಷ್ಟದ ರೂಪದಲ್ಲಿ ಸೇರಿಸಿದ್ದಾರೆ.

ಅಲಹಾಬಾದಿನಲ್ಲಿ ಕೆಲದಿನಗಳಿದ್ದು ಅಲ್ಲಿಂದ ಬಿಹಾರಿಗೆ ಹೊರಟು ಹೋದರು. ಕಮ್ಯುನಿಸ್ಟ್ ಪಾರ್ಟಿಯೇನೋ ಕಾನೂನುಬಾಹಿರವಾಗಿತ್ತು. ಆದರೆ ಅದರ ಕಾರ್ಯಕರ್ತರು ಕಾಂಗ್ರೆಸ್ ಸೋಶಲಿಸ್ಟ್ ಪಾರ್ಟಿಯೊಡನೆ ಸೇರಿ ಕೆಲಸ ಮಾಡುತ್ತ ಇದ್ದರು. ರಾಹುಲರು ಛಪರಾ ಜಿಲ್ಲೆಯಲ್ಲಿ ಮತ್ತೆ ಚಟುವಟಿಕೆಗೆ ತೊಡಗಿದರು. ಬಿಹಾರದ ಪ್ರಾಂತೀಯ ಕಿಸಾನ್ ಸಭಾದ ಅಧ್ಯಕ್ಷರನ್ನಾಗಿ ಈ ಸಲ ಅವರನ್ನು ಚುನಾಯಿಸಿದ್ದರು. 1940ರ ಫೆಬ್ರವರಿ 24-25ರಂದು ಮೋತೀಹಾರಿಯಲ್ಲಿ ಅವರ ಅಧ್ಯಕ್ಷತೆಯಲ್ಲಿ ಕಿಸಾನ್ ಸಮ್ಮೇಳನ ನಡೆದಾಗ ಸ್ವಾಮೀ ಸಹಜಾನಂದ, ಜಯಪ್ರಕಾಶ ನಾರಾಯಣ, ನರೇಂದ್ರ ದೇವ, ಜೆಡ್.ಎ.ಅಹ್ಮದ್ ಮುಂತಾದವರೂ ಭಾಷಣ ಮಾಡಿದರು.

ಅದೇ ವರ್ಷ ಪಲಾಶಾ (ಆಂಧ್ರಪ್ರದೇಶ)ದಲ್ಲಿ ನಡೆಯಲಿರುವ ಅಖಿಲ ಭಾರತೀಯ ಕಿಸಾನ್ ಸಮ್ಮೇಳನ ಹಾಗೂ ಸಭಾದ ಅಧ್ಯಕ್ಷರನ್ನಾಗಿ ರಾಹುಲರನ್ನು ಚುನಾಯಿಸಿದರು. ಅಧ್ಯಕ್ಷ ಭಾಷಣ ಸಿದ್ಧಪಡಿಸಲು ಅವರು ಅಲಹಾಬಾದಿಗೆ ಹೋದರು. ಭಾಷಣ ಸುಮಾರಾಗಿ ಪೂರ್ತಿ ಸಿದ್ಧವಾಗಿತ್ತಾದರೂ ಮಾರ್ಚ್ 15 (1940)ರಂದು ರಾತ್ರಿ ಡಾ। ಅಹ್ಮದ್‌ರ ಮನೆಯಲ್ಲಿ ರಾಹುಲರನ್ನು ಭಾರತ-ರಕ್ಷಣೆ ಕಾನೂನಿನನ್ವಯ ಬಂಧಿಸಿ ಕರೆದೊಯ್ದರು.

ಎರಡು ವರ್ಷ ನಾಲ್ಕು ತಿಂಗಳು (ಮಾರ್ಚ್ 1940ರಿಂದ ಜುಲೈ 1942ರ ವರೆಗೆ) ಹಜಾರೀ ಬಾಗ್ ಜೈಲು ಮತ್ತು ದೇವಲೀಕ್ಯಾಂಪ್‌ನಲ್ಲಿ ಕಳೆಯಿತು. ಈ ಬಾರಿ ಜೈಲಿನಲ್ಲಿ ಅವರು ರಾಜಕೀಯ

ಬಂಧಿಯಾಗಿದ್ದರು. ಹಿಂದಿನ ಜೈಲು ಜೀವನಕ್ಕೆ ಹೋಲಿಸಿದರೆ ಈಗ "ಶಾಹೀ ಕೈದಿ" ಕಾಂಗ್ರೆಸ್, ಸೋಶಲಿಸ್ಟ್, ಕಮ್ಯುನಿಸ್ಟ್ ಪಾರ್ಟಿಗಳ ದೊಡ್ಡ ದೊಡ್ಡ ನಾಯಕರು ಇಲ್ಲಿ ಜೊತೆಯಲ್ಲಿದ್ದರು. ಇಪ್ಪತ್ತೊಂಭತ್ತು ತಿಂಗಳ ಈ ಜೈಲುವಾಸದ ಕಾಲವನ್ನು ಅವರು ಅಧ್ಯಯನ ಮತ್ತು ಬರವಣಿಗೆಗೆ ಚೆನ್ನಾಗಿ ಉಪಯೋಗಿಸಿಕೊಂಡರು.

ಅಲಹಾಬಾದಿನಿಂದ ಶೀಘ್ರವೇ ಅವರನ್ನು ಹಜಾರಿಬಾಗ್ ಜೈಲಿಗೆ ಕಳಿಸಲಾಯಿತು. ಅಲ್ಲಿ ಅವರು ಮೊಟ್ಟ ಮೊದಲಿಗೆ ತನ್ನ 'ಜೀವನ ಯಾತ್ರಾ' ಬರವಣಿಗೆಯನ್ನು ಆರಂಭಿಸಿದರು. ಸುಮಾರು ಒಂದು ತಿಂಗಳ ತನಕ ಬರೆಯುತ್ತು ಇದ್ದು ಇನ್ನು ವೃತ್ತಾಂತ 1926-27ರಿಂದ ಮುಂದೆ ಹೋಗಬೇಕು, ಆದರೆ ಮನಸ್ಸು ನಿಲ್ಲದಾಯಿತು. ಕಾರಣ ಅಲ್ಲಿಂದ ಮುಂದೆ ಅವರು ಡೈರಿ ಬರೆಯುತ್ತ ಹೋಗಿದ್ದರು. ಆದರೆ ಅಂತು ಹಜಾರಿಬಾಗ್ (ಜೂನ್ 1940) ಜೈಲಿನಲ್ಲಿದ್ದ ಆ ಸಮಯದಲ್ಲಿಯೇ "ಮೇರಿ ಜೀವನ ಯಾತ್ರಾ"ದ ಮೊದಲ ಭಾಗ ಸಿದ್ಧವಾಗಿ ಬಿಟ್ಟಿತು.

1940ರ ಮೇ ತಿಂಗಳಿನಿಂದ ಜೈಲ್‌ನಲ್ಲಿ ಕಮ್ಯುನಿಸ್ಟರ ಸಂಖ್ಯೆ ಹೆಚ್ಚ ತೊಡಗಿತು. ಆದರ ಮುಂದಿನ ತಿಂಗಳಲ್ಲಿ ಫ್ರಾನ್ಸಿನ ಮೇಲೆ ಹಿಟ್ಲರ್ ಸೇನೆಯ ಅಧಿಪತ್ಯ, ಬಳಿಕ ಇಂಗ್ಲೆಂಡ್ ಮೇಲೆ ವಿಮಾನ ದಾಳಿ. ಸೋವಿಯತ್ ರಷ್ಯಾ ಕೂಡ ತನ್ನ ಯುರೋಪು ದಿಕ್ಕಿನ ತನ್ನ ಗಡಿಭದ್ರತೆಗೆ ಗಮನ ಕೊಡತೊಡಗಿತ್ತು. ನಡುನಡುವೆ ಅಲ್ಲಿಂದ ಲೋಲಾಳ ಪತ್ರಗಳು ಬರುತ್ತಿದ್ದುವು. ಡಾ। ಶ್ಚೆರ್‌ವಾತ್‌ಸ್ಕೀ ರಾಹುಲರನ್ನು ರಷ್ಯಾಕ್ಕೆ ಕರೆಸಿಕೊಳ್ಳಲು ಉತ್ಸುಕರಾಗಿದ್ದರು.

ಜೈಲಿಗೆ ತುಸು ಹೊಂದಿಕೊಂಡಂತೆ ರಾಹುಲರು ಸಾಮ್ಯವಾದದ ಕುರಿತು ಪುಸ್ತಕ ಬರೆಯಬೇಕೆಂದು ಯೋಚಿಸಿದರು. ಅದಕ್ಕಾಗಿ ವಿಜ್ಞಾನ, ದರ್ಶನ, ಸಮಾಜಶಾಸ್ತ್ರ, ಅರ್ಥಶಾಸ್ತ್ರ ಮುಂತಾದ ವಿಷಯಗಳನ್ನು ಓದುವುದು, ಟಿಪ್ಪಣಿ ಮಾಡಿಕೊಳ್ಳುವುದು ನಡೆಯಿತು. ಸಮಯ ಸಾಕಷ್ಟು ಸಿಗುತ್ತಿತ್ತು. ಹಾಗಾಗಿ ಟಿಬೇಟ್‌ನಿಂದ ತಂದ ಫೋಟೋ ಚಿತ್ರಗಳ ಸಹಾಯದಿಂದ ಕೆಲ ಪುಸ್ತಕಗಳ ಸಂಪಾದನ ಕಾರ್ಯ ಮಾಡೋಣ ಎಂದುಕೊಂಡರು. ಆದರೆ ಸ್ವತಃ ರಾಹುಲರೇ ಟಿಬೇಟಿನಿಂದ ಫೋಟೋಗಳನ್ನು ತಂದಿದ್ದರೂ ಆ ಫೋಟೋ-ಚಿತ್ರಗಳನ್ನು ಕಳಿಸಲು ನಿರಾಕರಿಸಿತು. "ನನ್ನ ಶುದ್ಧ ಸಂಶೋಧನಾ ಸಂಬಂಧವಾದ ಕೆಲಸಕ್ಕೆ ಕೂಡ, ಸರಕಾರ ಅವಕಾಶ ಕೊಡಲಿಲ್ಲ ಎಂದು ಖೇದ ಉಂಟಾಯಿತು" ಎಂದು ಹೇಳಿ, ರಾಹುಲ್‌ಜಿ ನೊಂದುಕೊಂಡರು.

1940ರ ಡಿಸೆಂಬರ್ 26ರಂದು, ಬಿಹಾರಿನ ಇತರ ಕೆಲ ಕಮ್ಯುನಿಸ್ಟ್ ನಾಯಕರ ಸಹಿತ ರಾಹುಲರನ್ನು ದೇವಲೀ ಕ್ಯಾಂಪಿಗೆ (ರಾಜಸ್ಥಾನ) ಸ್ಥಾನಾಂತರಿಸಿದರು. ಅಲ್ಲಿ ದೇಶದ ಇತರ ಪ್ರಾಂತಗಳ ರಾಜಕೀಯ ಬಂದಿಗಳನ್ನು ತರುತ್ತಲೇ ಇದ್ದರು. ಅವರಲ್ಲಿ ಕಮ್ಯುನಿಸ್ಟರ ಸಂಖ್ಯೆ ಹೆಚ್ಚಾಗಿತ್ತು. ಡಾಂಗೆ, ರಣದಿವೇ, ಮೀರಜ್‌ಕರ್, ಅಜಯ ಘೋಷ್ ಮುಂತಾದ ಪ್ರಮುಖ ಕಮ್ಯೂನಿಸ್ಟ್ ನಾಯಕರನ್ನು ಅಲ್ಲಿಗೆ ಕರೆತಂದಿದ್ದರು. ಎಲ್ಲರೂ ವಿದ್ಯಾವಂತರು. ಈ ದೇವಲೀ ಕ್ಯಾಂಪ್‌ನಲ್ಲಿ ರಾಹುಲರು ಒಂದು ವರ್ಷವಿದ್ದರೂ ಅಲ್ಲಿಗೆ ಬರುತ್ತಲೇ ಸ್ನೇಹಿತರ ಆಗ್ರಹಕ್ಕೆ ಅವರು ಭಾರತೀಯ ದರ್ಶನದ ಮೇಲೆ ಭಾಷಣ ನೀಡಲಾರಂಭಿಸಿದರು. ದೇವಲೀ ಕ್ಯಾಂಪ್‌ನ ಸಾಮಾಜಿಕ ಜೀವನ ತುಂಬ ಸ್ವಾರಸ್ಯಕರವಾಗಿತ್ತು. ಸೌಲಭ್ಯ ಬೇಡಿಕೆಗಾಗಿ ನಿರಶನ ಹರತಾಳವು ನಡೆಯಿತು. ರಾಹುಲರೂ ಅದರಲ್ಲಿ ಭಾಗವಹಿಸಿದರು. ರಷ್ಯಾದಿಂದ ಲೋಲಳ ಪತ್ರಗಳು ಬರುತ್ತಲೇ ಇದ್ದುವು. 1941ರ ಜೂನ್‌ನಲ್ಲಿ

ಹಿಟ್ಲರನ ಸೇನೆ ರಷ್ಯಾದ ಮೇಲೆ ಆಕ್ರಮಣ ಮಾಡಿತು. ಲೆನಿನ್‌ಗ್ರಾಡ್‌ಗೂ ಮುತ್ತಿಗೆ ಹಾಕಿ ನಗರ ಉರಿಯತೊಡಗಿದಾಗ ಮಾತ್ರ ರಾಹುಲರಿಗೆ ಅತೀವ ಚಿಂತೆಯಾಯಿತು.

ಇತ್ತ ಓದು – ಬರಹದ ಕೆಲಸವೂ ನಡೆಯುತ್ತಾ ಇತ್ತು. ಹಜಾರೀ ಬಾಗ್‌ನಲ್ಲಿ ಒಂಭತ್ತು ತಿಂಗಳು ಮತ್ತು ದೇವಲೀಯಲ್ಲಿ ಏಳು ತಿಂಗಳು – ಒಟ್ಟು ಹದಿನಾರು ತಿಂಗಳ ಸತತ ಅಧ್ಯಯನದ ನಂತರ 1941ರ ಜುಲೈ 30ರಂದು ಬರವಣಿಗೆಗೆ ತೊಡಗಿದರು. ನಿಯಮಬದ್ಧವಾಗಿ ಪ್ರತಿ ದಿನ ಸ್ಕೂಲ್ ಕಾಪಿಯಲ್ಲಿ ಇಪತ್ತು ಪುಟ ಬರೆಯುತ್ತಿದ್ದರು. ಭಾನುವಾರ ಮಾತ್ರ ಹತ್ತು ಪುಟ. ಈ ರೀತಿ ಇಪ್ಪತ್ತು ದಿನಗಳಲ್ಲಿ "ವಿಶ್ವ ಕೀ ರೂಪ ರೇಖಾ" ಪುಸ್ತಕ ಬರೆದರು. ನಂತರ ಮೂವತ್ತಾರು ದಿನಗಳಲ್ಲಿ 'ಮಾನವ ಸಮಾಜ' ಬರೆದರು. 'ದರ್ಶನ ದಿಗ್ದರ್ಶನ' ಬರವಣಿಗೆ ಕೈಗೆತ್ತಿಕೊಂಡರು. ಪುನಃ ನಿರಶನ ಹರತಾಳ ಸುರುವಾಯಿತು.

1941ರ ಡಿಸೆಂಬರ್ ಕೊನೆಯಲ್ಲಿ ರಾಹುಲ ಮತ್ತು ಬಿಹಾರದ ಇತರ ರಾಜಕೀಯ ಬಂದಿಗಳನ್ನು ದೇವಲೀ ಕ್ಯಾಂಪ್‌ನಿಂದ ಹಜಾರೀಬಾಗ್ ಜೈಲಿಗೆ ಸ್ಥಾನಾಂತರಿಸಲಾಯಿತು. ಅಲ್ಲಿಗೆ ಹೋದ ಮೇಲೆ 'ದರ್ಶನ ದಿಗ್ದರ್ಶನ' (850 ಪುಟಗಳು)ವನ್ನು ಪೂರ್ತಿಗೊಳಿಸಿ ಕೇವಲ ಹನ್ನೆರಡು ದಿನಗಳಲ್ಲಿ 'ವೈಜ್ಞಾನಿಕ ಭೌತಿಕವಾದ'ವನ್ನು ಬರೆದರು.

ಈ ನಾಲ್ಕು ಪುಸ್ತಕಗಳು 'ವಿಶ್ವ ಕೀ ರೂಪ ರೇಖಾ', 'ಮಾನವ ಸಮಾಜ', 'ದರ್ಶನ ದಿಗ್ದರ್ಶನ' ಮತ್ತು 'ವೈಜ್ಞಾನಿಕ ಭೌತಿಕವಾದ' ವಸ್ತುತಃ ಒಂದೇ ಗ್ರಂಥದ ನಾಲ್ಕು ಭಾಗಗಳು. ರಾಹುಲರು 'ವೈಜ್ಞಾನಿಕ ಭೌತಿಕವಾದ'ವನ್ನು ಪರಿಚಯಿಸುವ ಒಂದೇ ಗ್ರಂಥ ರಚಿಸಬೇಕೆಂದುಕೊಂಡಿದ್ದರು. ಆದರೆ ಅದು ಕೊನೆಗೆ ಹೀಗೆ ನಾಲ್ಕು ಭಾಗಗಳಲ್ಲಿ ಹೊರಬಂತು. ಮಾನವ ಜಾತಿಯ ಸರ್ವತೋಮುಖ ವಿಕಾಸದ ಕುರಿತ, ವಿಜ್ಞಾನಕ್ಕೆ ಸಂಬಂಧಿಸಿದ ಪುಸ್ತಕ 'ವಿಶ್ವ ಕೀ ರೂಪ ರೇಖಾ'. 'ಮಾನವ ಸಮಾಜ', 'ದರ್ಶನ ದಿಗ್ದರ್ಶನ' ಹಿಂದಿಯಲ್ಲಿ ಬರೆದ ಬಹಳ ಮಹತ್ವದ ಈ ಬಗೆಯ ಪ್ರಥಮ ಗ್ರಂಥ. ಇದರಲ್ಲಿ ಕೇವಲ ಭಾರತೀಯ ದರ್ಶನ ಮಾತ್ರವಲ್ಲ ಗ್ರೀಕ್, ಇಸ್ಲಾಮೀ ಹಾಗೂ ಐರೋಪ್ಯ ದರ್ಶನಗಳ ಕುರಿತಾಗಿಯೂ ವ್ಯಾಪಕ ಚಿಂತನೆ ಇದೆ. ವೈಜ್ಞಾನಿಕ ಭೌತಿಕವಾದವನ್ನು ಅರಿಯಲು ವಿಶ್ವವ್ಯಾಪೀ ದರ್ಶನದ ತಿಳುವಳಿಕೆ ಅಗತ್ಯವಷ್ಟೆ ? ವಿಶ್ವವ್ಯಾಪೀ ದರ್ಶನ ಧಾರೆ ರಾಷ್ಟ್ರೀಯವಾಗಿರುವುದಕ್ಕಿಂತಲೂ ಹೆಚ್ಚು ಅಂತರ್ರಾಷ್ಟ್ರೀಯವೆಂದು ರಾಹುಲರು ಯುಕ್ತವಾಗಿಯೇ ಗುರುತಿಸಿದ್ದಾರೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಧಾರ್ಮಿಕ ಮತಗಳಂತೆ ಚಿಂತನೆಗಳಲ್ಲಿಯೂ ದೇಶದೇಶಗಳ ನಡುವೆ ಚೆನ್ನಾಗಿ ಕೊಡು-ಕೊಳ್ಳುವ ಭಾವನೆ ಇರುತ್ತದೆ.

ವೈಜ್ಞಾನಿಕ ಭೌತಿಕವಾದ ಒಂದು ರೀತಿಯಲ್ಲಿ ಸಾಕಷ್ಟು ಕಠಿಣ ವಿಷಯ. ಆದರೆ ರಾಹುಲರು ಭಾರತೀಯ ಪರಂಪರೆಯಿಂದ ಅನೇಕಾನೇಕ ಉದಾಹರಣೆಗಳನ್ನು ನೀಡಿ, ಈ ವಿಷಯವನ್ನು ಸುಬೋಧವಾಗಿ ಹಾಗೂ ಸರಳವಾಗಿ ಮುಂದಿಟ್ಟಿದ್ದಾರೆ. ಇವನ್ನು ಬರೆದು ಮುಗಿಸಿದ ಸಂತೋಷದಲ್ಲಿದ್ದ ರಾಹುಲರು ಅತ್ತ ಫ್ಯಾಸಿಸ್ಟ್ ಸೇನೆಗಳು ಮಾಸ್ಕೋದಲ್ಲಿ ಉಗ್ರವಾಗಿ ಘಾತಗೊಂಡು ಹಿಂದೆ ಹಿಂದೆ ಸರಿಯುತ್ತಿರುವ ಸುದ್ದಿ ಕೇಳಿ ಇನ್ನಷ್ಟು ಉತ್ಸಾಹಿತರಾದರು.

ರಾಹುಲರ ಧ್ಯಾನ ಈಗ ಐತಿಹಾಸಿಕ ಕಥಾನಕಗಳ ಕಡೆಗೆ ಹೊರಳಿತು. 1942ರ ಮೇ ತಿಂಗಳಲ್ಲಿ ಹತ್ತೊಂಭತ್ತು ದಿನದಲ್ಲಿ 'ಸಿಂಹ ಸೇನಾಪತಿ' ಎಂಬ ಕಾದಂಬರಿ ಬರೆದರು. ಮತ್ತೆ ಮುಂದಿನ

ತಿಂಗಳಲ್ಲಿಯೇ ದಿನಕ್ಕೊಂದು ಕಥೆ ಲೆಕ್ಕದಲ್ಲಿ 'ವೋಲ್ಗಾ ಸೇ ಗಂಗಾ' ದ ಇಪ್ಪತ್ತು ಕಥೆಗಳನ್ನು ಬರೆದರು. ರಾಹುಲರ ಈ ಕೃತಿ ಇತರೆಲ್ಲ ಕೃತಿಗಳಿಗಿಂತ ಹೆಚ್ಚು ಪ್ರಸಿದ್ಧವಾಗಿ ಪ್ರಪಂಚದ ಅತ್ಯಧಿಕ ಭಾಷೆಗಳಿಗೆ ಅನುವಾದಗೊಂಡಿತು.

'ಸಿಂಹ ಸೇನಾಪತಿ' ಐತಿಹಾಸಿಕ ಕಾದಂಬರಿ. ಇದರಲ್ಲಿ ಲಿಚ್ಛವೀಗಣದ ವೀರಸಿಂಹನ ಜೀವನ ವೃತ್ತಾಂತ ಹಾಗೂ ಲಿಚ್ಛವೀಗಣದ ಸಾಮೂಹಿಕ ಜೀವನ-ಸಂಘರ್ಷದ ಐತಿಹಾಸಿಕ ಚಿತ್ರಣವಿದೆ. 'ಜಯ ಯೌಧೇಯ' ಕೂಡ ಇದೇ ಬಗೆಯ ಐತಿಹಾಸಿಕ ಕಾದಂಬರಿ.

ರಾಹುಲರು 'ವೋಲ್ಗಾ ಸೇ ಗಂಗಾ' ಕಥೆಗಳನ್ನು ಮಾನವ ಸಮಾಜದ ವಿಕಾಸವನ್ನು ಸರಳವಾಗಿ ಸ್ವಾರಸ್ಯವಾಗಿ ಹೇಳುವ ಉದ್ದೇಶದಿಂದ ಬರೆದರು. "ನನಗೆ ಬಹಳ ದಿನಗಳಿಂದ ಭಾರತದ ಐತಿಹಾಸಿಕ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ನಮ್ಮ ಪ್ರಗತಿಶೀಲತೆಗೆ ಸಹಕಾರಿಯಾಗುವಂತಹ ಕಾದಂಬರಿ, ಕಥೆಗಳನ್ನು ಬರೆಯಬೇಕೆಂಬ ಆಸೆಯಿತ್ತು. ಭಾರತೀಯ ಸಂಸ್ಕೃತಿಯ ಹಾಗೂ ಸಭ್ಯತೆಯ ಡಂಗುರ ಹೊಡೆಯುವವರು ಪ್ರಾಚೀನತೆಯ ಹೆಸರಲ್ಲಿ ನಮ್ಮ ಪಥಕ್ಕೆ ತಡೆಯೊಡ್ಡುತ್ತಾರೆ. ವಸ್ತುತಃ ಭಾರತೀಯ ಸಂಸ್ಕೃತಿ ಹಾಗೂ ಸಭ್ಯತೆ ಅಚಲವಾಗಿ ಇದ್ದದ್ದೇ ಇಲ್ಲ. ಅವರ ಅಂಗಅಂಗವೂ ತೀವ್ರ ಪರಿವರ್ತನೆಗೆ ಒಳಗಾಗುತ್ತಲೇ ಇತ್ತು" - ಎಂದಿದ್ದಾರೆ ರಾಹುಲಜೀ.

ಈ ಬಾರಿಯ ಕಾರಾಗೃಹ ವಾಸದಲ್ಲಿ ಒಟ್ಟು ಏಳು ಪುಸ್ತಕಗಳನ್ನು ಬರೆದು ಮುಗಿಸಿದ್ದರು. ಮತ್ತೇನೀಗ ಮಾಡುವುದು ? ಹೊರಬರುವ ವರೆಗೆ ಒಂದಲ್ಲ ಒಂದು ಪುಸ್ತಕ ಬರೆಯುತ್ತಲೇ ಇರುವುದು ಅಗತ್ಯವಾಗಿತ್ತು. 1942ರ ಜೂನ್-ಜುಲೈ ನಡುವಿನ ಇಪ್ಪತ್ತೇಳು ದಿನಗಳಲ್ಲಿ ರಾಹುಲರು ಛಪರಾದ ಭಾಷೆಯಾದ ಮಲ್ಲಿಕಾದಲ್ಲಿ ಎಂಟು ನಾಟಕಗಳನ್ನು ಬರೆದರು. ಫ್ಯಾಸಿಸ್ಟ್ ವಿರೋಧಿ ವಿಚಾರಗಳ ಪ್ರಚಾರಕ್ಕಾಗಿ ನಾಲ್ಕು ನಾಟಕ 'ಜಪನಿಯಾ ರಾಛಛ', 'ದೇಸ ರಚ್ಛಕ್', 'ಜರಮನವಾಂ ಕೆ ಹಾರ್ ನಿಹಿಚಯ', 'ಈ ಹಮಾರ ಲಡಾಯೀ', 'ಢುನ್‌ಮುನ್ ನೇತಾ'ದಲ್ಲಿ ವಿಭಿನ್ನ ರಾಜಕೀಯ ವಿಚಾರಗಳ ವಿಶ್ಲೇಷಣೆ ಇದೆ. 'ನಯಿಕೀ ದುನಿಯಾ' ಮತ್ತು 'ಜೋಂಕ್'ನಲ್ಲಿ ಸಾಮ್ಯವಾದಿ ವಿಚಾರಧಾರೆಯನ್ನು ಪ್ರತಿಪಾದಿಸುತ್ತಾರೆ. 'ಮೆಹರಾರುನ್ ಕೀ ದುರ್ದಸಾ'ದಲ್ಲಿ ಸ್ತ್ರೀಯರ ಹೀನಾವಸ್ಥೆಯ ಚಿತ್ರಣವಿದೆ.

ಈ ಸಲ ಪೂರ್ತಿ ಇಪ್ಪತ್ತೊಂಭತ್ತು ತಿಂಗಳ ಕಾಲ ಅವರನ್ನು ಕಾರಾಗೃಹದಲ್ಲಿ ಇರಿಸಿ ಸರಕಾರ 1942 ಜುಲೈ 23ರಂದು ಹಜಾರೀ ಬಾಗ್ ಜೈಲ್‌ನಿಂದ ಬಿಡುಗಡೆ ಮಾಡಿತು.

ರಾಹುಲರು ಬಿಹಾರದ ತನ್ನ ಕಾರ್ಯಕ್ಷೇತ್ರಕ್ಕೆ ಹೊರಟು ಹೋದರು. ಮೂಲೆ ಮೂಲೆಗೆ ಹೋಗಿ ಪರಿಸ್ಥಿತಿಯ ಅಧ್ಯಯನ ಮಾಡಿದರು. ಸ್ವಾಮೀ ಸಹಜಾನಂದರ 'ಹುಂಕಾರ' ಪತ್ರಿಕೆಯ ಸಂಪಾದಕತ್ವದ ಹೊಣೆ ಹೊತ್ತರು. ಇದೇ ವೇಳೆ, ಇಂದ್ರದೀಪ ಸಿನ್ಹಾರಂತಹ ಬಿಹಾರಿನ ತರುಣ ಕಮ್ಯೂನಿಸ್ಟ್ ರಾಹುಲರ ಸಂಪರ್ಕಕ್ಕೆ ಬಂದರು. 1942ರ ಆಗಸ್ಟ್‌ನಲ್ಲಿ ಕಮ್ಯುನಿಸ್ಟ್ ಪಾರ್ಟಿ, ಕಾನೂನು ಬದ್ಧವೆಂದು ಘೋಷಿತವಾದ ಪ್ರಯುಕ್ತ ಕಲ್ಕತ್ತಾದಲ್ಲಿ ಒಂದು ಸಭೆ ಮತ್ತು ಉತ್ಸವ ಏರ್ಪಾಡಾಯಿತು. ರಾಹುಲಜೀ ಆ ಸಭೆಯ ಅಧ್ಯಕ್ಷತೆ ವಹಿಸಿದರು.

'1942 ಆಗಸ್ಟ್ ಕೀ ಆಂಧಿ' ಎಲ್ಲೆಲ್ಲೂ ವ್ಯಾಪಿಸಿ, ಲೂಟಿ ಸುರುವಾಯಿತು. ಸರಕಾರದ ದಮನ ಚಕ್ರ ಉರುಳುತ್ತಲೇ ಇತ್ತು. ಅನೇಕ ಕಡೆ ಜನತೆ ಕೆಲವೇ ದಿನಗಳ ಮಟ್ಟಿಗೆ 'ಸ್ವರಾಜ್ಯ' ಸ್ಥಾಪಿಸಿದರು.

ಅಮವಾರಿ, ಜಯಜೋರೀ ಮುಂತಾದ ಸ್ಥಳಗಳ ರೈತರು ಮಾತ್ರ ಈ ನೆರೆಯಲ್ಲಿ ಕೊಚ್ಚಿ ಹೋಗಲಿಲ್ಲ. ಚಳವಳಿಕಾರರು ಸಿಟ್ಟಿನಿಂದ ಕೂಗಾಡಿದರೆ ಅವರ ಉತ್ತರ ಸಿದ್ಧವಿತ್ತು. "ಹೋರಾಟಕ್ಕೆ ರಾಹುಲ್ ಬಾಬಾನ ಹುಕುಂ ತನ್ನಿ. ಆಗ ಬರುತ್ತೇವೆ"

1942ರ ನವೆಂಬರದಲ್ಲಿ ರಾಹುಲರು ಪ್ರಯಾಗ – ದೆಹಲಿ ಮಾರ್ಗವಾಗಿ ಮುಂಬಯಿ ತಲುಪಿದರು. ಅವರಿಗೆ ಲೋಲಾ ಮತ್ತು ಇಗೋರರ ಚಿಂತೆಯಾಗಿತ್ತು. ಆದರೆ ಮುಂಬಯಿ ತಲುಪಿದ ಕೆಲ ದಿನಗಳಲ್ಲಿಯೇ ಡಾ| ಶ್ಚೆರ್‌ವಾತ್‌ಸ್ಕೀಯ ನಿಧನದ ವಾರ್ತೆ. ರಾಹುಲರು ಅವರನ್ನು ಭಾರತೀಯ ದರ್ಶನ ಮತ್ತು ಸಂಸ್ಕೃತ ಭಾಷೆಯ ಅತ್ಯಂತ ದೊಡ್ಡ ವಿದ್ವಾಂಸರೆಂದು ಗೌರವಿಸುತ್ತಿದ್ದರು. ಅವರಿಗಂತೂ ರಾಹುಲರೆಂದರೆ ಅಪಾರ ಪ್ರೀತಿ. ರಾಹುಲರನ್ನು ಲೆನಿನ್‌ಗ್ರಾಡ್‌ಗೆ ಕರೆಸಿಕೊಳ್ಳಲು ಅವರು ಪ್ರಯತ್ನಿಸುತ್ತಲೇ ಇದ್ದರು. ಆದರೆ ಮಹಾಯುದ್ಧದ ಪರಿಸ್ಥಿತಿಗಳಿಂದಾಗಿ ಅದು ಸಾಧ್ಯವಾಗಲಿಲ್ಲ.

ಮುಂಬಯಿಯಲ್ಲಿ ಕಳೆದ ಸುಮಾರು ಮೂರುವರೆ ತಿಂಗಳಿನಲ್ಲಿ ರಾಹುಲರು ಕೆಲ ಮಾರ್ಕ್ಸ್‌ವಾದಿ ಸಾಹಿತ್ಯದ ಅನುವಾದದಲ್ಲಿ ಸಹಕರಿಸಿದರು, ಅನೇಕ ಸಿನೆಮಾಗಳನ್ನು ನೋಡಿದರು, "ನಯೆ ಭಾರತಕೆ ನಯೆ ನೇತಾ" ಪುಸ್ತಕ ಬರೆಯಲು ಹವಣಿಸಿದರು. ಹಜಾರೀಬಾಗ್ ಮತ್ತು ದೇವಲೀ ಜೈಲು ವಾಸದಲ್ಲಿಯೇ ಅವರಿಗೆ ಸಿಗರೇಟಿನ ಅಭ್ಯಾಸವಾಗಿತ್ತು. ಮುಂಬಯಿಂದ ಪುನಃ ಬಿಹಾರಕ್ಕೆ ಛಪರಾದಲ್ಲಿ ಅವರಿಗೆ ಸ್ವಂತ ಮನೆಯಂತೆಯೇ ಇರುವ ಪಂಡಿತ ಗೋರಖನಾಥ ತ್ರಿವೇದಿಯವರ ಮನೆಯಲ್ಲಿ ಸಾವಿರಾರು ರುಪಾಯಿ ಬೆಲೆಬಾಳುವ ಆಭರಣ ಮತ್ತು ಬಟ್ಟೆ ಕಳವಾಗಿದೆ ಎಂಬ ಸುದ್ದಿ. ಆ ಮನೆಯಲ್ಲಿ ಕಾಗದ ಪತ್ರ, ಪುಸ್ತಕಗಳು ಮತ್ತು ಬಟ್ಟೆಗಳಿಂದ ತುಂಬಿದ ರಾಹುಲರ ಎರಡು ಮೂರು ದೊಡ್ಡ ದೊಡ್ಡ ಪೆಟ್ಟಿಗೆಗಳಿದ್ದುವು. ಕಳ್ಳರು ಬೆಲೆಬಾಳುವಂಥವು ಇರಬಹುದೆಂದು ಅವುಗಳನ್ನು ಗದ್ದೆಗೆ ಹೊತ್ತು ತಂದು ತೆರೆದರೆ ಕಂಡದ್ದು ರಾಶಿರಾಶಿ ಪುಸ್ತಕಗಳು ಮತ್ತು ಕೆಲ ಬಟ್ಟೆಗಳು ! ಬಟ್ಟೆ ತೆಗೆದುಕೊಂಡು ಪುಸ್ತಕಗಳನ್ನು ಅಲ್ಲೇ ಎಸೆದು ಹೋಗಿದ್ದರು. "ನನ್ನ ನಿಜವಾದ ಸಂಪತ್ತನ್ನು ಅವರು ಮುಟಲಿಲ್ಲವಲ್ಲ ಎಂದು ಬಹಳ ಸಂತೋಷವಾಯಿತು. ಅದರಲ್ಲಿ ಅನೇಕ ವರ್ಷಗಳ ಡೈರಿಗಳಿದ್ದುವು" ಎಂದಿದ್ದಾರೆ ರಾಹುಲರು.

1943ರ ಏಪ್ರಿಲ್ 9ರ ದಿನ ಬಂತು. ರಾಹುಲರು ಈ ದಿನವನ್ನು ಎಷ್ಟು ಕಾತರದಿಂದ ಎದುರು ನೋಡುತ್ತಿದ್ದರೋ ಅತ್ತ ಅಜಮ್‌ಗಢ ಜಿಲ್ಲೆಯ ಅವರ ಬಂಧು ಬಾಂಧವರೂ ಅಷ್ಟೇ ಕಾತರದ ಪ್ರತೀಕ್ಷೆಯಲ್ಲಿದ್ದರು. 1916ರಲ್ಲಿ ತಮ್ಮ ಇಪ್ಪತ್ತಮೂರು ವರ್ಷ ವಯಸ್ಸಿನಲ್ಲಿ ತಮಗೆ ಐವತ್ತು ವರ್ಷ ತುಂಬುವವರೆಗೂ ಆಜಮ್‌ಗಢ್ ಜಿಲ್ಲೆಗೆ ಕಾಲಿಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದ ರಾಹುಲರಿಗೆ ಈಗ ಐವತ್ತು ವರ್ಷ, ಆಜಮಗಢ್ ಜಿಲ್ಲೆಗೆ ಹೋಗಲು ಅವರು ಈಗ ಸ್ವತಂತ್ರರು.

ನಾಗಾರ್ಜುನರನ್ನು ಜೊತೆಗೆ ಕರೆದುಕೊಂಡು ರಾಹುಲರು ಏಪ್ರಿಲ್ 12ರಂದು ಛಪರಾದಿಂದ ಆಜಮಗಢಕ್ಕೆ ಒಂದು ವಾರದ 'ತೀರ್ಥಯಾತ್ರೆ'ಗಾಗಿ ಹೊರಟರು. ಆಜಮಗಢ ಸ್ಟೇಶನಿನಲ್ಲಿ ಮುದ್ರಾತಜ್ಞ ಪರಮೇಶ್ವರೀ ಲಾಲ ಗುಪ್ತರು ಅವರನ್ನು ಎದುರುಗೊಂಡರು. ಆಜಮಗಢದ ಹಳೆಯ ಪರಿಚಯದ ಸ್ಥಳಗಳನ್ನೆಲ್ಲ ನೋಡಿ ರಾಣೀ ಕೀ ಸರಾಯ್‌ಗೆ ಹೋದರು. ತಾನು ಕಲಿತ ಆ ಹಳೆಯ ಶಾಲೆಯನ್ನು ನೋಡಿ ಹುಟ್ಟಿದೂರು ಪಂದಹಾಕ್ಕೆ ಹೋದರು. ಅಲ್ಲಿ ಮುದಿಯ ಕಮ್ಮಾರಜ್ಜ ನೋಡಿದವನೇ "ಕುಲವಂತಿಯ ಮಗ–ಕೇದಾರ !" ಎಂದು ಆಲಿಂಗಿಸಿಕೊಂಡ. ಪಂದಹಾ ಮತ್ತು

ಆಸುಪಾಸಿನ ಪ್ರದೇಶಗಳಲ್ಲೆಲ್ಲ ಸುತ್ತಾಡಿ ಬಂದರು. ನಿಜಾಮಾಬಾದಿಗೂ ಹೋದರು. ಆಚೀಚಿನ ಹಳ್ಳಿಗಳ ಪೇಟೆ ಕೇರಿ ಓಣಿಯವರೆಲ್ಲ ಮಹಾಪಂಡಿತ ರಾಹುಲ ಸಾಂಕೃತ್ಯಾಯನರನ್ನು ನೋಡಲು ಪಂದಹಾಕ್ಕೆ ಬರತೊಡಗಿದರು.

ಕನ್ನೈಲಾಕ್ಕೂ ಸುದ್ದಿ ತಲುಪಿತ್ತು. ತಮ್ಮ ಶಾಮಲಾಲ ಸೈಕಲ್ ಮೇಲೆ ಪಂದಹಾಕ್ಕೆ ಬಂದ. ಕನ್ನೈಲಾಕ್ಕೆ ಹೋಗಲು ರಾಹುಲರು ಒಪ್ಪಲಿಲ್ಲವಾದರೂ ಅಲ್ಲಿನ ಜನ ಗುಂಪುಗುಂಪಾಗಿ ಹದಿನಾರು ಕಿಲೋಮೀಟರು ನಡೆದು ಪಂದಹಾಕ್ಕೆ ಬರುತ್ತಿರುವುದನ್ನು, ಆ ಗುಂಪಿನಲ್ಲಿ ಅವರ ಒಬ್ಬ ವೃದ್ಧ ಸಂಬಂಧಿಕನೂ ಇರುವುದನ್ನು ಕಂಡು ಮನಸ್ಸು ತಡೆಯದೆ ಅಲ್ಲಿಗೆ ಹೋದರು. ಅಲ್ಲಿ ಒಂದು ದಿನ ಮಾತ್ರ ಇದ್ದರು. ಅಂದು ಭೋಜನದ ಬಳಿಕ ಸೆರಗಿನಡ್ಡ ಮುಖ ಮರೆಸಿಕೊಂಡ ಆಕೃತಿಯೊಂದು ರಾಹುಲರ ಕಾಲ ಬಳಿ ಕುಸಿಯಿತು. ಕುಸಿದು, ಇನ್ನೇನು ಅಳಲು ತೊಡಗಬೇಕು, ಅಷ್ಟರಲ್ಲಿ ಅವರು ಥಟ್ಟನೆದ್ದು ನಡೆದು ಬಿಟ್ಟರು. ಆಕೆ ಬೇರೆ ಯಾರೂ ಅಲ್ಲ, ಹನ್ನೊಂದು ವರ್ಷದ ಎಳೆಯ ವಯಸ್ಸಿನಲ್ಲಿ ಅವರೊಂದಿಗೆ ಮದುವೆ ಮಾಡಿಸಿ ಬಿಟ್ಟ ಅವರ ಪತ್ನಿಯಾಗಿದ್ದಳು.

ಆ ರಾತ್ರಿ ಅವರು ನಾಗಾರ್ಜುನರೊಂದಿಗೆ ಬಛವಲ್‌ಗೆ ಹೋಗಿ ಉಳಿದುಕೊಂಡರು. ಅಲ್ಲಿ ಬಾಲ್ಯಮಿತ್ರ ಯೋಗೇಶರೂ ಸಿಕ್ಕಿದರು. ಆಜಮ್‌ಗಢ ಜಿಲ್ಲೆಯಲ್ಲಿ ಒಂದು ವಾರವಿದ್ದು ಇಬ್ಬರೂ ಏಪ್ರಿಲ್ 19ರಂದು ಅಲ್ಲಿಂದ ಹೊರಬಿದ್ದರು. ಬೇಸಗೆ ಆರಂಭವಾಗಿತ್ತು. ಉತ್ತರಾಖಂಡದ ಯಾತ್ರೆಗಾಗಿ ಹರಿದ್ವಾರಕ್ಕೆ ಹೋಗಿ ಅಲ್ಲಿಂದ ಮುಂದೆ ಉತ್ತರ ಕಾಶಿಯವರೆಗೂ ಹೋದರು. ರಾಹುಲರಿಗೆ ಮೂರು ನಾಲ್ಕು ವಾರಗಳಲ್ಲಿ ಹಿಂದೆ ಬರಬೇಕಿತ್ತು. ಆದರೆ ನಾಗಾರ್ಜುನರಿಗೆ ಟಿಬೇಟಿನ ಗಡಿ ಪ್ರದೇಶದಲ್ಲಿರುವ ಥೋಲಿಜಿಸ್ಥಾನಕ್ಕೆ ಹೋಗಿ ಅಲ್ಲಿ ಟಿಬೇಟಿ ಭಾಷೆ ಅಧ್ಯಯನ ಮಾಡಬೇಕೆಂಬ ಅಭಿಲಾಷೆ ಇತ್ತು. ಸೇಲಚಿನಿಂದ ಥೋಲಿಜಿನ ಕಡೆಗೆ ಹೋಗುತ್ತಿರುವಾಗ ಒಂದು ಹಗ್ಗದ ಸಂಕ ದಾಟುತ್ತಿದ್ದಂತೆ ದುರ್ಘಟನೆಯೊಂದು ಸಂಭವಿಸಿತು. ರಾಹುಲರು ಅಲ್ಲಿಂದಲೇ ಹಿಂದೆ ಬರಲು ತೀರ್ಮಾನಿಸಿ ನಾಗಾರ್ಜುನರಿಗೂ ವಾಪಸ್ ಹೊರಡಲು ಹೇಳಿದರು. "ಆದರೆ ಅವರ ಸಂಕಲ್ಪ ಬಹಳ ದೃಢವಾಗಿತ್ತು. ಅದನ್ನು ಬಿಡಲು ಮನಸ್ಸಿರಲಿಲ್ಲ" ನಾಗಾರ್ಜುನರು ಥೋಲಿಜಗೆ ಹೋಗಿಯೇ ವಾಪಸಾದರು.

ರಾಹುಲಜೀ ಮಸ್ಸೂರಿ ದಾರಿಯಾಗಿ ಡೆಹರೂಡ್‌ನ್‌ಗೆ ಹಿಂದಿರುಗಿದರು. ಅಲ್ಲೇ ಅವರು ಆನಂದಜೀ ಅವರನ್ನು ಭೇಟಿಮಾಡಿದರು. ಇಬ್ಬರೂ ಸೇರಿ ಜೌನ್‌ಸಾರ್, ಕಾಲಸೀ ಮುಂತಾದ ಕಡೆಗೆ ಹೋಗಿ ಬಂದರು. ರಾಹುಲರು ಹರಿದ್ವಾರದಲ್ಲಿ ಕೆಲದಿನ ಇದ್ದುಕೊಂಡು ಸನ್ಯಾಸಿ ಪರಿಷತ್ತುಗಳ ವ್ಯವಸ್ಥೆಯ ಬಗ್ಗೆ ಅಧ್ಯಯನ ಮಾಡಿ "ಸನ್ಯಾಸೀ ಅಖಾಡೋಂ ಕಾ ಜನತಂತ್ರತಾ" ಎಂಬ ಲೇಖನ ಬರೆದರು. ಈ ಲೇಖನ ಅವರ ಸಾಹಿತ್ಯ ನಿಬಂಧಾವಲೀಯಲ್ಲಿದೆ.

"ಒಟ್ಟಿಗೆ ಇರಲೇ ಬೇಕು. ಲೆನಿನ್‌ಗ್ರಾಡಿಗೆ ಬಾ. ಇಲ್ಲ, ಅಲ್ಲಿಗೆ ನಮ್ಮನ್ನು ಕರೆಸಿಕೊಳ್ಳುವ ಏರ್ಪಾಡು ಮಾಡು" ಎಂದು ಲೋಲಾಳ ತಂತಿ ಬಂದಿದೆ ಎಂಬ ಸುದ್ದಿ ಸಿಕ್ಕಿ ರಷ್ಯಾಕ್ಕೆ ಹೋಗಲು ಚಡಪಡಿಸಿದರು ರಾಹುಲಜೀ. ಹೊಸ ಪಾಸ್‌ಪೋರ್ಟ್ ಮಾಡಿಸಲಿಕ್ಕಾಗಿ ಮುಂಬಯಿಗೆ ಹೋದರು. ಅಲ್ಲಿ ಸ್ನೇಹಿತರ ಸಹಾಯದಿಂದ ಪಾಸ್‌ಪೋರ್ಟ್ ಫಾರ್ಮ್ ತುಂಬಿಸುವ ಕೆಲಸ ಮುಗಿಯಿತು. ಇನ್ನಿರುವುದು ನಿರೀಕ್ಷೆ. "ನಯೇ ಭಾರತ್ ಕೇ ನಯೇ ನೇತಾ" ಬರಹಕ್ಕಾಗಿ ಸಾಮಗ್ರಿಯನ್ನು ಅಣಿಮಾಡಿಕೊಳ್ಳ ತೊಡಗಿದರು. ಪ್ರಯಾಗಕ್ಕೆ ಹೋಗಿ ಅಲ್ಲಿ ಕೆಲ ಜೀವನಚರಿತ್ರೆಗಳನ್ನು ಬರೆದರು. ನಂತರ "ನೇತಾರರನ್ನು" ಕಾಣುವುದು, ಮಾಹಿತಿ ಸಂಗ್ರಹಣೆ, ಇತ್ಯಾದಿಗಳಿಗಾಗಿ ಊರೂರು ಓಡಾಟ ಸುರುವಾಯಿತು.

ಕಾನ್ಪುರದಲ್ಲಿ ನಡೆದ ಕವಿ ಸಮ್ಮೇಳನದ ಅಧ್ಯಕ್ಷತೆ ವಹಿಸಲು ಹೋದವರು ಅಲ್ಲಿ ಕಾರ್ಮಿಕ ಮುಖಂಡ ಯುಸುಫ್ (ಸಂತಸಿಂಹ)ರ ಜೊತೆ ರಾತ್ರಿಯಿಡೀ ಕುಳಿತುಕೊಂಡು ಅವರ ಜೀವನ ಚರಿತ್ರೆಯ ಟಿಪ್ಪಣಿ ಮಾಡಿಕೊಂಡರು. ಮಿತ್ರ ಭಾರಧ್ವಾಜರು ಭುವಾಲಿಯಲ್ಲಿಯೂ ಪಂಡಿತ ಸುಮಿತ್ರಾನಂದನ ಪಂತರು ಅಲ್ಮೋರಾದಲ್ಲಿಯೂ ಇದ್ದರು. ರಾಹುಲರು ಅವರಿಬ್ಬರ ಬಳಿಗೂ ಹೋಗಿ ಬಂದರು. ಅಲ್ಮೋರಾದಲ್ಲಿ ಕಾಮ್ರೇಡ್ ಪೂರ್ಣಚಂದ್ರ ಜೋಶಿ ಹುಟ್ಟಿದ ಮನೆಯನ್ನು ನೋಡಲು ಹೋದರು. ಬಳಿಕ ಬಾಬಾ ಸೋಹನ ಸಿಂಹ ಭಕನಾ ಮತ್ತು ಬಾಬಾ ಬಸಾಖಾ ಸಿಂಹರ ಜೀವನ ಕಥೆಗಳ ಟಿಪ್ಪಣಿ ಮಾಡಿಕೊಳ್ಳಲು ಪಂಜಾಬಿಗೆ ಹೋದರು. ರಾವಲ್ಪಿಂಡಿಗೆ ಹೋಗುತ್ತ ಶೇಖ್ ಅಬ್ದುಲ್ಲಾ ಅವರ ಜೀವನ ವೃತ್ತಾಂತದ ಟಿಪ್ಪಣಿಗಾಗಿ ಶ್ರೀನಗರಕ್ಕೂ ಭೇಟಿಯಿತ್ತು ಅವರನ್ನು ಕಂಡರು. ಅಲಹಾಬಾದಿಗೆ ಹಿಂದಿರುಗಿ ಎಲ್ಲಾ ಜೀವನ ಚರಿತ್ರೆಗಳನ್ನು ಬರೆದು ಮುಗಿಸಿ ಪ್ರೆಸ್ಸಿಗೆ ಕೊಟ್ಟುಬಿಟ್ಟರು !

1944ರ ಜನವರಿ ಆರಂಭದಲ್ಲಿ ಸರಕಾರ ಪಾಸ್‌ಪೋರ್ಟ್ ನೀಡಿದೆಯೆಂದು ಮುಂಬಯಿಯಿಂದ ಸುದ್ದಿ ಬಂತು. ಆದರೆ ಈ ಪಾಸ್‌ಪೋರ್ಟ್ ಇರಾನ್ ಮಾರ್ಗವಾಗಿ ಹೋಗಲು ಮಾತ್ರ ಅನುಮತಿ ಕೊಡುತ್ತದೆ ಎಂಬುದರೊಂದಿಗೆ ಇರಾನ್ ಹಾಗೂ ಸೋವಿಯತ್‌ನ ವೀಸಾ ಸಿಗುವವರೆಗೂ ಇದನ್ನು ಉಪಯೋಗಿಸುವಂತಿಲ್ಲ ಎಂಬ ಷರತ್ತಿದೆ – ಎಂಬುದೆಲ್ಲಾ ತಿಳಿದದ್ದು ಅವರು ಮುಂಬಯಿ ತಲುಪಿದ ಮೇಲೆಯೇ.

ಭಾರತದಲ್ಲಿ ರಷ್ಯಾ ದೇಶದ ಕೌನ್ಸಿಲ್ ಇರಲಿಲ್ಲ, ಆದರೆ ಇರಾನಿನಲ್ಲಿತ್ತು. ಮುಂಬಯಿಯಲ್ಲಿ ಇರಾನಿನ ಕೌನ್ಸಿಲ್ ಇದ್ದರೂ ಸೋವಿಯತ್ ವೀಸಾ ನೋಡದೆ ಇರಾನಿನ ವೀಸಾ ಕೊಡಬೇಡಿ ಎಂದು ಸರಕಾರ ಅಲ್ಲಿಗೆ ಬರೆದಿತ್ತು. ತಾತ್ಪರ್ಯ ಏನೆಂದರೆ ಸರಕಾರ ಪಾಸ್‌ಪೋರ್ಟ್ ಕೊಡುವುದಕ್ಕೂ ಕೊಟ್ಟಿತು, ರಾಹುಲರು ಹಿಂದುಸ್ತಾನದಿಂದ ಹೊರಹೋಗದಂತೆ ವ್ಯವಸ್ಥೆಯನ್ನೂ ಮಾಡಿತು. ಪುನಃ ಓದು-ಬರವಣಿಗೆ. ಒಂಭತ್ತು ತಿಂಗಳ ಮೇಲೆ ವೀಸಾದ ತೊಡಕು ಬಿಡಿಸಿಕೊಂಡಿತಾದರೂ ಅಷ್ಟರವರೆಗೆ ರಾಹುಲರು ಕೈಕಟ್ಟಿ ಕೂರಲಿಲ್ಲ. ತಮ್ಮ ಒಂದೊಂದು ನಿಮಿಷವನ್ನೂ ಸದುಪಯೋಗ ಪಡಿಸಿಕೊಂಡರು.

ಗ್ವಾಲಿಯರ್, ಇಂದೋರ್, ದೆಹಲಿ, ಉಜ್ಜೈನಿ ಎಲ್ಲ ಕಡೆ ತಿರುಗಿ ಮುಂಬಯಿಗೆ ಬಂದವರು, ಸೋವಿಯತ್ ಸರಕಾರಕ್ಕೆ ಟೆಹರಾನ್ ಮತ್ತು ಕಾಬುಲ್‌ನ ಕೌನ್ಸಿಲುಗಳ ವೀಸಾ ಕೊಡಲು ಸೋವಿಯತ್ ಸರಕಾರ ಆದೇಶ ನೀಡುವಂತೆ ಕೇಳಿಕೋ ಎಂದು ಲೋಲಾಳಿಗೆ ಅನೇಕ ತಂತಿ ಕೊಟ್ಟರು.

ಆ ವರ್ಷ ಮಾರ್ಚ್‌ನಲ್ಲಿ ಬೆಜವಾಡ (ಆಂಧ್ರಪ್ರದೇಶ)ದಲ್ಲಿ ನಡೆಯಲಿದ್ದ ಕಿಸಾನ್ ಸಮ್ಮೇಳನದಲ್ಲಿ ಭಾಗವಹಿಸಲು ರಾಹುಲರು, ಡಾ। ಅಧಿಕಾರಿ, ಸರ್ದಾರ್ ಪೃಥಿವೀ ಸಿಂಹ ಮುಂತಾದವರ ಜೊತೆಗೆ, ರೈಲಿನಲ್ಲಿ ಪಯಣಿಸುತ್ತಿರುವಾಗ ಸರ್ದಾರ ಪೃಥಿವೀ ಸಿಂಹರ ಟೈಪ್ ಮಾಡಿದ ಜೀವನ ಕತೆ ಓದಿ ಅದರ ಮೇಲೆ ಒಂದು ಪುಸ್ತಕ ಬರೆಯಲು ನಿರ್ಧರಿಸಿದರು. ಕಿಸಾನ್ ಸಮ್ಮೇಳನದ ನಂತರ ಆಂಧ್ರ ಪ್ರದೇಶದ ಧಾನ್ಯಕಟಕ, ನಾಗಾರ್ಜುನಕೊಂಡ ಮುಂತಾದ ಪುರಾತನ ಸ್ಥಳಗಳನ್ನು ನೋಡಿಕೊಂಡು ಬಂದರಲ್ಲದೆ ಆಂಧ್ರದ ಗ್ರಾಮೀಣ ಜನಜೀವನ ಮತ್ತು ಲಂಬಾಣಿ ವ್ಯಾಪಾರಿಗಳ ಬದುಕಿನ ಅಧ್ಯಯನ ಮಾಡಿದರು. ಆ ನಂತರ ಕೇರಳ ಹಾಗೂ ಮಲಬಾರು ಪ್ರದೇಶಗಳಲ್ಲಿ ತಿರುಗಾಡಿದರು. ಮಲಬಾರಿನ ನಂಬೂದಿರಿ ಬ್ರಾಹ್ಮಣರ ಜೀವನ ಸಂಸ್ಕೃತಿಯನ್ನು ಹತ್ತಿರದಿಂದ ನೋಡಿದ್ದಾಯಿತು. ಎಲ್ಲಾ ಕಡೆಗಳಲ್ಲಿಯೂ

ರಾಹುಲರಿಗೆ ಭಾರೀ ಸ್ವಾಗತ. ತೆಲುಗು ಮತ್ತು ಮಲೆಯಾಳಂಗೆ ರಾಹುಲರ ಅನೇಕ ಪುಸ್ತಕಗಳು ಅನುವಾದವಾಗಿವೆ.

ರಾಹುಲಜೀ ಮುಂಬಯಿಗೆ ಹಿಂದಿರುಗಿದರು. 1944ರ ಏಪ್ರಿಲ್ 14. ಮದ್ದುಗುಂಡಿನ ಸಂಗ್ರಹ ಭಯಂಕರವಾಗಿ ಸ್ಫೋಟಗೊಂಡಿತು. ಹಡಗುಗಳು ಸಿಡಿದು ಅನೇಕರ ಸಾವು, ಗಾಯ, ಕಟ್ಟಡಗಳಿಗೆ ಬೆಂಕಿ–ಇತ್ಯಾದಿ ಘಟನೆಗಳು ಸಂಭವಿಸಿದುವು.

ಆ ದಿನಗಳಲ್ಲಿ ರಾಹುಲರು ಹೆಚ್ಚಾಗಿ ಸಿನೆಮಾ ನೋಡಲು ಹೋಗುತ್ತಿದ್ದರು. ಆ ಸಲದ ಮುಂಬಯಿ ವಾಸದಲ್ಲಿಯೇ "ಸರ್ದಾರ ಪೃಥಿವೀ ಸಿಂಹ" ಪುಸ್ತಕ ಬರೆದರು. ವೀಸ ಸಿಗುವುದು ತಡವಾಗುತ್ತ ಇತ್ತು. ಆದುದರಿಂದ ಭಾರತೀಯ ವಿದ್ಯಾಭವನದಲ್ಲಿ ತಂಗಿ "ಹಿಂದೀ ಕಾವ್ಯಧಾರಾ" ಬರವಣಿಗೆಗೆ ಕೈ ಹಚ್ಚಿದರು. ಈ ಪುಸ್ತಕ ಪೂರ್ತಿಯಾಯಿತೆಂದರೆ "ಜಯ ಯೌಧೇಯ", ಬಳಿಕ "ಭಾಗೋ ನಹೀಂ, ದುನಿಯಾ ಕೋ ಬದಲೋ", ಅನಂತರ 1944ರ ಸೆಪ್ಟಂಬರ್ ವರೆಗಿನ ತಮ್ಮ ಜೀವನ ವೃತ್ತಾಂತವಿರುವ "ಜೀವನಯಾತ್ರಾ"ದ ಎರಡನೆಯ ಭಾಗ.

"ಹಿಂದೀ ಕಾವ್ಯಧಾರಾ" ವಸ್ತುತಃ "ಸಿದ್ಧ–ಸಾಮಂತ–ಯುಗ"ದ ಸರಹಪಾ ಸ್ವಯಂಭೂ, ಕಣ್ಹಪಾ ಮುಂತಾದ ಅನೇಕ ಕವಿಗಳ ಕಾವ್ಯ ನಮೂನೆಗಳನ್ನು (ಹಿಂದೀ ಛಾಯಾನುವಾದ ಸಹಿತ) ಪ್ರಸ್ತುತಪಡಿಸಿದ "ಅಪಭ್ರಂಶ ಕಾವ್ಯಧಾರೆ" ಗೆ ರಾಹುಲರು ವಿಸ್ತಾರವಾದ ಪೀಠಿಕೆಯನ್ನು ಬರೆದಿದ್ದಾರೆ.

ಐತಿಹಾಸಿಕ ಕಾದಂಬರಿ "ಜಯ ಯೌಧೇಯ"ದಲ್ಲಿ ಯೌಧೇಯ ಗಣದ ವೀರ ಜಯನ ಜೀವನ ವೃತ್ತಾಂತವಿದೆ. "ಭಾಗೋ ನಹೀಂ (ದುನಿಯಾ ಕೋ) ಬದಲೋ" ಒಂದು ಕ್ರಾಂತಿಕಾರಿ ಕೃತಿ. ಅಲ್ಪಸ್ವಲ್ಪ ಓದುಬರಹ ಬಲ್ಲ ಜನರಿಗೆ ರಾಜಕೀಯದ ಹೊಂಚು ಸಂಚುಗಳ ಅರಿವು ಮೂಡಿಸಲಿಕ್ಕಾಗಿ ಬರೆದದ್ದು. ಹೀಗಾಗಿ ಪುಸ್ತಕದ ಹೆಸರು ಒಂದು ಘೋಷಣೆಯ ರೂಪದಲ್ಲಿದೆ. ಆಡುಭಾಷೆಯ ಸರಳ ಶಬ್ದ ಪ್ರಯೋಗವುಳ್ಳ ಈ ಪುಸ್ತಕ ಅತ್ಯಂತ ಜನಪ್ರಿಯವಾಗಿದೆ.

ಕೊನೆಗೂ 1944ರ ಸೆಪ್ಟೆಂಬರ್ 29ರಂದು ವೀಸಾ ಬಂತು. ರಾಹುಲರು ಇರಾನ್ ಮಾರ್ಗವಾಗಿ ಸೋವಿಯತ್‌ಗೆ ಹೊರಡುವ ತಯಾರಿ ನಡೆಸಿದರು. ತಯಾರಿ ಮುಗಿದ ಮೇಲೆ ಅಕ್ಟೋಬರ್ 27ರಂದು ಮುಂಬಯಿ ಸೆಂಟ್ರಲ್ ಸ್ಟೇಶನ್ ತಲುಪಿ ಅಹಮದಾಬಾದ್ ರೈಲು ಹಿಡಿದರು. ಬೀಳ್ಕೊಡಲು ಅನೇಕ ಸ್ನೇಹಿತರು ಬಂದಿದ್ದರು.

ಅಹಮದಾಬಾದ್ ಮತ್ತು ಹೈದರಾಬಾದ್‌ನಲ್ಲಿ ಗಾಡಿ ಬದಲಿಸಿ ಅಕ್ಟೋಬರ್ 31ರಂದು ಕ್ವೆಟ್ಟಾ ತಲುಪಿದರು. ಜೊತೆಯಲ್ಲಿ ಎರಡು ಮಣಕ್ಕೂ ಹೆಚ್ಚು ಲಗೇಜು ಇತ್ತು. ರೋಲ್‌ಫ್ಲೆಕ್ಸ್ ಕೆಮರಾಕ್ಕೆ ಮುಂದೆ ಪ್ರಯಣಿಸಲು ಅನುಮತಿ ಸಿಗಲಿಲ್ಲ. ಅದನ್ನು ಕ್ವೆಟ್ಟಾದಲ್ಲಿಯೇ ಒಬ್ಬರ ಹತ್ತಿರ ಬಿಡಬೇಕಾಗಿ ಬಂದು ರಾಹುಲರಿಗೆ ಬಹಳ ಬೇಸರವಾಯಿತು. ಜಪಾನ್, ರಷ್ಯಾ ಹಾಗೂ ಟಿಬೆಟ್ ಪ್ರವಾಸಗಳಲ್ಲಿ ಜೊತೆಗೇ ಇದ್ದ ಕೆಮರಾ ಅದು. ಟಿಬೆಟಿನಲ್ಲಿ ಒಮ್ಮೆ ಜೀವ ಕೂಡ ಉಳಿಸಿತು. ಆಮೇಲೆ ಅದು ರಾಹುಲರಿಗೆ ಸಿಗಲೇ ಇಲ್ಲ !

ಕ್ವೆಟ್ಟಾದಿಂದ ನೋಕಕುಂಡಿಗೆ ಹೋಗುವ ರೈಲು ಹಿಡಿದರು. 1944ರ ನವೆಂಬರ್ 1ರಂದು ರಾತ್ರಿ ರೈಲು ಇರಾನ್‌ನ ಮೊದಲ ಸ್ಟೇಶನ್ ಮಿರ್ಜಾವಾ ತಲುಪಿತು.

# ರಷ್ಯಾದಲ್ಲಿ ಇಪ್ಪತ್ತೈದು ಮಾಸ

ಬಲೂಚಿಸ್ತಾನ-ಇರಾನ್ ಮೂಲಕ ಸೋವಿಯತ್ ರಷ್ಯಾ ತಲುಪುವ ಮಾರ್ಗ ರಾಹುಲರಿಗೆ ಪೂರ್ವ ಪರಿಚಿತ. ತಮ್ಮ ಪ್ರಥಮ ಸೋವಿಯತ್ ಪ್ರವಾಸದಲ್ಲಿ (1935) ಅವರು ಈ ಮಾರ್ಗವಾಗಿಯೇ ಭಾರತಕ್ಕೆ ಹಿಂದಿರುಗಿದ್ದರು. ಈ ಮಾರ್ಗವಾಗಿಯೇ ಎರಡನೆಯ ಬಾರಿಯೂ (1937) ರಷ್ಯಾಕ್ಕೆ ಹೋಗಿದ್ದರು. ಈಗ ಇದು ಅವರು ಇರಾನ್ ಮತ್ತು ಸೋವಿಯತ್ ನಾಡುಗಳಲ್ಲಿ ಮಾಡಿದ ಮೂರನೆಯ ಪ್ರವಾಸ.

ಸಾಕಷ್ಟು ಓಡಾಟ ಹಾಗೂ ನಿರೀಕ್ಷೆಯ ನಂತರ ಈ ಬಾರಿ ರಾಹುಲರಿಗೆ ಪ್ಯಾಸ್‌ಪೋರ್ಟ್ ಮತ್ತು ವೀಸಾ ದೊರೆತಿತ್ತು. ಆದರೆ ಉದ್ವಿಗ್ನತೆ ಇನ್ನೂ ಕಡಿಮೆಯಾಗಿರಲಿಲ್ಲ. ಟೆಹರಾನ್‌ಗೆ ಹೋಗಿ ರಷ್ಯಾದ ವೀಸಾ ಪಡೆಯಬೇಕಿತ್ತು. ದೊರೆತ ವಿನಿಮಯ ಕೇವಲ ನೂರಿಪ್ಪತ್ತೈದು ಪೌಂಡು. ಅದರಲ್ಲಿ ನೂರು ಪೌಂಡು ರಷ್ಯಾದಲ್ಲಿನ ವೆಚ್ಚಕ್ಕಾಗಿ. ಇರಾನಿನಲ್ಲಿ ಕೇವಲ ಇಪ್ಪತ್ತೈದು ಪೌಂಡು ಮಾತ್ರ. ಅಪತ್ಕಾಲಕ್ಕೆಂದು, ಒಂದು ಉಂಗುರ ಹಾಗೂ ಚಿನ್ನದ ಗಡಿಯಾರ ಚೈನಿನ ರೂಪದಲ್ಲಿ ಮೂರು ತೊಲ ಬಂಗಾರವನ್ನು ಜೊತೆಗೆ ತೆಗೆದಿಟ್ಟುಕೊಂಡಿದ್ದರು.

1944ರ ಅಕ್ಟೋಬರ್ 27ರಂದು ಮುಂಬಯಿ ಬಿಟ್ಟು ನವೆಂಬರ್ 7ರಂದು ರಾತ್ರಿ ಟೆಹರಾನ್ ತಲುಪಿದರು. ಯುದ್ಧದ ಕಾರಣ ಪ್ರತಿಯೊಂದು ಸಾಮಗ್ರಿಯೂ ಬಹಳ ಪ್ರಿಯವಾಗಿತ್ತು. ರಾತ್ರಿ ಒಂದು ಪ್ರಯಾಣಿಕರ ಬಂಗಲೆಗೆ ಹೋಗಿ ಲೆಕ್ಕ ಮಾಡಿದರೆ ಕೈಯಲ್ಲಿರುವ ಹಣ ಇರಾನ್‌ನಲ್ಲಿ ಅತಿ ಹೆಚ್ಚೆಂದರೆ ಹತ್ತು ದಿನ ಇರಲು ಸಾಕಾದೀತು ಅಷ್ಟೆ. ಮರುದಿನ ಸೋವಿಯತ್ ಕೌನ್ಸಿಲ್‌ಗೆ ಹೋಗಿ ನೋಡಿದರೆ, ವೀಸಾ ಬೇಗನೆ ಸಿಗುವ ಯಾವ ಉಮೇದೂ ಇಲ್ಲ. ಈಗೇನು ಮಾಡಬೇಕಾಯಿತು ? ಖರ್ಚನ್ನು ವಿಪರೀತ ಕಡಿಮೆ ಮಾಡಿದರು. ಹೇಗೂ ಹಿಂದೆ ಎರಡು ಬಾರಿ ಇರಾನ್ ಪ್ರವಾಸ ಮಾಡಿದ್ದರು. ಪಾರ್ಸಿ ಚೆನ್ನಾಗಿ ಬಲ್ಲವರು, ಎಂತಹ ಪರಿಸ್ಥಿತಿಯಲ್ಲಿಯೂ ಹೊಂದಿಕೊಳ್ಳುವಂತಹ ಅದ್ಭುತ ಸಾಮರ್ಥ್ಯ ಅವರಲ್ಲಿತ್ತು.

ಟೆಹರಾನ್‌ನಲ್ಲಿ ಸೋವಿಯತ್ ವೀಸಾ ಪಡೆಯಲು ತಡವಾಗಲಿಕ್ಕಿಲ್ಲ ಎಂದು ಮುಂಬಯಿ ಬಿಡುವ ಮೊದಲು ಯೋಚಿಸಿದ್ದರು. ಕೊನೆಗೂ 1945ರ ಜೂನ್ 2ರಂದು, ಯುರೋಪಿನಲ್ಲಿ ಮಹಾಯುದ್ಧ ಮುಗಿದ ಮೇಲಷ್ಟೇ ಸೋವಿಯತ್ ವೀಸಾ ಸಿಕ್ಕಿತು. ಅರ್ಥಾತ್ ರಾಹುಲರು ಸುಮಾರು ಏಳು ತಿಂಗಳು ಟೆಹರಾನ್‌ನಲ್ಲಿ ಉಳಿಯಬೇಕಾಗಿ ಬಂತು. ಆದರೆ ಸ್ನೇಹಿತರು ಸಹಾಯ ಮಾಡಿದರು, ಒಂದು ಇರಾನೀ ಕುಟುಂಬದ ಸ್ನೇಹಪೂರ್ಣ ಆತಿಥ್ಯ ದೊರೆಯಿತು, ಬಳಿಕ ಭಾರತದಿಂದ ದುಡ್ಡೂ ಬಂತು. ನಾಟಕ ಹಾಗೂ ಫಿಲ್ಮ್ ನೋಡುವುದರಲ್ಲಿ, ಓದುವುದರಲ್ಲಿ, ಅಲ್ಲಿನ ಜನಜೀವನವನ್ನು ನೋಡಿ ತಿಳಿಯುವುದರಲ್ಲಿ ದಿನವೇನೋ ಚೆನ್ನಾಗಿ ಕಳೆಯಿತು. ಜನಜೀವನವನ್ನು ನಿಕಟವಾಗಿ ನೋಡಿದ ಅನುಭವ ಮುಂದೆ "ಇರಾನ್" ಪುಸ್ತಕ ಬರವಣಿಗೆಯಲ್ಲಿ ಉಪಯೋಗವಾಯಿತು.

ಆದರೆ ಮಹಾಯುದ್ಧದ ಸಂಕಷ್ಟದ ದಿನಗಳಲ್ಲಿ ರಾಹುಲರು ರಷ್ಯಾಕ್ಕೆ ಹೊರಟಿದ್ದಕ್ಕೆ ಕಾರಣ ಏನಿತ್ತು? ಡಾ। ಶ್ಚೆರ್‌ವಾಸ್ಕೀ ತೀರಿಕೊಂಡಿದ್ದರು. ಪಾಸ್‌ಪೋರ್ಟ್ ಸಿಕ್ಕಿದ ಮೇಲಷ್ಟೇ ಲೆನಿನ್‌ಗ್ರಾಡ್ ವಿಶ್ವವಿದ್ಯಾಲಯದಲ್ಲಿ ಅವರು ಪ್ರಾಧ್ಯಾಪಕರಾಗಿ ನೇಮಕಗೊಂಡಿದ್ದರು. ಪ್ರಾಧ್ಯಾಪನದಲ್ಲಿ ಅವರಿಗೆ ಅಂಥ ಆಸಕ್ತಿಯೂ ಇರಲಿಲ್ಲ. ಮಧ್ಯ ಏಶಿಯಾದ ಇತಿಹಾಸ ಬರೆಯಲು ಸಾಮಗ್ರಿ ಸಂಗ್ರಹದ ವಿಚಾರ ಅವರಿಗೆ ಬಂದದ್ದೂ ಲೆನಿನ್‌ಗ್ರಾಡ್ ತಲುಪಿದ ನಂತರವೇ. ಹಾಗಾದರೆ ? ಲೋಲಾ ಮತ್ತು ಇಗೋರ ಜೊತೆ ಸೇರಿಕೊಳ್ಳುವುದೇ ಅವರು ಹೊರಟಿದ್ದರ ಮುಖ್ಯ ಕಾರಣವಾಗಿತ್ತು. ಲೆನಿನ್‌ಗ್ರಾಡ್‌ನ ಒಂಭೈನೂರು ದಿನಗಳ ಮುತ್ತಿಗೆಯ ಭೀಕರ ಸಂಕಟದ ದಿನಗಳಲ್ಲಿ ಲೋಲಾ ತೀರಾ ಕಷ್ಟದಿಂದ ಮಗನ ಹಾಗೂ ತನ್ನ ಪ್ರಾಣ ಉಳಿಸಿಕೊಂಡಿದ್ದಳು.

ಆದರೆ ಇತ್ತ ಭಾರತದಲ್ಲೇನಾಗಿತ್ತು ? ರಾಹುಲ ಬಾಬಾ ಬಿಹಾರದಲ್ಲಿ ಕಿಸಾನ್-ಮಜ್ದೂರ್ ಸತ್ಯಾಗ್ರಹದ ನೇತೃತ್ವದಲ್ಲಿದ್ದಾಗ ಅವರ ರಾಜಕೀಯ ವಿರೋಧಿಗಳು ಅವರನ್ನು 'ಪತಿತ'ರೆಂದು ಸಿದ್ಧಪಡಿಸಲು ಒಂದೇ ಸಮನೆ ಅವರ ವಿರುದ್ಧ ಪ್ರಚಾರ ನಡೆಸಿದ್ದರು. ರಷ್ಯಾದಲ್ಲಿ ರಾಹುಲರಿಗೆ ಹೆಂಡತಿ ಮತ್ತು ಮಗ ಇದ್ದಾರೆಂದು ವಿರೋಧಿಗಳಿಗೆ ಸುದ್ದಿ ತಿಳಿಯಿತು. ಅವರು ಲೋಲಾಳ ಕಾಗದ ಹಾಗೂ ಲೋಲಾ ಮತ್ತು ಇಗೋರರ ಫೋಟೋಗಳನ್ನು ಪ್ರತಿ ಮಾಡಿಸಿ ಪತ್ರಿಕೆಯಲ್ಲಿ ಪ್ರಕಟಿಸಿದರು. ರಾಹುಲರು ಪತಿತರೆಂದು ಸಾಬೀತು ಮಾಡಲು ಹೊರಟರು.

ರಾಹುಲರು ಇಂಥದ್ದಕ್ಕೆಲ್ಲ ವಿಚಲಿತರಾಗುವ ವ್ಯಕ್ತಿಯಾಗಿರಲಿಲ್ಲ. ಆದರೂ ಮನಸ್ಸಿಗೆ ತುಸುವಾದರೂ ಕ್ಲೇಶವುಂಟಾಗಿರಲೇ ಬೇಕು. ಕಿಸಾನ್ ಸತ್ಯಾಗ್ರಹದಲ್ಲಿ ಜೈಲು ಶಿಕ್ಷೆ ಮುಗಿಸಿ ಹೊರ ಬಂದು ಬನಾರಸು ತಲುಪಿದಾಗ ಹೀಗೆ ಬರೆದಿದ್ದಾರೆ "ರಾಮಕೃಷ್ಣದಾಸರು ಸಿಕ್ಕಿ ಆಲಂಗಿಸಿಕೊಂಡರು-ಪತಿತ್‌ಕಾ ಸ್ವಾಗತ್."

ಲೋಲಾ ಲೆನಿನ್‌ಗ್ರಾಡಿಗೆ ಬರಬೇಕೆಂದು ಆಗ್ರಹದಿಂದ ಬರೆದಿರುವಾಗ ರಾಹುಲರು ಅಲ್ಲಿಗೆ ಹೋಗಲು ಆಶಿಸಿದ್ದು ಸ್ವಾಭಾವಿಕವೇ. ಅಷ್ಟರಲ್ಲಿ ಅವರು ಕಮ್ಯುನಿಸ್ಟ್ ಪಕ್ಷದ ಸದಸ್ಯರೂ ಆಗಿ ಬಿಟ್ಟಿದ್ದರಷ್ಟೆ. ಸೋವಿಯತ್‌ಗೆ ಹೊರಡಲು ಕಮ್ಯುನಿಸ್ಟ್ ಮಿತ್ರರ ಪ್ರೇರಣೆಯೂ ಇತ್ತು. ಅವರೇ ಬರೆದಿದ್ದಾರೆ "1944ರ ನವೆಂಬರ್ 8ರಿಂದ 1945 ಜೂನ್ 3ರ ವರೆಗೆ ಏಳು ತಿಂಗಳು ಇರಾನಿನಲ್ಲಿ ನಾನು ಯಾವ ಸ್ಥಿತಿಯಲ್ಲಿ ಕಳೆಯಬೇಕಾಗಿ ಬಂತೋ ಅದನ್ನು ಅಸಹ್ಯ ನಿರೀಕ್ಷೆಯೆಂದೇ ಹೇಳಬೇಕು. ಎಷ್ಟೋ ಸಲ ಭಾರತಕ್ಕೆ ವಾಪಸು ಬಂದು ಬಿಡುವ ಅಂತಲೂ ಅನಿಸುತ್ತಿತ್ತು. ಆದರೆ ಭಾರತೀಯ ಮಿತ್ರರು ಇನ್ನು ಸ್ವಲ್ಪ ಕಾಲ ಇರಿ ಎಂದು ಪತ್ರ ಬರೆಯುತ್ತಿದ್ದರು. ಅಲ್ಲಿ ಸೋವಿಯತ್ ದೂತಾವಾಸದ ಬಾಗಿಲು ಕಾದುಕಾದು ಮನಸ್ಸು ರೋಸಿಹೋಗಿತ್ತು."

ಇರಲಿ, ಜರ್ಮನಿ ಶರಣಾದ ಕೆಲ ದಿನಗಳಲ್ಲಿಯೆ ರಾಹುಲರಿಗೆ ಸೋವಿಯತ್ ವೀಸಾ ಸಿಕ್ಕಿತು, ಹಣದ ವ್ಯವಸ್ಥೆಯೂ ಆಯಿತು. ಆದುದರಿಂದ 1945ರ ಜೂನ್ 3ರಂದು ಒಂದು ಸೈನಿಕ ವಿಮಾನವನ್ನೇರಿ ಇರಾನ್‌ನಿಂದ ಮಾಸ್ಕೋಗೆ ಹೊರಟರು. ಇದು ಅವರ ಪ್ರಥಮ ವಿಮಾನ ಪ್ರಯಾಣ. ಮರುದಿನ 301 ರುಬಲ್ (ಸುಮಾರು ರೂ.200)ನ ಎರಡನೇ ದರ್ಜೆ ರೈಲ್ವೆ ಟಿಕೇಟು ಪಡೆದು ಮಾಸ್ಕೋದಿಂದ ಲೆನಿನ್‌ಗ್ರಾಡಿಗೆ ಪ್ರಯಾಣ ಮಾಡಿದರು. ರೇಶನ್ ಕಾರ್ಡು ಹೊರತು ಎಲ್ಲ ವಸ್ತುಗಳೂ ದುಬಾರಿಯಾಗಿದ್ದುವು. ಮಾಸ್ಕೋದಿಂದ ಲೆನಿನ್‌ಗ್ರಾಡ್‌ವೆಗಿನ ರೈಲು ಪ್ರವಾಸದಲ್ಲಿ

"ಒಂದು ಲೆಮನೈಡ್ ಬಾಟ್ಲಿಗೆ ಹದಿನೇಳು ರುಬಲ್ (ಹತ್ತು ರುಪಾಯಿ) ಕೊಡಬೇಕೆಂದರೆ ಹೇಗಾಯಿತೆಂದು ಹೇಳಲಿ."

ಗಡಿಬಿಡಿಯಿಂದಾಗಿ ತಂತಿ ಕೊಡಲು ಆಗಿರಲಿಲ್ಲ. ಲೆನಿನ್‌ಗ್ರಾಡ್ ಮುಟ್ಟುತ್ತಲೂ ಮೊದಲು ಒಂದು ಹೋಟೆಲಿಗೆ ಹೋಗಿ ಅಲ್ಲಿಂದ ವಿಶ್ವವಿದ್ಯಾಲಯಕ್ಕೆ ಫೋನು ಮಾಡಿ ತಾವು ಬಂದಿರುವುದನ್ನು ತಿಳಿಸಿದರು. ಸ್ವಲ್ಪ ಹೊತ್ತಿನ ಮೇಲೆ ಲೋಲಾ ಮತ್ತು ಇಗೋರರನ್ನು ಅವರು ಕಂಡರು. "ಬಾಲಕ ಇಗೋರನನ್ನು 'ಸಿಗಾನ್' (ರೋಮನ್) ಎಂದು ಕರೆದರೆ ಆತ ಅಲ್ಲವೆನ್ನುತ್ತಾ ತಾನು ಇಂದುಸ್ (ಹಿಂದೂ) ಎನ್ನುತ್ತಿದ್ದ. ತನ್ನ ಸಮವಯಸ್ಕ(ಆರೂಮುಕ್ಕಾಲು ವರ್ಷ)ರೆಲ್ಲರಿಗಿಂತ ಎತ್ತರವಾಗಿದ್ದ. ಆದರೆ ಅಷ್ಟು ದಪ್ಪವೇನೂ ಇರಲಿಲ್ಲ. ನಾವು ಏನು ಮಾತಾಡಬಹುದಿತ್ತು ? ಈಗಲೋ, ಭಾಷೆಯ ಬಂಡವಾಳವೂ ಹೆಚ್ಚಿರಲಿಲ್ಲ. ಆದರೆ ಪ್ರೀತಿ ವ್ಯಕ್ತಪಡಿಸಲು ಭಾಷೆಯ ಅಗತ್ಯವಿರುವುದಿಲ್ಲ.

"ಲೋಲಾ ಏಳು ವರ್ಷದ ಹಿಂದೆ ನೋಡಿದ ಅದೇ ಲೋಲಾ ಆಗಿರಲಿಲ್ಲ; ಮುದುಕಿಯಂತೆ ಕಾಣಿಸುತ್ತಿದ್ದಳು. ಲೆನಿನ್‌ಗ್ರಾಡ್‌ಗೆ ಹಾಕಿದ ಒಂಭತ್ತು ತಿಂಗಳ ಮುತ್ತಿಗೆಯ ಪರಿಣಾಮ ಪರಿಚಿತರೆಲ್ಲರ ಮುಖದಲ್ಲಿಯೂ ಕಾಣಿಸುತ್ತಿತ್ತು."

ಸೋವಿಯತ್‌ಗೆ ರಾಹುಲರ ಪ್ರಥಮ ಭೇಟಿ (1935) ಕೇವಲ ರೈಲು ಪ್ರವಾಸದಲ್ಲಿಯೇ ಮುಗಿದಿತ್ತು. ಎರಡನೆಯ ಸಲ (1937-38) ಅವರು ಸುಮಾರು ಎರಡು ತಿಂಗಳ ಕಾಲ ಇದ್ದರು. ಆದರೆ ಈ ಮೂರನೆಯ ಪ್ರವಾಸ, ಅಪೇಕ್ಷಿಸದೇನೇ, ಪೂರಾ ಇಪ್ಪತ್ತೈದು ತಿಂಗಳವರೆಗೆ ಎಳೆಯಿತು. ಈ ಇಪ್ಪತ್ತೈದು ತಿಂಗಳ ರಷ್ಯಾವಾಸ ರಾಹುಲರ "ರೂಸ್ ಮೇಂ ಪಚ್ಚೀಸ್ ಮಾಸ್"-ಪುಸ್ತಕದಲ್ಲಿ (1951) ವಿವರವಾಗಿದೆ. ಈ ಪ್ರಕಟಿತ ಪುಸ್ತಕವೇ ಮುಂದೆ ಅವರ 'ಜೀವನ ಯಾತ್ರಾ'ದ ಮೂರನೇ ಖಂಡವಾಯಿತು.

ಈ ಸಲ ರಾಹುಲರು ಲೆನಿನ್‌ಗ್ರಾಡ್‌ನ ವಿಶ್ವವಿದ್ಯಾಲಯದ ಪ್ರಾಚ್ಯ ವಿಭಾಗದ ಇಂಡೋ-ಟಿಬೆಟನಲ್ಲಿರುವ ಉಪವಿಭಾಗದಲ್ಲಿ ಸಂಸ್ಕೃತ ಪ್ರೊಫೆಸರ್ ಆಗಿ ನೇಮಕಗೊಂಡಿದ್ದರು. ಪ್ರೊ। ಬರಾನ್ನಿಕೋಫ್ ಉಪವಿಭಾಗದ ಅಧ್ಯಕ್ಷ, ರಾಹುಲಜೀ ಪ್ರೊಫೆಸರ್, ಇನ್ನೂ ನಾಲ್ಕೈದು ಉಪನ್ಯಾಸಕರು ಇದ್ದರು – ಕಲಿಯಾನೊಫ್ ಸಂಸ್ಕೃತಕ್ಕೆ. ದೀನಾ ಗೋಲ್ಡ್‌ಮನ್ ಹಿಂದಿಗೆ – ಹೀಗೆ. ರಾಹುಲರು ವಾರದಲ್ಲಿ ಹನ್ನೆರಡು ಗಂಟೆ ಪಾಠ ಮಾಡಬೇಕಿತ್ತು. ಮೊದಲ ವರ್ಷ ಸಂಸ್ಕೃತ ಮತ್ತು ಹಿಂದಿ, ಎರಡನೆಯ ವರ್ಷ ಟಿಬೆಟಿಯನ್ ಭಾಷೆ. ವಿಶ್ವವಿದ್ಯಾಲಯದ ಕ್ಲಾಸುಗಳು ಸೆಪ್ಟೆಂಬರ್ ಮೊದಲ ವಾರದಲ್ಲಿ ಆರಂಭವಾಗಲಿದ್ದುವು. ಆದುದರಿಂದ ಮೊದಲ ಮೂರು ತಿಂಗಳಲ್ಲಿ ರಾಹುಲರು ರಷ್ಯನ್ ಭಾಷೆ ಕಲಿಯಲು ತೊಡಗಿದರು.

ಲೆನಿನ್‌ಗ್ರಾಡ್‌ನ ಉಪನಗರ ತ್ಸಾಚೆಯಿ ಮೊಹಲ್ಲೆಯಲ್ಲಿನ ಎರಡು ಕೋಣೆಗಳ ಒಂದು ಫ್ಲ್ಯಾಟ್ ಈಗ ರಾಹುಲರು, ಲೋಲಾ ಮತ್ತು ಇಗೋರ್ ವಾಸಿಸುವ ಮನೆ. ಐವತ್ತೆರಡು ವರ್ಷ ಪ್ರಾಯದ ರಾಹುಲಜೀಯವರದು ಇದು ಮೊದಲ "ಮನೆವಾರ್ತೆ". "ಉಪ್ಪು-ಎಣ್ಣೆ-ಸೌದೆ" ಸಮಸ್ಯೆಗಳನ್ನು ಈಗ ಮೊದಲ ಬಾರಿಗೆ ಎದುರಿಸುತ್ತಿದ್ದರು. ಅದೂ ವಿದೇಶದಲ್ಲಿ, ಮಹಾಯುದ್ಧದ ಬಳಿಕ, ಸಂಬಳ ಸಾಕಷ್ಟಿತ್ತು. ಲೋಲಾ ವಿಶ್ವವಿದ್ಯಾಲಯದಲ್ಲಿ ಗ್ರಂಥಪಾಲಕಿಯಾಗಿದ್ದಳು. ಮುಂದೆ ಅಸಿಸ್ಟೆಂಟ್ ಪ್ರೊಫೆಸರ್ ಆದಳು. ಅವಳಿಗೂ ರಾಹುಲರಿಗೆ ಸಿಗುವ ಸಂಬಳದ ಸುಮಾರು ಅರ್ಧದಷ್ಟು ಸಂಬಳ

ಬರುತ್ತಿತ್ತು. ರೇಶನ್ ಸಾಮಾನುಗಳ ಬೆಲೆ ಹಾಗೂ ಪೇಟೆಯಲ್ಲಿ ಅವೇ ಸಾಮಾನುಗಳ ಬೆಲೆಯಲ್ಲಿ ಭೂಮಿ ಆಕಾಶದಷ್ಟು ಅಂತರವಿತ್ತು. ರೇಶನ್‌ನಲ್ಲಿ ಒಂದು ಕಿಲೋ ಸಕ್ಕರೆಗೆ ಐದು ರುಬಲ್, ಒಂದು ಕಿಲೋ ಆಲೂಗಡ್ಡೆಗೆ ಎರಡು ರುಬಲುಗಳಾದರೆ ಪೇಟೆಯಲ್ಲಿ ತೆರೆದ ಅಂಗಡಿಗಳಲ್ಲಿ ಇವೇ ಎರಡಕ್ಕೆ ಕ್ರಮವಾಗಿ ಕಿಲೋ ಒಂದಕ್ಕೆ 200 ರುಬಲ್ ಮತ್ತು 6 ರುಬಲ್.

ಪ್ರೊಫೆಸರ್ ಆಗಿರುವುದರಿಂದ ರಾಹುಲರಿಗೆ ಒಂದು ವಿಶೇಷ ರೇಶನ್ ಕಾರ್ಡ್ ಕೂಡ ಸಿಕ್ಕಿತ್ತು. ಅದರಲ್ಲಿ ವಿಶ್ವವಿದ್ಯಾಲಯದ ಕೋ ಆಪರೇಟಿವ್ ಸ್ಟೋರ್‌ನಿಂದ ಸಾಮಾನು ತರಬಹುದಿತ್ತು. ಆದರೆ ಕೇವಲ ರೇಶನ್ ಸಾಮಗ್ರಿ ಮಾತ್ರದಿಂದಲೇ ಮನೆ ನಡೆಯುತ್ತದೆಯೇ ? ಅತಿಥಿಗಳು ಬಂದರೆಂದರೆ ಅಥವಾ ಕೆಲಸದವಳನ್ನು ಇಟ್ಟುಕೊಳ್ಳಬೇಕಾಯಿತೆಂದರೆ ರೇಶನ್ ಸಾಕಾಗುತ್ತಿರಲಿಲ್ಲ.

ಮೊದಲ ವರ್ಷ ಕೆಲಸದವಳು ಇರಲಿಲ್ಲ. ಆದುದರಿಂದ ಮನೆಗೆಲಸದಲ್ಲಿ ರಾಹುಲರು ಕೂಡ ಕೈಕೂಡಿಸಬೇಕಾಗಿ ಬರುತ್ತಿತ್ತು. ಕಟ್ಟಿಗೆ ಸೀಳುವುದು ಲೋಲಾಳ ಕೆಲಸವಾದರೆ, ಪಾತ್ರೆ ತೊಳೆಯುವುದು, ಹಾಸಿಗೆ ಸರಿ ಮಾಡುವುದು ಇತ್ಯಾದಿ ರಾಹುಲರ ಕೆಲಸ. ರೇಶನ್ ಅಂಗಡಿಯಿಂದ ಒಬ್ಬ ಪ್ರೊಫೆಸರ್ ಇಪ್ಪತ್ತು ಇಪ್ಪತ್ತೈದು ಕಿಲೋ ಭಾರವನ್ನು ಬೆನ್ನ ಮೇಲೇರಿಸಿಕೊಂಡು ತರುವುದು ಪ್ರತಿಷ್ಠೆಗೆ ಧಕ್ಕೆ ತರುವಂತಹ ಮಾತೇನೂ ಆಗಿರಲಿಲ್ಲ. ರಾಹುಲರು ಟ್ರಾಮ್‌ನಲ್ಲಿಯೇ ವಿಶ್ವವಿದ್ಯಾಲಯಕ್ಕೆ ಹೋಗಿ ಬರುತ್ತಿದ್ದರು. ಇದಕ್ಕೇನೇ ದಿನದಲ್ಲಿ ಮೂರು ಗಂಟೆ ವ್ಯಯವಾಗುತ್ತಿತ್ತು.

ಲೆನಿನ್‌ಗ್ರಾಡ್ ವಾಸದ ಮೊದಲ ಮೂರು ತಿಂಗಳಲ್ಲಿ, ವಿಶ್ವವಿದ್ಯಾಲಯದ ಕ್ಲಾಸುಗಳು ಆರಂಭವಾಗುವ ತನಕ ರಾಹುಲರ ದಿನಚರಿಯೆಂದರೆ; ಹೆಚ್ಚಾಗಿ ಮನೆಯಲ್ಲೇ ಓದುತ್ತ ಕೂರುವುದು, ಲೈಬ್ರೆರಿಗೆ ಹೋಗುವುದು, ಆಗಾಗ ಫಿಲ್ಮ್ ಅಥವಾ ನಾಟಕ ನೋಡಲು ಹೋಗುವುದು ಇತ್ಯಾದಿ. ಸೋವಿಯತ್ ಮಧ್ಯ ಏಶಿಯಾದ ಭೂತ-ವರ್ತಮಾನದ ವಿಚಾರವಾಗಿ ಶೀಘ್ರವೇ ಒಂದು ಗ್ರಂಥ ರಚಿಸಬೇಕೆಂದು ನಿಶ್ಚಯಿಸಿಕೊಂಡರು.

ಆದರೆ ಮಧ್ಯ ಏಶಿಯಾದ ಇತಿಹಾಸ ಬರೆಯುವುದು, ಅದಕ್ಕಾಗಿ ಸ್ರೋತ-ಸಾಮಗ್ರಿ ಸಂಗ್ರಹಿಸುವುದು ಸರಳ ಕೆಲಸವೇನೂ ಆಗಿರಲಿಲ್ಲ. ಯುರೋಪಿನ ಅಸಂಖ್ಯ ಭಾಷೆಗಳಲ್ಲಿ-ಇಂಗ್ಲಿಷ್, ಫ್ರೆಂಚ್, ಜರ್ಮನ್ ಮತ್ತು ರಷ್ಯನ್ ಭಾಷೆಗಳಲ್ಲಿಯೂ ಏಶಿಯದ ಕುರಿತು ಸುಸಂಬದ್ಧವಾಗಿ ಬರೆದ ಇತಿಹಾಸ ಪುಸ್ತಕಗಳೇ ಇಲ್ಲ ಎಂಬುದನ್ನು ರಾಹುಲರು ಗಮನಿಸಿದರು. ಅವರು ಮಧ್ಯ ಏಶಿಯಾಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಓದತೊಡಗಿದಂತೆ ಅವರಿಗೆ ಮಧ್ಯ ಏಶಿಯಾದ ಗುಂಗು ಹತ್ತಿಕೊಂಡಿತು. ಅಲ್ಲಿಗೆ ಹೋಗಲು ಬಹಳ ಪ್ರಯತ್ನಿಸಿದರು, ಮಾಸ್ಕೋಗೆ ಹೋಗಿ ಪ್ರಯತ್ನ ಮಾಡಿದರೂ ಕಡೆಗೂ ಅವರಿಗೆ ಅನುಮತಿ ಸಿಗಲೇ ಇಲ್ಲ.

ಅದರೂ ರಾಹುಲಜೀ ಕ್ಷೀಣ ಆಸೆಯಿರಿಸಿಕೊಂಡು, ಮಧ್ಯ ಏಶಿಯದ ಇತಿಹಾಸದ ಅಧ್ಯಯನ ಮಾಡುತ್ತಲೇ ಇದ್ದರು. ಪುಸ್ತಕಗಳನ್ನು ಸಂಗ್ರಹಿಸಿದರು, ಟಿಪ್ಪಣಿ ಮಾಡಿಕೊಳ್ಳುತ್ತ ಇದ್ದರು. ಏಶಿಯಾದ ಇತಿಹಾಸ ಹಾಗೂ ಪುರಾತತ್ವದ ಪ್ರೊಫೆಸರ್ ಡಾ। ತೋಲ್‌ಸ್ತೋಫ್, ಪ್ರೊ। ಬೆರ್ನ್‌ಶ್ತಾಂ ಮತ್ತು ಪ್ರೊ। ಯಾಕೂಬೋವ್‌ಸ್ಕಿಯವರಂತಹ ಪ್ರಖ್ಯಾತ ವಿದ್ವಾಂಸರನ್ನು ಭೇಟಿ ಮಾಡಿದರು. ಗಂಟೆಗಟ್ಟಲೆ ಚರ್ಚಿಸಿದರು. ಲೆನಿನ್‌ಗ್ರಾಡ್ ಮತ್ತು ಮಾಸ್ಕೋ ಸಂಗ್ರಹಾಲಯಗಳಿಗೆ ಹೋಗಿ ಮಧ್ಯ ಏಶಿಯಾಕ್ಕೆ ಸಂಬಂಧಿಸಿದ ಪುರಾತನ ವಸ್ತುಗಳ ಅಧ್ಯಯನ ಮಾಡಿದರು. ಮಧ್ಯ ಏಶಿಯಾದ ಇತಿಹಾಸ ಕುರಿತ

ಅನೇಕ ಪುಸ್ತಕಗಳನ್ನು ಕೊಂಡುಕೊಂಡರು. ಹಳೆಯ ಪುಸ್ತಕಗಳ ಅಂಗಡಿಗಳಿಂದಲೂ, ಅವರು ಅವನ್ನು ಕೊಂಡರು. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ರಷ್ಯಾದಲ್ಲಿ ಇದ್ದ ಎರಡು ವರ್ಷಗಳನ್ನು ರಾಹುಲರು "ಮಧ್ಯ ಏಶಿಯಾದ ಇತಿಹಾಸ" ಬರೆಯುವ ತಯಾರಿಯಲ್ಲೇ ಕಳೆದರು. ಹೆಚ್ಚು ಕಡಿಮೆ ಭಾರತದ ಸಂಪರ್ಕವೇ ಇಲ್ಲದ ಹಾಗಿದ್ದ ಅವಧಿ ಅದು. ಆರಾರು ತಿಂಗಳ ನಂತರ ಪತ್ರಗಳು ಸಿಗುತ್ತಿದ್ದುವು. ಅವೂ ಸೆನ್ಸಾರ್ ಆಗಿ ತಲುಪುತ್ತಿದ್ದವು. ಸೋವಿಯತ್ ಪತ್ರಿಕೆಗಳಲ್ಲಿ ಭಾರತದ ಸುದ್ದಿಯೇ ಇರುತ್ತಿರಲಿಲ್ಲ.

ಕೆಲ ತಿಂಗಳುಗಳಲ್ಲಿಯೇ ರಾಹುಲರಿಗೆ ಭಾರತಕ್ಕೆ ಹಿಂದಿರುಗೋಣವೆಂದು ಅನ್ನಿಸತೊಡಗಿತು. ಆದರೆ 1946ರ ಮೇ 10ರಂದು ಇನ್ನೂ ಒಂದು ವರ್ಷ ರಷ್ಯಾದಲ್ಲಿ ಇರೋಣವೆಂದುಕೊಂಡರು. ಮಧ್ಯ ಏಶಿಯಾಕ್ಕೆ ಹೋಗಿಲ್ಲವಾದರೂ ಅದರ ಇತಿಹಾಸ ರಚನೆಗೆ ಬೇಕಾದ ಎಲ್ಲಾ ಸಾಮಗ್ರಿ ಇಷ್ಟು ಸಮಯದೊಳಗೆ ಸಂಗ್ರಹವಾದೀತು ಎಂಬ ಆಸೆಯಿಂದ ಅದೇ ದಿನ 3500 ರುಬಲ್‌ಗೆ ಒಂದು ಹೊಸಾ, ಶಕ್ತಿಶಾಲಿ ರೇಡಿಯೋ ಕೊಂಡುಕೊಂಡು ಲಂಡನ್ ಮತ್ತು ದೆಹಲಿ ಸ್ಟೇಶನ್ ಕೇಳಿ ಸ್ವಲ್ಪ ಸಮಾಧಾನವಾದಂತಾಗಿ ಬರೆದ ಟಿಪ್ಪಣಿ: "ಇನ್ನು ಒಂದು ವರ್ಷ ನಿಶ್ಚಿಂತೆಯಿಂದ ಇರಬಹುದು ಎಂದು ಮನಸ್ಸಿಗೆ ಸಂತೋಷವಾಯಿತು."

ಬಹುಶಃ ರಾಹುಲರು ಗೃಹಸ್ಥರಾಗಲು ಹೇಳಿಸಿದ ಮನಷ್ಯನಾಗಿರಲಿಲ್ಲ. ಗೃಹಸ್ಥ ಜೀವನವನ್ನು ಅವರು ವಿವಶತೆಯಿಂದಲೇ ಸ್ವೀಕರಿಸಬೇಕಾಯಿತೇನೋ ಅಂತನಿಸುತ್ತದೆ-ಮೊದಲು ರಷ್ಯಾದಲ್ಲಿ, ನಂತರ ಭಾರತದಲ್ಲಿ; ಬೇರೆ ಯಾವ ವ್ಯವಧಾನವಿಲ್ಲದಿದ್ದರೆ ಅವರು ಓದು-ಬರವಣಿಗೆಯಲ್ಲಿ ಸತತವಾಗಿ ಮುಳುಗಿರಬಲ್ಲವರು. ಹೀಗೆ ಮೈಮರೆತರೆ ಮನೆವಾರ್ತೆಯ ಅವಸ್ಥೆ ಏನಾದೀತು ? ಲೆನಿನ್‌ಗ್ರಾಡ್‌ನಲ್ಲಿದ್ದಾಗ ನಡೆದ ಒಂದು ತುಣುಕು ಮಾದರಿ ಹೀಗಿದೆ. "ಸ್ವಾಧ್ಯಾಯ ಮತ್ತು ಮನೆಗೆಲಸಗಳ ನಿರ್ವಹಣೆ ಒಂದಕ್ಕೊಂದು ವಿರುದ್ಧವಾದವುಗಳೆಂದು 1945ರ ಜುಲೈ 24ರಂದು ನನಗೆ ತಿಳಿಯಿತು. ಇಲೆಕ್ಟ್ರಿಕ್ ಕೆಟಲ್‌ನಲ್ಲಿ ನೀರು ಬಿಸಿಗಿಟ್ಟು ನಾನು ಓದು-ಬರವಣಿಗೆಗೆ ಕುಳಿತೆ. ಎರಡು ಗಂಟೆಯ ಮೇಲೆ ಎಚ್ಚರ ಬಂತು. ನೋಡಿದರೆ ನೀರು ಪೂರಾ ಆರಿ ಹೋಗಿ ಪಾತ್ರೆ ಕರಟಿ ವಯರ್ ಕೂಡಾ ಸುಟ್ಟು ಉರಿಯುತ್ತಾ ಇದೆ. ಕೆಟಲ್ ಕೆಟ್ಟು ಒಟ್ಟು ಮುನ್ನೂರು ರುಬಲುಗಳ ಹಜಾಮತಿ."

ಇದಕ್ಕೆ ಲೋಲಾ ಏನು ಹೇಳಿದಳೆಂದು ರಾಹುಲಜೀ ನಮಗೆ ಏನೂ ತಿಳಿಸುವುದಿಲ್ಲ. ಆದರೆ ತನಗಿಷ್ಟವಾಗದಂತಹ ಲೋಲಾಳ ಪ್ರತಿ ವ್ಯವಹಾರಗಳ ಕುರಿತೂ ಬಿಡದೆ ವ್ಯಂಗ್ಯವಾಗಿ ಬರೆಯುತ್ತಾರೆ. ಲೋಲಾಗೆ ತನ್ನ ಮಗ ಇಗೋರನ ಮೇಲೆ ಅಸಾಧಾರಣ ಪ್ರೀತಿ. ಬಹಳ ಮುದ್ದಿನಿಂದ ಆಕೆ ಅವನನ್ನು ಸಾಕಿದ್ದಳು. ಇದಕ್ಕಾಗಿ ಆಕೆಯನ್ನು ರಾಹುಲರು ಮತ್ತೆ ಮತ್ತೆ 'ಕಾಂಗರೂ ಮಾ' ಎನ್ನುತ್ತಾರೆ. ಅವಳ ಕುರಿತು "ಶೃಂಗಾರ ಪ್ರಿಯೆ", "ಲೇಟ್ ಲತೀಫ್", "ಚರ್ಬಿ-ಪೂರ್ಣ ಭೋಜನ ಪ್ರೇಮಿ" ಓದು ಬರೆಹ ಇಷ್ಟಪಡದವಳು ಮುಂತಾಗಿಯೆಲ್ಲ ಹೇಳುತ್ತಾರೆ. "ರೂಸ್ ಮೇಂ ಪಚ್ಚೀಸ್ ಮಾಸ"ನಲ್ಲಿ ಲೋಲಾ ಕುರಿತ ಪ್ರಶಂಸೆಯ ಮಾತು ಸಿಗುವುದು, ಕಷ್ಟದಿಂದ-ಎರಡೋ ಮೂರೋ ಅಷ್ಟೇ.

ಇದಕ್ಕೆ ಕಾರಣವಿತ್ತು. ಇಬ್ಬರ ಆಚಾರ ವಿಚಾರಗಳಲ್ಲಿ ಧ್ರುವಗಳ ಅಂತರವಿತ್ತು. ರಾಹುಲರು ಪುಸ್ತಕ ಜೊತೆಗಿನ ಏಕಾಂತ ಪ್ರಿಯ. ರಾತ್ರಿ ಒಂದು-ಎರಡು ಗಂಟೆಯವರೆಗೆ ಓದುತ್ತ ಕುಳಿತಿರುತ್ತಿದ್ದರು. ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಅವಳಿಗೋ ಇದೆಲ್ಲ ವ್ಯರ್ಥವೆನಿಸುತ್ತಿತ್ತು. ರಾಹುಲರು ಘೋರ ನಾಸ್ತಿಕರು, ಲೋಲಾ ಕೆಥೋಲಿಕ್ ಕ್ರಿಶ್ಚನ್. ಮಗ ಇಗೋರನನ್ನು ಆಸ್ತಿಕನನ್ನಾಗಿ ಬೆಳೆಸಲು

ಬಯಸುವವಳು. ಜೀವಮಾನದಲ್ಲಿ ರಾಹುಲರು ಮದ್ಯ ಕುಡಿದವರಲ್ಲ. ಆದರೆ ಮದ್ಯಪಾನ ಅಲ್ಲಿ ಎಷ್ಟು ಸಹಜವೆಂದರೆ ಎಂಟೊಂಭತ್ತು ವರ್ಷದ ಇಗೋರ್ ಕೂಡ ಪಾರ್ಟಿಗಳಲ್ಲಿ ಭಾಗವಹಿಸಿ ಮದ್ಯದ ಗ್ಲಾಸಿಗಾಗಿ ಹಠ ಮಾಡುತ್ತ ಕುಳಿತುಕೊಳ್ಳುತ್ತಿದ್ದ.

ಮನಸ್ಸು ಮುರಿಯುವುದು ಸ್ವಾಭಾವಿಕವಷ್ಟೆ. ಆದರೆ ಜಗಳ ಮಾಡುವ ಸ್ವಭಾವ ಇಬ್ಬರದೂ ಅಲ್ಲವಾದುದರಿಂದ ರಷ್ಯದಲ್ಲಿ ಇದ್ದಷ್ಟು ಕಾಲ ರಾಹುಲರು ಸಾಧ್ಯವಾದಷ್ಟೂ ಲಾಭವನ್ನೇ ಪಡೆದರೆನ್ನಬಹುದು–"ಭಯೋ ಕ್ಯೋಂ ಅನಚಾಹತ ಕೇ ಸಂಗ" (ಬೇಡವಾದವರ ಸಂಗಕ್ಕೆ ಆಯಿತೇಕೆ ?) ಎಂಬ ಕವಿರತ್ನ ಸತ್ಯನಾರಾಯಣರ ಸಾಲು ನೆನಪಾಗುತ್ತಿತ್ತೇನೊ. ರಾಹುಲರು ಬರೆದ "ಮಧ್ಯ ಏಶಿಯಾ ಕಾ ಇತಿಹಾಸ"ದ ಕೃತಿಯ (ಒಟ್ಟು ಎರಡು ಭಾಗಗಳಲ್ಲಿ 1192 ಪುಟಗಳು) ಒಳತಿರುಳನ್ನು ನೋಡಿದಾಗ ಸಹಜವಾಗಿ – ರಷ್ಯಾದಲ್ಲೆ ರಾಹುಲರು ಕಳೆದ ಗೃಹಸ್ಥ ಜೀವನ ಸಾರ್ಥಕವಾಯಿತು, ಇದರ ಹೆಚ್ಚಿನ ಯಶಸ್ಸು ಲೋಲಾಗೇ ಸಲ್ಲಬೇಕು – ಎಂದು ಉದ್ಗರಿಸುವಂತಾಗುತ್ತದೆ.

ರಷ್ಯಾದಲ್ಲಿ ರಾಹುಲರು ಕೇವಲ ಅಧ್ಯಯನ ಅಧ್ಯಾಪನದಲ್ಲಿಯೇ ಕಳೆಯದೆ ಅಲ್ಲಿನ ಜನಜೀವನವನ್ನು ಹತ್ತಿರದಿಂದ ನೋಡಿದರು. 1945ರ ಜುಲೈಯಲ್ಲಿ ಹದಿನೈದು ದಿನ ಮತ್ತು 1946ರಲ್ಲಿ ಒಂದು ವಾರ ಮಾಸ್ಕೋಗೆ ಹೋಗಿ, ಅಲ್ಲಿದ್ದರು. ಮಾಸ್ಕೋದಲ್ಲಿ ಎಂಟೊಂಭತ್ತು ದಿನ ಒಂದು ದೊಡ್ಡ ಆಸ್ಪತ್ರೆಯಲ್ಲಿಯೂ ಇದ್ದರು. ಅಲ್ಲಿನ ವ್ಯವಸ್ಥೆಯನ್ನು ಅವರು ಬಹಳ ಪ್ರಶಂಸಿಸಿದ್ದಾರೆ.

1946 ಜುಲೈನ ಸಾಧಾರಣ ಇಡೀ ಒಂದು ತಿಂಗಳು ರಾಹುಲರು ಕುಟುಂಬ ಸಮೇತ ಟಿರ್ಯೋಕಿಯಲ್ಲಿ ಕಳೆದರು. ಅಲ್ಲಿನ ಸಮುದ್ರ ತೀರದಲ್ಲಿ ಲೆನಿನ್‌ಗ್ರಾಡ್ ವಿಶ್ವವಿದ್ಯಾಲಯದ ಸ್ಯಾನಿಟೋರಿಯಂ ಇತ್ತು. ಟಿರ್ಯೋಕಿ ಇದ್ದದ್ದು ಲೆನಿನ್‌ಗ್ರಾಡ್‌ನಿಂದ 60 ಕಿಲೋಮೀಟರು ದೂರದಲ್ಲಿ, ಫಿನ್ಲೆಂಡಿನ ಗಡಿಗೆ ಸಮೀಪದಲ್ಲಿ. ಅಲ್ಲಿಂದ ಸುಮಾರು 100 ಕಿಲೋಮೀಟರು ದೂರದ ಫಿನ್ಲೆಂಡಿನ ಗಡಿಪಟ್ಟಣ ವೀಬುರ್ಗ್ ನಗರಕ್ಕೂ ಹೋಗಿ ಬಂದರು.

ರಾಹುಲರನ್ನು ಎಲ್ಲಕ್ಕಿಂತ ಹೆಚ್ಚು ಕಂಗಾಲುಗೊಳಿಸಿದ್ದು ಸೋವಿಯತ್ ದೇಶದ ಸೆನ್ಸಾರ್‌ಶಿಪ್. ಭಾರತದ ಸಂಪರ್ಕ ಹೆಚ್ಚು ಕಡಿಮೆ ಕಡಿದೇ ಹೋಗಿತ್ತು. ಕಾಗದ ತಲುಪಲು ಅನೇಕ ತಿಂಗಳುಗಳೇ ಬೇಕಾಗುತ್ತಿದ್ದುವು. ನನ್ನೆದುರು ರಾಹುಲರು ಲೆನಿನ್‌ಗ್ರಾಡ್‌ನಿಂದ ಆನಂದಜೀಗೆ ಬರೆದ ಮೂರು ಪತ್ರಗಳಿವೆ. ಒಂದು ಹಿಂದಿಯಲ್ಲಿ ಎರಡು ಇಂಗ್ಲಿಷ್‌ನಲ್ಲಿ. ಇಂಗ್ಲಿಷ್‌ನಲ್ಲಿ ಬರೆದದ್ದೇಕೆಂದರೆ ಸೆನ್ಸಾರ್‌ನವರು ಅದನ್ನು ಸರಿಯಾಗಿ ಓದಿ ಅರ್ಥ ಮಾಡಿಕೊಂಡು ವಿಳಂಬ ಮಾಡದೆ ಮುಂದಕ್ಕೆ ಕಳಿಸಲಿ ಎಂದು. ಅಂತಹುದರಲ್ಲೂ 25-10-45ರಂದು ಬರೆದ ರಾಹುಲರ ಪತ್ರ ಆನಂದಜೀಯವರಿಗೆ ತಲುಪಿದ್ದು ಐದು ತಿಂಗಳ ಮೇಲೆ. ಆನಂದಜೀ ವರ್ಧಾದಿಂದ 20-3-46ರಂದು ಬರೆದ ಪತ್ರ ಲೆನಿನ್‌ಗ್ರಾಡ್‌ನಲ್ಲಿ ರಾಹುಲರಿಗೆ ಸಿಕ್ಕಿದ್ದು 18-5-46ರಲ್ಲಿ. ಇದರ ಎರಡು ದಿನಗಳ ಬಳಿಕ ರಾಹುಲರು ಇಂಗ್ಲಿಷ್‌ನಲ್ಲಿ ಬರೆದ ದೀರ್ಘ ಉತ್ತರದಲ್ಲಿ "ಪತ್ರ ಸಿಕ್ಕಿ ನನಗೆ ಎಷ್ಟು ಸಂತೋಷವಾಗಿರಬಹುದೆಂದು ಸಹಜವಾಗಿ ಊಹಿಸಬಲ್ಲಿರಿ. ನನ್ನ ಪತ್ರಕ್ಕೆ ಭಾರತದಿಂದ ಬಂದ ಪ್ರಥಮ ಉತ್ತರವಿದು – ಅದೂ ನಿಮ್ಮಿಂದ. ಕಳೆದ ಜೂನ್‌ನಲ್ಲಿ (1945) ಇಲ್ಲಿಗೆ ಬಂದ ಲಾಗಾಯ್ತು ನಾನು ಸ್ನೇಹಿತರಿಗೆ ಸುಮಾರು ಇಪ್ಪತ್ತೈದು ಪತ್ರಗಳನ್ನು ಬರೆದೆ, ಅವರಿಗೆ ಸಿಕ್ಕಿದೆಯೋ ಇಲ್ಲವೋ ತಿಳಿಯದು" ಎಂದು ಬರೆದರು.

ಸೋವಿಯತ್ ಸರಕಾರ ಮಧ್ಯ ಏಶಿಯಾಕ್ಕೆ ಹೋಗಲು ತಮಗೆ ಅನುಮತಿ ನೀಡಲಿಲ್ಲವೆಂಬ ಬೇಸರ ರಾಹುಲರಲ್ಲಿ ಉಳಿದುಕೊಂಡಿತು. "ವಸ್ತುತಃ ಸೋವಿಯತ್ ಆಡಳಿತದಲ್ಲಿ ಏನಾದರು ದೋಷವಿರುವುದಾದರೆ ಅದು ಚರಮ ಸೀಮೆಗೇರಿದ ಅದರ ಸಂಶಯ ಬುದ್ಧಿ. ನನಗೆ ಮಧ್ಯ ಏಶಿಯಾಕ್ಕೆ ಹೋಗಲು ಅನುಮತಿ ಸಿಗದಿರುವುದಕ್ಕೆ ಕಾರಣ ಏನೂ ಇರಲಿಲ್ಲ. ಅಲ್ಲಿನ ಪಾರ್ಟಿಜನರಿಗೆ ಇಷ್ಟವಿತ್ತು. 'ವೋಕ್ಸ್' ಸಂಸ್ಥೆ ಎಲ್ಲ ತರಹದ ಸಹಾಯ ನೀಡಲು ತಯಾರಿತ್ತು. ಆದರೆ ವಿದೇಶಿ ವಿಭಾಗ ಮಾತ್ರ ಒಂದು ನಿರ್ಣಯಕ್ಕೇ ಬರುತ್ತಿರಲಿಲ್ಲ."

ಯಾರದಾದರೂ ಬುದ್ಧಿಗೇಡಿತನವನ್ನು ತಿಳಿಸುವುದಕ್ಕೆ ರಾಹುಲರ ಶಬ್ದಕೋಶದಲ್ಲಿ ಅನೇಕ ವ್ಯಂಗ್ಯಾತ್ಮಕ ಶಬ್ದಗಳಿದ್ದುವು. ಪ್ರಾಯಃ ಯಾರಿಗಾದರೂ ಅವರು ನೇರವಾಗಿ "ಮೂರ್ಖ" ಎನ್ನುತ್ತಿರಲಿಲ್ಲ. ಬದಲು ಸ್ಪಷ್ಟವಾಗಿ "ಲೆನಿನ್‌ಗ್ರಾಡ್‌ನಲ್ಲಿ ಆ ಸಮಯ ಕೆಲವು ಮೂರ್ಖರೇ ಪಕ್ಷದ ಸರ್ವಸ್ವ ಆಗಿಬಿಟ್ಟಿದ್ದರು"–ಹೀಗೆ ಬರೆಯುತ್ತಿದ್ದರು. ವಿಶ್ವವಿದ್ಯಾಲಯದ ಅವರ ವಿಭಾಗದ ತಂಡದ ಕಾರ್ಯದರ್ಶಿ ಆ ಮೂರ್ಖರಲ್ಲಿ ಒಬ್ಬರು. ಅವರನ್ನು ರಾಹುಲರು ಎರಡು ಸಲ ಮೂರ್ಖ ಎಂದಿದ್ದರ ಪರಿಣಾಮವಾಗಿ ಇಬ್ಬರು ವಿದ್ವಾಂಸರು ವಿಪರೀತ ಯಾತನೆಗಳನ್ನು ಅನಭವಿಸಬೇಕಾಯಿತು.–ಇದರಿಂದ ರಾಹುಲರು ಬಹಳ ನೊಂದಿದ್ದರು.

ಭಾರತದಲ್ಲಿ ಯಾವುದೇ ರೇಡಿಯೋ ಸ್ಟೇಶನಿನಲ್ಲಿ ಭಾಷಣ ಕೊಡಲಿಕ್ಕಾಗಿ ಅವರು ಎಂದಿಗೂ ಹೋದವರಲ್ಲ. "ಎಲ್ಲಿಯವರೆಗೆ ರೇಡಿಯೋದ ಅನುಬಂಧ–ಪತ್ರ ಇಂಗ್ಲಿಷಿನಲ್ಲಿ ಇರುತ್ತದೋ ಅಲ್ಲಿಯವರೆಗೆ ರೇಡಿಯೋದ ಯಾವ ಕಾರ್ಯಕ್ರಮಕ್ಕೂ ನಾನು ಹೋಗುವುದಿಲ್ಲ"–ಎನ್ನುತ್ತಿದ್ದರು. ಆಕಾಶವಾಣಿಯವರ ಬಳಿ ರಾಹುಲ ಭಾಷಣದ ರೆಕಾರ್ಡುಗಳು ಇಲ್ಲದಿರುವ ಕಾರಣ ಇದೇ, ಯಾರಾದರೂ ಖಾಸಗಿಯಾಗಿ ರೆಕಾರ್ಡು ಮಾಡಿಕೊಂಡಿದ್ದಿರಬಹುದು, ಅಷ್ಟೆ.

ಆದರೆ ಲೆನಿನ್‌ಗ್ರಾಡ್ ವಿಶ್ವವಿದ್ಯಾಲಯದ ಪ್ರಾಚ್ಯ ವಿಭಾಗದಲ್ಲಿ ರಾಹುಲರು ಮಾಡಿದ ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಹಿಂದೀ, ಉರ್ದು ಮತ್ತು ಟಿಬೇಟ್ ಭಾಷೆಗಳ ಗ್ರಂಥ ಪಠಣದ ಧ್ವನಿ ಮುದ್ರಿಕೆಗಳು ಇವತ್ತಿಗೂ ಸುರಕ್ಷಿತವಾಗಿದೆ. ಡಾ। ಕಲಿಯಾನೋಫ್ ಬರೆಯುತ್ತಾರೆ, "ರಾಹುಲಜೀ ಶುದ್ಧ ಉಚ್ಚಾರಣೆಗೆ ಬಹಳ ಗಮನ ಕೊಡುತ್ತಿದ್ದರು. ಆದುದರಿಂದ ನಳೋಪಾಖ್ಯಾನ ಕಥೆಗಳಿಂದ ಹಿಡಿದು ಕೌಟಿಲ್ಯನ ಅರ್ಥಶಾಸ್ತ್ರದ ತನಕ ಸಂಸ್ಕೃತದ ವಿಭಿನ್ನ ಗ್ರಂಥಗಳನ್ನು ರಾಹುಲಜೀ ಪಠಿಸುವಾಗ ಗ್ರಾಮೋಫೋನ್ ರೆಕಾರ್ಡು ಮಾಡಲಾಯಿತು. ಹಾಗೆಯೇ ಪ್ರಾಕೃತದ "ಸೇತುಬಂಧ"ದ ರೆಕಾರ್ಡನ್ನೂ ಮಾಡಿಕೊಂಡೆವು. ಅವುಗಳಲ್ಲಿ ಅನೇಕವು ಈಗಲೂ ಸುರಕ್ಷಿತವಾಗಿವೆ. ರಾಹುಲರ ಪರಿಚಿತ ಹಾಗೂ ಮಧುರ ಸ್ವರವನ್ನು ವಿಶ್ವವಿದ್ಯಾಲಯದ ಧ್ವನಿಶಾಸ್ತ್ರ ಕಕ್ಷೆಯಲ್ಲಿ ಇವತ್ತಿಗೂ ಕೇಳಬಹುದು."

1946ರ ಡಿಸೆಂಬರ್ 10ರಂದು ವಿಶ್ವವಿದ್ಯಾಲಯದಲ್ಲಿ 'ರವೀಂದ್ರ ದಿವಸ' ಆಚರಿಸಲ್ಪಟ್ಟಿತು. ಅನೇಕ ವಿದ್ವಾಂಸರು ರವೀಂದ್ರನಾಥರ ಕುರಿತು ಪ್ರಬಂಧ ಓದಿದರು. ರಾಹುಲರು ತಮ್ಮ ಲೇಖನವನ್ನು ಹಿಂದಿಯಲ್ಲಿ ಓದಿದರು. ಅವರ ರಷ್ಯನ್ ಅನುವಾದವನ್ನು ಸಹ ಓದಲಾಯಿತು. ಆ ಇಡೀ ಕಾರ್ಯಕ್ರಮವನ್ನು ಫಿಲ್ಮೀಕರಿಸಲಾಯಿತು. "ಆ ಸ್ಮರಣೀಯ ಕಾರ್ಯಕ್ರಮದ ಫಿಲ್ಮನ್ನು ಇಂದಿಗೂ ವಿಶ್ವವಿದ್ಯಾಲಯದಲ್ಲಿ ನೋಡಬಹುದು" ಎನ್ನುತ್ತಾರೆ ಡಾ। ಕಲಿಯಾನೋಫ್.

ಸೋವಿಯತ್ ರಷ್ಯಾದಲ್ಲಿ ಇಪ್ಪತ್ತೈದು ತಿಂಗಳು ಇದ್ದಾಗ ಓದು ಜೋರಾಗಿ ಸಾಗಿತಾದರೂ ಬರೆಹ ಕುಂಟಿತು. ಆದರೂ ಅವರು ತಾಜಿಕ್ ಭಾಷೆ (ಪಾರ್ಸಿಯ ಒಂದು ಉಪಭಾಷೆ)ಯ ಕಾದಂಬರಿಕಾರ ಸದರುದ್ದೀನ್ ಐನೀ ಯ "ದಾಖುಂದಾ" ಮತ್ತು "ಗುಲ್ಯಾಮ್"ಗಳ ಉರ್ದು ಭಾಷಾಂತರ ಮಾಡಿದರು. ಭಾರತಕ್ಕೆ ಹಿಂದಿರುಗಿದ ಮೇಲೆ ಅವುಗಳನ್ನು ಹಿಂದಿಗೆ ತರ್ಜುಮೆ ಮಾಡಿದರು. ಆ ಬಳಿಕ ಐನೀಯ "ಅದೀನಾ" "ಯತೀಮ್" ಮತ್ತು "ಸೂದಖೋರ್ ಕೀ ಮೌತ್"ಗಳನ್ನು ಸಹ ಹಿಂದಿಗೆ ಅನುವಾದಿಸಿದರು. ಟಪ್ಪಾಲು ಮತ್ತು ಸೆನ್ಸಾರ್‌ನವರ ಗೊಂದಲದ ಕಾರಣ ರಾಹುಲರಿಗೆ ತಮ್ಮ ಯಾವ ರಚನೆಗಳನ್ನು ಭಾರತಕ್ಕೆ ಕಳಿಸುವುದೂ ಅಪಾಯ ಮುಕ್ತ ಅನಿಸುತ್ತಿರಲಿಲ್ಲ. ಲೆನಿನ್‌ಗ್ರಾಡ್‌ನಲ್ಲಿ ಇದ್ದುಕೊಂಡು ಪುಸ್ತಕ ಬರೆಯುವುದರಲ್ಲಿಯೂ ಅಪಾಯವಿತ್ತು. ಭಾರತಕ್ಕೆ ಹಿಂದಿರುಗುವಾಗ ಆ ಪಾಂಡುಲಿಪಿಗಳ ಮೇಲೆಯೂ ನಿಷೇಧ ಹಾಕುವ ಸಂಭವವಿತ್ತು.

ರಷ್ಯಾದಲ್ಲಿ ರಾಹುಲರಿಗೆ ಹಣದ ಅಡಚಣೆ ಇರಲಿಲ್ಲ. 1947ರ ಆರಂಭದಿಂದ ಆದಾಯದ ಇನ್ನೂ ಕೆಲ ಮೂಲಗಳು ತೆರೆದುಕೊಂಡಿದ್ದುವು. ಅವರಿಗೆ ರಷ್ಯನ್ ಫಿಲ್ಮ್‌ಗಳ ಹಿಂದೀ ಭಾಷಾಂತರ ಕೆಲಸ ಸಿಗತೊಡಗಿತು. ಆಕಾಶವಾಣಿಯಲ್ಲಿಯೂ ಬೇಡಿಕೆ ಸುರುವಾಯಿತು. ಲೆನಿನ್‌ಗ್ರಾಡ್‌ನ ಕುಟೀರ ಮತ್ತು ಮಾನವಶಾಸ್ತ್ರ ಸಂಗ್ರಹಾಲಯಗಳಲ್ಲಿನ ಭಾರತೀಯ ವಸ್ತುಗಳ ವಿಶೇಷಜ್ಞ ಹಾಗೂ ಪರಾಮರ್ಶಕರಾಗಿ ರಾಹುಲರನ್ನು ನೇಮಕ ಮಾಡುವ ಕುರಿತು ಮಾತುಕತೆ ನಡೆಯುತ್ತಿತ್ತು. "ಹಾಗಾಗಿ, ಹಣದ ಪ್ರಶ್ನೆಯಿದ್ದಲ್ಲಿ ಅದೀಗ ನೆರೆಯಂತೆ ತುಂಬಿಕೊಳ್ಳತೊಡಗಿತು. ಈಗಿದ್ದ ಪ್ರಶ್ನೆ ಎಂದರೆ ಇಲ್ಲಿದ್ದುಕೊಂಡು ಆರಾಮದಿಂದ ಜೀವನ ಕಳೆಯುವುದೇ ಅಥವಾ ಭಾರತಕ್ಕೆ ಮರಳಿ ಸಾಹಿತ್ಯಿಕ ಕಾರ್ಯದಲ್ಲಿ ತೊಡಗಿಕೊಳ್ಳುವುದೇ ಎಂಬುದು. ಮೊದಲನೆಯದು ನನಗೆ ಜೀವನ್ಮೃತದಂತೆ ಅನಿಸುತ್ತಿತ್ತು. ನಾನಿಲ್ಲಿದ್ದುಕೊಂಡು ವಾಸ್ತವಿಕ ಕೆಲಸಗಳನ್ನು ಸರಿಯಾಗಿ ಮಾಡಲಾರೆ ಎಂದಾದರೆ ಅಷ್ಟು ಆರಾಮದ ಜೀವನವನ್ನು ನಡೆಸಿಯೂ ಪ್ರಯೋಜನವೇನು ? ಭಾರತದಿಂದ ಬಂದು ಎರಡೂವರೆ ವರ್ಷಗಳಾಗಿದ್ದುವು. ಅಲ್ಲಿ ಇದ್ದಿದ್ದರೆ ಈ ವೇಳೆಗೆ ಎರಡು ಎರಡೂವರೆ ಸಾವಿರ ಪುಟಗಳಷ್ಟು ಪುಸ್ತಕವನ್ನು ಬರೆಯುತ್ತಿದ್ದೆ. ಇಲ್ಲಿ ಕೂಡಾ ಅವಧಿಯಲ್ಲಿ ಮಿದುಳು ಖಾಲಿಯಾಗಿರಲಿಲ್ಲ. ಎಷ್ಟೋ ಪುಸ್ತಕಗಳ ಕಲ್ಪನೆ ಮನಸ್ಸಿನಲ್ಲಿ ಸಿದ್ಧಗೊಳ್ಳುತ್ತ ಇತ್ತು. ಆದರೆ ಅವನ್ನು ಇಲ್ಲಿದ್ದುಕೊಂಡು ಕಾಗದಕ್ಕಿಳಿಸುವುದು ವ್ಯರ್ಥ. ಏಕೆಂದರೆ ಸೆನ್ಸಾರ್‌ನಿಂದ ಬಚಾವಾಗಿ ಅವು ಯಶಸ್ವಿಯಾಗಿ ಪ್ರೆಸ್ಸು ತಲುಪುವುದೇ ಸಂಶಯ. ಇದೆಲ್ಲದರಿಂದ ಜೀವನ್ಮೃತ ಅವಸ್ಥೆಯನ್ನು ಮಾತ್ರ ನಾನೆಂದೂ ಇಷ್ಟಪಡುವುದಿಲ್ಲವೆಂಬುದನ್ನು ಯಾವುದೇ ಸಂದಿಗ್ಧವಿಲ್ಲದೆ ದೃಢಪಡಿಸಿಕೊಂಡೆ." ರಾಹುಲರು ಭಾರತಕ್ಕೆ ಹಿಂದಿರುಗುವ ನಿರ್ಧಾರವನ್ನೇನೋ ಮಾಡಿದರು, ಆದರೆ ಅದರಲ್ಲೊಂದು ದೊಡ್ಡ ಕಷ್ಟವಿತ್ತು. ರಷ್ಯಾದಲ್ಲಿ ಖರ್ಚಿಗಾಗಿ ರಾಹುಲರಿಗೆ 100 ಪೌಂಡು ಸಿಕ್ಕಿತ್ತು. ಅದರಲ್ಲಿ ಈಗ 60 ಪೌಂಡು ಮಾತ್ರ ಉಳಿದಿತ್ತು. ಈ 60 ಪೌಂಡುಗಳನ್ನು ಕೂಡ ರಷ್ಯಾ ಮತ್ತು ಭಾರತದಲ್ಲಿ ಮಾತ್ರ ವಿನಿಮಯ ಮಾಡಿಕೊಳ್ಳಲು ಸಾಧ್ಯವಿತ್ತು. ರಷ್ಯಾದಲ್ಲಿಯೂ ರುಬಲ್ ಮಾತ್ರ ವಿನಿಮಯ ಸಿಗುತ್ತಿತ್ತು. ರಾಹುಲರ ಬಳಿ ರುಬಲ್ಲುಗಳಿಗೇನೂ ಕಡಿಮೆ ಇರಲಿಲ್ಲ. ಕಾಬೂಲಿನ ಮಾರ್ಗವಾಗಿ ಹೋಗುವಾಗ ಪೌಂಡುಗಳು ಏನೂ ಪ್ರಯೋಜನಕ್ಕೆ ಬಾರವು, ಬದಲು ಅವುಗಳಿಂದ ಮತ್ತೂ ಕಷ್ಟವೇ ಇತ್ತು. ರಾಹುಲರು ರಷ್ಯಾದಲ್ಲಿ ಸುಮಾರು ಆರೇಳು ಮಣ ಪುಸ್ತಕಗಳನ್ನು ಬೇರೆ ಸಂಗ್ರಹಿಸಿದ್ದರು. ಅವುಗಳಲ್ಲಿ ತಮ್ಮ ಜೊತೆಗೆ ಒಯ್ಯಬೇಕೆಂದಿದ್ದ ಪುಸ್ತಕಗಳೇ ನಾಲ್ಕು ಮಣಗಳಷ್ಟಿದ್ದವು.

ಕೊನೆಗೆ ಲಂಡನ್ ಮಾರ್ಗವಾಗಿ ಭಾರತಕ್ಕೆ ಹಿಂದಿರುಗುವ ನಿರ್ಧಾರ ಮಾಡಿದರು. 60 ಪೌಂಡಿನ ಚೆಕ್ ಅವರ ಬಳಿ ಇತ್ತು. ಲೆನಿನ್‌ಗ್ರಾಡ್‌ನಲ್ಲಿ ಮಿತ್ರರೊಬ್ಬರು ಇನ್ನೂ ಮೂರೂವರೆ ಪೌಂಡುಗಳಿಗೆ ವ್ಯವಸ್ಥೆ ಮಾಡಿಕೊಟ್ಟರು. ಲಂಡನಿನಿಂದ ಮುಂಬಯಿಗೆ ಹೊರಡುವ ಹಡಗಿನ ಎರಡನೇ ದರ್ಜೆಯ ಟಿಕೆಟ್ ದರ 52 ಪೌಂಡು ಎಂದೂ, ಲಂಡನ್‌ನಲ್ಲಿ ಇರುವಾಗ ಪ್ರತಿವಾರ 4 ಪೌಂಡು ಖರ್ಚಾಗುವುದೆಂದೂ ಅವರು ಹೇಳಿದರು. ಏನೇ ಇರಲಿ, ಹೇಗೆಂದರೆ ಹಾಗೆ ಹೊರಟು ಬಿಡುವುದು ಎಂತ ಅಂದುಕೊಂಡರು ರಾಹುಲಜೀ. ಲಂಡನ್‌ವರೆಗಿನ ಹಡಗು ಟಿಕೆಟನ್ನು ಹೇಗೂ ರುಬಲ್‌ಗಳಲ್ಲಿ ಖರೀದಿಸಬಹುದಿತ್ತು. ಲಂಡನ್ನಿನಲ್ಲಿರುವ ತನ್ನ ಪರಿಚಿತ ಡಾ। ಬಾಂಕೇ ಬಿಹಾರಿ ಮಿಶ್ರ ಅವರಿಗೆ ರಾಹುಲರು ಒಂದು ಪತ್ರ ಬರೆದು, "ಜುಲೈ ಐದರಂದು ಹಡಗಿನಲ್ಲಿ ಇಲ್ಲಿಂದ ಹೊರಟು ಜುಲೈ 19ರಂದು (1947) ಲಂಡನ್ ತಲುಪುವೆ" ಎಂದು ತಿಳಿಸಿದರು.

ವಿದಾಯದ ದಿನ ಬಂತು. ಇಗೋರ್ ತಿರ್‍ಯೋಕಿಯಲ್ಲಿದ್ದ. 'ನೀನು ಬರುವುದಿಲ್ಲ' ಎನ್ನುತ್ತಿದ್ದ. ಅವನ ಭವಿಷ್ಯವಾಣಿ ಸತ್ಯವಾಗಲೂಬಹುದು ಯಾರಿಗೆ ಗೊತ್ತು ? ನನ್ನ ಮನಸ್ಸಿಗೂ ಅದೇ ಅನ್ನಿಸಿತು. ಆದರೆ ಜೀವನ ಕರ್ತವ್ಯ ಯಾವುದೇ ಮಾಯೆ ಮೋಹದ ಜಾಲವನ್ನು ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಹೃದಯವನ್ನು ಗಟ್ಟಿ ಮಾಡಿಕೊಂಡು ಅವನಿಂದ ಬೀಳ್ಕೊಂಡೆ. ನಾನು ಹೊರಡುವುದು ಲೋಲಾಗೆ "ಇಷ್ಟವಿರಲಿಲ್ಲ–ಸ್ವಾಭಾವಿಕ".

ಬಂದರಿನ ದ್ವಾರದಲ್ಲಿ ರಾಹುಲರು ಲೋಲಾಳಿಂದ ವಿದಾಯ ಪಡೆದರು. ಎಲ್ಲರಿಗಿಂತಲೂ ಕೊನೆಗೆ ಕಲಿಯಾನೊಫ್ ವಿದಾಯ ಹೇಳಿದರು. ಹಡಗು ಜುಲೈ 5ರಂದು ಲೆನಿನ್‌ಗ್ರಾಡ್‌ನಿಂದ ಹೊರಟು ಹೆಲ್ಸಿಂಕಿ ಹಾಗೂ ಸ್ಟಾಕ್‌ಹೋಂನಲ್ಲಿ ನಿಂತು, 1947ರ ಜುಲೈ 14ರಂದು ಲಂಡನ್ನಿನ ಡಾಕ್ ತಲುಪಿತು.

ರಾಹುಲರು ಲಂಡನಿಗೆ ಬರುತ್ತಿರುವುದು ಇದು ಎರಡನೆಯ ಬಾರಿ. ಮೊದಲ ಸಲ ಬಂದಿದ್ದು1932ರಲ್ಲಿ ಭದಂತ ಆನಂದ ಕೌಸಲ್ಯಾಯನರ ಜೊತೆಯಲ್ಲಿ, ಬೌದ್ಧ ಭಿಕ್ಷುವಿನ ವೇಷದಲ್ಲಿ. ಅವತ್ತಿನ ಭೇಟಿಯಲ್ಲಿ ಹಣದ ಯಾವ ಅಡಚಣೆಯೂ ಇರಲಿಲ್ಲ. ಆದರೆ ಈ ಸಲ ಮೊದಲ ಕೆಲವು ದಿನಗಳನ್ನು ತೀರಾ ಮಿತವ್ಯಯದಿಂದ ಕಳೆಯಬೇಕಾಯಿತು.

ಜುಲೈ 21ರಂದು 54ಪೌಂಡು ಕೊಟ್ಟು ಆಗಸ್ಟ್ ಒಂದರಂದು ಲಂಡನಿನಿಂದ ಮುಂಬಯಿಗೆ ಹೊರಡಲಿದ್ದ ಹಡಗಿನ ಟಿಕೆಟು ಖರೀದಿಸಿದ ಮೇಲೆ ಅವರ ಬಳಿ ಹಣವೇ ಉಳಿದಿರಲಿಲ್ಲ. "ಇಂಡಿಯಾ ಹೌಸ್"ನಲ್ಲಿ ಬೇಗನೇ ಸಾಲ ಸಿಗುವ ಆಸೆಯೂ ಇರಲಿಲ್ಲ. ಆದರೆ ಕಷ್ಟ ದೂರವಾಯಿತು. ಥಾಮಸ್ ಕುಕ್‌ನ ಕಛೇರಿಗೆ ಹೋದರೆ ಅಲ್ಲಿ ಭಾರತದಿಂದ ಕಳಿಸಲ್ಪಟ್ಟ 50-50 ಪೌಂಡುಗಳ ಎರಡು ಡ್ರಾಫ್ಟ್‌ಗಳು ಸಿಕ್ಕಿದುವು. ಮತ್ತೆ ರಾಹುಲರು ಮುಂದಿನ ಎಂಟೊಂಭತ್ತು ದಿನಗಳನ್ನು ಸಂಚಾರದಲ್ಲೇ ಕಳೆದರು. ಒಂದು ರೇಡಿಯೋ ಕೊಂಡುಕೊಂಡರು. ಲಂಡನಿನ ಮ್ಯೂಸಿಯಂ ನೋಡಿದರು. ಲಂಡನ್ನಿನಿಂದ ಹೊರಗಿರುವ ಥೇಮ್ಸ್ ಡಿಕ್ಸನ್ ಹಳ್ಳಿಯಲ್ಲಿಯೂ ಸಂಚರಿಸಿ ಬಂದರು. ಸೌತೆಂಪ್ಟನ್ ಬಂದರಿನಿಂದ 1947ರ ಆಗಸ್ಟ್ ಒಂದರಂದು ರಾಹುಲರು "ಸ್ತ್ರೇತ್‌ಮೋರ್" ಎಂಬ ಹಡಗು ಏರಿ ಭಾರತಕ್ಕೆ ಹೊರಟು ಬಿಟ್ಟರು. ಪ್ರಯಾಣದಲ್ಲಿ ಬರವಣಿಗೆ–ಓದು ಸಾಧ್ಯವಾಗುತ್ತಿರಲಿಲ್ಲ. ಹೆಚ್ಚಿನ ಸಮಯ ಸಹಯಾತ್ರಿಗಳೊಡನೆ ಮಾತುಕತೆಯಲ್ಲಿಯೇ ಕಳೆಯುತ್ತಿತ್ತು. ಆಗಸ್ಟ್ 15ರಂದು ಭಾರತಕ್ಕೆ ಸಿಗಲಿರುವ ಸ್ವಾತಂತ್ರ್ಯದ ಕುರಿತೇ ಮುಖ್ಯ ಚರ್ಚೆ ನಡೆಯುತ್ತಿತ್ತು.

1940-42ರ ಜೈಲು ವಾಸದಲ್ಲಿ ರಾಹುಲರು ಸಿಗರೇಟು ಸೇದಲು ಆರಂಭಿಸಿದ್ದರಷ್ಟೆ. ಇರಾನಿನಲ್ಲಿ ಏಳು ತಿಂಗಳಿದ್ದಾಗಲೂ ಸಿಗರೇಟು ಅವರ ಮನಸ್ಸಿಗೆ ಸಾಂತ್ವನ ನೀಡುತ್ತಿತ್ತು. ಆದರೆ 1945ರ ಜೂನ್ 3ರಂದು ಟೆಹರಾನ್‌ನಲ್ಲಿ ಸೋವಿಯತ್ ವಿಮಾನದೊಳಗೆ ಕಾಲಿಟ್ಟಾಗ ಸಿಗರೇಟು ಬಿಟ್ಟು ಬಿಟ್ಟವರು ಲಂಡನ್ ವಾಸದುದ್ದಕ್ಕೂ ಅದನ್ನು ಮುಟ್ಟಿರಲಿಲ್ಲ. ಸ್ಟ್ರೈತ್‌ಮೋರ್ ಹಡಗಿನಲ್ಲಿ ಉತ್ಕೃಷ್ಟ ಸಿಗರೇಟುಗಳು ಅಗ್ಗ ದರದಲ್ಲಿ ಸಿಗತೊಡಗಿದಾಗ ಚಟ ಮತ್ತೆ ಸುರುವಾಗಿ, ಮುಂದೆ ಭಾರತ ತಲುಪಿದ ಮೇಲೆಯೂ ಕೆಲ ತಿಂಗಳುಗಳವರೆಗೆ ಆ ಚಟ ಇತ್ತು.

ಹಡಗಿನ ಯಾತ್ರಿಕರಲ್ಲಿ ಹೆಚ್ಚಾಗಿ ಹಿಂದೂ-ಮುಸಲ್ಮಾನರೇ ಇದ್ದರು. ಸ್ವಾತಂತ್ರ್ಯೋತ್ಸವವನ್ನು ಹಡಗಿನಲ್ಲಿಯೇ ಆಚರಿಸಬೇಕಾಯಿತು. ಎಲ್ಲ ಸೇರಿ ಆಚರಿಸುವುದೆಂದುಕೊಂಡರು. ಅವರಿಗೆ ಭಾರತದಲ್ಲಿ ನಡೆಯುತ್ತಿದ್ದ ಗಲಭೆ ಹೊಡಿ ಕಡಿಗಳ ಯಾವುದೇ ಅಂದಾಜಿರಲಿಲ್ಲ. ಆಗಸ್ಟ್ 14ರಂದು ಹಡಗು ಅರಬ್ಬೀ ಸಮುದ್ರದ ಮೇಲಿತ್ತು. ಆ ದಿನ ಮತ್ತು ಮರುದಿನ ಸಮುದ್ರ ಬಹಳ ಉದ್ರಿಕ್ತಗೊಂಡಿತ್ತು. ಆದರೂ ಆಗಸ್ಟ್ 15ರಂದು ಎಲ್ಲ ಭಾರತೀಯರೂ ಕೂಡಿ (ಹಿಂದೂ-ಮುಸಲ್ಮಾನರು) ಹಡಗಿನಲ್ಲಿಯೇ ಸ್ವಾತಂತ್ರ್ಯೋತ್ಸವವನ್ನು ಆಚರಿಸಿದರು.

ಎರಡು ದಿನಗಳ ಬಳಿಕ ಆಗಸ್ಟ್ 17ರಂದು ಭರತ-ಭೂಮಿಯ ದರ್ಶನವಾಯಿತು. ಹನ್ನೆರಡು ಗಂಟೆಗೆ ಹಡಗು ತೀರವನ್ನು ಮುಟ್ಟಿದಾಗ ಕೆಳಗೆ ಅನೇಕ ಕಾರ್ಮಿಕರು, ಕೈಯಲ್ಲಿ ಕೆಂಪು ಪತಾಕೆ ಹಿಡಿದು ಕಾಮ್ರೇಡ್ ರಾಹುಲರನ್ನು ಸ್ವಾಗತಿಸುವ ಘೋಷಣೆ ಕೂಗುತ್ತಿರುವುದು ಕೇಳಿಸಿತು. ಆ ದೃಶ್ಯವನ್ನು ನೋಡಿ, ಹಡಗಿನ ಈ ಹದಿನೇಳು ದಿನಗಳ ಕಾಲ ಅವರ ಜೊತೆಗೇ ಪಯಣಿಸಿದವರಿಗೆ ಭಾರೀ ಆಶ್ಚರ್ಯ. ಮಿರಜ್‌ಕರ, ಡಾ| ಅಧಿಕಾರಿ, ರಮೇಶ ಸಿನ್ಹಾ, ಮಹೇಂದ್ರ ಆಚಾರ್ಯ ಮುಂತಾದ ಕೆಲ ಕಾಮ್ರೇಡ್‌ಗಳು ರಾಹುಲರನ್ನು ಕರೆದೊಯ್ಯಲು ಬಂದಿದ್ದರು. ಉಳಿದುಕೊಳ್ಳುವಲ್ಲಿಗೆ ಬಂದು ನೋಡಿದರೆ ಮುಂಬಯಿ ನಗರ ಆ ದಿನಗಳಲ್ಲಿಯೂ ಸಾಕಷ್ಟು ಅಲಂಕೃತವಾಗಿತ್ತು. "ನವ ಭಾರತಕ್ಕೆ ಹಿಂದಿರುಗಿದೆನೆಂದು ನನಗೂ ಭಾರೀ ಸಂತೋಷವಾಯಿತು."

# ಸಮ್ಮೇಳನದ ಅಧ್ಯಕ್ಷರು

ಹತ್ತಿರ ಹತ್ತಿರ ಎರಡೂ ಮುಕ್ಕಾಲು ವರ್ಷದ ನಂತರ, ಸ್ವಾತಂತ್ರ್ಯ ಸಿಕ್ಕಿದ ಎರಡು ದಿನಗಳ ಬಳಿಕ 1947ರ ಆಗೋಸ್ತು 17ರಂದು ರಾಹುಲರು ಭಾರತಕ್ಕೆ ಹಿಂದಿರುಗಿದರು. ಆ ಪುಣ್ಯಪರ್ವದ ಎರಡು ದಿನಗಳ ನಂತರ ತಲುಪಿದೆನಲ್ಲ ಎಂದವರಿಗೆ ಬೇಸರ. ದೇಶದಲ್ಲಾದ ಪರಿವರ್ತನೆಯನ್ನು ಕಣ್ಣಾರೆ ನೋಡಬೇಕೆಂದು ಚಡಪಡಿಕೆಯುಂಟಾಯಿತು. "ಇಂಗ್ಲಿಷ್ ಆಡಳಿತದ ಕಾಳ ರಾತ್ರಿಯ ಅಂತ್ಯವೋ ಎಂಬಂತೆ ದೇಶದಲ್ಲಾದ ಐತಿಹಾಸಿಕ ಪರಿವರ್ತನೆಯನ್ನು ನೋಡಬೇಕಿತ್ತು. ಆದರೆ ಹೃದಯ ನಡುಗಿಸಿದ ವಿದ್ಯಮಾನವೆಂದರೆ ಆಗಸ್ಟ್ ಹದಿನೈದರ ಮಹೋತ್ಸವದ ಜೊತೆಗೇ ವಿಭಜಿತ ಭಾರತ ಬೆಂಕಿ ಹತ್ತಿಕೊಂಡು ಉರಿಯುತ್ತಿರುವುದು."

ರಾಹುಲರು ಎರಡು ವಾರ ಮುಂಬಯಿಯಲ್ಲಿ ಉಳಿದರು. ಮಳೆಯ ದಿನಗಳು; ಆದರೂ ಒಂದಲ್ಲ ಒಂದು ಕಡೆ ಭಾಷಣ ನೀಡಲು ಹೋಗಬೇಕಾಗುತ್ತಿತ್ತು. ಮುಂಬಯಿಯಿಂದ ದೇಶದರ್ಶನಕ್ಕಾಗಿ ಹೊರಡಲೇಬೇಕು. ಸೆಪ್ಟಂಬರ್ 20ರಂದು ಪ್ರಯಾಗ ತಲುಪಿದರು. ಜೊತೆಗೆ ನಾಲ್ಕು ಮಣ ಭಾರದ ಪುಸ್ತಕಗಳು. ಪ್ರಯಾಗದಲ್ಲಿ ಸೆಪ್ಟಂಬರ್ ಆರರಿಂದ ಎಂಟನೇ ತಾರೀಕಿನವರೆಗೆ ನಡೆಯಲಿದ್ದ ಪ್ರಗತಿಶೀಲ ಲೇಖಕ ಸಂಘದ ಸಮ್ಮೇಳನಕ್ಕೆ ರಾಹುಲರನ್ನು ಅಧ್ಯಕ್ಷರನ್ನಾಗಿ ಮಾಡಿದ್ದರು. ನಗರದಲ್ಲಿನ ಚೂರಿ-ಇರಿತದ ಘಟನೆಗಳಿಂದಾಗಿ ಕರ್ಫ್ಯೂ ಇತ್ತು. ಅಷ್ಟಾಗಿಯೂ ಸಮ್ಮೇಳನ ಯಶಸ್ವಿಯಾಯಿತು.

ಪ್ರಗತಿಶೀಲ ಲೇಖಕರ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಮಾಡಿದ ಭಾಷಣ ರಾಹುಲರ ಪುಸ್ತಕ "ಸಾಹಿತ್ಯ ನಿಬಂಧಾವಲೀ"ಯಲ್ಲಿ ಸೇರಿದೆ. ಪ್ರಗತಿವಾದದ ಸಾಹಿತ್ಯಿಕ ಸ್ವರೂಪವನ್ನು ಸ್ಪಷ್ಟಗೊಳಿಸುತ್ತ ಅವರೆಂದರು "ಪ್ರಗತಿವಾದ ಯಾವುದೇ 'ಕಲ್ಟ್' ಅಥವಾ ಸಂಕುಚಿತ ಸಂಪ್ರದಾಯವಲ್ಲ. ಪ್ರಗತಿವಾದದ ಕೆಲಸವೆಂದರೆ ಪ್ರಗತಿಯ ಕಡೆ ಬಾಗಿಲನ್ನು ತೆರೆಯುವುದು. ಆ ಪಥವನ್ನು ಪ್ರಶಸ್ತವಾಗಿಸುವುದು. ಪ್ರಗತಿವಾದವೆಂಬುದು ಕಲಾವಿದನ ಸ್ವಾತಂತ್ರ್ಯದ ಶತ್ರುವಲ್ಲ, ಪಾರತಂತ್ರ್ಯದ ಶತ್ರು. "ಸಾಹಿತ್ಯ ಮಾತ್ರವಲ್ಲ ವಿಜ್ಞಾನಕ್ಕೂ ಸಂಬಂಧಿಸಿದಂತೆ ಸಾಹಿತ್ಯ ನಿರ್ಮಾಣದತ್ತ ವಿಶೇಷ ಒತ್ತು ಕೊಡುತ್ತ "ವಿಜ್ಞಾನವೇ ನಮ್ಮ ಸಮಾಜದ ದೈವಿಕ ಹಾಗೂ ಭೌತಿಕ ಕಷ್ಟಗಳನ್ನು ನಿವಾರಿಸಬಲ್ಲುದು. ವಿಜ್ಞಾನವೆಂಬುದು ಕೇವಲ ವಿಶೇಷಜ್ಞರಿಗೇ ಸೀಮಿತವಾಗದೆ ಮಾನ್ಯ ಜನರಾಡುವ ಜನಸಾಮಾನ್ಯರನ್ನು ತಲುಪಬೇಕು" ಎಂದರು.

ಟ್ರೇನಿನಲ್ಲಿ ಸುಲಭವಾಗಿ ಸೀಟು ಸಿಗುತ್ತಿರಲಿಲ್ಲ. ರೈಲು ಪ್ರಯಾಣ ಅಪಯರಹಿತವೂ ಆಗಿರಲಿಲ್ಲ. ಆದರೂ ರಾಹುಲರು ಪಯಣಿಸಿ ವಾರಣಾಸಿ, ಸಾರನಾಥ ಮಾರ್ಗವಾಗಿ ಛಪರಾ ತಲುಪಿದರು. ಛಪರಾ ಹೇಗೂ ರಾಹುಲರ ರಾಜಕೀಯ ಕಾರ್ಯಕ್ಷೇತ್ರವೇ ತಾನೆ ? ಅಲ್ಲಿ ಅನೇಕ ಹಳೆಯ ಮಿತ್ರರನ್ನು ಕಂಡರು. ಅನೇಕ ಕಡೆ ಭಾಷಣ ನೀಡಿದರು. ಅವರೀಗ ಕಮ್ಯೂನಿಸ್ಟ್ ಪಾರ್ಟಿಯ

ಸದಸ್ಯರಾಗಿರುವುದರಿಂದ ಸೋಶಲಿಸ್ಟ್ ಮಿತ್ರರು ಅವರನ್ನು ಸಂಪೂರ್ಣ ದೂರ ಮಾಡಿದ್ದರು. ಪಾಟ್ನಾದಲ್ಲಿಯೂ ಸಹ. ಪಾಟ್ನಾದಲ್ಲಿಯೂ ಹಳೆಯ ಮಿತ್ರರ ಭೇಟಿಯಾಯಿತು. ಅನೇಕ ಭಾಷಣ ಕಾರ್ಯಕ್ರಮಗಳೂ ಇದ್ದವು.

ಪಾಟ್ನಾ ಮ್ಯೂಸಿಯಂನ್ನು ನೋಡಲು ಹೋದರು. "ನನಗೂ ಈ ಮ್ಯೂಸಿಯಮಿಗೂ ವರ್ಷಗಳ ನಂಟು. ಟಿಬೇಟಿನಿಂದ ನಾನು ತಂದ ವಸ್ತುಗಳನ್ನೆಲ್ಲ ಇಲ್ಲಿಗೇ ದಾನ ಮಾಡಿದ್ದೇನೆ. ಟಿಬೇಟಿನ ಕೊನೆಯ, ನಾಲ್ಕನೇ, ಪ್ರವಾಸದಲ್ಲಿ ನಾನು ತಂದಿದ್ದ ಅಸಂಖ್ಯ ಸಂಸ್ಕೃತ ತಾಳೆಗ್ರಂಥಗಳು, ಫೋಟೋಗಳನ್ನು ಇನ್ನೂ ಬೆಳಕಿಗೆ ತರುವ ವ್ಯವಸ್ಥೆ ಆಗಿರಲಿಲ್ಲ. ಫೋಟೋಗಳು ಕೆಟ್ಟಿಲ್ಲ ಎಂದು ತಿಳಿದು ಸಂತೋಷಗೊಂಡೆ"–ರಾಹುಲರು ಅಂದು ಪಾಟ್ನಾ ಸಂಗ್ರಹಾಲಯಕ್ಕೆ ದಾನ ಮಾಡಿದ ಅಮೂಲ್ಯ ಸಾಮಗ್ರಿಗಳು ಇಂದಿಗೂ ಅತ್ಯಂತ ದುಃಸ್ಥಿತಿಯಲ್ಲಿವೆ.

ಪಾಟ್ನಾದಿಂದ ರಾಹುಲರು ಕಲ್ಕತ್ತಾಕ್ಕೆ ಹೋದರು. ಡಾ। ಸುನೀತಿ ಕುಮಾರ ಚಟರ್ಜಿಯವರನ್ನು ಕಂಡರು. ಪಂಡಿತ ವಿಧುಶೇಖರ ಭಟ್ಟಾಚಾರ್ಯ ಅವರನ್ನು ನೋಡಲು ಹೋದರೆ ಅವರು ಆ ಜೀರ್ಣಗೊಂಡ ದೇಹಸ್ಥಿತಿಯಲ್ಲಿಯೂ ಅಸಂಗನ ಮಹಾನ್ ಕೃತಿ "ಯೋಗಾಚಾರ್ಯ ಭೂಮಿ"ಯ ಸಂಪಾದನ ಕಾರ್ಯದಲ್ಲಿ ಮುಳುಗಿದ್ದರು. "ಮಹಾಮಹೋಪಾಧ್ಯಾಯ ವಿಧುಶೇಖರ ಭಟ್ಟಾಚಾರ್ಯ ಅವರೆಂದರೆ ವಿದ್ವಾಂಸರಿಗೆ ಸಂಶೋಧಕರಿಗೆ ಒಬ್ಬ ಆದರ್ಶ ಪುರುಷರು. ಅವರ ಜ್ಞಾನ ಮತ್ತು ಸಾಮರ್ಥ್ಯದ ಸಂಪೂರ್ಣ ಪ್ರಯೋಜನವನ್ನು ನಾವು ಪಡೆಯಲು ಸಾಧ್ಯವಾಗಲಿಲ್ಲವಲ್ಲ ಎಂಬುದೇ ಖೇದದ ಸಂಗತಿ" ಎಂದು ಬರೆದಿದ್ದಾರೆ ರಾಹುಲಜೀ.

ಆರು ವರ್ಷಗಳ ಹಿಂದೆ ಮಿದುಳು ನಿಷ್ಕ್ರಿಯಗೊಂಡು ಈಗ ಜೀವನ್ಮೃತ ಅವಸ್ಥೆಯಲ್ಲಿದ್ದ ನಲ್ವತ್ತೊಂಭತ್ತು ವರ್ಷ ಪ್ರಾಯದ ನಜ್ರುಲ್ ಇಸ್ಲಾಂ ಅವರನ್ನು ಹೋಗಿ ನೋಡಿ ಬಂದರು. "ಒಂದು ಕಾಲದಲ್ಲಿ ಅಗ್ನಿವೀಣೆ ಬಾರಿಸಿದ ಈ ಮಿದುಳು ಈಗ ಹೀಗೆ ನಿಷ್ಕ್ರಿಯವಾಗಿದೆಯಲ್ಲ ! ನಿಶ್ಚೇಷ್ಟ ಸ್ಥಿತಿಯಲ್ಲಿ ಅವರಿಗೆ ಸುಖದುಃಖದ ಏನು ಅನುಭವವಾಗಲು ಸಾಧ್ಯ ? ಅವರ ಪುಸ್ತಕಗಳನ್ನು ಪ್ರಕಾಶಿಸಿ ಜನ ಲಾಭ ಹೊಡೆಯುತ್ತಿದ್ದಾರೆ, ಕವಿಯೋ ಆರ್ಥಿಕ ಸಂಕಷ್ಟದಲ್ಲಿ ಜೀವನ ಕಳೆಯುತ್ತಿದ್ದಾನೆ–ಇವತ್ತಿನ ಸಮಾಜಕ್ಕೆ ಇದು ಶೋಭೆ ತರುವಂತಹ ಮಾತೇ ? "ನಜರುಲ್ ಇಸ್ಲಾಂ ಅವರ ಬಗ್ಗೆ ರಾಹುಲರು ಹೇಳಿದ ಮಾತು ಮುಂದೆ ಸ್ಮೃತಿ ಹೀನತೆಯ ದಿನಗಳಲ್ಲಿ ಅವರಿಗೂ ಅನ್ವಯಿಸಿತು ಎಂಬುದು ಎಂತಹ ವಿಡಂಬನೆ !

ಕಲ್ಕತ್ತಾದಿಂದ ಕಟಕ್. ಅಲ್ಲಿಯೂ ಬಿಡುವಿಲ್ಲದ ಕಾರ್ಯಕ್ರಮಗಳು, ಭಾಷಣಗಳು ಅಲ್ಲಿಂದ ಬಾಲಾಸೋರ್ ಮತ್ತೆ ಖಡಕಪುರ. ಖಡಕಪುರದಿಂದ ಟ್ರೈನು ಹಿಡಿದು ವರ್ಧಾ. ಅಲ್ಲಿ ಆನಂದಜೀಯವರ ಮೇಲ್ವಿಚಾರಣೆಯಲ್ಲಿ ವರ್ಧಾದ ರಾಷ್ಟ್ರಭಾಷಾ ಪ್ರಚಾರ ಸಮಿತಿ ಸಾಕಷ್ಟು ಬೆಳೆದಿತ್ತು. ರಾಹುಲರು ಅಲ್ಲಿ ಎರಡು ದಿನವಿದ್ದರು. ಸೇವಾಗ್ರಾಮದಲ್ಲಿ ತಿರುಗಾಡಿ ಬಂದರು. ಆನಂದಜೀಯವರ ಸಂಗಡ ವರ್ಧಾದಿಂದ ಜಬಲ್‌ಪುರಕ್ಕೆ ಹೋಗಿ ಭೇಡಾ ಘಾಟ್ ಮತ್ತು ಅದರ ಸಮೀಪದ ಅರವತ್ತನಾಲ್ಕು ಯೋಗಿನೀ ಮಂದಿರ ನೋಡಿದರು.

ಜಬಲ್‌ಪುರದಿಂದ ಆನಂದಜೀ ವರ್ಧಾಕ್ಕೆ ವಾಪಸು ಬಂದರೆ ರಾಹುಲರು ಮುಂದುವರಿದು ಬುಂದೇಲ್‌ಖಂಡದ ಕೋಂಚ್, ಮಹೇಶಪುರ ಮುಂತಾದ, ತಾನು ಹಿಂದೆ ಆರ್ಯ ಸಮಾಜದ

ಪ್ರಚಾರಕನಾಗಿ ಕೆಲಸ ಮಾಡಿದ, ಊರುಗಳನ್ನೆಲ್ಲ ತಿರುಗಿ ಕಾನ್ಪುರ ಹಾದು ಪ್ರಯಾಗಕ್ಕೆ ಬಂದು ತಲುಪಿದರು. 1947ರ ಸೆಪ್ಟೆಂಬರ್‌ನಲ್ಲಿ ಪ್ರಯಾಗದಿಂದ ಹೊರಟವರು, ದೇಶದ ಒಂದು ದೊಡ್ಡ ಭಾಗದ ಸುತ್ತು ಹೊಡೆದು ಇಡೀ ಒಂದು ತಿಂಗಳ ನಂತರ ಹೊರಟಲ್ಲಿಗೆ ವಾಪಸು ಬಂದು, ಮರುದಿನವೇ ಜೋರಾಗಿ ಬರವಣಿಗೆಯಲ್ಲಿ ತೊಡಗಿದರು.

ಪ್ರಯಾಗದಲ್ಲಿ ಗಣಿತಜ್ಞ ಡಾ। ಬದರೀನಾಥ ಪ್ರಸಾದರ ಮನೆ, ರಾಹುಲರಿಗೆ ಸ್ವಂತ ಮನೆಯಂತೆಯೇ ಇತ್ತು. ಆದರೆ ಅಲ್ಲಿ ಬರುವವರು-ಹೋಗುವವರು ಹೆಚ್ಚು. ಆದುದರಿಂದ ಅವರು ದಾರಾಗಂಜ್‌ನಲ್ಲಿದ್ದ ರಾಯ್ ರಾಮಚರಣರ ಮನೆಗೆ ಹೊರಟು ಹೋದರು. ಅವರ ಬರವಣಿಗೆಯಲ್ಲಿ ನಾಗಾರ್ಜುನರೂ ಸಹಕರಿಸಿದರು. ಸದರುದ್ದೀನ್ ಐನೀ ಯ ತಾಜಿಕ ಕಾದಂಬರಿಗಳಾದ "ದಾಖುಂದಾ" ಮತ್ತು "ಗುಲಾಮಾನ್"ಗಳ ಉರ್ದು ಅನುವಾದವನ್ನು ರಾಹುಲರು ಲೆನಿನ್‌ಗ್ರಾಡಿನಲ್ಲಿದ್ದಾಗಲೇ ಮಾಡಿಯಾಗಿತ್ತು. ಈಗ ಪ್ರಯಾಗದಲ್ಲಿ ಹದಿಮೂರು ದಿನಗಳಲ್ಲಿ "ದಾಖುಂದಾ"ದ ಹಿಂದೀ ಅನುವಾದ ಮಾಡಿ ಪ್ರೆಸ್ಸಿಗೆ ಕೊಟ್ಟು ಬಿಟ್ಟರು. ನಂತರ "ಸೋವಿಯತ್ ಭೂಮಿ"ಯ ಎರಡನೆಯ ಮುದ್ರಣಕ್ಕಾಗಿ ಮತ್ತೆ ಕೆಲ ಹೊಸ ಪುಟಗಳನ್ನು ಜೋಡಿಸಿ ಒಂದೂವರೆ ಪಟ್ಟು ಹಿಗ್ಗಿಸಿದರು. ಆ ಬಳಿಕ "ಸೋವಿಯತ್-ಮಧ್ಯ ಏಶಿಯಾ" ಬರವಣಿಗೆ ಕೈಗೆತ್ತಿಕೊಂಡರು. ರಾಹುಲಜೀ ತನ್ನ ಜೊತೆ ಲಂಡನಿನಿಂದ ತಂದಿದ್ದ ಪುಟ್ಟ ಶಕ್ತಿಶಾಲಿ ರೇಡಿಯೋದಲ್ಲಿ ಪ್ರತಿ ಸಂಜೆ ಭಾರತ ಮತ್ತು ಪಾಕಿಸ್ತಾನೀ ವಾರ್ತೆಗಳನ್ನು ತಪ್ಪದೆ ಕೇಳುತ್ತಿದ್ದರು.

ಮಿತ್ರ ಸಾಹಿತಿಗಳೊಂದಿಗೆ ಭೇಟಿ-ಸಲ್ಲಾಪ ಕೂಡ ಸಾಗಿಯೇ ಇತ್ತು. ಪಂಡಿತ ಶ್ರೀ ನಾರಾಯಣ ಚತುರ್ವೇದಿಯವರ ನಿವಾಸವಿದ್ದುದು ದಾರಾಗಂಜ್‌ನಲ್ಲಿಯೇ. ಅದು ಸಾಹಿತಿಗಳ ಕೂಟ ಸೇರುವ ಒಂದು ಜಾಗ." "ಸರಸ್ವತೀ"ಯ ಮಾಜಿ ಸಂಪಾದಕ ಪಂಡಿತ ದೇವೀದತ್ತ ಶುಕ್ಲ ಅವರನ್ನು ರಾಹುಲಜೀ ನೋಡಿ ಬರಲು ಹೋದರು. 1927-28ರಲ್ಲಿ ಶ್ರೀಲಂಕಾದಿಂದ ರಾಹುಲರು ಕಳಿಸಿದ ಲೇಖನಗಳನ್ನು ಸ್ವಾಗತಿಸಿ 'ಸರಸ್ವತೀ'ಯಲ್ಲಿ ಪ್ರಕಟಿಸಿದವರು ದೇವೀದತ್ತ ಶುಕ್ಲರೇ. ಈಗ ಅವರಿಗೆ ಕಣ್ಣು ಕಾಣಿಸುತ್ತಿರಲಿಲ್ಲ. "ಜೀವನ ಪೂರ್ತಿ ಸಾಹಿತ್ಯ ಸೇವೆ ಮಾಡಿದವರು ಈಗ ಯಾವ ರೀತಿಯ ಜೀವನ ಕಳೆಯಬೇಕಾಗಿ ಬಂತು-ದುಃಖವಾಗುತ್ತ ಇತ್ತು. ನಮ್ಮಲ್ಲಿ ಸತ್ತವರಿಗೆ ಶ್ರಾದ್ಧ ಮಾಡುವ ಕ್ರಮಿದೆ. ಬಹುಶಃ ಹೀಗಾಗಿಯೇ ಜೀವಂತ-ಶ್ರಾದ್ಧ ಮಾಡಲು ನಮಗೆ ತಿಳಿದಿಲ್ಲ."

ಆ ಸಮಯದಲ್ಲಿಯೇ ಮಹಾದೇವೀಯವರನ್ನು ಭೇಟಿ ಮಾಡಿದರು. ಪಂತ-ಪ್ರಸಾದ-ನಿರಾಲಾರ ನಂತರ ಆ ಪೀಳಿಗೆಯ ಸರ್ವೋಚ್ಚ ಕವಿಗಳಲ್ಲಿ ಮಹಾದೇವೀಯವರಿಗೆ ರಾಹುಲರ ದೃಷ್ಟಿಯಲ್ಲಿ ಪ್ರಥಮ ಸ್ಥಾನ. ಅವರ ಜೊತೆ ಮಾತುಕತೆಯಲ್ಲಿ ನಿರಾಲಾ ಅವರ ಪ್ರಸ್ತಾಪ ಸ್ವಾಭಾವಿಕವಾಗಿ ಬಂತು. "ನಿರಾಲಾಜೀಯವರನ್ನು ಎಷ್ಟು ಜನ ಹುಚ್ಚನೆಂದು ತಿಳಿಯುತ್ತಿದ್ದರು, ನಾನು ಹಾಗೆ ತಿಳಿಯುವುದಿಲ್ಲ. ನಾನವರನ್ನು ಜಾಗೃತ ಮತ್ತು ಸ್ವಪ್ನಾವಸ್ಥೆಯ ಭೇದವಳಿದ ಚೌರಾಸೀ ಸಿದ್ಧರ ಶ್ರೇಣಿಯವರೆಂದು ತಿಳಿಯುವವನು. ಕವಿಯಾಗಿ ಮಾತ್ರವಲ್ಲ ಒಬ್ಬ ಮನುಷ್ಯನಾಗಿಯೂ ನಿರಾಲಾ ಸಾಟಿಯಿಲ್ಲದವರು."

ಭಿಕ್ಷು ರಾಹುಲರು ಮೂರನೇ ಬಾರಿ ಟಿಬೇಟು ಸಂಚಾರ ಮುಗಿಸಿ ಭಾರತಕ್ಕೆ ಹಿಂದಿರುಗಿದ ಮೇಲೆ 1937ರ ಡಿಸೆಂಬರ್‌ನಲ್ಲಿ ಬಲಿಯಾ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಮಾತಾಡಿದ್ದರು. ಅ ತಿಂಗಳಿನಲ್ಲಿಯೇ ಪಾಟ್ನಾಕ್ಕೆ ಹೋದಾಗ ಅ ವರ್ಷದ ಹಿಂದೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ

ಸ್ಥಾನಕ್ಕಾಗಿ ಅವರ ಹೆಸರು ಸೂಚಿಸಲ್ಪಟ್ಟಿದೆ ಎಂದು ಗೊತ್ತಾಗಿತ್ತು. ಅವರದಕ್ಕೆ ಬಿಹಾರದ ಮಿತ್ರರ ಬಳಿ ಒಪ್ಪಿಗೆ ಕೊಟ್ಟಿರಲಿಲ್ಲ, ಕಾರಣ ದೇಶದಿಂದ ಹೊರಗೆ ಸಂಚಾರ ಹೋಗುವುದಿತ್ತು. ಆದರೂ ಇತರ ಪ್ರಾಂತಗಳವರು ಅವರಿಗೆ ಮತ ನೀಡಿದ್ದರು. ರಾಹುಲರ ಎದುರು, ಸೇಠ್ ಜಮನಾಲಾಲ ಬಜಾಜ್, ಗಾಂಧೀಜಿಯವರ ಭಾರೀ ಸಮರ್ಥನೆಯಿದ್ದೂ ಅತೀವ ಕಷ್ಟದಿಂದ ಚುನಾಯಿತರಾಗಿದ್ದರು.

ಈಗ 1947ರ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕಾಗಿ ಮತ್ತೆ ರಾಹುಲರ ಹೆಸರು ಪ್ರಸ್ತಾಪಕ್ಕೆ ಬಂತು. ರಾಹುಲರ ಮಿತ್ರರು ಈ ಸಲ ಆರಂಭದಲ್ಲಿ ಅವರಿಗಿದರ ಸುಳಿವನ್ನು ಕೊಡಲಿಲ್ಲ. ಅವರಿಗೆ ಅದು ಮೊದಲ ಸಲ ತಿಳಿದದ್ದೇ ನವೆಂಬರಿನಲ್ಲಿ, ಅಷ್ಟರಲ್ಲೇ ಎಂದರೆ ನವೆಂಬರ್ ಮೂರರಂದು, ಫಲಿತಾಂಶ ಸಹ ಪ್ರಕಟವಾಗಿ ಬಿಟ್ಟಿತು. ಸೇಠ್ ಗೋವಿಂದದಾಸರಿಗೆ 145 ಮತ್ತು ರಾಹುಲಜೀಯವರಿಗೆ 180 ಮತಗಳು ಸಿಕ್ಕಿದ್ದುವು. ಈ ಸಲದ ಸಮ್ಮೇಳನ ಮುಂಬಯಿಯಲ್ಲಿ ನಡೆಯಲಿತ್ತು.

ಸಮ್ಮೇಳನದ ಅಧ್ಯಕ್ಷ ಸ್ಥಾನದ ಅರ್ಥವೆಂದರೆ, ಅನೇಕ ಹೊಸ ಜವಾಬ್ದಾರಿಗಳ ನಿರ್ವಹಣೆ. ಇದಕ್ಕಾಗಿ ರಾಹುಲರು ತನ್ನ ಓದು-ಬರವಣಿಗೆಯ ಯೋಜನೆಯಲ್ಲಿ ಕೆಲ ಮಾರ್ಪಾಡುಗಳನ್ನು ಮಾಡಿಕೊಳ್ಳಬೇಕಾಯಿತು. ಅವರ ಆರೋಗ್ಯ ಚೆನ್ನಾಗಿದ್ದರೂ ಹೊಟ್ಟೆ ಮುರಿದು ಬರುವ ನೋವಿನ ಉಪದ್ರವವೊಂದು ಅವರನ್ನು ಪದೇ ಪದೇ ಕಾಡುತ್ತಿತ್ತು. 1947ರ ಡಿಸೆಂಬರ್ ಮಧ್ಯದಲ್ಲಿ ಒಮ್ಮೆ ಆ ಹೊಟ್ಟೆನೋವು ಕಾಣಿಸಿಕೊಂಡು ಇದು ಡಯಬಿಟಿಸ್‌ನ ಸೂಚನೆಯೆಂದು ಆಮೇಲೆ ಸ್ಪಷ್ಟವಾಯಿತು.

ರಾಹುಲರು ಅಧ್ಯಕ್ಷ ಭಾಷಣವನ್ನು ತಯಾರು ಮಾಡಿದರು. 1947ರ ಡಿಸೆಂಬರ್ 24ರಂದು ಪ್ರಯಾಗದಿಂದ ಮುಂಬಯಿಗೆ ಹೊರಟರು. ಜೊತೆಗೆ ಅನೇಕ ಮಿತ್ರರು ಮತ್ತು ನಾಗಾರ್ಜುನ ಎರಡು ದಿನಗಳ ಬಳಿಕ ಮುಂಬಯಿ ತಲುಪಿದರು. ಅಲ್ಲಿ ಅವರಿಗೆ ತಂಗಲು ಮಲಬಾರ್ ಹಿಲ್‌ನಲ್ಲಿದ್ದ ಸೇಠ್ ಘನಶ್ಯಾಮದಾಸ ಪೋದ್ದಾರರ ನಿವಾಸದಲ್ಲಿ ವ್ಯವಸ್ಥೆಯಾಗಿತ್ತು. ಅದೇ ದಿನ ಆನಂದಜೀ ಕೂಡ ಅಲ್ಲಿಗೆ ಬಂದರು. ಸ್ವಾತಂತ್ರ್ಯೋತ್ತರದ ಪ್ರಥಮ ಸಮ್ಮೇಳನವಿದು. ಆದುದರಿಂದ ಪ್ರತಿನಿಧಿಗಳ ಸಂಖ್ಯೆ ಹಿಂದಿನದಕ್ಕಿಂತ ಅಧಿಕವಿತ್ತು.

ರಾಹುಲರು ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರಷ್ಟೆ. ಅಧಿವೇಶನ ಆರಂಭಗೊಳ್ಳುವ ಮುಂಚೆ ಮುಂಬಯಿಯಲ್ಲಿದ್ದ ಪಾರ್ಟಿಯ ಕೇಂದ್ರೀಯ ಕಛೇರಿಗೆ ಹೋದರು. ಅಲ್ಲಿನ ಮಿತ್ರರು ಅವರ ಅಧ್ಯಕ್ಷ ಭಾಷಣದ ಪ್ರಕಟಿತ ಪ್ರತಿಗಳನ್ನು ಓದಿದ್ದರು. ಅದರಲ್ಲಿ ಹಿಂದೀ-ಉರ್ದು ವಿಚಾರವಾಗಿ "ಇಸ್ಲಾಂ ಅನ್ನು ಭಾರತೀಯವಾಗಿಸಬೇಕು" ಎಂಬ ಉಪಶೀರ್ಷಿಕೆಯಡಿಯಲ್ಲಿ ಅವರು ಹೇಳಿದ ಮಾತುಗಳಲ್ಲಿ ಆ ಮಿತ್ರರಿಗೆ ಸಹಮತವಿರಲಿಲ್ಲ. ಆ ಅಂಶಗಳನ್ನು ಭಾಷಣದಿಂದ ತೆಗೆದು ಹಾಕಬೇಕೆಂಬ ಅಪೇಕ್ಷೆ ಅವರದು. ಆದರೆ, ಒಮ್ಮೆ ಭಾಷಣ ಅಚ್ಚಾದ ಬಳಿಕ ಬೇಕೆಂದರೂ ಹಾಗೆ ತೆಗೆದು ಹಾಕಲು ರಾಹುಲರಿಗೆ ಸಾಧ್ಯವಿರಲಿಲ್ಲ.

ಡಿಸೆಂಬರ್ 28ರಂದು ಸಮ್ಮೇಳನ ಆರಂಭವಾಯಿತು. ಪಂಡಿತ ಗೋವಿಂದ ವಲ್ಲಭಪಂತ್ ಅವರ ಉದ್ಘಾಟನಾ ಭಾಷಣವಾದ ಬಳಿಕ ಶ್ರೀ ವಿಯೋಗೀ ಹರಿ, ಶ್ರೀ ಮಾಖನಲಾಲ ಚತುರ್ವೇದೀ ಮತ್ತು ಶ್ರೀ ಕನ್ಹೈಯಾಲಾಲ ಮುನ್ಶಿಯವರು ರಾಹುಲಜೀಯವರ ಹೆಸರನ್ನು ಔಪಚಾರಿಕವಾಗಿ ಅಧ್ಯಕ್ಷ ಸ್ಥಾನಕ್ಕೆ ಸೂಚಿಸಿದರು. ಭಾಷಣಕ್ಕೆ ಮುನ್ನ ಡಾ। ಅಧಿಕಾರಿ ಹಿಂದಿ-ಉರ್ದು ಸಂಬಂಧ ರಾಹುಲರ ವಿಚಾರಗಳು ಪಾರ್ಟಿಯ ವಿಚಾರಗಳಲ್ಲ ಎಂಬುದಾಗಿ ಅವರು ಸ್ಪಷ್ಟಪಡಿಸಬೇಕು ಎಂದು ಪುನಃ

ಬರೆದಿದ್ದರು. ರಾಹುಲಜೀ ಅದೇ ದಿನ ಡಾ। ಅಧಿಕಾರಿಯವರಿಗೆ ತಾವು ಪಾರ್ಟಿ ನೀತಿಯ ಪರ ನಿಲ್ಲದಿರುವ ಕಾರಣ ತಾವಿನ್ನು ಪಾರ್ಟಿಯಲ್ಲಿರಲು ಯೋಗ್ಯನಲ್ಲ ಎಂದು ತಿಳಿಯುತ್ತೇನೆ ಎಂದು ಬರೆದರು. ಹೀಗೆ ರಾಹುಲಜೀಯವರ ಕಮ್ಯುನಿಸ್ಟ್ ಪಾರ್ಟಿ ಜೊತೆಗಿನ ಸಂಬಂಧ ವಿಚ್ಛೇದಗೊಂಡಿತು. ಮುಂಬಯಿಯಲ್ಲಿ ನಡೆದ ಹಿಂದೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ರಾಹುಲರು ನೀಡಿದ ಭಾಷಣ ಮುಂದೆ "ಹಮಾರಾ ಸಾಹಿತ್ಯ" ಎಂಬ ಶೀರ್ಷಿಕೆಯಲ್ಲಿ ಅವರ "ಸಾಹಿತ್ಯ ನಿಬಂಧಾವಲಿ"ಯಲ್ಲಿ ಸೇರಿದೆ. ಭಾಷಣದ ಆರಂಭದ ಸಾಲುಗಳು ಹೀಗಿವೆ: "ಹಿಂದಿಯ ಈ ಸರ್ವೋಚ್ಚ ಸಮ್ಮೇಳನಕ್ಕೆ ಅಧ್ಯಕ್ಷನನ್ನಾಗಿಸಿ ನೀವು ನನ್ನನ್ನು ಸ್ವಾಗತಿಸಿದ್ದೀರಿ. ಇದಕ್ಕಾಗಿ ಹಾರ್ದಿಕ ಧನ್ಯವಾದ. ಒಬ್ಬ ಬೌದ್ಧ ಹಾಗೂ ಎಡಪಂಥೀಯ ವಿಚಾರದ ವ್ಯಕ್ತಿಗೆ ಈ ಗೌರವವನ್ನು ನೀಡಿ ಹಿಂದೀ ಜಗತ್ತಿನಲ್ಲಿ ಸಂಕುಚಿತ ಭಾವನೆಗೆ ಎಡೆ ಇಲ್ಲವೆಂಬುದನ್ನು ಸಿದ್ಧಪಡಿಸಿ ಬಿಟ್ಟಿರಿ. ಈ ಬಗ್ಗೆ ಬರೆಯುತ್ತಾ ರಾಹುಲರು "ನನ್ನ ಭಾಷಣ ಉದ್ದವಾಗಿತ್ತು. ಆದರೆ ಅದರ ಕೆಲವಂಶಗಳನ್ನು ಮಾತ್ರ ಓದಿ ಮೂವತ್ತು ನಿಮಿಷಗಳಲ್ಲಿ ಮುಗಿಸಿಬಿಟ್ಟೆ"-ಎನ್ನುತ್ತಾರೆ. ಪಾರ್ಟಿಯಿಂದ ಬೇರ್ಪಡುವಂತೆ ಮಾಡಿದ ಭಾಷಣದ ಆ ಅಂಶಗಳನ್ನು ಅವರು ಆ ಮೂವತ್ತು ನಿಮಿಷಗಳಲ್ಲಿ ಓದಿದರೋ ಇಲ್ಲವೋ ಅಧಿವೇಶನದಲ್ಲಿ ಉಪಸ್ಥಿತರಿದ್ದ ಶ್ರೋತೃಗಳಿಗೇ ಹೇಳಲು ಸಾಧ್ಯ. ವಿವಾದಾಸ್ಪದ ಅಂಶದ ಎರಡು ಮಾದರಿಗಳಿವು-"ಇಡೀ ಸಂಘದ ರಾಷ್ಟ್ರಭಾಷೆ ಮತ್ತು ರಾಷ್ಟ್ರಲಿಪಿ ಹಿಂದಿಯೇ ಆಗಬೇಕು. ಉರ್ದು ಭಾಷೆ ಮತ್ತು ಲಿಪಿಗೆ ಅಲ್ಲಿ ಯಾವ ಸ್ಥಾನವೂ ಇಲ್ಲ."

".....ಇಸ್ಲಾಮನ್ನು ಭಾರತೀಯಗೊಳಿಸಬೇಕು. ಭಾರತೀಯತೆಯ ವಿರುದ್ಧ ಅದರ ವಿದ್ವೇಷ ಶತಮಾನಗಳಿಂದ ನಡೆದು ಬಂದಿದೆ ಹೌದು, ಆದರೆ ನವೀನ ಭಾರತದಲ್ಲಿ ಯಾವುದೇ ಧರ್ಮ ಭಾರತೀಯತೆಯನ್ನು ಪೂರ್ಣ ಸ್ವೀಕರಿಸಿದ ಹೊರತು ಅರ್ಥಪೂರ್ಣವಾಗಲಾರದು. ಬೌದ್ಧ, ಕ್ರೈಸ್ತ, ಪಾರಸೀಯರಿಗೆ ಭಾರತೀಯತೆಯ ಕುರಿತು ವಿರೋಧವಿಲ್ಲದಿರುವಾಗ ಇಸ್ಲಾಂಗೆ ಮಾತ್ರ ಯಾಕಿದೆ ? ಅದು ಹಿಂದೂಸ್ಥಾನದ ಸಭ್ಯತೆ, ಸಾಹಿತ್ಯ, ಇತಿಹಾಸ, ವೇಷಭೂಷಣ ಮನೋಭಾವ ಎಲ್ಲದರ ಜೊತೆ ಹೊಂದಿಕೊಳ್ಳಲಿ-ತುರ್ಕಿ, ಇರಾನ್ ಮತ್ತು ಸೋವಿಯತ್-ಮಧ್ಯ ಏಶಿಯಾದ ಪ್ರಜಾತಂತ್ರಗಳಲ್ಲಿ ಅದು ಹೊಂದಿಕೊಂಡಿರುವ ಹಾಗೆ. ಇಸ್ಲಾಂನ ಆತ್ಮರಕ್ಷಣೆಗೆ ಕೂಡ ಇದು ಅವಶ್ಯಕ".

ಮೇಲಿನ ಎರಡನೇ ಅಂಶದಲ್ಲಿ ರಾಹುಲರು ಹೇಳಿದ ಮಾತು ನಿಜವಾಗಿಯೂ ಒಬ್ಬ ಸಂಪ್ರದಾಯವಾದಿಗೆ ಕಹಿಎನಿಸದಂತೆನಿಸಬಲ್ಲುದು. ಆದರೆ ತನ್ನದೇ ಬ್ರಾಹ್ಮಣ ಧರ್ಮೀಯರಿಗೆ ಮತ್ತು ಹಿಂದುತ್ವವಾದಿಗಳಿಗೆ ಇದಕ್ಕಿಂತಲೂ ಸಾವಿರದಷ್ಟು ಅಧಿಕ ಕಾರ್ಕೋಟಕ ಮಾತುಗಳನ್ನು ಅವರು ಅನೇಕ ಸಲ ಹೇಳಿರುವುದನ್ನು ನಾವು ಏಕೆ ಮರೆಯುತ್ತೇವೆ ? ಅವರು ಭಾಷಣದಲ್ಲಿ ಯಾವ ಭಾರತೀಯತೆಯ ಪ್ರಸ್ತಾಪ ಮಾಡಿದ್ದರೋ ಅದು ಹಿಂದುತ್ವವಾದಿಗಳ ಭಾರತೀಯತೆ ಅಲ್ಲ.

ಡಿಸೆಂಬರ್ 31ರಂದು ಅಧಿವೇಶನ ಮುಗಿಯಿತು. ಜೊತೆಗೇ 1947ನೇ ಇಸವಿ ಕೂಡಾ. ವರ್ಷಾಂತ್ಯದಲ್ಲಿ ರಾಹುಲರೇ ತನ್ನ ಓದು-ಬರಹದ ಒಂದು ಲೆಕ್ಕವನ್ನೂ, ಪ್ರಾಯಃ, ಬರೆದಿಡುತ್ತಿದ್ದರು. ಭಾರತಕ್ಕೆ ಹಿಂದಿರುಗಿ ಸುಮಾರು ನಾಲ್ಕು ತಿಂಗಳುಗಳೇ ಆಗಿದ್ದುವು. ಅಂದಾಜು ಒಂದೂವರೆ ತಿಂಗಳು ದೇಶದರ್ಶನದಲ್ಲಿ ಕಳೆದು ಹೋಗಿತ್ತು. ಮೂರು ತಿಂಗಳಲ್ಲಿ ಕೆಲ ಲೇಖನಗಳನ್ನೂ ಮತ್ತು ಮೂರು ಪುಸ್ತಕಗಳನ್ನು ಬರೆದಿದ್ದರು. "ದಾಖುಂದಾ", "ಸೋವಿಯತ್ ಭೂಮಿ", (ಎರಡನೆಯ ಆವೃತ್ತಿ) ಮತ್ತು "ಸೋವಿಯತ್ ಮಧ್ಯ ಏಶಿಯಾ".

ಮುಂಬಯಿಯಲ್ಲಿದ್ದಾಗ ತಮ್ಮ ಜೀವನ ಇನ್ನು ಮಧುಷೋಹ ಕಾಹಿಲೆಯ ನಂಟಿನೊಂದಿಗೇ ಸವೆಯಬೆಕೆನ್ನುವುದೂ ದೃಢವಾಯಿತು. ಆಗ ಅವರಿಗೆ 54 ವರ್ಷ ವಯಸ್ಸು.

ರಾಹುಲರು ಸಮ್ಮೇಳನದಲ್ಲಿ ಸ್ವತಃ ಪಾರಿಭಾಷಿಕ ಶಬ್ದ ನಿರ್ಮಾಣದ ಕುರಿತು ಪ್ರಸ್ತಾಪ ಎತ್ತಿದ್ದರು. ರಾಜರ್ಷಿ ಪುರುಷೋತ್ತಮದಾಸ ಟಂಡನ್ ಆ ಜವಾಬ್ದಾರಿಯನ್ನು ರಾಹುಲಜೀಯವರಿಗೇ ಒಪ್ಪಿಸಿದರೆ, ಅದನ್ನು ಸ್ವೀಕರಿಸಿದರು. ಮುಂಬಯಿಯಿಂದ ನಾಗಾರ್ಜುನರ ಜೊತೆ ಹೊರಟು ರಾಯಪುರ ತಲುಪಿ ಅಲ್ಲಿ ವಿದ್ಯಾರ್ಥಿಗಳ ಒಂದು ಕಾರ್ಯಕ್ರಮದಲ್ಲಿ ಭಾಗವಹಿಸಿ 1948ರ ಜನವರಿ 6ರಂದು ಪ್ರಯಾಗಕ್ಕೆ ವಾಪಸು ಬಂದರು. ಸಮ್ಮೇಳನದ ಅಧ್ಯಕ್ಷನಾಗಿ ಈಗ ರಾಹುಲಜೀ ದೇಶವಿಡೀ ಸಾಹಿತ್ಯ-ಸಂಚಾರ ಮಾಡಬೇಕು. ಪಾರಿಭಾಷಿಕ ಶಬ್ದಕೋಶ ನಿರ್ಮಾಣ ಕಾರ್ಯ ಆರಂಭಿಸಬೇಕು. ಜೊತೆಗೆ ಸ್ವಂತ ಬರವಣಿಗೆಯೂ ಸಾಗಬೇಕು.

# ಪಾರಿಭಾಷಿಕ ಶಬ್ದ ನಿರ್ಮಾಣ ಕಾರ್ಯ

1948ನೆಯ ಇಸವಿಯ ಆರಂಭ. ಸಮ್ಮೇಳನದ ಅಧ್ಯಕ್ಷರಾದ ಪ್ರಯುಕ್ತ ರಾಹುಲರು ಇನ್ನು ಮುಂದೆ ಕನಿಷ್ಠ ಒಂದು ವರ್ಷವಾದರೂ ಹಿಂದೀ ಭಾಷೆಯ ಕೆಲಸಕ್ಕೆ ಎಲ್ಲಕ್ಕಿಂತಲೂ ಹೆಚ್ಚಿಗೆ ಮಹತ್ವ ಕೊಡಬೇಕು. ಸಾಹಿತ್ಯಿಕ ಪ್ರವಾಸ, ಪಾರಿಭಾಷಿಕ ಶಬ್ದ ನಿರ್ಮಾಣ ಕಾರ್ಯದ ಹೊಣೆ, ಇಷ್ಟಲ್ಲದೆ ಬೇಸಗೆಯಲ್ಲಿ ಹಿಮಾಲಯದ ಯಾವುದಾದರೂ ಹೊಸ ಪ್ರದೇಶಕ್ಕೆ ಎಂದಿನಂತೆ ಸಂಚಾರ ಹೋಗಿ ಬರಬೇಕೆಂತಲೂ ಯೋಚನೆ ಇತ್ತು. ಜೊತೆಯಲ್ಲಿ ತಮ್ಮ ಬರವಣಿಗೆಯೂ ಸಾಗಬೇಕು, ಸಂಪಾದನೆಯೂ ಆಗಬೇಕು.

ರಾಹುಲರು ಸಮ್ಮೇಳನದ ಅಧ್ಯಕ್ಷರಾಗಿರದಿದ್ದರೆ, ಅವರ-ಕಮ್ಯೂನಿಸ್ಟ್ ಪಾರ್ಟಿಯ ಸಂಬಂಧ ಕಡಿದು ಹೋಗಿರದಿದ್ದರೆ-ಊಹಿಸಿಕೊಳ್ಳಿ. ಆಗ ಪ್ರಾಯಶಃ ಅವರು ತಮ್ಮ ಬರವಣಿಗೆಯನ್ನು ನಡೆಸಿಕೊಳ್ಳುತ್ತಲೇ ರಾಜಕೀಯದಲ್ಲಿಯೂ ಸಕ್ರಿಯವಾಗಿ ಭಾಗವಹಿಸುತ್ತಿದ್ದರೇನೋ. ಪಾರ್ಟಿಯಿಂದ ಅಗಲುವುದು ರಾಹುಲರಿಗೇನೂ ಸುಖದ ಸಂಗತಿಯಾಗಿರಲಿಲ್ಲ. ರಾಜಕೀಯ ಕಾರ್ಯದಲ್ಲಿ ಅವರ ಪ್ರೀತಿ ಬರವಣಿಗೆ ಮೇಲಿನ ಪ್ರೀತಿಗಿಂತ ಏನೂ ಕಡಿಮೆಯಿರಲಿಲ್ಲ.

ಎರಡು ವರ್ಷಗಳ ಬಳಿಕ ಮತ್ತೆ ಲೆನಿನ್ ಗ್ರಾಡಿಗೆ ಮರಳುವುದೆಂದು ಅವರು ನೆನೆಸಿದ್ದರು. ಆದರೆ ಅದು ಸಧ್ಯಕ್ಕದು ಸಂಭಾವ್ಯವಲ್ಲ. ಅಲ್ಲದೇ ಈ ಎರಡು ವರ್ಷಗಳ ಒಳಗೇನೇ ಅವರು ಭಾರತದಲ್ಲಿ ಒಂದು ಹೊಸ ಸಂಸಾರ ಹೂಡಲಿದ್ದಾರೆ. ತಾತ್ಪರ್ಯವೆಂದರೆ ಲೆನಿನ್ ಗ್ರಾಡಿನಿಂದ ಹಿಂದಿರುಗಿ, ಸಮ್ಮೇಳನದ ಅಧ್ಯಕ್ಷರಾಗಿರುವುದರಿಂದ ಭಾರತದ ಹೊಸ ಪರಿಸ್ಥಿತಿಗಳು ರಾಹುಲರ ಬದುಕಿಗೊಂದು ಹೊಸ ತಿರುವು ಕೊಡುತ್ತವೆ.

ಹೆಚ್ಚುತ್ತಿರುವ ವಯಸ್ಸು, ಸಂಗಾತಿಯಾಗಿರುವ ಮಧುಮೇಹ ಕಾಯಿಲೆ ಹಾಗೂ ಬದಲಾದ ಸ್ಥಿತಿಗತಿಗಳು ಅವರ ವಿಚಾರಶೈಲಿಯ ಮೇಲೆಯೂ ಒಂದು ಮಿತಿಯವರೆಗೆ ಪ್ರಭಾವ ಬೀರಿದರೆ ಅದರಲ್ಲಿ ಆಶ್ಚರ್ಯದ ಮಾತಿಲ್ಲ. ಮುಂಬಯಿ ಸಮ್ಮೇಳನದಿಂದ ಪ್ರಯಾಗಕ್ಕೆ ಹಿಂದಿರುಗಿದ ಮೂರು ನಾಲ್ಕು ದಿನಗಳ ಮೇಲೆ ಅವರು ಬರೆಯುತ್ತಾರೆ. "ಆತ್ಮಾವಲೋಕನ ಮಾಡಿಕೊಂಡಾಗ ಸಣ್ಣಪುಟ್ಟ ವಿಚಾರಗಳಿಗೆಲ್ಲ ಮನಸ್ಸು ಖಿನ್ನಗೊಳ್ಳುವುದು ಗೋಚರವಾಯಿತು." ಸಾಲದೆಂಬಂತೆ ಎಲ್ಲಿಕಂಡರೂ ಸಮಾನ ಆದರ್ಶ ಮತ್ತು ಆದರ್ಶವಾದಿಗಳ ಮೇಲೆ ಆಗುತ್ತಿರುವ ಪ್ರಹಾರ ಹಾಗೂ ಭೀತವಾತಾವರಣ ಸೃಷ್ಟಿಯ ಬಗ್ಗೆ ಮನಸ್ಸಿಗೆ ಚಿಂತಾಕುಲವಾಗುತ್ತಿತ್ತು. ಯಾವ ವಿಷಯದಲ್ಲೇ ಆಗಿರಲಿ, ಸಾಮಾಜಿಕ ಶೋಷಣೆಯೋ, ರೂಢಿಯೋ ಯಾವುದೇ ವಿಚಾರಗಳಲ್ಲಿ, ಸಲ್ಲದ ಕೆಲಸ ಅಥವಾ ಯೋಚನೆಗಳನ್ನು ಕಂಡರೆ ಛಿದ್ರಗೊಳ್ಳುತ್ತಿದ್ದೆ.

ರಾಹುಲರಿಗೆ ಊರೂರುಗಳಿಂದ ಆಮಂತ್ರಣ ಬರುತ್ತಿತ್ತು. ಅವರೀಗ ಸಾಹಿತ್ಯ ಪ್ರವಾಸದ ಮೇಲೆ, ಸಂಚಾರೀ ಸಾಧು ಅಥವಾ ಬೌದ್ಧ ಭಿಕ್ಷುವಿನ ರೂಪದಲ್ಲಿ ತಿರುಗಿದ ಸ್ಥಳಗಳಿಗೆಲ್ಲ ಸಮ್ಮೇಳನ

ಅಧ್ಯಕ್ಷರಾಗಿ ಸಂಚರಿಸಿ ಬರಬೇಕು. ಪ್ರಪ್ರಥಮವಾಗಿ ಇಂದೋರ್‌ನಲ್ಲಿ ಏರ್ಪಾಟಾಗಿದ್ದ ಸಾಹಿತ್ಯ ಪರಿಷತ್‌ನ ಅಧಿವೇಶನದಲ್ಲಿ ಭಾಗವಹಿಸಲು ತೆರಳಬೇಕಿತ್ತು. ನಾಗಾರ್ಜುನರು ಬಿಹಾರಕ್ಕೆ ಹೊರಟು ಹೋಗಿದ್ದರು. ಸಾಹಿತ್ಯಾಚಾರ್ಯ ಬಲಭದ್ರ ಠಾಕುರ್ ಅವರನ್ನು ಜೊತೆ ಮಾಡಿಕೊಂಡು 1948ರ ಜನವರಿ 15ರಂದು ರಾಹುಲಜೀ ಇಂದೋರ್ ಮತ್ತು ಆ ಕಡೆಯ ಊರುಗಳಿಗೆಲ್ಲ ಹದಿನೈದು ದಿನಗಳ ಕಾಲ ಪ್ರವಾಸಕ್ಕಾಗಿ ಪ್ರಯಾಗದಿಂದ ಹೊರಟರು.

ಇಂದೋರಿನ ಈ ಸಾಹಿತ್ಯಿಕ ಕಾರ್ಯಕ್ರಮದಲ್ಲಿ ಪಂಡಿತ ಮಾಖನಲಾಲ ತ್ರಿವೇದೀಯವರೂ ಉಪಸ್ಥಿತರಿದ್ದರು. ಎಲ್ಲಿಗೇ ಹೋಗಲಿ ಆಸುಪಾಸಿನ ಐತಿಹಾಸಿಕ ಪುರಾತನ ಸ್ಮಾರಕಗಳನ್ನು ನೋಡುವ ಅವಕಾಶ ಸಿಕ್ಕಿತು ಎಂದರೆ, ನೋಡುವುದು ಅದು ಎಷ್ಟನೇ ಸಲವೇ ಬೇಕಾದರೆ ಆಗಿರಲಿ, ಅವರು ತಪ್ಪಿಸಿಕೊಳ್ಳುತ್ತಿರಲಿಲ್ಲ. ಇಂದೋರ್‌ನಿಂದ ಮಾಹಿಷ್ಮತಿಗೆ ಹೋದರು, ಅಲ್ಲಿನ ದುರ್ಗ ನೋಡಿ ಮರುದಿನ ನರ್ಮದಾದಲ್ಲಿ ನೌಕಾಯಾತ್ರೆ, ಸಹಸ್ರ ಧಾರೆಯ ರಮಣೀಯ ದರ್ಶನ. ಇಂದೋರಿಗೆ ಮರಳಿದವರು ಮಧ್ಯಾಹ್ನ ಉಜ್ಜೈನಿ. ಈಗವರಿಗೆ ಸಹಜವಾಗಿ ಮೋಟರ್ ಕಾರಿನ ಸೌಲಭ್ಯ ದೊರಕಿತ್ತು.

"ಅಲ್ಲಿ, ಬಾಣ-ವರ್ಣಿತ ಮಹಾಕಾಲನ ಮೇಲಿರುವಷ್ಟು ಭಕ್ತಿಭಾವದಿಂದಲ್ಲವಾದರೂ, ಮಹಾ ಕಾಲನ ದರ್ಶನ ಮಾಡಿದೆ", ಉಜ್ಜೈನಿಯಲ್ಲಿ ಸಾರ್ವಜನಿಕ ಭಾಷಣವೂ ಆಯಿತು.

ಮತ್ತೆ ಇಂದೋರಿಗೆ ಮರಳಿ ರತ್ಲಾಂ, ಚಿತ್ತೂರುಗಢ ಮತ್ತು ಉದಯಪುರಗಳಿಗೆ ಹೋದರು. ಹೋದಲ್ಲೆಲ್ಲ ಸಮಾರಂಭ ಭಾಷಣಗಳು; ಜೊತೆಗೆ ಐತಿಹಾಸಿಕ ಸ್ಥಳ ದರ್ಶನವೂ. ಉದಯಪುರದ ಹತ್ತಿರದ ಏಕಲಿಂಗ ಮತ್ತು ನಾಗಹೃದ ಊರುಗಳಲ್ಲಿ ಕೆಲ ಸ್ಮಾರಕಗಳನ್ನು ನೋಡಿದರು. ಉದಯಪುರದಿಂದ ಜೋಧಪುರಕ್ಕೆ. ಅಲ್ಲಿ ಸ್ವಾಗತ-ಸಂಭ್ರಮದ ಅನೇಕ ಕಾರ್ಯಕ್ರಮಗಳು. ಅಲ್ಲಿಂದ ಆಗ್ರಾದಲ್ಲಿ ಮೂರು ದಿನ. ಈಗ ಪ್ರಾಯಶಃ ಅವರ ವಾಸದ ವ್ಯವಸ್ಥೆಯನ್ನೆಲ್ಲ ವಿದ್ಯಾಪ್ರೇಮಿ ಸೇಠರುಗಳ ಮನೆಗಳಲ್ಲಿಯೇ ಮಾಡುತ್ತಿದ್ದರು. ದಯಾಲಬಾಗ್, ಸಿಕಂದರಾ, ಫತೇಪುರ ಸಿಕ್ರಿ ಮುಂತಾದ ಸ್ಥಳಗಳನ್ನು ನೋಡಿಕೊಂಡು ರಾಂಗೇಯ ರಾಘವರಲ್ಲಿ ಏರ್ಪಾಟಾದ ಒಂದು ಸಾಹಿತ್ಯ ಗೋಷ್ಠಿಯಲ್ಲಿಯೂ ಭಾಗವಹಿಸಿದರು.

ಮುಂದಿನ ಕ್ಯಾಂಪ್ ಮಥುರಾ. ಅದು ಜವರಿ 30. ಮಥುರೆಯಲ್ಲಿನ ಅಮೂಲ್ಯ ಪ್ರಾಚ್ಯ ವಸ್ತುಗಳಿಂದ ತುಂಬಿದ ಸಂಗ್ರಹಾಲಯಕ್ಕೆ ರಾಹುಲರು ಭೇಟಿ ನೀಡದಿರುವಂತೆಯೇ ಇಲ್ಲ. ವೃಂದಾವನಕ್ಕೆ ಹೋಗಿ ಅಲ್ಲಿನ ಗುರುಕುಲವನ್ನೂ ನೋಡಿದರು. ಮತ್ತೆ ಮಧ್ಯಾಹ್ನ ಮಥುರಾದ ಕೆಲ ದಿಣ್ಣೆ ಪ್ರದೇಶಗಳನ್ನು ನೋಡಿದರು. ಅದೇ ಸಂಜೆ ಒಂದೆಡೆ ಭಾಷಣ ನೀಡಲು ಹೋಗುತ್ತಿದ್ದಾಗ ರಸ್ತೆಯಲ್ಲಿ ಜನ ಗುಂಪು ಸೇರಿ ರೇಡಿಯೋ ಕೇಳುತ್ತಿರುವುದನ್ನು ನೋಡಿದರು: "ಗಾಂಧೀಜಿಯನ್ನು ಯಾರೋ ಒಬ್ಬ ಹಿಂದೂ ಪಾತಕಿ ಇವತ್ತು ದೆಹಲಿಯಲ್ಲಿ ಕೊಲೆ ಮಾಡಿದ."

ಗಾಂಧೀಜಿಯ ರಾಜಕೀಯ ವಿಚಾರದಲ್ಲಿ ಸ್ಪಷ್ಟ ಮತ ಭೇದವಿರುವ ರಾಹುಲರು ದುಃಖಿಸುತ್ತಾರೆ. "ನಂಬುವ ಮಾತಾಗಿತ್ತೇ ಇದು ? ಗಾಂಧೀಜಿ ಅಜಾತ ಶತ್ರುವಾಗಿದ್ದರು. ಯಾರಿಗೂ ಕೆಟ್ಟದನ್ನು ಬಯಸದವರು. ಬುದ್ಧನ ನಂತರ ಭಾರತದಲ್ಲಿ ಇಂತಹ ಒಬ್ಬ ಮಹಾನ್ ವ್ಯಕ್ತಿ ಜನಿಸಿದ್ದಾನೆಯೇ ?"

ಸಂಜೆ ರಾಹುಲರು ಭಾಷಣ ನೀಡಬೇಕಾಗಿದ್ದ ಸಭೆ ಶೋಕಸಭೆಯಾಗಿ ಮಾರ್ಪಟ್ಟಿತು. ಮರುದಿನ ರೈಲಿನಲ್ಲಿ ವಿಪರೀತ ನೂಕುನುಗ್ಗಲು. ರಾಹುಲರು ಮತ್ತು ಠಾಕುರ್ ಮೊಶಾಯ್ ಭಾರೀ ಕಷ್ಟದಿಂದ

ಅಂತೂ ಪ್ರಯಾಗ ತಲುಪಿಕೊಂಡರು. ಟಪ್ಪಾಲು ರಾಶಿ ಬಿದ್ದಿತ್ತು. ರಾಹುಲರು ಲಕ್ನೋದ "ನವಜೀವನ"ದ ಸಂಪಾದಕರಾಗಬೇಕೆಂಬ ಒತ್ತಾಯಕ್ಕೆ "ನಾನದನ್ನು ಒಪ್ಪಿಕೊಳ್ಳಲು ಸಿದ್ಧನಿಲ್ಲ" ಎಂದು ಬರೆದರು.

ಫೆಬ್ರವರಿ ತಿಂಗಳು. ಪ್ರಯಾಗದಲ್ಲಿ ಮಾಘ ಮೇಳ ನಡೆಯುವ ದಿನಗಳವು. ರಾಹುಲರು ಮೇಳಕ್ಕೆ ಹೋಗಲು ಉತ್ಸುಕರಾಗಿದ್ದರು. ಸಂಚಾರೀ ಸಾಧುಗಳಲ್ಲಿ ಯಾರಾದರೂ ಹಳೆಯ ಗುರುತಿನ ಸಾಧುಗಳು ಸಿಕ್ಕಿಯಾರು ಎಂಬ ಆಸೆಯಿಂದ ಎರಡು ಬಾರಿ ಮೇಳ ನೋಡಲು ಹೋದರು. ಒಬ್ಬ ಮುದುಕಿ ತನ್ನ ಜೊತೆಯವರಿಂದ ತಪ್ಪಿಸಿಕೊಂಡು ಬೇರೆಯಾಗಿದ್ದಳು. ಆಕೆಗೆ ತನ್ನ ಜಿಲ್ಲೆಯದಲ್ಲ, ಹಳ್ಳಿಯ ಹೆಸರು ಮಾತ್ರ ಗೊತ್ತು. ಅವಳಾಡುತ್ತಿದ್ದ ಆಡು ಭಾಷೆಯಿಂದ ಆಕೆ ಗೋರಖಪುರದವಳೆಂದು ಗುರುತಿಸಿದ ರಾಹುಲಜೀ ಅವರೇ ಆಕೆಯನ್ನು ಅವಳ ಜಿಲ್ಲೆಯ ಜನರ ಬಳಿ ತಲುಪಿಸಿದರು. ಎರಡನೆಯ ಸಲ ಮೇಳಕ್ಕೆ ಹೋದಾಗ ಮೂವತ್ತು ವರ್ಷ ಹಿಂದಿನ ಪರಿಚಯದ ಪಂಡಿತ ಭಗವತಾಚಾರ್ಯರು ಸಿಕ್ಕಿದರು. ಪರಸ್ಪರ ಮನ ಬಿಚ್ಚಿ ಮಾತಾಡಿದ್ದಲ್ಲದೆ, ಅವರ ಸಂತ ಮಂಡಲಿಯಲ್ಲಿ ರಾಹುಲರು ಭಾಷಣವನ್ನೂ ಮಾಡಿದರು. ಮೇಳದಲ್ಲಿ ಇನ್ನೂ ಅನೇಕ ಹಳೆಯ ಪರಿಚಯದ ಸಾಧುಗಳ ಭೇಟಿಯಾಯಿತು.

1948ರ ಫೆಬ್ರವರಿ 12ರಂದು, ತ್ರಿವೇಣೀ ಸಂಗಮದಲ್ಲಿ ಗಾಂಧೀಜಿಯವರ ಅಸ್ಥಿ ವಿಸರ್ಜನೆ ಯಾಗಿತ್ತು. ಗೊತ್ತಾದ ಮಾರ್ಗದಲ್ಲಿ ಜನಸಂದಣಿ ವಿಪರೀತವಾಗಿತ್ತು. ರಾಹುಲರು ಕೂಡ ರಸ್ತೆ ಬದಿಯ ಒಂದು ಅಂಗಡಿಗೆ ಹೋಗಿ ನಿಂತುಕೊಂಡರು. ಮೆರವಣಿಗೆಯಲ್ಲಿ ಪಂಡಿತ ಜವಾಹರಲಾಲ ನೆಹರೂ ಕಾಲ್ನಡೆಯಲ್ಲಿ ಸಾಗುತ್ತ ಇದ್ದರು. ಆ ವೇಳೆಯಲ್ಲಿಯೆ ರಾಹುಲರು ಸಿಗರೇಟು ಬಿಟ್ಟು ಬಿಡುವ ಸಂಕಲ್ಪ ಮಾಡಿದರು. ಲಂಡನಿನಿಂದ ಮುಂಬೈವರೆಗಿನ ಹಡಗು ಪ್ರಯಾಣದಲ್ಲಿ (ಆಗಸ್ಟ್ 1947) ಅವರು ಪುನಃ ಸಿಗರೇಟು ಸೇದಲು ತೊಡಗಿದ್ದು ಆ ಚಟ ಅವರನ್ನಿನ್ನೂ ಅಂಟಿಕೊಂಡೇ ಇತ್ತು. "ನಾನದನ್ನು ಬಿಡಬೇಕೆಂದಿದ್ದೆ. ಈ ಪುಣ್ಯದಿನದಂದು ಬಿಟ್ಟುಬಿಟ್ಟೆ."

ಪಾರಿಭಾಷಿಕ ನಿರ್ಮಾಣ ಕಾರ್ಯವನ್ನು ರಾಹುಲರಿಗೆ ಒಪ್ಪಿಸಿದ ಹಿಂದೀ ಸಾಹಿತ್ಯ ಸಮ್ಮೇಳನವು ಅದಕ್ಕಾಗಿ ಒಂದು ಉಪಸಮಿತಿಯನ್ನು ರಚಿಸಿತ್ತು. ಡಾ। ರಘುವೀರರೂ ಈ ದಿಕ್ಕಿನಲ್ಲಿ ಕೆಲಸ ಮಾಡುತ್ತ ಇದ್ದರು. ಅವರ ಕೆಲಸವನ್ನು ಸಮೀಕ್ಷಿಸಿದ ರಾಹುಲರು "ಸಂಸ್ಕೃತದಲ್ಲಿ 22 ಉಪಸರ್ಗಗಳು, 2000 ಧಾತುಗಳು ಮತ್ತು ಸುಮಾರು 300 ಪ್ರತ್ಯಯಗಳಿವೆ. ಅವುಗಳನ್ನು ಮುರಿಯುತ್ತ ಜೋಡಿಸುತ್ತ ನಾವು ಪ್ರತ್ಯಪ್ರತ್ಯೇಕ ಶಬ್ದೋತ್ಪತ್ತಿ ಮಾಡಲು ಸಾಧ್ಯ. ಅವುಗಳನ್ನು ಒಂದೊಂದು ಇಂಗ್ಲಿಷ್ ಶಬ್ದದೊಂದಿಗೆ ಪ್ರಯೋಗಿಸಿ ವಸ್ತುಗಳ ಜೊತೆಗೆ ಹೊಂದಿಸಬಲ್ಲೆವು. ಈ ವಿಧಾನವನ್ನು ನಮ್ಮಲ್ಲಿ ಅಥವಾ ಎಲ್ಲಿಯೂ ಬಳಸಿಲ್ಲ. ಈ ಶಬ್ದಗಳು ಸರ್ವಥಾ ಅಜ್ಞಾತವಾಗಿವೆ. ಅಜ್ಞಾತದಲ್ಲಿ ಅಜ್ಞಾತದ ಪರಿಚಯ ಮಾಡಿಕೊಳ್ಳುವುದು ದುಷ್ಕರವೆಂದು ಎಲ್ಲರಿಗೂ ತಿಳಿದಿರುವುದೇ-ಎಂಬುದು ಅವರ ಗ್ರಹಿಕೆಯಾಗಿತ್ತು" ಎಂದು ಬರೆದಿದ್ದಾರೆ.

ಪಾರಿಭಾಷಿಕ ನಿರ್ಮಾಣ ಕಾರ್ಯದಲ್ಲಿ ರಾಹುಲರೂ ಸಾಕಷ್ಟು ಪರಿಶ್ರಮಿಸಿದವರೇ ಆಗಿರುವುದ ರಿಂದ ಅವರ ಸ್ವಂತ ವಿಚಾರಗಳನ್ನು ತಿಳಿಯುವುದು ಉಪಯುಕ್ತವಾದೀತು. "ಭಾರತದಲ್ಲಿ ಎರಡೂವರೆ ಸಾವಿರ ವರ್ಷಗಳ ಹಿಂದಿನಿಂದಲೇ ಪರಿಭಾಷೆ ರಚನೆಯಾಗುತ್ತ ಬಂದಿದೆ. ಇದರ ಪರಿಣಾಮವಾಗಿ ಭಿನ್ನಭಿನ್ನ ವಿಷಯಗಳ ಹತ್ತು ಸಾವಿರಕ್ಕೂ ಅಧಿಕ ಪಾರಿಭಾಷಿಕ ಶಬ್ದಗಳು ನಮ್ಮ ಬಳಿ ಇವೆ. ಹೆಚ್ಚಾಗಿ

ಅವುಗಳ ಮೂಲಕ ಜ್ಞಾತದಿಂದ ಅಜ್ಞಾತದ ಪರಿಚಯ ಮಾಡಿಸುವ ಪ್ರಯತ್ನ ನಡೆದಿದೆ. ಒಮ್ಮೊಮ್ಮೆ ಬಹು ಪ್ರಚಲಿತ ವಿದೇಶೀ ಶಬ್ದಗಳನ್ನು ಸ್ವೀಕರಿಸುವಲ್ಲಿಯೂ ಹಿಂಜರಿದಿಲ್ಲ. ಉದಾಹರಣೆಗೆ 'ಕೇಂದ್ರ' ಒಂದು ಗ್ರೀಕ್ ಶಬ್ದ. ಇದು ಯಾವ ಅರ್ಥವನ್ನು ಪ್ರತಿಪಾದಿಸುತ್ತದೋ ಅದು "ಮಧ್ಯ ಬಿಂದು" ಎಂಬುದರಲ್ಲಿ ಪ್ರಕಟವಾಗಲಾರದು. ಆದುದರಿಂದ ವಿದೇಶೀ ಶಬ್ದವನ್ನು ನಮ್ಮ ಪೂರ್ವಜರು ಸ್ವೀಕರಿಸಿದರು. ಕೇಂದ್ರ, ಕೇಂದ್ರಿತ, ಕೇಂದ್ರೀಕರಣ ಮುಂತಾದ ಇದರ ರೂಪಗಳನ್ನು ಸಂಸ್ಕೃತ ಶಬ್ದ ಅಲ್ಲ ಎಂದು ಯಾರು ಹೇಳಲು ಸಾಧ್ಯ ? ನಾವು ಹೊಸ ಶಬ್ದಗಳನ್ನು ಹೀಗೆ ಜ್ಞಾತದಿಂದ ಅಜ್ಞಾತ ಪ್ರಕ್ರಿಯೆಯಿಂದ ರಚಿಸಿಕೊಳ್ಳಬೇಕು. ಬಹು ಬಳಕೆಯ ವಿದೇಶೀ ಶಬ್ದಗಳನ್ನು ಸ್ವೀಕರಿಸುವುದಕ್ಕೆ ನಿರಾಕರಿಸಬಾರದು."

ಪಾರಿಭಾಷಿಕ ಕಾರ್ಯ ಆರಂಭವಾಗುವ ಮೊದಲು ರಾಹುಲರು ಲಕ್ನೋ, ಬರೇಲೀ ಮತ್ತು ಬನಾರಸ್ ತಿರುಗಿ ಬಂದರು. ಲಕ್ನೋದಲ್ಲಿ ಭಿಕ್ಷು ಬೋಧಾನಂದ ಮಹಾ ಸ್ಥವಿರರನ್ನು ಖಂಡಿತವಾಗಿ ನೋಡಲೇ ಬೇಕಿತ್ತು. ರಾಹುಲರಿಗೆ ಬೌದ್ಧ ವಾಙ್ಮಯದ ಪ್ರಪ್ರಥಮ ತಿಳಿವು ಮೂಡಿಸಿದವರೇ ಅವರು. ಆಚಾರ್ಯ ನರೇಂದ್ರ ದೇವ, ಯಶಪಾಲಜೀ ಅವರನ್ನು ಭೇಟಿ ಮಾಡಿದರು. ಬರೇಲಿಯಲ್ಲಿ ತನ್ನ ಸಂಚಾರಿ ದಿನಗಳ ಪರಿಚಿತ ಸ್ಥಳಗಳನ್ನು ನೋಡಿದರು. ಬನಾರಸಿನಲ್ಲಿಯೂ ಹಳೆಯ ಪರಿಚಯದ ಅನೇಕ ತಾಣಗಳನ್ನು ಸಂದರ್ಶಿಸಿದರು. ನಿರಾಲಾಜೀ ಆಗ ಗಾಯ್‌ಘಾಟ್‌ನಲ್ಲಿ ವಾಸಿಸುತ್ತಿದ್ದರು. ರಾಹುಲರು ಅವರನ್ನು ನೋಡಲು ಹೋದರು. "ಆ ಹೊತ್ತು ಅವರಿಗೆ ಅತೀವ ನಿದ್ರಾ ಹೀನತೆ, ಅದರೊಂದಿಗೇ ಬಿಸಿಯ ಬಳಲಿಕೆ. ಆದರೆ ಏನೇ ಇರಲಿ, ಸದಾ ಕಾಲ ಸೌಜನ್ಯದ ಗುಣವಿತ್ತು ಅವರಲ್ಲಿ."

ಬನಾರಸಿನಲ್ಲಿಯೇ ಪರಿಚಿತರಾದ ಪಂಡಿತ ಜಯಚಂದ ವಿದ್ಯಾಲಂಕಾರ ಮತ್ತು ಮಾಲವೀ ಮಹೇಶ ಪ್ರಸಾದರನ್ನು ನೋಡಿ ಬಂದರು.

ಪ್ರಯಾಗಕ್ಕೆ ಹಿಂದಿರುಗಿ ಮಾರ್ಚ್‌ನ ಪ್ರಥಮಾರ್ಧದಲ್ಲಿ ಪಂಡಿತ ಕ್ಷೇತ್ರೇಶಚಂದ್ರ ಚಟ್ಟೋಪಾಧ್ಯಾಯ ಅವರ ಮನೆಯಲ್ಲಿ ಉಳಿದುಕೊಂಡು ರಾಪುಲರು ಐನೀಯ "ಗುಲಾಮಾನ್" ಕಾದಂಬರಿಯನ್ನು "ಜೋ ದಾಸ್ ಥೇ" ಎಂಬ ಹೆಸರಿನಲ್ಲಿ ಹಿಂದಿಯಲ್ಲಿ ಬರೆದರು." ಪಂಡಿತ ಕ್ಷೇತ್ರೇಶಚಂದ್ರಜೀ ಅವರ ಬಗ್ಗೆ ರಾಹುಲರೆನ್ನುತ್ತಾರೆ. "ಆತ ಅದ್ಭುತ ಮನಷ್ಯ. ಅವರ ಶಿಕ್ಷಣ ಮತ್ತು ವಿದ್ಯಾಪ್ರೀತಿಯನ್ನು ನಾನು ಅಪಾರವಾಗಿ ಗೌರವಿಸುತ್ತೇನೆ. ಆದರೆ ಅವರು ತನ್ನ ಜ್ಞಾನವನ್ನು ಲೇಖನಿಗಿಳಿಸಲಿಲ್ಲ. ಈ ಬಗ್ಗೆ ನಾನವರನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಳ್ಳುತ್ತಿದ್ದೆ" ಎಂದಿದ್ದಾರೆ. ರಾಹುಲರು 1956ರಲ್ಲಿ ಬರೆದ "ಋಗ್ವೇದಿಕ ಆರ್ಯ" ಪುಸ್ತಕದ ಅರ್ಪಣೆ: "ವೇದದ ಮಹಾನ್ ಮರ್ಮಜ್ಞ ಮತ್ತು ಲೇಖನಿ ಹಿಡಿಯುವುದರಲ್ಲಿ ಪರಮ ಆಲಸಿಯಾದ ಶ್ರೀ ಶ್ರೀ ಶ್ರೀ ಕ್ಷೇತ್ರೇಶಚಂದ್ರ ಚಟ್ಟೋಪಾಧ್ಯಾಯರ ಕರಕಮಲಗಳಲ್ಲಿ ಸಾದರ-ಸಸ್ನೇಹ."

ಅಂತೂ ಪರಿಭಾಷಾ ನಿರ್ಮಾಣ ಕಾರ್ಯ ಆರಂಭವಾಯಿತು. ಡಾ। ಟಂಡನ್ ಅವರ ಸೂಚನೆ ಮೇರೆಗೆ ಮೊತ್ತ ಮೊದಲಾಗಿ ರಾಜಕೀಯ ಪಾರಿಭಾಷಿಕ ಶಬ್ದಗಳನ್ನು ('ಶಾಸನ ಶಬ್ದಕೋಶ') ಕೈಗೆತ್ತಿಕೊಳ್ಳಬೇಕೆಂದು ನಿರ್ಣಯವಾಯಿತು. ಇಬ್ಬರು ಒಳ್ಳೆಯ ಸಹಾಯಕರೂ ದೊರೆತರು, ವಿದ್ಯಾನಿವಾಸ ಮಿಶ್ರ ಮತ್ತು ಪ್ರಭಾಕರ ಮಾಚವೆ. ರಾಹುಲರು ಸಮ್ಮೇಳನದ ಸತ್ಯನಾರಾಯಣ ಕುಟೀರದಲ್ಲಿ ಇರಲು ಹೊರಟು ಬಂದರು. ಕೆಲಸ ಬಿರುಸಿನಿಂದ ಮೊದಲಾಯಿತು. ಇದೇ ಹೊತ್ತಿಗೆ

ಬೇಸಗೆ ಸುರುವಾಗಲು ಮೇ ತಿಂಗಳ ಸುರುವಿಗೆ ಹಿಮಾಚಲ ಪ್ರದೇಶಕ್ಕೆ ಹೋಗಿ ಅಲ್ಲಿ ನಾಲ್ಕು ತಿಂಗಳು ಇರುವುದೆಂದು ನಿರ್ಧರಿಸಿದರು. ಹೀಗಾಗಿ ಉಳಿದ ಒಂದೂವರೆ ತಿಂಗಳಿನಲ್ಲಿ "ಶಾಸನ ಶಬ್ದಕೋಶ"ದ ಕೆಲಸ ಪೂರ್ತಿಯಾಗಬೇಕಿತ್ತು.

ಆ ಸಲುವಾಗಿ ಸಂಚಾರಗಳಾದುವು. ಪ್ರಯಾಗದ ಕೆಲ ಸಾಹಿತಿಗಳ ಜೊತೆ ತುಲಸೀದಾಸರ ಜನ್ಮಸ್ಥಾನವಾದ ರಾಜಾಪುರ, ಉದಯನಾರಾಯಣ ತಿವಾರಿಯವರ ಜೊತೆ ಬಲಿಯಾ, ಕವಿಶೀಲರ ಒತ್ತಾಯದ ಮೇಲೆ ಒಂದು ಕಾರ್ಯಕ್ರಮಕ್ಕಾಗಿ ಕಾನ್ಪುರ: ಕಾನ್ಪುರದಲ್ಲಿ ಸಭೆಯ ಅನಂತರ ದಿ| ಗಣೇಶ ಶಂಕರ ವಿದ್ಯಾರ್ಥಿಯವರ ಮನೆಗೆ ಭೇಟಿ. ಕಾನ್ಪುರದಲ್ಲೇ ಪಂಡಿತ್ ಸಂತರಾಮ್ ಮತ್ತು ಪಂಡಿತ ಲಕ್ಷ್ಮೀಧರ ವಾಜಪೇಯಿ ಅವರೊಂದಿಗೆ, ಎಷ್ಟೋ ದಿನಗಳ ನಂತರದ ಭೇಟಿ. ರಾಹುಲರು ಕಾನ್ಪುರದಲ್ಲಿ ಒಂದು ಹೊಸ ಕೆಮೆರಾ (ಆರ್ಗೊಫ್ಲೆಕ್ಸ್) ಕೊಂಡುಕೊಂಡರು. ಅಲ್ಲಿ ಎರಡು ದಿನ ಕಳೆದು ಪ್ರಯಾಗಕ್ಕೆ ಮರಳಿದರು.

ಸಮ್ಮೇಳನದ ಅಧ್ಯಕ್ಷರಾಗಿ ಕೆಲಸ ಮಾಡುತ್ತಿದ್ದರೂ ಅವರು ಸಮ್ಮೇಳನದ ವತಿಯಿಂದ ಏನೂ ಸಂಭಾವನೆ ತೆಗೆದುಕೊಳ್ಳುತ್ತಿರಲಿಲ್ಲ. ಅವರ ಆದಾಯದ ಮುಖ್ಯ ಮೂಲವೆಂದರೆ ಲೇಖನ ಹಾಗೂ ಪುಸ್ತಕಗಳು. ಲೋಲಾ ಮತ್ತು ಇಗೋರರಿಂದ ಪತ್ರ ಬರುತ್ತಿತ್ತು-ಹಣ ಕಳುಹಿಸಲು, ರಷ್ಯಾಕ್ಕೆ ಬರಲು ಅಥವಾ ಭಾರತಕ್ಕೆ ತಮ್ಮನ್ನು ಕರೆಸಿಕೊಳ್ಳಲು. ಆದರೆ ಈಗ ಇವುಗಳಲ್ಲಿ ಯಾವುದೂ ಸಾಧ್ಯವಿರಲಿಲ್ಲ.

1948 ಏಪ್ರಿಲ್‌ನಲ್ಲಿ ವೈಶಾಲೀ ಮಹೋತ್ಸವ. ವೈಶಾಲಿ (ಮುಜಪ್ಫರ್‌ಪುರ್ ಜಿಲ್ಲೆ, ಬಿಹಾರ) ಲಿಚ್ಛವೀ ಜನಾಂಗದ ಪ್ರಧಾನ ನಗರ. ವೈಶಾಲಿಯ ಕ್ಷತ್ರಿಯ ಜಾತೃ-ಕುಲದಲ್ಲಿಯೇ ಮಹಾವೀರನ ಜನನವಾಯಿತು. ಆದ್ದರಿಂದಲೇ ಆತನನ್ನು "ಜಾತೃಪುತ್ರ" (ನಾತಪುತ್ರ) ಎಂದು ಕರೆಯುತ್ತಾರೆ. ಬುದ್ಧ ವೈಶಾಲಿಯಲ್ಲಿ ಅನೇಕ ವರ್ಷಗಳನ್ನು ಕಳೆದಿದ್ದ.

ರಾಹುಲರು ವೈಶಾಲಿಗೆ ಹೋದರು. ಏಪ್ರಿಲ್ 21ರಂದು ಮಹೋತ್ಸವದಲ್ಲಿ ಅವರ ಭಾಷಣವಿತ್ತು. ಅವರು ಅಂದು ಓದಿದ ಈ ಭಾಷಣ 'ವೈಶಾಲಿಯ ಪ್ರಜಾತಂತ್ರ' ಎಂಬ ಹೆಸರಿನಲ್ಲಿ "ಸಾಹಿತ್ಯ ನಿಬಂಧಾವಲೀ"ಯಲ್ಲಿ ಮತ್ತು "ವೈಶಾಲೀ ಅಭಿನಂದನ ಗ್ರಂಥ" (ವೈಶಾಲಿ ಸಂಘ 1948)ದಲ್ಲಿ ಸಂಗ್ರಹವಾಗಿದೆ. ರಾಹುಲರ "ಪುರಾತತ್ವ ನಿಬಂಧಾವಲೀ"ಯಲ್ಲಿ ಕೂಡ ವೈಶಾಲಿಯ ಕುರಿತು "ಬಸಾಢ್ ಕೀ ಖುದಾಯೀ" ಎಂಬ ಲೇಖನವಿದೆ. ಈ ಲೇಖನದಲ್ಲಿ ಅವರು ಜಾತೃ-ಜಥರಿಯಾಗಳ ಸಾಮ್ಯವನ್ನು ಪ್ರತಿಪಾದಿಸಿದ್ದರು. ವೈಶಾಲಿಯ ಜಾತೃಗಳು ಕ್ಷತ್ರಿಯರಾಗಿದ್ದರು. ಆದರೆ ವರ್ತಮಾನ ಕಾಲದ ಬಿಹಾರದ ಜಥರಿಯಾ ಭೂಮಿಹಾರರು ತಮ್ಮನ್ನು ಬ್ರಾಹ್ಮಣರೆಂದುಕೊಂಡಿದ್ದಾರೆ. ಹೀಗಾಗಿ ರಾಹುಲರ ಸಮೀಕರಣದಿಂದ ಅವರಿಗೆ ನೋವಾಗುವುದು ಸಹಜವಷ್ಟೆ ? ರಾಹುಲರು ಇದಕ್ಕೆ ಬೇಕಾದಷ್ಟು ಪುರಾವೆ ಕೊಟ್ಟು ಜಾತೃ-ಜಥರಿಯಾ ಎಂಬ ಮತ್ತೊಂದು ಲೇಖನವನ್ನು ಬರೆದರು. ಈ ಲೇಖನವೂ "ಪುರಾತತ್ವ ನಿಬಂಧಾವಲೀ"ಯಲ್ಲಿ ಸಂಗ್ರಹವಾಗಿದೆ.

ಸೆಕೆಯೆಂದರೆ ರಾಹುಲರು ದೂರ. ಪರ್ವತ ಪ್ರದೇಶದ ತಂಪು ಹವೆಯನ್ನು ಅವರು ಇಷ್ಟಪಡುತ್ತಿದ್ದರು. ಅದರಲ್ಲಿಯೂ ಭಾರತ-ಟಿಬೇಟಿನ ಗಡಿ ಪ್ರದೇಶವನ್ನು. ಈ ಸಲ ಅವರು ಬೇಸಗೆಯ ನಾಲ್ಕೂ ತಿಂಗಳು (ಮೇ ಇಂದ ಆಗೋಸ್ತುವರೆಗೆ, 1948) ಕಿನ್ನರ ದೇಶ (ಹಿಮಾಚಲ ಪ್ರದೇಶದ ಕನ್ನೌರ್, ರಾಮಪುರ-ಬುಶಹರ್)ದಲ್ಲಿ ಮುಖ್ಯವಾಗಿ ಚಿನೀಯಲ್ಲಿ ಕಳೆಯುವುದೆಂದು ಅವರು ತೀರ್ಮಾನಿಸಿದರು.

ಕನ್ನೌರ್ ವಲಯ ರಾಹುಲರಿಗೆ ಹೊಸತೇನಲ್ಲ. 1926ರಲ್ಲಿ ಪ್ರಥಮ ಬಾರಿಗೆ ಲಡಾಖ್ ಸಂಚಾರಕ್ಕೆ ಹೊರಟಾಗ ಟಿಬೇಟಿನ ಪಶ್ಚಿಮ ಭಾಗದಿಂದ ಪ್ರವೇಶಿಸಿ, ಕನ್ನೌರ್ ಪ್ರದೇಶದಿಂದ ಸಿಮ್ಲಾಕ್ಕೆ ಹಿಂದಿರುಗಿದ್ದರು. 1929ರಲ್ಲಿ ಮೊತ್ತ ಮೊದಲ ಟಿಬೇಟು ಪ್ರವಾಸಕ್ಕೆ ಟಿಬೇಟೀ ವೇಷದಲ್ಲಿ ಹೊರಟಾಗ ತನ್ನನ್ನು ಖುನ್ನೂ ವಾಸಿ (ಕನ್ನೌರದವನು) ಎಂದು ತನ್ನ ಹೆಸರು ಖುನ್ನೂ ಛೇವಜ ಎಂದು ಛದ್ಮನಾಮ ಬರೆಸಿದ್ದರು. ಈ ಗಡಿ ಪ್ರದೇಶದ ಜನ ಬೌದ್ಧರು. ಟಿಬೇಟೀ ಭಾಷೆಯಾಡುವವರು. ರಾಹುಲರಿಗೆ ಈ ಪ್ರದೇಶದ ಬಗ್ಗೆ ವಿಶೇಷ ಪ್ರೀತಿ ಸ್ವಾಭಾವಿಕವಾಗಿಯೇ ಇತ್ತು. ಇಲ್ಲಿ ಕೆಲ ಕಿರಿಕಿರಿಗಳ ನಡುವೆಯೂ ನಾಲ್ಕು ತಿಂಗಳು ಚೆನ್ನಾಗಿ ಕಳೆಯಿತು. ಈ ಅವಧಿಯಲ್ಲಿಯೇ "ಕಿನ್ನರ ದೇಶದಲ್ಲಿ" ಪುಸ್ತಕದ ಹೆಚ್ಚಿನಂಶ ರೂಪುಗೊಂಡಿತು. ಮುಂದೆ 1954ರ ಬೇಸಗೆಗೆ ಮತ್ತೆ ಅವರು ಹಿಮಾಚಲ ಪ್ರದೇಶಕ್ಕೆ ಹೋಗಿದ್ದಾಗ "ಹಿಮಾಚಲ ಪ್ರದೇಶ" ಪುಸ್ತಕ ಬರೆದರು. ಇದು ಇವತ್ತಿಗೂ ಅಪ್ರಕಟಿತವಾಗಿಯೇ ಇದೆ. ಸೆಪ್ಟೆಂಬರ್ ಆರಂಭವಾಗುವುದರಲ್ಲಿದ್ದಾಗ ಪ್ರಯಾಗಕ್ಕೆ ಹಿಂದಿರುಗಿ ಪಾರಿಭಾಷಿಕ ಶಬ್ದ ನಿರ್ಮಾಣ ಕಾರ್ಯ ಕೈಗೊಂಡರು. ವಿದ್ಯಾನಿವಾಸ ಮಿಶ್ರ ಅವರು ತತ್ಪರತೆಯಿಂದ ಕೆಲಸ ಮಾಡುತ್ತಲಿದ್ದರು. ಕೊನೆಯ ಬಾರಿ ಒಮ್ಮೆ ಪರಾಮರ್ಶಿಸಿದ ಮೇಲೆ "ಶಾಸನ ಶಬ್ದಕೋಶ" ಪ್ರೆಸ್ಸಿಗೆ ಹೋಯಿತು. "ಕಿನ್ನರ ದೇಶದಲ್ಲಿ" ಪುಸ್ತಕವನ್ನು ಪೂರ್ತಿಗೊಳಿಸಿ ಅಚ್ಚಿಗೆ ಕೊಟ್ಟಾಗಿತ್ತು. ಸಂವಿಧಾನ ಮಸೂದೆಯ ಹಿಂದೀ ಅನುವಾದ ಮಾಡಿಕೊಡಲು ಟಂಡನ್‌ಜೀ ಅವರು ಸೂಚಿಸಿದಾಗ ಈ ಹೊಸ ಜವಾಬ್ದಾರಿಯನ್ನು ರಾಹುಲರು ಒಪ್ಪಿಕೊಂಡರು. ಆಡಳಿತ ಶಬ್ದಾವಳಿಗಳ ಕಾರ್ಯ ಮುಗಿದ ಬಳಿಕ ವಿಶೇಷಜ್ಞರ ಸಹಾಯ ಪಡೆದು ವಿಜ್ಞಾನ ಶಬ್ದಾವಳೀ ಸಿದ್ಧ ಮಾಡಬೇಕಿತ್ತು.

1948ರ ಅಕ್ಟೋಬರ್‌ನಲ್ಲಿ ರಾಹುಲರು ದರ್ಭಂಗಾದಲ್ಲಿ ನಡೆದ ಪ್ರಾಚ್ಯ ಸಮ್ಮೇಳನದಲ್ಲಿ ಭಾಗವಹಿಸಿದರು. ಡಾ। ಬಾಬೂರಾಮ್ ಸಕ್ಸೇನಾ, ಡಾ। ಉದಯ ನಾರಾಯಣ ತಿವಾರಿ, ಮಾಖನಲಾಲ ಚತುರ್ವೇದಿ, ಡಾ। ಅಮರನಾಥ ಝಾ , ಡಾ। ಉಮೇಶ ಮಿಶ್ರ, ಕವಿ ನಾಗಾರ್ಜುನ ಮುಂತಾದವರೂ ಸಮ್ಮೇಳನದಲ್ಲಿ ಹಾಜರಿದ್ದರು. ಪಂಡಿತ ಮಾಖನ ಲಾಲ ಚತುರ್ವೇದಿಯವರ ಭಾಷಣದ ಬಗ್ಗೆ ರಾಹುಲರೆನ್ನುತ್ತಾರೆ "ಹಿಂದಿಯಲ್ಲಿ ಚತುರ್ವೇದಿಯವರಷ್ಟು ಚೆನ್ನಾಗಿ ಮಾತಾಡಬಲ್ಲವರು ಇವತ್ತು ಯಾರೂ ಇಲ್ಲ. ಆತ ಸರ್ವಶ್ರೇಷ್ಠ ಭಾಷಣಕಾರ."

ಸಮ್ಮೇಳನದಲ್ಲಿ ರಾಹುಲರು ಪರಿಭಾಷೆಗಳ ಕುರಿತು ಒಂದು ಲೇಖನ ಓದಿದರು. ಅಲ್ಲಿನ ಒಂದು ಸಭೆಯಲ್ಲಿ ಕೆಲ ಭಾಷಣಕಾರರು ಸಂಸ್ಕೃತವನ್ನು ರಾಷ್ಟ್ರಭಾಷೆಯನ್ನಾಗಿ ಮಾಡುವ ಸೂಚನೆ ಮುಂದಿಟ್ಟರೆ ರಾಹುಲರು "ಸಂಸ್ಕೃತ ನಮ್ಮ ಭಾಷೆಗಳ ಮೂಲ ಭಾಷೆಯಾಗಿ ಆ ಸ್ಥಾನದಲ್ಲಿ ಯಾವತ್ತೂ ಇದ್ದೇ ಇರುತ್ತದೆ. ಆದರೀಗ ಮಗಳ ಕಾಲದಲ್ಲಿ ತಾಯಿ ಸಿಂಹಾಸನದ ಆಸೆಯನ್ನು ಬಿಡುವುದೇ ಒಳಿತು" ಎಂದರು.

ನವೆಂಬರದ ಆರಂಭದಲ್ಲಿ ರಾಹುಲರು ದೆಹಲಿಗೆ ಹೋದರು. ಪಾರಿಭಾಷಿಕ ಕಾರ್ಯ ನಿಮಿತ್ತ ಅಲ್ಲಿಯೂ ಅನೇಕ ವಿದ್ವಾಂಸರನ್ನು ಭೇಟಿ ಮಾಡಿದ್ದರು. ಅಲ್ಲಿನ ಮಧ್ಯ ಏಶಿಯಾ ಸಂಗ್ರಹಾಲಯಕ್ಕೆ ಹೋದಾಗ ಅಲ್ಲಿ ಡಾ। ವಾಸುದೇವ ಶರಣ ಅಗರವಾಲ ಅವರಿದ್ದರು. ಆದರೆ ಆ ಮೇಲೆ ಅವರು ಆ ಜಾಗ ಬಿಡಬೇಕಾಯಿತು. ರಾಹುಲರ ಟಿಪ್ಪಣಿ "ಡಾ। ಅಗರವಾಲರಂತಹ ಯೋಗ್ಯರನ್ನು ದೆಹಲಿ ತನ್ನ ಹತ್ತಿರ ಇರಿಸಿಕೊಳ್ಳಲಾರದೇ ಹೋಯಿತು; ದೋಷ ದೆಹಲಿಯದೇ. ದೆಹಲಿಗೆ ಖುಶಾಮತಿ ದರ್ಬಾರೇ ಇಷ್ಟ. ಆತ್ಮ ಗೌರವವುಳ್ಳ ಪಂಡಿತರು ಅಲ್ಲಿ ಹೇಗೆ ಕೆಲಸ ಮಾಡಿಕೊಂಡಿರಲು ಸಾಧ್ಯ ?"

ದೆಹಲಿಯಲ್ಲಿಯೇ, ಹದಿನೆಂಟು ವರ್ಷಗಳ ಬಳಿಕ ಅನಂತರಾಮ ಭಟ್ಟರೊಂದಿಗೆ ರಾಹುಲರ ಭೇಟಿಯಾಯಿತು. ಭಟ್ಟರನ್ನು ರಾಹುಲರು ಮೊದಲು ನೋಡಿದ್ದು 1928ನೆಯ ಇಸವಿಯಲ್ಲಿ, ಶ್ರೀಲಂಕಾದ ವಿದ್ಯಾಲಂಕಾರ ವಿಹಾರದಲ್ಲಿ. 1930ರಲ್ಲಿ ರಾಹುಲರು ಅವರನ್ನು ಅಧ್ಯಯನ-ಸಂಶೋಧನೆಗಾಗಿ ಜರ್ಮನಿಗೆ ಕಳುಹಿಸಿದ್ದರು. ಸಂಸ್ಕೃತ ವಿದ್ವಾಂಸರಾಗಿದ್ದ ಭಟ್ಟರು ಜರ್ಮನಿಯಲ್ಲಿ ಡಾಕ್ಟರೇಟ್ ಪಡೆದರು. ಮಹಾಯುದ್ಧದ ಕಾಲದಲ್ಲಿ ಅಲ್ಲಿ ಅವರು ದೊಡ್ಡ ಪ್ರಭಾವಶಾಲಿ ಸ್ಥಾನದಲ್ಲಿದ್ದರು. ಸ್ವತಂತ್ರ ಭಾರತಕ್ಕೆ ಹಿಂದಿರುಗಿದ ಅವರ ಸ್ಥಿತಿ ಕರುಣಾಜನಕವಾಗಿತ್ತು. ಪಾರಿಭಾಷಿಕ ಕೆಲಸದಲ್ಲಿ ಸಹಾಯ ಮಾಡಲು ಅವರನ್ನು ಕೇಳಿಕೊಂಡರು ರಾಹುಲಜೀ.

ದೆಹಲಿಯಿಂದ ಮರಳಿ ಪ್ರಯಾಗಕ್ಕೆ ಬಂದವರು ನವೆಂಬರ್‌ನಲ್ಲಿ ಮತ್ತೆ ಸಂಚಾರ ಹೊರಟು ಮೊದಲು ಶೃಂಗವೇರ ಪುರದ ಐತಿಹಾಸಿಕ ಸ್ಥಳಗಳನ್ನು ನೋಡಿ ಬಂದರು. ಅನಂತರ ಸಾರನಾಥಕ್ಕೆ ಹೋದರು. ಪ್ರತಿ ನವೆಂಬರ್‌ನಲ್ಲಿ ಸಾರನಾಥದಲ್ಲಿ ನಡೆಯುವ ಮೂಲಗಂಧ ಕುಟೀ ಉತ್ಸವಕ್ಕೆ ಅಲ್ಲೇ ಆಸುಪಾಸಿನಲ್ಲೇ ತಾನು ಇದ್ದದ್ದೇ ಹೌದಾದರೆ ರಾಹುಲರು ಹೋಗಿಯೇ ಹೋಗುತ್ತಿದ್ದರು. ಕಾರಣ ಅಲ್ಲಿಗೆ ಆ ವೇಳೆ ದೇಶ ವಿದೇಶಗಳಿಂದ ಬರುವ ಬೌದ್ಧ-ಮಿತ್ರರನ್ನು ಭೇಟಿಯಾಗಿ, ಅವರೊಂದಿಗೆ ಮಾತುಕತೆ ನಡೆಸುತ್ತಿದ್ದರು. ಈ ಸಲ ಆನಂದಜೀ ಮತ್ತು ಕಾಶ್ಯಪಜೀ ಕೂಡ ಸಾರನಾಥಕ್ಕೆ ಬಂದಿಳಿದಿದ್ದರು. ಸಾರನಾಥದಿಂದಲೇ ರಾಹುಲರು ಗೋರಖ ಪುರಕ್ಕೆ ಹೋದರು. ಅಲ್ಲಿಂದ ಬನಾರಸಿಗೆ. ಅಲ್ಲಿ ತಿರುತಿರುಗಿ ತನ್ನ ವಿದ್ಯಾರ್ಥಿ ಜೀವನ ನೆನಪಿಸುವ ತಾಣಗಳನ್ನು ಸಂದರ್ಶಿಸಿದರು.

ಪ್ರಯಾಗಕ್ಕೆ ಹಿಂದಿರುಗಿದ ಮೂರು ನಾಲ್ಕು ದಿನಗಳ ಬಳಿಕ ಮತ್ತೆ ದೆಹಲಿಗೆ ತೆರಳಿದರು. ಪರಿಭಾಷೆಗಳ ವಿಚಾರದಲ್ಲಿ ಪೂನಾ ಇನ್‌ಸ್ಟಿಟ್ಯೂಟ್‌ನ ವಿಜ್ಞಾನಿಗಳೊಂದಿಗೆ ಅಲ್ಲಿ ಚರ್ಚೆ ನಡೆಸಿದರು. ಒಂದು ಸಾಹಿತ್ಯಗೋಷ್ಠಿಯಲ್ಲಿ ಒಮ್ಮೆಗೇ ದೆಹಲಿಯ ಅನೇಕ ಸಾಹಿತಿಗಳ ಭೇಟಿಯಾಯಿತು.

ಈ ಸಲದ ಹಿಂದೀ ಸಾಹಿತ್ಯ ಸಮ್ಮೇಳನ ಮೀರತ್‌ನಲ್ಲಿ ನಡೆಯಲಿತ್ತು. ಸೇಠ್ ಗೋವಿಂದ ದಾಸರನ್ನು ಅಧ್ಯಕ್ಷರನ್ನಾಗಿ ಆರಿಸಿದ್ದರು. ರಾಹುಲರು ಮೀರತ್‌ಗೆ ಹೋದರು. ಅವರ ಅಧ್ಯಕ್ಷ ಸ್ಥಾನದ ಕಾರ್ಯವಧಿಯೇನೋ ಮುಗಿಯಿತು. ಆದರೆ ಪಾರಿಭಾಷಿಕ ಶಬ್ದ ನಿರ್ಮಾಣ ಕಾರ್ಯ ಮಾತ್ರ ಇನ್ನೂ ಹೆಗಲ ಮೇಲಿತ್ತು. ಸಮ್ಮೇಳನದ ನಂತರ ಅವರು ದಶಂಬರ್ (48)ರಲ್ಲಿ ಆ ಕೆಲಸಕ್ಕಾಗಿಯೇ ರೂಡ್ಕೀ, ಡೆಹರಾಡೂನ್, ಲಕ್ನೋ ಮತ್ತು ಕಲ್ಕತ್ತಾಕ್ಕೆ ಪ್ರವಾಸ ಹೋಗಿ, ಅನೇಕ ಮಂದಿ ವಿಜ್ಞಾನಿಗಳನ್ನು ಕಂಡು ಚರ್ಚೆ ನಡೆಸಿದರು. ನಡುವೆ ಅನೇಕಕಡೆ ಭಾಷಣಗಳನ್ನೂ ಮಾಡಬೇಕಾಯಿತು.

ಪ್ರಯಾಗದ "ಹಿಂದೂಸ್ತಾನೀ ಎಕಾಡೆಮಿ"ಯಲ್ಲಿ "ಬೌದ್ಧ ಸಂಸ್ಕೃತಿ"ಯ ಮೇಲೆ ರಾಹುಲರು ಭಾಷಣ ನೀಡಲು ಒಪ್ಪಿಕೊಂಡಿದ್ದರು. ಆ ಕುರಿತು ಪುಸ್ತಕ ರೂಪದಲ್ಲಿಯೂ ಬರೆಯಬೇಕೆಂಬುದು ಅವರ ಇಚ್ಛೆಯಾಗಿತ್ತು. ಶಾಂತಿನಿಕೇತನದಲ್ಲಿ ಆಕರ ಸಾಮಗ್ರಿಗಳು ಸಿಗುತ್ತಿದ್ದುದರಿಂದ, ಅವರಿಗೆ ಒಂದು ತಿಂಗಳ ನಂತರ ಅಲ್ಲಿಗೆ ಹೋಗಿ ಇರುವ ಯೋಚನೆ ಇತ್ತು. ಕಲ್ಕತ್ತಾಕ್ಕೆ ಹೋದವರು ಲೈಬ್ರೆರಿ ನೋಡಿ ಬರಲು ಒಂದು ದಿನಕ್ಕಾಗಿ ಶಾಂತಿನಿಕೇತನಕ್ಕೂ ಹೋದರು. ಅಲ್ಲಿ ಆಚಾರ್ಯ ಹಜಾರೀ ಪ್ರಸಾದ್ ದ್ವಿವೇದೀ ಮತ್ತು ಶಾಂತಿ ಭಿಕ್ಷು ಅವರ ಭೇಟಿಯಾಯಿತು.

ಹೊಸ ವರ್ಷದ (1949) ಮೊದಲ ವಾರ ಅಲ್ಲಿಂದ ಪ್ರಯಾಗಕ್ಕೆ ಹಿಂದಿರುಗಿದರು.

# ಕಾಲಿಂಪೋಂಙ ವಾಸ್ತವ್ಯ

ಸಾರನಾಥವೆಂದರೆ ರಾಹುಲರಿಗೆ ವಿಶೇಷ ಪ್ರೇಮ. ಅದು ಅವರ ಕಾಶೀ ಜನಪದ, ಅಷ್ಟೇ ಅಲ್ಲ, ಬುದ್ಧ ಪ್ರಥಮವಾಗಿ ಧರ್ಮೋಪದೇಶ ನೀಡಿದ (ಧರ್ಮ ಚಕ್ರ-ಪ್ರವರ್ತನ) ಪುನೀತ ಸ್ಥಳ. "ಸಾರನಾಥಕ್ಕೆ ಚಳಿಗಾಲದಲ್ಲಿ ದೇಶ ದೇಶಾಂತರಗಳಿಂದ ಬೌದ್ಧ ಯಾತ್ರಿಕರು ಬರುತ್ತಿರುತ್ತಾರೆ. ಲಂಕೆ ಮತ್ತು ಟಿಬೇಟಿನ ಯಾತ್ರಿಕರನ್ನು ಭೇಟಿಯಾಗುವ ಆಕಾಂಕ್ಷೆ ನನ್ನಲ್ಲಿ ಪುಟಿದೇಳುತ್ತಿತ್ತು" ಎಂದು ರಾಹುಲರೇ ಬರೆದಿದ್ದಾರೆ.

1949ರ ಜನವರಿ 8ರಂದು ಸಾರನಾಥ ತಲುಪಿ ಅಲ್ಲಿನ ಧರ್ಮಶಾಲೆಯ ಒಂದು ಕೋಣೆಯಲ್ಲಿ ತಂಗಿದರು. ಮರುದಿನವೇ "ಬೌದ್ಧ ಸಂಸ್ಕೃತಿ" ಲೇಖನವನ್ನು ಆರಂಭಿಸಿಯೂ ಬಿಟ್ಟರು. ಹೇಳುತ್ತ ಹೋದಂತೆ ಬರೆದುಕೊಳ್ಳುವವರು ಸಿಕ್ಕಿದರು. ಮೊದಲು ಲಲ್ಲನ್, ಆಮೇಲೆ ಅವಧಬಿಹಾರೀ ಸಿಂಹ ಸುಮನ್. ರಾಹುಲರು ಒಂದೊಂದು ದಿನ ಒಂದೊಂದು ದಿಕ್ಕಿಗೆ ತಿರುಗಾಡಲು ಹೊರಡುತ್ತಿದ್ದರು. ಒಮ್ಮೆ ಮುನ್ಶಿ ಪ್ರೇಮಚಂದರ ಊರು ಲಮಹೀ-ಲಮಾಮ್ ಕಡೆಗೆ, ಒಮ್ಮೆ ಲಾಟ್ ಭೈರವದ ದಿಕ್ಕಿಗೆ, ಒಮ್ಮೆ ಓಡಾರ್ಪುರ್‌ನ ಗುಡ್ಡಗಳ ಕಡೆಗೆ. ತಿರುಗಾಡುವುದರ ಜೊತೆಜೊತೆಗೇ ಪುರಾತನ ಇಟ್ಟಿಗೆ, ಭಗ್ನ ಮೂರ್ತಿಗಳನ್ನು ನೋಡುವ, ಗುರುತಿಸುವ ಕೆಲಸವೂ ಸಾಗುತ್ತಿತ್ತು.

ಮೂರು ವಾರಗಳ ಕಾಲ ಸಾರನಾಥದಲ್ಲಿದ್ದು ಅನೇಕ ಹಳೆಯ ಪರಿಚಯದವರನ್ನು ಕಂಡರು. ಒಂದು ಕಾಲದಲ್ಲಿ ಅವರಿಂದ ಸಂಸ್ಕೃತ ಕಲಿತ ಶ್ರೀಲಂಕಾದ ಭಿಕ್ಷು ದೇವಾನಂದ ಸ್ಥವಿರರು ಸಿಕ್ಕಿದರು. ಲಾಸಾದ ಜನರಲ್ ಶೋಗಾಙನ ಪರಿವಾರ ಸಾರನಾಥಕ್ಕೆ ಬಂದಿದ್ದ. ಅವನಿಂದ ಟಿಬೇಟಿನ ಇತ್ತೀಚಿನ ಸಮಾಚಾರಗಳು ತಿಳಿದವು. ಗೇಶೇ ಧರ್ಮವರ್ಧನರು ಈಗ ಜೇಲ್‌ನಿಂದ ಹೊರ ಬಂದಿದ್ದಾರೆ ಮತ್ತು ಈಗ ಟಿಬೇಟಿನ ಇತಿಹಾಸ ಬರೆಯತೊಡಗಿದ್ದಾರೆ ಎಂಬ ಸುದ್ದಿ ತಿಳಿಸಿದ್ದು ಆತನೇ. ಗೇಶೇ ರಾಹುಲರ ಮೂರನೇ ಟಿಬೇಟ್ ಪ್ರವಾಸದ ಜೊತೆ ಪಯಣಿಗರಾಗಿದ್ದವರು. ಅಪಾರ ಶಾಂತಿ ನೀಡುವ ಸ್ಥಳ ಸಾರನಾಥ. ಅಲ್ಲಿ ಮನುಷ್ಯ ಸಹಜವಾಗಿ ಸಂವೇದನಾಶೀಲನಾಗುತ್ತಾನೆ. ಭಗವಾನ್ ಬುದ್ಧನೂ ತನ್ನ ಜೀವನದ ಅಂತಿಮ ಕ್ಷಣಗಳಲ್ಲಿ ಸಾರನಾಥ, ಬೋಧಗಯಾ, ಕುಶೀ ನಗರ ಮತ್ತು ಲುಂಬಿನೀ ಈ ನಾಲ್ಕು ಸ್ಥಳಗಳನ್ನು "ಸಂವೇಜನೀಯ"ವೆಂದಿದ್ದ. ಸಾರನಾಥದಲ್ಲಿ ಕುಳಿತು ರಾಹುಲರು ಯೋಚಿಸಿದರು. "ಇಂದು ನಾಲ್ಕೂ ದಿಕ್ಕಿನಲ್ಲಿ ನಾನು ಏನು ನೋಡುತ್ತಿರುವೆನೋ ಅದರಲ್ಲಿ ಬುದ್ಧನ ಉಪದೇಶವಾದ "ಆದೀಪ್ತ ಪರ್ಯಾಯ" ನೆನಪಿಗೆ ಬರುತ್ತಿದೆ. ಎಲ್ಲವೂ ಉರಿಯುತ್ತಿವೆ, ಹಳೆಯ ಚೌಕಟ್ಟುಗಳೆಲ್ಲ ಉರಿದು ನಾಶವಾಗುತ್ತಿವೆ. ಇದೇನು ಕೆಟ್ಟದಲ್ಲವಾದರೂ ಹೊಸತಿನ ಆಸ್ತಿಭಾರವೆಲ್ಲಿಯೂ ಕಾಣಿಸುತ್ತಿಲ್ಲವಲ್ಲ, ಚಿಂತೆಯ ಮಾತೆಂದರೆ ಇದು."

ಸಾರನಾಥದಲ್ಲಿ ಕಳೆದ ಮೂರು ವಾರ ಕೇವಲ ಓದು-ಬರೆಹ, ಭೇಟಿ-ಚರ್ಚೆಗಳಲ್ಲಿಯೇ ಮುಗಿಯಲಿಲ್ಲ. ಸಾಗರ್ ಮತ್ತು ಬಕ್ಸರ್‌ಗೆ ಹೋಗಿ ಬಂದರು. ಸಾಗರ್‌ನಲ್ಲಿ ವಿಶ್ವವಿದ್ಯಾಲಯದ ಸಾಹಿತ್ಯಿಕ ಸಮಾರೋಹದಲ್ಲಿ ಭಾಗವಹಿಸಿದರು. ಪರಿಭಾಷೆಗಳ ಕುರಿತು ಅಲ್ಲಿನ ವಿದ್ವಾಂಸರೊಡನೆಯೂ ಚರ್ಚೆ ನಡೆಯಿತು. ಸಾಗರ್‌ನಿಂದ ಹಿಂದಿರುಗುವಾಗ ಕಟನೀಯಲ್ಲಿ ಇಳಿದು ದಿ। ಡಾ। ಹೀರಾಲಾಲರ ಮನೆಗೆ ಹೋಗಿ ಅವರ ಕುಟುಂಬದವರೊಡನೆ ಮಾತನಾಡಿ, ಅವರ ಲೈಬ್ರೆರಿಯನ್ನು ನೋಡಿ ಬಂದರು.

ಬಕ್ಸರ್‌ನಲ್ಲಿ ವ್ಯವಸ್ಥೆಗೊಳಿಸಲಾಗಿದ್ದ ಜಿಲ್ಲಾ ಹಿಂದೀ ಸಮ್ಮೇಳನಕ್ಕೆ ರಾಹುಲರನ್ನೇ ಅಧ್ಯಕ್ಷರನ್ನಾಗಿ ಆರಿಸಲಾಗಿತ್ತು. ಅಲ್ಲಿಯ ವ್ಯವಸ್ಥೆ ಚೆನ್ನಾಗಿರಲಿಲ್ಲ. ಆದರೆ ಅಲ್ಲಿನ ಐತಿಹಾಸಿಕ ಸ್ಮಾರಕಗಳು ಅವರಿಗೆ ಬಹಳ ಖುಷಿ ಕೊಟ್ಟವು. ಸಾರನಾಥದಲ್ಲಿದ್ದುಕೊಂಡು ರಾಹುಲರು "ಬೌದ್ಧ ಸಂಸ್ಕೃತಿಯ ಹೆಚ್ಚಿನ ಭಾಗ ಬರೆದು ಮುಗಿಸಿದರು. ಉಳಿದ ಭಾಗವನ್ನು ಶಾಂತಿನಿಕೇತನದಲ್ಲಿ ಬರೆಯಲು ಉಳಿಸಿಕೊಂಡರು. ಪ್ರಯಾಗ ಮತ್ತು ಪಾಟ್ನಾದಲ್ಲಿ ತಂಗುತ್ತ ಲಿಪಿಕಾರ ಸುಮನಜೀಯವರನ್ನು ಜೊತೆಗೆ ಕರೆದುಕೊಂಡು ಫೆಬ್ರವರಿ ಎಂಟರಂದು ಶಾಂತಿನಿಕೇತನಕ್ಕೆ ಹೋದರು ರಾಹುಲಜೀ. ಅಲ್ಲಿ ಪಂಡಿತ ಹಜಾರೀ ಪ್ರಸಾದ ದ್ವಿವೇದಿಯವರಲ್ಲಿ ಹದಿನೇಳು ದಿನಗಳ ಕಾಲ ಇದ್ದರು. ದ್ವಿವೇದಿಯವರ ಬಗ್ಗೆ ಬರೆಯುತ್ತ "ನಾನು ಅವರ ವಿದ್ಯೆ, ಬರಹ ಹಾಗೂ ನಿರ್ಣಯ ಸಾಮರ್ಥ್ಯದ ಭಾರೀ ಸಮರ್ಥಕ. ಹಿಂದೀ ಸಾಹಿತಿಗಳು ಇಷ್ಟು ಗಂಭೀರಾದರೆಂದಾದರೆ ಹಿಂದೀ ಚುರುಕಾಗಿ ಮುನ್ನಡೆ ಸಾಧಿಸೀತು ಎನ್ನುತ್ತಿದ್ದೆ" ಎನ್ನುತ್ತಾರೆ.

ಮಾಂಸಾಹಾರ ಅಥವಾ ಸಸ್ಯಾಹಾರ-ಯಾವ ಊಟ ಸಿಗುತ್ತದೋ ಅದನ್ನು ರಾಹುಲರು ಸ್ವೀಕರಿಸುತ್ತಿದ್ದರು. ತಾವು ಮಾಂಸಾಹಾರಿ ಎಂದು ಡಂಗುರ ಸಾರಲು ಅವರಿಗೆ ಬಹಳ ಆನಂದವಾಗುತ್ತಿತ್ತು. ತನ್ನ ಸಸ್ಯಾಹಾರಿ ಮಿತ್ರರು-ಪರಿಚಿತರನ್ನು ಛೇಡಿಸುವ ಅವಕಾಶ ಸಿಕ್ಕಿದರೆ ಅವರು ಬಿಡುತ್ತಿರಲಿಲ್ಲ. "ಬೌದ್ಧ ಸಂಸ್ಕೃತಿ"ಯ ಮುನ್ನುಡಿಯಲ್ಲಿ ಬರೆಯುತ್ತಾರೆ. ಹೇಳಲು ಈ ದ್ವಿವೇದಿಯವರು "ನಾ ಮಾಂಸೊ ಮಧುಪರ್ಕೊ ಭವತಿ" (ಮಾಂಸವಿಲ್ಲದೆ ಅತಿಥಿ ಸತ್ಕಾರ ಸಾಧ್ಯವಿಲ್ಲ) ಎಂಬ ಮಹಾವಾಕ್ಯವನ್ನು ಅನಾದಿ ಕಾಲದಿಂದ ಒಪ್ಪಿಕೊಂಡು ಬಂದ, ಮಾಂಸವನ್ನು ಎಂದಿಗೂ ಅಭಕ್ಷ್ಯವೆಂದು ಗಣಿಸದ ಬ್ರಾಹ್ಮಣ ಮೂಲದವರು. ಆದರೆ ಅವರೋ ಸಸ್ಯಾಹಾರಿಗಳು. ಸ್ವಯಂ ನಿರಾಮಿಷಹಾರಿಯಾಗಿಯೂ ಶಾಂತಿನಿಕೇತನದ ಪುಣ್ಯಭೂಮಿಯಲ್ಲಿ ತನ್ನ ಪೂರ್ವಜರ ಮಹಾವಾಕ್ಯವನ್ನು ಉಲ್ಲಂಘಿಸದೆ ನನಗಾಗಿ ಅತಿಥ್ಯದ ವ್ಯವಸ್ಥೆ ಮಾಡಿದ್ದಾರಲ್ಲ, ಇದರಿಂದ ಅವರ ಸ್ನೇಹ ಸೌಹಾರ್ದ ವ್ಯಕ್ತವಾಗುತ್ತದೆ." ಶಾಂತಿ ನಿಕೇತನದಲ್ಲಿ ರಾಹುಲರು ಬಿಡುವಿಲ್ಲದೆ ದುಡಿದರು. ಮುಂಜಾನೆ ತಪ್ಪದೆ ಗಾಳಿ ಸವಾರಿಗಾಗಿ ಹೊರಡುತ್ತಿದ್ದರು. ಆಮೇಲೆ, ಅವರರದೇ ಮಾತುಗಳಲ್ಲಿ "ಬೆಳಿಗ್ಗೆ ಎಂಟು ಗಂಟೆಯಿಂದ ಹಿಡಿದು ಹನ್ನೆರಡು ಗಂಟೆ ರಾತ್ರಿಯವರೆಗೂ, ನಡುವೆ ಎರಡು ಗಂಟೆ ಬಿಟ್ಟು, ಒಟ್ಟು ಹದಿನಾರು ಗಂಟೆ ಕಾಲ ಕೆಲಸದಲ್ಲಿ ಮಗ್ನನಾಗಿರುತ್ತಿದ್ದೆ". "ಬೌದ್ಧ ಸಂಸ್ಕೃತಿ" ಬರವಣಿಗೆಗೆ ಶಾಂತಿನಿಕೇತನದ ಪುಸ್ತಕಾಧ್ಯಕ್ಷ ಹಾಗೂ "ಬೃಹತ್ತರ ಭಾರತ"ದ ಗಂಭೀರ ವಿದ್ವಾಂಸ ಶ್ರೀ ಪ್ರಭಾತ್ ಕುಮಾರ್ ಮುಖ್ಯೋಪಾಧ್ಯಾಯರು ರಾಹುಲರಿಗೆ ಎಲ್ಲ ರೀತಿಯ ಸಹಾಯ ನೀಡಿದರು. ಈ ಪುಸ್ತಕ ಪ್ರಭಾತ್ ಬಾಬುಗಳಿಗೇ ಅರ್ಪಿತವಾಗಿದೆ. "ವಿಶ್ವಭಾರತೀಸ್ಥ ಶ್ರೀ ಪ್ರಭಾತ ಕುಮಾರ ಮುಖೋಪಾಧ್ಯಾಯ ಮಹಾಶಯೇಷು ತ್ವದೀಯಂ ವಸ್ತು ಗೋವಿಂದ ತುಭ್ಯಮೇವ ಸಮರ್ಪಯೇ". 1949ರಲ್ಲಿ ಬರೆದ "ಬೌದ್ಧ ಸಂಸ್ಕೃತಿ" 1953ರಲ್ಲಿ ಪ್ರಕಟವಾಯಿತು.

ಸುಮಾರು ಐನೂರು ಪುಟಗಳ ಈ ಗ್ರಂಥದಲ್ಲಿ ರಾಹುಲರು ಭಾರತ, ಶ್ರೀಲಂಕಾ, ಬರ್ಮಾ, ಇಂಡೋನೇಶಿಯಾ, ಹಿಂದ್-ಚೀನ, ಚೀನ, ಅಫ್‌ಘಾನಿಸ್ತಾನ, ಮಧ್ಯ ಏಶಿಯಾ, ಟಿಬೆಟ್, ಮಂಗೋಲಿಯಾ, ಕೊರಿಯಾ ಹಾಗೂ ಜಪಾನ್‌ಗಳಲ್ಲಿ ಅರಳಿದ ಬೌದ್ಧ ಸಂಸ್ಕೃತಿಯ ವಿಸ್ತಾರವಾದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಮುನ್ನುಡಿಯಲ್ಲಿ "ಭಾರತೀಯ ಸಂಸ್ಕೃತಿ ಪ್ರಾಯಶಃ ಬೌದ್ಧ ಧರ್ಮದೊಂದಿಗೆ ದೇಶದ ಹೊರಗೆ ಹೋಯಿತು. ಆದರೆ ಎಲ್ಲಿಯವರೆಗೆ ಇಂಡೋನೇಶಿಯಾ, ಇಂಡೋಚೀನ ಮತ್ತು ಅಫ್‌ಘಾನಿಸ್ತಾನಗಳ ಸಂಬಂಧವಿತ್ತೋ ಸಾಂಸ್ಕೃತಿಕ ಪ್ರಚಾರ, ಪ್ರಸಾರ ಕಾರ್ಯದಲ್ಲಿ ಬ್ರಾಹ್ಮಣ ಧರ್ಮೀಯರೂ ಹಿಂದೆ ಸರಿಯಲಿಲ್ಲ-ಎಂಬುದನ್ನು ಹೇಳಲೇಬೇಕು. ಸ್ವಾತಂತ್ರ್ಯ ಕಳಕೊಳ್ಳುವುದರೊಂದಿಗೆ ಆ ದೇಶಗಳೊಂದಿಗಿನ ಭಾರತದ ಸಂಬಂಧವೂ ಕಳೆದು ಹೋಯಿತು. ಆದರೆ ಇವತ್ತಿಗೂ ಅದು ಭಾರತೀಯ ಸಂಸ್ಕೃತಿಯಿಂದ ಉಸಿರು ತುಂಬಿಕೊಂಡಿದೆ. ಈ ವಿಸ್ಮೃತ ಸಂಬಂಧವನ್ನು ಪುನಃ ಪ್ರತ್ಯಕ್ಷಗೊಳಿಸಿಕೊಳ್ಳುವಲ್ಲಿ ಬೌದ್ಧ ಧರ್ಮದ ಅರಿವು ದೊಡ್ಡ ಪಾತ್ರ ವಹಿಸಿತೆಂಬುದರಲ್ಲಿ ಸಂಶಯವೇ ಇಲ್ಲ. ಭಾರತದ ಪುರಾಣ ಕಾಲದ ಕರ್ಮಠ ಜೀವನವನ್ನು ಮತ್ತೆ ತಿಳಿಯಬೇಕೆಂದರೆ, ಏಶಿಯಾದ ಪ್ರಮುಖ ಭಾಷೆಗಳಲ್ಲಿ ಈಗಲೂ ಇರುವ ಬೌದ್ಧ ಸಾಹಿತ್ಯ ಮತ್ತು ಬೃಹತ್ತರ ಭಾರತದ ಇತಿಹಾಸ ಹಾಗೂ ಭೂಗೋಲದ ಅಧ್ಯಯನ ಬಹಳ ಮುಖ್ಯ. ಇದು ಕೂಪ ಮಂಡೂಕತ್ವದಿಂದ ನಮ್ಮನ್ನು ಹೊರಗೆಳೆದು ದಾರಿ ತೋರಿಸೀತು" ಎಂದಿದ್ದಾರೆ.

ರಾಹುಲರು ಹಿಂದಿನ ವರ್ಷದ ಬೇಸಗೆಯನ್ನು ಕನ್ನೌರ್‌ನಲ್ಲಿ (ಹಿಮಾಚಲ ಪ್ರದೇಶ) ಕಳೆದಿದ್ದರಷ್ಟೆ. ಮುಂದಿನ ಬೇಸಗೆಯೂ ಅಲ್ಲಿಗೇ ಹೋಗುವುದೆಂದು ಅವರು ಯೋಚಿಸಿದ್ದರು. ಆದರೆ ಶಾಂತಿನಿಕೇತನದಲ್ಲಿ ಇದ್ದಾಗ, ಈ ಬಾರಿ, ಕಾಲಿಂಪೋಙಗೆ ಹೋಗುವುದೆಂದು ಅವರು ನಿಶ್ಚಯಿಸಿದರು. ಪರಿಭಾಷೆಗಳ ಕಾರ್ಯವೂ ಅಲ್ಲಿಯೇ ಮುಂದುವರಿಸುವುದು, ಎಂದರೆ ರಾಹುಲರ ಸಂಗಡ ಅವರ ಲಿಪಿಕಾರರೂ ಕಾಲಿಂಪೋಙನಲ್ಲಿ ಅವರ ಜೊತೆಯಲ್ಲಿ ಇರುವುದೆಂದಾಯಿತು.

ಶಾಂತಿನಿಕೇತನದಿಂದ ರಾಹುಲರು ಮೊದಲು ವರ್ಧಾಕ್ಕೆ ಹೋದರು. ಅಲ್ಲಿ ರಾಷ್ಟ್ರ ಭಾಷಾ ಪ್ರಚಾರ ಸಮಿತಿಯ ಸಮ್ಮೇಳನ ನಡೆಯಿತು. ಆನಂದಜೀಯವರ ನೇತೃತ್ವದಲ್ಲಿ ಸಮಿತಿ ಹೊಂದಿದ ಪ್ರಗತಿಯನ್ನು ಕಂಡು ರಾಹುಲಜೀ ಸಂತೋಷಗೊಂಡರು. ಸಮಿತಿ ಉತ್ಕೃಷ್ಟ ಸಾಹಿತ್ಯದ ಪ್ರಕಾಶನದ ಕೆಲಸವನ್ನು ಕೈಗೆತ್ತಿಕೊಳ್ಳಲೆಂದು ಅವರು ಬಯಸುತ್ತಿದ್ದರು.

ಅಲ್ಲಿಂದ ಪ್ರಯಾಗಕ್ಕೆ ತೆರಳಿದ ರಾಹುಲರು ಅಲ್ಲಿ ಮಾರ್ಚ್ 19ರಿಂದ 21ರವರೆಗೆ ಹಿಂದುಸ್ತಾನೀ ಎಕಾಡೆಮಿಯಲ್ಲಿ "ಬೌದ್ಧ ಸಂಸ್ಕೃತಿ"ಯ ಕುರಿತು ಭಾಷಣ ಮಾಡಿದರು. "ತಲೆ ಸುತ್ತಿ ಬಂದಂತೆ ಅನಿಸುತ್ತಿತ್ತು. ಡಯಾಬಿಟೀಸ್‌ನ ಕಾರಣದಿಂದಲೇ ಇರಬೇಕು. ಇಂಥಹುದೇ ಕಾರಣದಿಂದ ಹೀಗಾಗುತ್ತಿದೆ ಎಂದು ನನಗೆ ತಿಳಿಯುತ್ತಿರಲಿಲ್ಲ. ಪ್ರತಿ ದಿನ ಬಿಡದೆ ಇನ್ಸುಲಿನ್ ತೆಗೆದುಕೊಳ್ಳುತ್ತಿದ್ದೆ.

ಕಾಲಿಂಪೋಙಗೆ ಹೋಗಲು ಸಾಮಗ್ರಿ ಮತ್ತು ಜೊತೆಗಾರನನ್ನು ಕೂಡಿಸಿಕೊಳ್ಳಬೇಕು. ಮೂರು ಜನ ಜೊತೆಗಾರರು ಸಿಕ್ಕಿದರು. ಡಾ। ಭಟ್ಟ, ಸೇನ್ ಗುಪ್ತ ಮತ್ತು ಮಹೇಶ್ ನಾರಾಯಣ. ಪರಿಭಾಷೆಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನು ಒಂದೆಡೆ ಸೇರಿಸಿಟ್ಟರು. ಒಟ್ಟು ಹದಿನಾರು ಟ್ರಂಕುಗಳಲ್ಲಿ ಸಾಮಾನು ತುಂಬಿಸಿಕೊಂಡು 1949ರ ಏಪ್ರಿಲ್ 5ರಂದು ರಾಹುಲ್‌ಜೀ ಮತ್ತು ಮೂವರು ಸಂಗಡಿಗರು ಕಾಲಿಂಪೋಙಗೆ ತೆರಳಿದರು.

ರಾಹುಲರು ಸ್ವಂತದ ಮತ್ತು ಪರಿಭಾಷೆಗಳ ಕೆಲಸಕ್ಕೆ ದೂರದ ಕಾಲಿಂಪೋಂಜನ್ನು ಯಾಕೆ ಆರಿಸಿಕೊಂಡರು? ಮೊದಲ ಕಾರಣವೆಂದರೆ ಈ ಪರ್ವತ ಪ್ರದೇಶ ಟಿಬೇಟಿಗೆ ಹೋಗಿ ಬರುವ ಮಾರ್ಗದಲ್ಲಿದೆ. ಕಾಲಿಂಪೋಂಜನಲ್ಲಿ ಟಿಬೇಟಿ ಜನರೊಂದಿಗೆ ಮಾತುಕತೆ ನಡೆಸುವುದು ಸುಲಭ ಸಾಧ್ಯ. ಅಲ್ಲಿ ಬೌದ್ಧ ಮತದಲ್ಲಿ ಶ್ರದ್ಧೆಯಿರುವ ಮಣಿಹರ್ಷ ಜ್ಯೋತಿ ಮತ್ತು ಅವರ ತಂದೆ ಬಾಬು ರತ್ನ ಸಾಹು ಅವರು ರಾಹುಲರಿಗೆ ಎಲ್ಲಾ ಬಗೆಯ ಸಹಾಯ ನೀಡಲು ಸಿದ್ಧರಿದ್ದರು. ಧರ್ಮೋದಯ ಸಭೆ ತಮ್ಮ ಮೂಲಕ ಖರೀದಿಸಿದ ಸುಂದರ ಬಂಗಲೆಯನ್ನು ಅವರು ರಾಹುಲರ ವಾಸಕ್ಕೆ ಬಿಟ್ಟುಕೊಟ್ಟಿದ್ದರು. ತಮ್ಮ ಟಿಬೇಟೀ-ಸಂಸ್ಕೃತ ಕೆಲಸವನ್ನು ರಾಹುಲರು ಯಾವ ಅಡೆತಡೆಯಿಲ್ಲದೆ ಅನುಕೂಲವಾದಾಗ ಮಾಡಲು ಸಾಧ್ಯವಿತ್ತು. ಈಗವರು ಬೆಟ್ಟದ ಮೇಲೆ ತಮ್ಮದೇ ಆದ ಒಂದು ಮನೆ ಮಾಡಿಕೊಳ್ಳುವ ಬಗ್ಗೆಯೂ ಯೋಚಿಸುತ್ತ ಇದ್ದರು. ಆಗ ಜೀವನಾವಶ್ಯಕ ವಸ್ತುಗಳ ಸಮಸ್ಯೆಯಂತೂ ಖಂಡಿತ ಹುಟ್ಟಿಕೊಳ್ಳುತ್ತದೆ. ಆದರೆ ಕಾಲಿಂಪೋಂಜನಲ್ಲಿ ಸಧ್ಯಕ್ಕಂತೂ ಅದು ಸಂಭವವಲ್ಲವಾದ್ದರಿಂದ "ಗೃಹಸ್ಥನಾಗುವ ಶಾಪದಿಂದ ಪಾರಾದಂತೆ."

ಆದರೆ ರಾಹುಲರು ಇನ್ನು ಬಹಳ ದಿನ ಗೃಹಸ್ಥನಾಗದೆ ಉಳಿಯುವಂತಿರಲಿಲ್ಲ. ಅವರಿಗೀಗ ಐವತ್ತಾರು ವರ್ಷ ವಯಸ್ಸು. ಮಧುಮೇಹ ರೋಗಿ ಒಬ್ಬನಿಗೆ ಶಾಶ್ವತ ಸಂಗಾತಿ ಅವಶ್ಯ ಬೇಕಾಗಿದ್ದಳು. ಗೃಹಸ್ಥನಾಗಲು ಹೆದರಿದರೂ ಕೆಲ ತಿಂಗಳ ಬಳಿಕ ಅವರು ಕಾಲಿಂಪೋಂಜನಲ್ಲಿಯೇ "ಘರ್‌ಬಾರೀ" ಆದರು.

ಕಾಲಿಂಪೋಂಜನ ಧರ್ಮೋದಯ ವಿಹಾರ ತಲುಪಿದ ಬಳಿಕ ಮರುದಿನದಿಂದಲೇ ಕೆಲಸ ಆರಂಭವಾಯಿತು. ಸಂಗ್ರಹಿಸಿಟ್ಟ ಪಾರಿಭಾಷಿಕ ಶಬ್ದಗಳನ್ನು ಅಕಾರಾದಿ ಕ್ರಮದಲ್ಲಿ ಜೋಡಿಸಲು ಅವನ್ನು ಕಾರ್ಡುಗಳಲ್ಲಿ ಬರೆದಿಡುವುದು ಅಗತ್ಯವಾಗಿತ್ತು. ಇದಕ್ಕೆ ಕೆಲ ಸ್ಥಳೀಯ ನೇಪಾಳಿ ಹುಡುಗ ಹುಡುಗಿಯರನ್ನು ಗೊತ್ತು ಮಾಡಿಕೊಂಡಿದ್ದರು.

ಈ ನಡುವೆ ರಾಹುಲರು "ಮಧುರ ಸ್ವಪ್ನ" ಕಾದಂಬರಿಯನ್ನು ಬರೆಯಲು ನಿರ್ಧರಿಸಿದರು. ಈ ಐತಿಹಾಸಿಕ ಕಾದಂಬರಿಯ ಭೂಮಿಕೆ ಇರಾನ್ ಮತ್ತು ಮಧ್ಯ ಏಶ್ಯ. ಕಾಲ ಸುಮಾರು 500ನೇ ಇಸವಿಯ ಆಸುಪಾಸು. ಇದಕ್ಕಾಗಿ ಅವರು ಟೆಹರಾನ್ ಮತ್ತು ಲೆನಿನ್ ಗ್ರಾಡ್‌ನಲ್ಲಿ ಸಾಕಷ್ಟು ಸಾಮಗ್ರಿಗಳನ್ನು ಕಲೆ ಹಾಕಿದ್ದರು. ಕಾದಂಬರಿಯ ಹಿಂದಿನ ಪ್ರೇರಣೆಯ ಕುರಿತು ಹೀಗೆ ಬರೆದಿದ್ದಾರೆ:

"ಈ ಕಾದಂಬರಿಯ ಮೂಲಕ ನಾನು ಇತಿಹಾಸದ ಒಂದು ಮರೆತ ಪುಟವನ್ನು ಓದುಗರ ಮುಂದೆ ಇಡಲು ಪ್ರಯತ್ನಿಸುತ್ತೇನೆ. ನ್ಯಾಯ ಬಯಸುವ ಆ ಐತಿಹಾಸಿಕ ಪಾತ್ರಗಳು, ಅವುಗಳಲ್ಲಿ ಕೆಲವು ಈ ಗ್ರಂಥದಲ್ಲಿಯೂ ಇವೆ, ನನಗೆ ಬರೆಯಲೇ ಬೇಕಾದ ಬಾಧ್ಯತೆಯನ್ನು ತಂದೊಡ್ಡಿವೆ." ಕಾದಂಬರಿಯ ಉದ್ದೇಶ "ಅಂತ್ಯದಲ್ಲಿ ಮನುಷ್ಯ ಖಂಡಿತವಾಗಿಯೂ ತನ್ನ ಧ್ಯೇಯವನ್ನು ಸಾಧಿಸಿಯೇ ತೀರುತ್ತಾನೆ. ಸಮಸ್ತ ಮಾನವರ ಸಮಾನತೆ ಪರಸ್ಪರ ಪ್ರೇಮ ಮತ್ತು ಸಾರ್ವತ್ರಿಕ ಸುಖ ಸಮೃದ್ಧಿಯೇ ಆ ಧ್ಯೇಯ." ಕಾದಂಬರಿಯ ನಾಯಕ ಮಜ್ದಕ್ ಓರ್ವ ಐತಿಹಾಸಿಕ ವ್ಯಕ್ತಿಯಾಗಿದ್ದ.

ಕಾಲಿಂಪೋಂಜ ತಲುಪಿದ ಕೆಲವೇ ದಿನಗಳಲ್ಲಿ ರಾಹುಲ್‌ಜೀ ಅವರಿಗೆ ಸಂವಿಧಾನದ ಮಸೂದೆಗಳ ಅನುವಾದ ಮಾಡಲು ರಾಷ್ಟ್ರಪತಿಯಿಂದ ರಚಿತವಾದ ಒಂದು ಸಮಿತಿಯಲ್ಲಿ ತಮ್ಮ ಹೆಸರೂ ಇದೆಯೆಂದು ತಿಳಿದು ಬಂತು. ಅಂದರೆ, ಇದಕ್ಕಾಗಿ ಅವರು ಕಾಲಿಂಪೋಂಜನಿಂದ ದೆಹಲಿಗೆ

ಹೋಗಬೇಕೆಂಬುದು ವಿದಿತ. ಏಪ್ರಿಲ್ ಕೊನೆಯ ವಾರದಲ್ಲಿ ವಿಮಾನವೇರಿ ಬಾಗ್‌ಡೋಗ್ರಾದಿಂದ ಕಲ್ಕತ್ತಾಗೆ ಮತ್ತು ಕಲ್ಕತ್ತಾದಿಂದ ದಿಲ್ಲಿಗೆ ಪಯಣಿಸಿದರು. ಇದು ಭಾರತದಲ್ಲಿ ರಾಹುಲರ ಪ್ರಪ್ರಥಮ ವಿಮಾನ ಯಾನ. ಹಾಗೆ ನೋಡಿದರೆ ತನ್ನ ಜೀವನದಲ್ಲಿನ ಮೊಟ್ಟ ಮೊದಲ ವಿಮಾನ ಯಾನವನ್ನು ಅವರು 1945ರಲ್ಲಿ ಟೆಹರಾನ್‌ನಿಂದ ಮಾಸ್ಕೋಗೆ ಹೋಗುವಾಗ ಮಾಡಿದ್ದರಷ್ಟೆ. ದೆಹಲಿಯ ಬೇಸಗೆಯ ತಾಪಮಾನದಿಂದ ರಾಹುಲರು ಸಹಜವಾಗಿಯೇ ಕಂಗೆಟ್ಟರು. ಅಲ್ಲಿ ಒಂದು ವಾರವಿದ್ದು ವಿಮಾನ ಮಾರ್ಗವಾಗಿಯೇ ಬಾಗ್‌ಡೋಗ್ರಾ-ಕಾಲಿಂಪೋಙಗೆ ವಾಪಸು ಬಂದರು.

ಈಗ ಅವರು "ಮಧುರ ಸ್ವಪ್ನ" ಬರೆಯಲು ಆರಂಭಿಸಿದರು. "ಪ್ರತ್ಯಕ್ಷ ಶರೀರ" (ಅನಾಟಮಿ)ದ ಪಾರಿಭಾಷಿಕ ಕಾರ್ಯ ಪೂರ್ತಿಯಾಗಿತ್ತು. ಮತ್ತೀಗ ಬೇರೆ ಕೆಲಸಗಳಿಗೆ ಕೈ ಹಚ್ಚಿದ್ದರು. 1949ರ ಮೇ ಕೊನೆಯ ವಾರ, ಇನ್ನೊಮ್ಮೆ ದೆಹಲಿಗೆ ಹೋಗಿ ಜೂನ್ 9ರಂದು ಕಾಲಿಂಪೋಙ್‌ಗೆ ವಾಪಸು ಬಂದರು. ಕಾಲಿಂಪೋಙ್‌ಗೆ ಬಂದು ಒಂದೂವರೆ ತಿಂಗಳೇ ಕಳೆದಿತ್ತು. ಮೊದಲೇ ಸಂಗ್ರಹಿಸಿಟ್ಟಿದ್ದ ಪಾರಿಭಾಷಿಕ ಶಬ್ದಗಳನ್ನು ಕ್ರಮದಲ್ಲಿ ಬರೆದಿಡುವ ಕೆಲಸವೂ ಪೂರ್ಣಗೊಂಡಿತ್ತು. ಹೊಸತಾಗಿ ಸಂಗ್ರಹವಾಗುವ ಶಬ್ದಗಳನ್ನು ಬರೆದಿಡಲು ಕೇವಲ ಒಬ್ಬ ಸಹಾಯಕ ಸಾಕಿತ್ತು. ಹಿಂದೆ ಶಬ್ದಗಳನ್ನು ವ್ಯವಸ್ಥಿತವಾಗಿ ಬರೆದಿಡಲು ಹುಡುಗ ಹುಡುಗಿಯರನ್ನು ಗೊತ್ತು ಮಾಡಿಕೊಟ್ಟವರು ಪರಮಹಂಸ ಮಿಶ್ರಾ ಎಂಬ ರಾಹುಲರ ಓರ್ವ ಪರಿಚಿತ ಅಧ್ಯಾಪಕರು. "ನಾನು ಪರಮಹಂಸರೊಡನೆ ಚುರುಕಾಗಿ ಬರೆಯಬಲ್ಲ, ಗ್ರಹಿಸಬಲ್ಲ ಒಬ್ಬ ಹುಡುಗನನ್ನೊ ಹುಡುಗಿಯನ್ನೋ ಕಳಿಸಲು ಹೇಳಿದೆ. ಹಿಂದೆ ಕೆಲಸ ಮಾಡಿದ ಹುಡುಗಿಯರಲ್ಲಿ ಕಮಲಾ ಪರಿಯಾರ್ ಕೂಡ ಇದ್ದಳು. ಪರಮಹಂಸರು ಅವಳನ್ನೇ ಶಿಫಾರಸು ಮಾಡಿದರು. ಅವಳು ಜೂನ್ 14 (1949) ರಂದು ಬಂದು ಕೆಲಸ ಆರಂಭಿಸಿದಳು."

"ಮಧುರ ಸ್ವಪ್ನ"ದ ಬರವಣಿಗೆ ಸಾಗುತ್ತಿತ್ತು. ಜೂನ್ 15ರಿಂದ ಘುಮಕ್ಕಡ್ ಶಾಸ್ತ್ರ (ಸಂಚಾರಿ-ಶಾಸ್ತ್ರ)ದ ಬರವಣಿಗೆಯೂ, ನಡುನಡುವೆ 'ಆಜ್ ಕೀ ರಾಜನೀತಿ' ಲೇಖನ ಕಾರ್ಯವೂ ನಡೆಯುತ್ತಿತ್ತು.

ಟಿಬೇಟಿನ ರಶ್ಯನ್ ವಿದ್ವಾಂಸ ಡಾ। ಜಾರ್ಜ್ ರ್‍ಯೋರಿಕ್ ಆ ವೇಳೆ ಕಾಲಿಂಪೋಂಙ್‌ನಲ್ಲೇ ಇದ್ದರು. ಇಬ್ಬರೂ ಸೇರಿ ಧರ್ಮ ಕೀರ್ತಿಯ ಮಹಾನ್ ಗ್ರಂಥ "ಪ್ರಮಾಣ ವಾರ್ತಿಕ"ವನ್ನು ಅನುವಾದ ಮಾಡಲು ಒಪ್ಪಿಕೊಂಡರು. ಡಾ। ರ್‍ಯೋರಿಕ್ ಟಿಬೇಟಿ ಅನುವಾದದಿಂದ ಇಂಗ್ಲಿಷಿಗೆ ಮಾಡುವುದು. ರಾಹುಲರು ಅದನ್ನು ಸಂಸ್ಕೃತದೊಂದಿಗೆ ತುಲನೆ ಮಾಡುವುದು ಹೀಗೆ. ಆದರೆ ಒಂದು ಪರಿಚ್ಛೇದದ ಮುಂದೆ ಆ ಕೆಲಸ ಸಾಗಲಿಲ್ಲ.

ಹದಿನೈದು ದಿನಗಳಲ್ಲಿಯೇ ರಾಹುಲರು "ಘುಮಕ್ಕಡ್ ಶಾಸ್ತ್ರ" ಗ್ರಂಥ ಬರೆದು ಮುಗಿಸಿದರು. "ಸಂಚಾರದ ಆಸೆ ಅಂಕುರಿಸುವ ಕೆಲಸ ಈ ಶಾಸ್ತ್ರದ್ದಲ್ಲ. ಬದಲು ಇದರ ಗುರಿ, ಜನ್ಮಜಾತ ಅಂಕುರಕ್ಕೆ ಪುಷ್ಟಿ, ಬೆಳವಣಿಗೆ ಹಾಗೂ ಮಾರ್ಗದರ್ಶನ ನೀಡುವುದಷ್ಟೇ."

ಧರ್ಮೋದಯ ವಿಹಾರದಲ್ಲಿದ್ದುಕೊಂಡು ಕಾಲಿಂಪೋಙ್‌ನಲ್ಲಿ ತಮಗಾಗಿ ಒಂದು ಮನೆ ಖರೀದಿಸುವುದೆಂದು ಮೊದಲು ಯೋಚಿಸಿದರು. ಆದರೆ ನಂತರದಲ್ಲಿ ಯಾವುದಾದರೂ ಬಂಗಲೆಯನ್ನು ಬಾಡಿಗೆಗೆ ತೆಗೆದುಕೊಳ್ಳುವುದೆಂದು ಅವರು ನಿರ್ಧರಿಸಿದರು. ಕೆಲ ದಿನ ಹುಡುಕಿ ಹುಡುಕಿ ಕೊನೆಗೆ ದೂರದಲ್ಲಿದ್ದ ಒಂದು ಬಂಗಲೆ "ಪಾರ್ವತೀ" ಅವರಿಗೆ ಇಷ್ಟವಾಯಿತು. ಸಾಮಾನು

ಕಟ್ಟಿಕೊಂಡು ಸಂಗಡಿಗರ ಸಮೇತ 1949ರ ಜುಲೈ ಮೂರರಂದು ಅಲ್ಲಿಗೆ ಹೊರಟು ಹೋದರು. ಜುಲೈ ಮೂರನೇ ವಾರದಲ್ಲಿ ಮೂರನೇ ಬಾರಿಗೆ ಅವರು ಕಾಲಿಂಪೋಂಜ್‌ನಿಂದ ದೆಹಲಿಗೆ ಹೋಗಬೇಕಾಯಿತು. ಈ ಸಲ ರೈಲಿನಲ್ಲಿ ಹೋಗುವಾಗ, ಪ್ರಯಾಗದಲ್ಲಿ ಇಳಿದು, ಅಲ್ಲಿ ಶಬ್ದಕೋಶಗಳ ಪ್ರಕಟಣೆ ಕಾರ್ಯವನ್ನು ನೋಡಿಕೊಂಡು ಪಯಣ ಮುಂದುವರಿಸಿದರು.

ಇನ್ನು ಮುಂದೆ ಒಂದು ಹೊಸ ಜವಾಬ್ದಾರಿ ವಹಿಸಲಿದ್ದ ಅವರು ಹೀಗೆ ಬರೆಯುತ್ತಾರೆ: "ಒಂದು ದಿನ ಮಳೆಯಲ್ಲಿ ಕಮಲಾ ಬಹಳ ತೊಯ್ದಳು. ಆದ್ದರಿಂದ 49ರ ಆಗಸ್ಟ್ 18ರಿಂದ ಅವಳೂ ಅಲ್ಲಿಯೇ ಉಳಿದುಕೊಳ್ಳುವ ವ್ಯವಸ್ಥೆ ಮಾಡಿ, ಪರೀಕ್ಷೆಗೆ ತಯಾರಿ ನಡೆಸಲು ಹೇಳಿದೆ....ಕಮಲಾ ಈಗ ನನಗೆ ಬಹಳ ಹತ್ತಿರವಾಗಿದ್ದಳು." ವಾಸ್ತವವಾಗಿ ಇದು ರಾಹುಲರ ಹೊಸ 'ಗೃಹಕೃತ್ಯ'ದ ಆರಂಭ. ಅವರಿಗೆ ಈಗ ಖಂಡಿತವಾಗಿಯೂ ಒಬ್ಬ ಶಾಶ್ವತ ಸಂಗಾತಿಯ ಅಗತ್ಯವಿತ್ತು.

49ರ ಡಿಸೆಂಬರ್ ಮೂರನೇ ವಾರದವರೆಗೆ ಅವರು ಕಾಲಿಂಪೋಂಜ್‌ನಲ್ಲಿ ಉಳಿದರು. ಅಷ್ಟರೊಳಗೆ ಮತ್ತೆರಡು ಸಲ ದೆಹಲಿಗೆ ಹೋಗಿ ಬಂದರು. ಪ್ರಯಾಗಕ್ಕೂ. ಡಾರ್ಜಿಲಿಂಗ್ ಸಂಚರಿಸಿ ಬಂದ ರಾಹುಲರು "ಡಾರ್ಜಿಲಿಂಗ್ ಪರಿಚಯ" ಬರೆಯಲಾರಂಭಿಸಿದ್ದರು. ಈ ಸಲದ ಹಿಂದೀ ಸಾಹಿತ್ಯ ಸಮ್ಮೇಳನದ ವಾರ್ಷಿಕ ಅಧಿವೇಶನ ಡಿಸೆಂಬರ್ ಕೊನೆಯ ವಾರದಲ್ಲಿ ಹೈದರಾಬಾದಿನಲ್ಲಿ ಏರ್ಪಾಡಾಗಿತ್ತು. ಪಂಡಿತ ಚಂದ್ರಬಲಿಪಾಂಡೆ ಸಮ್ಮೇಳನದ ಅಧ್ಯಕ್ಷರಾಗಿ ಚುನಾಯಿತರಾಗಿದ್ದರು. ರಾಹುಲರಿಗೆ ಆಗ್ರಹಪೂರ್ವಕದ ಆಮಂತ್ರಣವಿತ್ತು. ಸಮ್ಮೇಳನದಲ್ಲಿ ಅವರನ್ನು "ಸಾಹಿತ್ಯ ವಾಚಸ್ಪತಿ" ಎಂದು ಬಿರುದು ಕೊಟ್ಟು ಗೌರವಿಸಲಿದ್ದರು.

ಕಮಲಾ ಪರಿಯಾರನ್ನು ಜೊತೆಗೆ ಕರೆದುಕೊಂಡು ಡಿಸೆಂಬರ್ 21ರಂದು ಹೈದರಾಬಾದಿಗೆ ಹೊರಟರು. ಕಲ್ಕತ್ತಾ, ವರ್ಧಾ ಮಾರ್ಗವಾಗಿ ಡಿಸೆಂಬರ್ 24ರಂದು ಹೈದರಾಬಾದ್ ತಲುಪಿದರು. ನಾನು ರಾಹುಲರನ್ನು ನೋಡಿದ್ದು ಇದೇ ಮೊದಲ ಬಾರಿ, ಈ ಸಂದರ್ಭದಲ್ಲಿಯೇ ಮುಂದಿನ ಹದಿಮೂರು ದಿನಗಳ ಕಾಲ ದೂರ-ದೂರದಿಂದಲೇ ಅವರ ಚಲನವಲನಗಳನ್ನು ಪ್ರತ್ಯಕ್ಷ ವೀಕ್ಷಿಸಿದೆ. ಸಮ್ಮೇಳನದಲ್ಲಿ ರಾಜರ್ಷಿ ಪುರುಷೋತ್ತಮ ದಾಸ ಟಂಡನ್, ಪಂಡಿತ ಲಕ್ಷ್ಮೀನಾರಾಯಣ ಮಿಶ್ರ, ಪಂಡಿತ ರವಿಶಂಕರ ಶುಕ್ಲ, ಆಚಾರ್ಯ ನರೇಂದ್ರ ದೇವ, ಪ್ರೊ| ರಂಜನ್, ಡಾ| ಉದಯನಾರಾಯಣ ತಿವಾರಿ, ಆನಂದಜೀ, ಪಂಡಿತ ವಾಚಸ್ಪತಿ ಪಾಠಕ್ ಮುಂತಾದ ಅನೇಕರು ಉಪಸ್ಥಿತರಿದ್ದರು.

ಸಮ್ಮೇಳನ ಚೆನ್ನಾಗಿ ನಡೆಯಿತು. ಹೈದರಾಬಾದಿನ ಆಸುಪಾಸಿನ ಐತಿಹಾಸಿಕ ಸ್ಥಳಗಳನ್ನು ತೋರಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ರಾಹುಲರ ತಂಡದೊಂದಿಗೆ ನಾನು ಕೂಡ ಮ್ಯೂಸಿಯಂ, ಉಸ್ಮಾನಿಯಾ ವಿಶ್ವವಿದ್ಯಾಲಯ ಮತ್ತು ಗೋಲ್ಕೊಂಡ ಕೋಟೆಯನ್ನು ನೋಡಿದೆ. ನಂತರ ರಾಹುಲರೂ ಇದ್ದ ನಮ್ಮ ದೊಡ್ಡ ತಂಡ ರೈಲಿನಲ್ಲಿ ಔರಂಗಾಬಾದಿಗೆ ಹೋಯಿತು. ಅಲ್ಲಿಂದಲೇ ಬಸ್ ಮಾಡಿಕೊಂಡು ಎಲ್ಲೋರಾ, ನಂತರ ಅಜಂತಾಕ್ಕೆ ತೆರಳಿದೆವು. ಹಿಂದಿರುಗುವ ದಾರಿಯಲ್ಲಿ ದೌಲತಾಬಾದ್‌ನ ಕೋಟೆ ದರ್ಶನ. ರಾಹುಲರು, ಸ್ವತಃ ಬರೆದಂತೆ, "ಇಡೀ ಗುಂಪಿಗೆ ನಾನೇ ಗೌರವ ಗೈಡ್ ಆಗಬೇಕಾಯಿತು."

ಔರಂಗಾಬಾದ್‌ನಿಂದ ಮನಮಾಡ್, ವರ್ಧಾ. ವರ್ಧಾಕ್ಕೆ ರೈಲಿನಲ್ಲಿ ಪಯಣಿಸುತ್ತಿರುವಾಗಲೇ ನಡುದಾರಿಯಲ್ಲಿ ಹೊಸ ವರ್ಷದ (1950) ಸೂರ್ಯ ಮೂಡುತ್ತಲಿದ್ದ ಹೊಸ ವರ್ಷದ ಮೊದಲ

ದಿನ ವರ್ಧಾದಲ್ಲಿ ಇಳಿದರು. ಈಚಿನ ಕೆಲ ವರ್ಷಗಳಿಂದ ವರ್ಷಾಂತ್ಯದಲ್ಲಿ ಎಷ್ಟೆಲ್ಲ ಬರವಣಿಗೆಯಾಯಿತೆಂದು ರಾಹುಲರು ಲೆಕ್ಕ ಬರೆದಿಡುತ್ತಿದ್ದರು. ಹಾಗೆ 1949ನೆಯ ಇಸವಿಯಲ್ಲಿ ಬೌದ್ಧ ಸಂಸ್ಕೃತಿ, ಘುಮಕ್ಕಡ್ ಶಾಸ್ತ್ರ, ಆಜ್ ಕೀ ರಾಜನೀತಿ ಮತ್ತು ಪಾರಿಭಾಷಿಕ ಶಬ್ದಗಳ ಕೆಲಸ. ಎರಡನೇ ಮತ್ತು ಮೂರನೇ ಪುಸ್ತಕಗಳ ಪ್ರಕಟಣೆ. "ಮಧುರ ಸ್ವಪ್ನ" ಮತ್ತು "ಡಾರ್ಜಿಲಿಂಗ್ ಪರಿಚಯ"ಗಳ ಮುಕ್ಕಾಲು ಭಾಗದ ಬರವಣಿಗೆ. ಸಂವಿಧಾನದ ಅನುವಾದದ ಕೆಲಸ ಪೂರ್ತಿಯಾಗಿತ್ತು.

ಆ ವರ್ಷದ ಮತ್ತೊಂದು ಲಾಭವೆಂದರೆ-ಹೊಸ ಗಾರ್ಹಸ್ಥ್ಯ. ಇದಕ್ಕಾಗಿ ಈಗ ಒಂದು ಸ್ಥಿರವಾದ ವಸತಿಯ ವ್ಯವಸ್ಥೆಯಾಗಬೇಕು. ಕಲ್ಕತ್ತಾದ ಸೇಠ್ ಪರಮಾನಂದ ಪೋದ್ದಾರರು ತನ್ನ ಪ್ರಕಾಶನ ಸಂಸ್ಥೆ "ಆಧುನಿಕ ಪುಸ್ತಕ ಭವನ"ದಿಂದ ರಾಹುಲರ ಪುಸ್ತಕ ಪ್ರಕಟಣೆಗಾಗಿ ಇಪ್ಪತ್ತೈದು ಸಾವಿರ ರೂಪಾಯಿ ಸಂಭಾವನೆಯ ಕರಾರು ಮಾಡಿಕೊಂಡಿದ್ದರು. ಅದೇ ಹಣದಲ್ಲಿ ಒಂದು ಮನೆ ಕೊಳ್ಳಬೇಕು ಎಂದುಕೊಂಡರು ರಾಹುಲಜೀ.

ಹೊಸ ಮನೆವಾರ್ತೆಗೆ ಹೊರಟಿರುವಾಗ ಆಯ-ವ್ಯಯದ ಚಿಂತೆಯಾಗುವುದು ಸಹಜ ತಾನೆ ? 1949 ವಾರ್ಷಿಕಾಂತ್ಯದ ಮಾರ್ಚ್ ಕೊನೆಯಲ್ಲಿ ಅವರ ಪ್ರಯಾಗದ ಪ್ರಕಾಶಕ ರಾಯಲ್ಟಿಯ ಲೆಕ್ಕ ಕೊಟ್ಟಿದ್ದ. 5206 ರುಪಾಯಿ, 9 ಆಣೆ. "ತಿಂಗಳಿಗೆ ಐನೂರು ರೂಪಾಯಿಗಿಂತ ಕಡಿಮೆ ಖರ್ಚಿನಲ್ಲಿ ಮನೆ ನಡೆಯುವುದು ನಮ್ಮ ಮಟ್ಟಿಗೆ ಕಷ್ಟದ್ದೆಂದು ಇಷ್ಟು ದಿನದ ಜೀವನ ಶೈಲಿ ತಿಳಿಸಿತ್ತು. ಅಲೆಮಾರಿ ಬದುಕಿನ ಆ ಕಾಲದಲ್ಲಿ ಕೈಯಲ್ಲಿ ಮೂರು ಕಾಸು ಇಲ್ಲದಾಗಲೂ ಜೀವನ ನಿರ್ವಹಣೆಗೆ ಕಷ್ಟವೆನಿಸಿರಲಿಲ್ಲ. ಆದರೆ ಈಗಲೋ, ಸ್ಥಿರವಾದ ಒಂದು ನೆಲೆ ಹುಡುಕುವುದರಲ್ಲಿ ಸಫಲರಾಗದಿದ್ದರೂ ಸಧ್ಯಕ್ಕೊಂದು ಮನೆ ಆಗಿದ್ದು, ಖರ್ಚು ಇದ್ದೇ ಇರುತ್ತಿತ್ತು."

ರಾಹುಲರು ವರ್ಧಾದ ರಾಷ್ಟ್ರ ಭಾಷಾ ಪ್ರಚಾರ ಸಮಿತಿಯಲ್ಲಿ ಎರಡು ದಿನ ಇದ್ದರು. ಹೈದರಾಬಾದ್ ಸಮ್ಮೇಳನದಲ್ಲಿ ಮತ್ತು ಅಜಂತಾ ಎಲ್ಲೋರಾ ಪ್ರವಾಸ ಹೋದಾಗ ರಾಹುಲರನ್ನು ದೂರ-ದೂರದಿಂದಲೇ ನೋಡುತ್ತಿದ್ದ ನನಗೆ ಈಗ ವರ್ಧಾದಲ್ಲಿ ಅವರನ್ನು ಹತ್ತಿರದಿಂದ ನೋಡುವ ಮತ್ತು ಅವರ ಮಾತು ಕೇಳುವ ಅವಕಾಶ ಸಿಕ್ಕಿತು.

ರಾಷ್ಟ್ರ ಭಾಷಾ ಸಮಿತಿ ಈಗ ಸಾಕಷ್ಟು ದೊಡ್ಡ ಸಂಸ್ಥೆಯಾಗಿ ಬೆಳೆದಿತ್ತು. ಅದು ಹದಿಮೂರು ಎಕರೆ ಭೂಮಿಯಲ್ಲಿ ಅನೇಕ ಕಟ್ಟಡಗಳನ್ನು ಹೊಂದಿತ್ತು. ಅದರ ವಾರ್ಷಿಕ ಬಜೆಟ್ 6 ಲಕ್ಷ ಮುಟ್ಟಿತ್ತು. ಸ್ವಯಂ ರಾಹುಲರೇ ಬರೆದಂತೆ "ಬಾಡಿಗೆಯ ಒಂದು ದರಿದ್ರ ಕೋಣೆಯಲ್ಲಿ ಆರಂಭವಾದ ರಾಷ್ಟ್ರ ಭಾಷಾ ಪ್ರಚಾರ ಸಮಿತಿ ಈಗ ಒಂದು ವಿಶಾಲ ಸಂಸ್ಥೆಯಾಗಿ ರೂಪುಗೊಂಡಿತ್ತು. ನಿಜಕ್ಕೂ ಒಂದು ನಗರದಂತೆಯೇ ಭಾಸವಾಗುವ 'ಹಿಂದೀ ನಗರ'. ಇಡೀ ಭಾರತದಲ್ಲಿಯೇ ಹರಡಿಕೊಂಡಿರುವ ಕಾರ್ಯಕರ್ತರ ಜಾಲ. ಸಮಿತಿ ಇಷ್ಟು ಉನ್ನತಿ ಹೊಂದುವಲ್ಲಿ ಆನಂದಜೀಯವರ ಪರಿಶ್ರಮದ್ದೇ ಸಿಂಹಪಾಲು ಎಂಬುದರಲ್ಲಿ ಸಂಶಯವಿಲ್ಲ."

ರಾಷ್ಟ್ರ ಭಾಷಾ ಸಮಿತಿಯ ಮುಖ್ಯ ಕಾರ್ಯಗಳೆಂದರೆ:-ಹಿಂದಿಯೇತರ ಪ್ರದೇಶಗಳಲ್ಲಿ ಹಿಂದೀ ಭಾಷೆಯ ಪ್ರಚಾರ. ಇಪ್ಪತ್ತು ಮೂವತ್ತು ಸಾವಿರ ಸಂಖ್ಯೆಯಲ್ಲಿ ಪಠ್ಯಪುಸ್ತಕಗಳನ್ನು, ಸಂಸ್ಕರಣ ಆವೃತ್ತಿಗಳನ್ನು ಅಚ್ಚು ಹಾಕಿಸುತ್ತಿದ್ದರು. ಪರೀಕ್ಷೆಗಳನ್ನು ನಡೆಸುತ್ತಿದ್ದರು. ಸಂಸ್ಥೆ ಬಹಳ ಯಶಸ್ವಿಯಾಗಿ

ಕಾರ್ಯನಿರ್ವಹಿಸುತ್ತಿತ್ತು. ಆದರೂ ಪ್ರಯಾಗ ಸಮ್ಮೇಳನದೊಡನೆ ಸೇರಿಕೊಂಡು ಕೆಲವರಿಗೆ ಸಮಿತಿಯ ಈ ಆರ್ಥಿಕ ಯಶಸ್ಸು ಸುಳ್ಳು ಎನ್ನುವ ಹಾಗಾಗುತ್ತಿತ್ತು.

ರಾಹುಲರು ಆನಂದಜೀಯವರೊಡನೆ ಚರ್ಚಿಸಿ ಸಮಿತಿಗಾಗಿ ದೇಶ-ವಿದೇಶಗಳ ಭಾಷಾಕೋಶ, ಸ್ವಯಂಶಿಕ್ಷಕ ಹಾಗೂ ಅನುವಾದಗಳನ್ನೊಳಗೊಂಡ ಸಾಹಿತ್ಯ-ನಿರ್ಮಾಣದ ಒಂದು ಹೊಸ ಯೋಜನೆಯನ್ನು ಸಿದ್ಧಪಡಿಸಿ ಕೊಟ್ಟರು. ವಾಸ್ತವವಾಗಿ ಸಮಿತಿ ಇಂತಹ ಸಾಹಿತ್ಯಿಕ ಯೋಜನೆಯನ್ನು ಕೈಗೆತ್ತಿಕೊಳ್ಳುವಷ್ಟು ಸಮರ್ಥವಾಗಿರಲಿಲ್ಲ. ಆದುದರಿಂದ ಅದರ ಪರಿಣಾಮವೂ ಸುಸೂತ್ರವಾಗಲಿಲ್ಲ.

ವರ್ಧಾದಿಂದ ಪ್ರಯಾಗಕ್ಕೆ ಬಂದ ರಾಹುಲರು ಈ ಸಲ ಒಬ್ಬಂಟಿ ಅಲ್ಲವಾದುದರಿಂದ ಮಾಚವೆಯರ ಮನೆಯಲ್ಲಿ ಉಳಿದರು. "ಡಾರ್ಜಿಲಿಂಗ್ ಪರಿಚಯ"ದ ಬರವಣಿಗೆ ಮುಂದುವರಿಯಿತು. ನೋಡಲು ಬರುವವರು ಹೋಗುವವರಂತೂ ಇದ್ದೇ ಇರುತ್ತಿದ್ದರು. ಮಾಚವೇ ದಂಪತಿಗಳೊಂದಿಗೆ ಅವರು ನಿರಾಲಾಜೀಯವರನ್ನು ನೋಡಲು ಹೋದರು. ನಿರಾಲಾರೆಂದರೆ ಅವರಿಗೆಷ್ಟು ಅಭಿಮಾನವೆಂದರೆ "ಪ್ರಯಾಗಕ್ಕೆ ಬಂದಾಗ ನಿರಾಲಾಜೀಯವರನ್ನು ಸ್ವಲ್ಪ ಹೊತ್ತಿನ ಮಟ್ಟಿಗಾದರೂ ಭೇಟಿಯಾಗುವುದು ದೊಡ್ಡ ಸೌಭಾಗ್ಯದ ಮಾತೆಂದು ನಾನು ತಿಳಿಯುತ್ತೇನೆ."

ಆ ಅವಧಿಯಲ್ಲಿಯೇ ಅನುವಾದ ಸಮಿತಿಯ ಕೆಲಸಕ್ಕಾಗಿ ಎರಡು ಬಾರಿ ದೆಹಲಿಗೆ ಹೋಗಿ ಬಂದದ್ದಾಯಿತು. ಮೊದಲ ಸಲ ಒಬ್ಬರೇ ಹೋದರು-ಕಮಲಾರನ್ನು ಮಾಚವೆ ಕುಟುಂಬದೊಂದಿಗೆ ಬಿಟ್ಟು. ಎರಡನೇ ಸಲ ಕಮಲಾಗೆ ದೆಹಲಿ ತೋರಿಸಲೆಂದು ಜೊತೆಯಲ್ಲಿ ಕರೆದುಕೊಂಡು ಹೋದರು. ಮಥುರಾ, ವೃಂದಾವನ, ಆಗ್ರಾ ಮತ್ತು ಕಾನ್ಪುರ ಪ್ರವಾಸ ಮಾಡಿ, 1950ರ ಜನವರಿ ಕೊನೆಯಲ್ಲಿ ಇಬ್ಬರೂ ಮರಳಿ ಮಾಚವೇ ಕುಟುಂಬವನ್ನು ಕೂಡಿಕೊಂಡರು.

ಬೆಟ್ಟದ ಮೇಲೆ ಮನೆ ಕೊಳ್ಳುವ ಹುಡುಕಾಟ ನಡೆದಿತ್ತು. ಕಾಲಿಂಪೋಜ್‌ಗೆ ಹೋಗಿ ಸಾಮಾನುಗಳನ್ನು ತರಬೇಕು. ಈಗ ಅವರ ಜೀವನ ಹೊಸತೊಂದು ಆಯಾಮದತ್ತ ಸಾಗುತ್ತಿದೆ. ದೇಹದಲ್ಲಿ ಡಯಬಿಟಿಸ್‌ನ ಪ್ರಭಾವವೂ ಆಗುತ್ತಿದೆ. 57ನೇ ವಯಸ್ಸಿನಲ್ಲಿ ಶರೀರದ ವಿಷಯದಲ್ಲಿ ಮಾತ್ರವಲ್ಲ, ಚಿಂತನೆಯಲ್ಲಿಯೂ ಸಾಕಷ್ಟು ಬದಲಾವಣೆ ಆಗಲೇಬೇಕು ತಾನೆ ?

# ಗೂಡಿಗಾಗಿ

ಕಾಲಿಂಪ್ಪೋಂಙ ವಾಸ ಇನ್ನು ಸಾಕೆನಿಸಿತ್ತು. ಭಟ್ಟ ಮತ್ತು ಸೇನಗುಪ್ತರಿಗೂ ಅಲ್ಲಿಂದ ಸಾಮಾನುಗಳನ್ನೆಲ್ಲ ತರಬೇಕು, "ಕಾಲಿಂಪ್ಪೋಙ್‌ನಿಂದ ದಂಡ ಕಮಂಡಲ ಹಿಡಿದು ಹೊರಡಬೇಕಿತ್ತು. ಹೀಗಾಗಿ ಕಮಲಾಳನ್ನು ಕಾಲಿಂಪ್ಪೋಙ್‌ಗೆ ಕರೆದೊಯ್ಯುವ ಅಗತ್ಯವಿರಲಿಲ್ಲ." ಕಾಲಿಂಪ್ಪೋಙ್‌ನಲ್ಲಿ ರಾಹುಲರಿದ್ದುದು ಒಟ್ಟು ಹತ್ತು ತಿಂಗಳು. "ದಂಡ ಕಮಂಡಲ" ಎತ್ತಿಕೊಂಡು ಬರಲಿಕ್ಕಾಗಿ ಈಗ ಅಲ್ಲಿಗೆ ಹೊರಟರು.

ಕಲ್ಕತ್ತಾದಿಂದ ವಿಮಾನದಲ್ಲಿ ಬಾಗ್‌ಡೋಗ್ರಾ, ಅಲ್ಲಿಂದ ಟ್ಯಾಕ್ಸಿಯಲ್ಲಿ ಕಾಲಿಂಪ್ಪೋಙ. ರಾಹುಲರು ಕಾಲಿಂಪ್ಪೋಙ್‌ನಲ್ಲಿ ಹದಿಮೂರು ದಿನ ಇರಬೇಕಿತ್ತು. ಸಾಮಾನು ಕಟ್ಟಬೇಕು, "ಡಾರ್ಜಿಲಿಂಗ್ ಪರಿಚಯ"ಕ್ಕಾಗಿ ಮಾಹಿತಿ ಸಂಗ್ರಹಿಸಬೇಕು. ಸೇನ್ ಗುಪ್ತರನ್ನು ಕರೆದುಕೊಂಡು ಮಂಗ್‌ಪೂಗೆ ಹೋದರು. ಅಲ್ಲಿ ಸಿಂಕೋನಾ ಮರಗಳ ತೋಟದಿಂದ ಕ್ವಿನೈನ್ ತಯಾರಿಸುವ ಕಾರ್ಖಾನೆ ಇತ್ತು. ಗಂಗೋಟಕ್‌ಗೂ ಹೋದರು. ಅಲ್ಲಿನ ರಾಜಕೀಯ ಅಧಿಕಾರಿಯನ್ನು ಭೇಟಿ ಮಾಡಿದ್ದೊಂದು ಕಹಿ ಅನುಭವ. ಇಂತಹ ಪ್ರಸಂಗಗಳನ್ನು ರಾಹುಲರು ವರ್ಣಿಸುವುದು ಬಹಳ ತೀಕ್ಷ್ಣ ಶಬ್ದಗಳಿಂದ. ಆ ಐ.ಸಿ.ಎಸ್. ಅಧಿಕಾರಿ "ಕೇವಲ ಚರ್ಮದಲ್ಲಿ ಮಾತ್ರ ಭಾರತೀಯನಾಗಿದ್ದ" ಎನ್ನುತ್ತಾರೆ. ಪೋಲೀಸರು ಆಗಂತುಕ ಪುಸ್ತಕದಲ್ಲಿ ಬರೆಯಲು ಹೇಳಿದಾಗ "ಅಂಧಂ ತಮಃ" (ಘೋರ ಕತ್ತಲೆ) ಎಂದು ಬರೆದು ಬಿಟ್ಟರು.

ಎಲ್ಲ ಸಾಮಾನು ಪ್ಯಾಕ್ ಮಾಡಿಸಿದರೆ ಒಟ್ಟು ಹದಿನೇಳು ಮಣ ಭಾರದ ಒಂದು ಪೆಟ್ಟಿಗೆ ಎಂಟು ಟ್ರಂಕುಗಳು. ಸಿಲಿಗುರಿ ತಲುಪಿದ ನಂತರ ಪ್ರಯಾಗದವರೆಗೆ ಭಟ್ಟ ಮತ್ತು ಸೇನ್ ಗುಪ್ತ ಜೊತೆಯಲ್ಲಿದ್ದರು. ಕಟಿಹಾರ್‌ನಲ್ಲಿ ಬೇರೆ ಗಾಡಿ ಹಿಡಿಯುವ ನಡುವಿನ ಕೆಲ ಗಂಟೆಯ ಅವಧಿಯಲ್ಲಿ ಭಾವಂಡಿಯಾಜೀಯವರ ಮನೆಗೆ ಹೋದರು. ಅಲ್ಲಿ ಸ್ನಾನ, ಊಟ ಮುಗಿಸಿ ಸ್ಟೇಶನ್‌ಗೆ ವಾಪಸು ಬಂದ ನಂತರ ಅಕಸ್ಮಾತ್ ಭಟ್ಟರ ಆರೋಗ್ಯ ಕೆಟ್ಟಿತು, ಲಕ್ವ ಹೊಡೆಯಿತು. ಕೂಡಲೇ ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕಾಯಿತು. ಮರುದಿನ ಪ್ರಜ್ಞೆ ಬಂದ ಮೇಲೆ ಮತ್ತೆ ರೈಲು ಹಿಡಿದು ಹೇಗೋ ಅಂತೂ ಭಟ್ಟರನ್ನು ಪ್ರಯಾಗಕ್ಕೆ ಕರೆತಂದರು. ಅದಕ್ಕೆ ಮುಂಚೆಯೇ ಪ್ರಯಾಗದ ಮಿತ್ರರಿಗೆ ಈ ಕುರಿತು ತಂತಿ ಕೊಟ್ಟಿದ್ದರು. ಸ್ಟೇಶನ್‌ನಲ್ಲಿ ಅಂಬ್ಯುಲೆನ್ಸ್ ತಯಾರಿತ್ತು. ಟ್ರೈನಿನಿಂದ ಇಳಿದವರೇ ಯಾವುದಕ್ಕೂ ಮೊದಲು ಭಟ್ಟರನ್ನು ಆಸ್ಪತ್ರೆಗೆ ಸೇರಿಸಿ ಅವರ ಚಿಕಿತ್ಸೆಯ ಏರ್ಪಾಟು ಮಾಡಿದರು. ಈಗ ಹೊಸ ಮನೆವಾಳ್ತನಕ್ಕಾಗಿ ಮೊದಲು ಮನೆಯ ವ್ಯವಸ್ಥೆಯಾಗಬೇಕು. ಮಾರ್ಚ್ (1950)ನ ಆರಂಭ. ಹಾಗಾಗಿ ಆದಷ್ಟು ಬೇಗನೆ ಯಾವುದಾದರೂ ಗಿರಿ ಪ್ರದೇಶದ ಆಯ್ಕೆಯಾಗಬೇಕು. ಕಳೆದ ಕೆಲ ತಿಂಗಳುಗಳಿಂದ ರಾಮಗಢದಲ್ಲಿ ವಿದ್ಯುತ್ ಇಲ್ಲದ ಒಂದು ಮನೆಯನ್ನು ಖರೀದಿಸುವ ಬಗ್ಗೆ



ಶ್ರೀಲಂಕಾದಲ್ಲಿನ ವಿದ್ಯಾಲಂಕಾರ ವಿಹಾರದ ತಮ್ಮ ಅಧ್ಯಯನ ಕೊಠಡಿಯಲ್ಲಿ
ರಾಹುಲರು (1960)



(ಫೋಟೋ: ವೀರೇಂದ, ಕುಮಾರ್)

ಯೋಚಿಸುತ್ತಿದ್ದರು. ಎಂಟು ಹತ್ತು ಮಣ ಸಾಮಾನುಗಳನ್ನು ಕಟ್ಟಿ ಹಿಡಿದುಕೊಂಡು ಪತ್ನಿಯನ್ನೂ ಜೊತೆಗೆ ಕರೆದುಕೊಂಡು ಮಾರ್ಚ್ 8ರಂದು ಪ್ರಯಾಗದಿಂದ ರಾಮಗಢಕ್ಕೆ ಹೊರಟೂ ಬಿಟ್ಟರು. ಭವಾಲಿ ಮೂಲಕ ಬಸ್‌ನಲ್ಲಿ, ಸಮುದ್ರ ಮಟ್ಟದಿಂದ ಸುಮಾರು 2000 ಮೀಟರ್ ಎತ್ತರದಲ್ಲಿರುವ, ರಾಮಗಢವನ್ನು ತಲುಪಿದರು. ತಲುಪಿ ಕೂಲಿಗಳ ಮೇಲೆ ಸಾಮಾನು ಹೊರಿಸಿಕೊಂಡು ಖರೀದಿಯ ಬಗ್ಗೆ ಮಾತಾಗಿದ್ದ ಬಂಗಲೆಗೆ ತೆರಳಿದರು. "ಬಂಗಲೆ ಕೆಟ್ಟದಾಗೇನೂ ಇರಲಿಲ್ಲ. ಆದರೆ ಅದರಲ್ಲಿ ಕಕ್ಕಸಿನ ವ್ಯವಸ್ಥೆ ಕೂಡ ಇರಲಿಲ್ಲ....ಒಮ್ಮೆ ನೋಡಿದ್ದೇ, ನಮಗಿಲ್ಲಿರಲು ಸಾಧ್ಯವಿಲ್ಲ ಎಂದು ತಿಳಿದು ಬಿಟ್ಟಿತು. ಕೂಲಿಗಳಿಗೆ ಮಜೂರಿ ಈಗ ಕೊಡದೆ ಮರುದಿನ ಪುನಃ ಸಾಮಾನುಗಳನ್ನು ಮೋಟರ್‌ನ ಕ್ಯಾರಿಯರ್ ಮೇಲೆ ಹಾಕಿಕೊಡಲು ಹೇಳಿ ನಾಳೆ ನಾವು ನೈನಿತಾಲ್‌ಗೆ ಹೋಗುವವರು ಎಂದೂ ತಿಳಿಸಿದೆವು."

ಮರುದಿನ ಮಾರ್ಚ್ 10ರಂದು ನೈನಿತಾಲಿಗೆ ಹೋಗಿ ಅಲ್ಲಿ ಒಂದು ಹೋಟೆಲಿನಲ್ಲಿ ತಂಗಿದರು. ಆ ಸಮಯದಲ್ಲಿ ಡಾ। ಸತ್ಯಕೇತು ವಿದ್ಯಾಲಂಕಾರರು ನೈನಿತಾಲಿನಲ್ಲಿಯೇ ಇದ್ದರು. ಮಸ್ಸೂರಿಯಲ್ಲಿ ಅವರದೊಂದು ಹೋಟೆಲ್ ಇತ್ತು. ಇಲ್ಲಿ ನೈನಿತಾಲಿನಲ್ಲಿಯೂ ಒಂದು ದೊಡ್ಡ ಹೋಟೆಲ್ ಖರೀದಿಸುವ ಇರಾದೆಯಿಂದ ಬಂದಿದ್ದ ಅವರು ಮನೆ ಹುಡುಕಾಟದಲ್ಲಿ ರಾಹುಲರಿಗೆ ಸಹಾಯ ಮಾಡಿದರು. ನೈನಿತಾಲಿನ ಅನೇಕ ಬಂಗಲೆಗಳನ್ನು ನೋಡಿ ಕೊನೆಗೆ "ಓಕೆ ಲಾಡ್ಜ್" ಬಂಗಲೆಯನ್ನು ಬಾಡಿಗೆಗೆ ಮಾತನಾಡಿ ಹೋಟೆಲಿನಿಂದ ಸಾಮಾನು ಎತ್ತಿಸಿಕೊಂಡು ರಾಹುಲರು ಅಲ್ಲಿಗೆ ಹೋದರು. ಮರುದಿನ, ಮಾರ್ಚ್ 16ರಿಂದ, ಪುಸ್ತಕಗಳ ಪೆಟ್ಟಿಗೆ ತೆರೆಯಿತು. ಮನೆವಾರ್ತೆಗೆ ಎಲ್ಲ ಸಜ್ಜಾಯಿತು. ಮುಂದಿನ ಮೂರು ತಿಂಗಳು ನೈನಿತಾಲಿನ ಓಕ್ ಲಾಡ್ಜ್‌ನಲ್ಲಿಯೇ ರಾಹುಲರ ವಾಸವಾಯಿತು. ಕೇವಲ ಬೇಸಗೆಯಿಂದ ತಪ್ಪಿಸಿಕೊಳ್ಳುವುದು ಮಾತ್ರವಲ್ಲ, ಚೆನ್ನಾಗಿ ಕೆಲಸ ಮಾಡಲು ಕೂಡ ರಾಹುಲರಿಗೆ ಪರ್ವತವಾಸ ಬೇಕಿತ್ತು. ಈಗಂತೂ ಅವರು ಗುಡ್ಡದ ಮೇಲೆ ಸ್ವಂತ ಮನೆ ಮಾಡಿಕೊಳ್ಳುವ ನಿರ್ಧಾರವನ್ನು ಮಾಡಿಯಾಯಿತು. ನೈನಿತಾಲ್ ಮನೆಯಲ್ಲಿ ಎಲ್ಲ ಹೊಂದಿಕೆಯಾದ ಮೇಲೆ ಬರವಣಿಗೆ ಆರಂಭಿಸಿದರು. ಎಲ್ಲಕ್ಕಿಂತ ಮೊದಲು "ಡಾರ್ಜಿಲಿಂಗ್ ಪರಿಚಯ"ವನ್ನು ಪೂರ್ಣಗೊಳಿಸಬೇಕು. ಕುಮಾವೂಂ ಕ್ಷೇತ್ರಕ್ಕೆ ಹೋಗಿ, ಅದರ ಆಸುಪಾಸಿನ ಸ್ಥಳಗಳನ್ನು ನೋಡಿ ಬಂದಿದ್ದರಿಂದ "ಕುಮಾವೂಂ" ಬರೆಯಬೇಕು.

ಡಾ। ಸತ್ಯಕೇತು, ನೈನಿತಾಲ್‌ನಲ್ಲಿ ಹೋಟೆಲು ಖರೀದಿ ಆಗದೆ, ಮಸ್ಸೂರಿಗೆ ವಾಪಸು ಹೊರಟಿದ್ದರು. ಮಸ್ಸೂರಿಯಲ್ಲಿಯೂ ಒಳ್ಳೆಯ ಮನೆಗಳು ಸಿಗುತ್ತವೆ ಎಂದವರು ಹೇಳಿದಾಗ ರಾಹುಲಜೀ ಮಸ್ಸೂರಿಗೆ ಹೋಗುವ ಬಗ್ಗೆ ಯೋಚಿಸುತ್ತ, ಡೈರಿಯಲ್ಲಿ ಬರೆದರು, "ಮಸ್ಸೂರಿಯೂ ಏನು ಕೆಟ್ಟದ್ದಲ್ಲ. ಅಲ್ಲಿದ್ದರೆ ಕಿನ್ನರ ದೇಶದ ಸಮೀಪದಲ್ಲಿಯೂ ಇದ್ದಂತಾಗುತ್ತದೆ". ಆದರೆ ಮನೆ ಬಾಡಿಗೆ ಕೊಟ್ಟಾಗಿರುವುದರಿಂದ ಪ್ರಕೃತ ಕೆಲ ತಿಂಗಳ ಮಟ್ಟಿಗೆ ನೈನಿತಾಲ್‌ನಲ್ಲಿಯೇ ಇರಬೇಕಾಗಿತ್ತು.

ಈಗ ಆರ್ಥಿಕ ಚಿಂತೆ ಬೇರೆ. "ಆರ್ಥಿಕ ಸ್ಥಿತಿಯ ಬಗ್ಗೆ ಈಗ ನಮಗೆ ಅರಿವಾಗತೊಡಗಿತು. ಕಾರಣ 'ಅವನಿಗೆ ಬೇರೆ ಕೆಲಸವಿಲ್ಲ, ಇವನಿಗೆ ಬೇರೆ ಉದ್ಯೋಗವಿಲ್ಲ' ಎಂಬ ಗಾದೆಯಂತೆ ಓಡಾಡಿಕೊಂಡು ದಿನಗಳೆಯುವುದು ಇನ್ನು ಸಾಧ್ಯವಿರಲಿಲ್ಲ. ಒಂದು ಕಡೆ ಮನೆ ಮಾಡಿಕೊಂಡು ನೆಲೆಸಬೇಕಿತ್ತು ಎಂದ ಮೇಲೆ ಒಂದಿಷ್ಟು ನಿಶ್ಚಿತ ಖರ್ಚು ಇರುತ್ತಿತ್ತು; ಎಂದ ಮೇಲೆ ನಿಶ್ಚಿತ ಆದಾಯದ ಅಗತ್ಯವೂ ಇತ್ತು. ಆಗ ನಮ್ಮ ಬಳಿ ಇದ್ದದ್ದು ನಾನ್ನೂರು ರುಪಾಯಿ. ಬ್ಯಾಂಕಿನಲ್ಲಿ ಎರಡು ಸಾವಿರದ ಮುನ್ನೂರು.

ಇನ್ನೂರೈವತ್ತು ರುಪಾಯಿ ಲೆಕ್ಕದಲ್ಲಿ ತಿಂಗಳ ಖರ್ಚು ಕಳೆದರೆ ಸರಿಯಾದೀತು. ಆದರೆ ಹಿಂದಿನ ಅನುಭವದ ಪ್ರಕಾರ ಇದು ಸಾಧ್ಯವಿಲ್ಲದ್ದು". ಕಲ್ಕತ್ತಾದ ಪ್ರಕಾಶಕರಿಂದ ಸಿಗಲಿರುವ ಅಡ್ವಾನ್ಸ್ ಇಪ್ಪತ್ತೈದು ಸಾವಿರ ರುಪಾಯಿ ಮನೆ ಖರೀದಿಗೆ ಬೇಕಾಗುತ್ತದೆ.

ನೈನಿತಾಲ್‌ನಲ್ಲಿ ರಾಹುಲಜೀ ಇದ್ದ "ಓಕ್ ಲಾಡ್ಜ್"ನ ಇನ್ನೊಂದು ಭಾಗದಲ್ಲಿ ವಾಸವಾಗಿದ್ದ ಸಂಸಾರದಲ್ಲಿ ರಾಮನ್ ಮಾಯೀ ಎಂಬ ಎಂಭತ್ತು ವರ್ಷದ ಒಬ್ಬಳು ಮುದುಕಿ ಇದ್ದಳು. ಜೀವನದ ಹೆಚ್ಚಿನ ಭಾಗವನ್ನೆಲ್ಲ ಅವಳು ಕಳೆದದ್ದು ಮುಜಫ್ಫರ್ ನಗರ ಹಾಗೂ ಮೇರಠ್ ಜಿಲ್ಲೆಗಳಲ್ಲಿ. ಹಳ್ಳಿಗಳಲ್ಲೇ ಇದ್ದವಳು, ಓದಿದವಳಲ್ಲ, ಆದರೆ ಹರಟೆಮಲ್ಲಿ. ರಾಹುಲರಿಗೆ ರಾಮನ್ ಮಾಯಿಯ ಆಡುಭಾಷೆ–'ಕೌರವೀ ಬೋಲೀ'ಯ ಹಾಡುಗಳನ್ನು ಮತ್ತು ಕಥೆಗಳನ್ನು ಸಂಗ್ರಹಿಸಿದರೆ ಹೇಗೆ ಎಂಬ ಯೋಚನೆ ಹೊಳೆಯಿತು. ರಾಹುಲರು ಎಣಿಸಿದಂತೆ ಕುರುಕ್ಷೇತ್ರದ ಕೌರವೀ ಬೋಲೀಯ ಸಾಹಿತ್ಯಿಕ ರೂಪವೇ ಹಿಂದಿ. 1950ರ ಏಪ್ರಿಲ್ 4ರಂದು ರಾಮನ್ ಮಾಯಿಯನ್ನು ಕೇಳಿ ಮೊದಲ ಕಥೆ ಬರೆದುಕೊಂಡರು. ಉಳಿದ ಕಥೆಗಳನ್ನೂ, ಹಾಡುಗಳನ್ನೂ, ಶೀಘ್ರವೇ ಬರೆದಿಟ್ಟುಕೊಂಡರು. "ರಾಮನ್ ಮಾಯಿಯ ವೃದ್ಧಾಪ್ಯದ ಸ್ಮೃತಿಯ ಕಾರಣ ಎಷ್ಟೋ ಕಥೆಗಳು ಹಾಡುಗಳು ಪೂರ್ತಿ ಇಲ್ಲದಿದ್ದರೂ, ಎಲ್ಲಾ ಕಥೆಗಳೂ ಸಾಹಿತ್ಯಿಕವಾಗಿ ಬಹಳ ಶ್ರೇಷ್ಠವೆಂದು ಹೇಳಲಾಗದಿದ್ದರೂ ಅವುಗಳ ವಿಶೇಷವೆಂದರೆ ಇವೆಲ್ಲವೂ ಒಬ್ಬ ವ್ಯಕ್ತಿಯಿಂದಲೇ ಹೊರಹೊಮ್ಮಿದ್ದು. ಇವತ್ತಿಗೆ ಎಪ್ಪತ್ತು ವರ್ಷಗಳ ಹಿಂದೆ (ಸುಮಾರು 1880) ಆಡುತ್ತಿದ್ದ ಭಾಷೆಯೊಂದರಲ್ಲಿಯೇ ಇದ್ದದ್ದು" ಎಂದು ರಾಹುಲರು ಇವುಗಳ ಬಗ್ಗೆ ತಿಳಿಸುತ್ತಾರೆ.

ಈ ಕೌರವೀ ಕಥೆಗಳು ಮತ್ತು ಗೀತೆಗಳು ಅದೇ ವರ್ಷ "ಆದಿ ಹಿಂದೀ ಕೀ ಕಹಾನಿಯಾಂ ಔರ್ ಗೀತ್" ಎಂದು ಪುಸ್ತಕ ರೂಪದಲ್ಲಿ ಪ್ರಕಟವಾದವು. ಏಪ್ರಿಲ್ 9 (1950), ನೈನಿತಾಲ್, ರಾಹುಲರಿಗೆ ಈಗ ಐವತ್ತೇಳು ವರ್ಷ ತುಂಬಿ ಐವತ್ತೆಂಟು.

ಪ್ರಯಾಗದಲ್ಲಿ ಸೇನ್ ಗುಪ್ತ ಮತ್ತು ವಿದ್ಯಾನಿವಾಸ ಮಿಶ್ರ ಅವರು ಪಾರಿಭಾಷಿಕ ಶಬ್ದಕೋಶಕ್ಕಾಗಿ ಕೆಲಸ ಮಾಡುತ್ತಲೇ ಇದ್ದರು. ಆದರೆ ಸಮ್ಮೇಳನದ ಒಳಗಿನ ಗುಂಪುಗಾರಿಕೆಯಿಂದಾಗಿ ಈಗ ತೊಂದರೆಗಳು ಉತ್ಪನ್ನವಾಗಿದ್ದುವು. ರಾಹುಲರು ಸಮ್ಮೇಳನದ ಖರ್ಚುವೆಚ್ಚಗಳ ಲೆಕ್ಕಾಚಾರ ಹಾಕಿ ಉಳಿದ ಹಣವನ್ನು ಹಿಂದಿರುಗಿಸಿ, ಆ ಕೆಲಸದಿಂದ ತಾನು ಬೇರೆಯಾಗಿ ಬಿಟ್ಟರು. ಅವರಿಗೆ ಡಾ। ಭಟ್ಟರ ಬಗ್ಗೆಯೇ ಬಹಳ ಯೋಚನೆಯಾಗಿತ್ತು. ಹಣದ ಅಡಚಣೆಯಿಂದಾಗಿ ಭಟ್ಟರು ಆಸ್ಪತ್ರೆ ಬಿಟ್ಟು ಪ್ರಯಾಗದಲ್ಲೇ ಬೇರೆಲ್ಲಿಗೋ ಹೊರಟು ಹೋಗಿದ್ದರು.

ಈಗ ರಾಹುಲಜೀ ಕುಮಾವ್ಹೂಂನಲ್ಲಿ ಇದ್ದರು. ಕುಮಾವ್ಹೂಂ ಕುರಿತು ಸಂಗ್ರಹಿಸಿದ ಪುಸ್ತಕಗಳನ್ನು ಓದಿ, ಕೆಲವಂಶ ಬರೆದೂ ಆಗಿತ್ತು. ಆ ಬರವಣಿಗೆ ಮುಂದುವರಿಸುವ ಮೊದಲು ಕುಮಾವ್ಹೂಂನ ಕೆಲವು ಮುಖ್ಯ ಸ್ಥಳಗಳನ್ನು ನೋಡಬೇಕೆಂಬ ಆಸೆ ಇತ್ತು. ಮಾಚವೇಜೀ ಸಂಸಾರ ಸಮೇತ ನೈನಿತಾಲ್‌ಗೆ ಬಂದಿದ್ದರು. ಕುಮಾವ್ಹೂಂ ಪ್ರವಾಸಕ್ಕೆ ಮಾಚವೇ ಕೂಡ ತಯಾರಾದರು. ಮೇ 24ರಂದು ಆರಂಭಗೊಂಡ ಈ ಇಬ್ಬರ ಕುಮಾವ್ಹೂಂ ಪ್ರವಾಸ ಜೂನ್ ಮೂರರಂದು ಮುಗಿಯಿತು. ಮೊದಲು ಭವಾಲೀಯಲ್ಲಿ ತಂಗಿದರು. ಅಲ್ಲಿನ ಪ್ರಸಿದ್ಧ ಸ್ಯಾನಿಟೋರಿಯಂ ಅನ್ನು ವಿವರವಾಗಿ ನೋಡಿಕೊಂಡು ಅಲ್ಲಿಂದ ಅಲ್ಮೋರಾಕ್ಕೆ ಹೋದಾಗ ಅಲ್ಲಿ ಯಶಪಾಲಜೀ ಮತ್ತು ಇತರ ಕೆಲ ಮಿತ್ರರ

ಭೇಟಿಯಾಯಿತು. ನಂತರ ಅವರು ಕಟಾರ್‌ಮಲ್‌ಗೆ ಹೋದರು. ಕಟಾರ್‌ಮಲ್‌ನಲ್ಲಿ ಕುಮಾವ್ರೂಂನ ಅನೇಕ ದೇವಾಲಯಗಳಿವೆ. ರಾಹುಲರು ಅಲ್ಲಿ ಬೂಟುಧಾರಿ ಸೂರ್ಯನ ಮೂರ್ತಿಗಳನ್ನು ನೋಡಿದರು. ಮುಂದೆ ವೈಜನಾಥದ ಕಡೆಗೆ ಹೋಗುತ್ತ ಕೌಸಾನಿಯಲ್ಲಿ ಕವಿವರ ಸುಮಿತ್ರಾನಂದನಪಂತ್ ಜನಿಸಿದ ಮನೆಯನ್ನು ನೋಡಿದರು.

ಕುಮಾವ್ರೂಂನ ಪುರಾತನ ರಾಜಧಾನಿ ವೈಜನಾಥ. ಅಲ್ಲಿನ ಅನೇಕ ದೇಗುಲಗಳನ್ನು, ಮೂರ್ತಿಗಳನ್ನು ನೋಡುತ್ತಾ ತಾನು ಕೆಲ ದಿನಗಳ ಕೆಳಗಷ್ಟೇ ಕೊಂಡಿದ್ದ ರೋಲ್‌ಫ್ಲೆಕ್ಸ್ ಕೆಮೆರಾದಲ್ಲಿ ರಾಹುಲರು ಫೋಟೋ-ತೆಗೆದುಕೊಳ್ಳುತ್ತಾ, ಸುತ್ತಿ, ಅಲ್ಲಿಂದ ಇಬ್ಬರೂ ಬಾಗೇಶ್ವರಕ್ಕೆ ಹೋದರು; ದ್ವಾರಾ ಹಾಟ್‌ಗೂ. ಹಿಂದಿರುಗುವಾಗ ರಾಣೀಖೇತ್‌ನಲ್ಲಿಯೂ ಸ್ವಲ್ಪ ಸಮಯ ಇದ್ದು, ಹೊರಟ ಹತ್ತು ದಿನಗಳ ಬಳಿಕ ನೈನಿತಾಲ್‌ಗೆ ಹಿಂದಿರುಗಿ ಬಂದರು. ವಿಹಾರೀ ಋತು ಆಗಮಿಸಿತು. ನೈನಿತಾಲ್‌ನಲ್ಲಿ ಡಾ। ಗೋರಖ ಪ್ರಸಾದ್, ಡಾ। ಅಮರನಾಥ ಝಾ, ಪಂಡಿತ ವಾಚಸ್ಪತಿ ಪಾಠಕ್ ಮುಂತಾದ ಮಿತ್ರರ ಭೇಟಿಯಾಯಿತು. ಧೂಪನಾಥಜೀ ಮತ್ತು ಅವರ ಸೋದರನ ಮಗ ವೀರೇಂದ್ರ ಕುಮಾರರೂ ಬಂದಿದ್ದರು. ವೀರೇಂದ್ರ ಕುಮಾರರು "ನನ್ನ ಪುಸ್ತಕ ಪ್ರಕಾಶನಕ್ಕೆ 'ರಾಹುಲ ಪುಸ್ತಕ ಪ್ರತಿಷ್ಠಾನ' ಎಂದು ಹೆಸರಿಡಬೇಕೆಂದಿದ್ದೇನೆ" ಎಂದಾಗ ಧೂಪನಾಥಜೀಯರ ಕುಟುಂಬದವರ ಮಟ್ಟಿಗೆ ರಾಹುಲರಿಗೆ ಒಪ್ಪದಿರಲು ಸಾಧ್ಯವಿರಲಿಲ್ಲ. "ರಾಹುಲ ಪುಸ್ತಕ ಪ್ರತಿಷ್ಠಾನ (ಪಾಟ್ನಾ)" ರಾಹುಲರ ನಾಲ್ಕು ಪುಸ್ತಕಗಳನ್ನು ಮುದ್ರಿಸಿತು.

ಡಾ। ಸತ್ಯಕೇತು ರಾಹುಲರಿಗೆ ಮಸ್ಸೂರಿಯಲ್ಲಿ ಮಾರಾಟಕ್ಕಿರುವ ಮನೆಗಳ ಬಗ್ಗೆ ಸುಳಿವು ಕೊಡುತ್ತಲೇ ಇದ್ದರು. ಕಲ್ಕತ್ತಾದ ಪ್ರಕಾಶಕರು ಬರಬೇಕಾದ ಇಪ್ಪತ್ತೈದು ಸಾವಿರದಲ್ಲಿ ಹತ್ತು ಸಾವಿರ ಕಳಿಸಿಕೊಟ್ಟರು. ಬಾಕಿ ಉಳಿದ ಮೊತ್ತವೂ ಶೀಘ್ರವೇ ಬರಲಿದೆಯಾಗಿ, ಈಗ ಮಸ್ಸೂರಿಗೆ ಹೋಗಿ ಯಾವುದಾದರೂ ಮನೆ ಪಕ್ಕಾ ಮಾಡೋಣವೆಂದು ಜೂನ್ 17ರಂದು ರಾಹುಲರು ಒಬ್ಬರೇ ನೈನಿತಾಲ್‌ನಿಂದ ಹೊರಟರು. ಅದೇ ದಿನ ಧೂಪನಾಥ ಮತ್ತು ಮಾಚವೇ ಕುಟುಂಬವೂ ನೈನಿತಾಲ್ ಬಿಟ್ಟಿತು.

ಮಸ್ಸೂರಿ ತಲುಪಿ ಡಾ। ಸತ್ಯಕೇತು ಅವರ ನೆರವಿನಿಂದ ಅನೇಕ ಮನೆಗಳನ್ನೂ ನೋಡಿದ್ದಾಯಿತು. ಕೊನೆಗೆ "ಹ್ಯಾಪಿ ವ್ಯಾಲಿ"ಯ "ಹರ್ನ್ ಕ್ಲಿಫ್" ಹೆಸರಿನ ಬಂಗಲೆ ಇಷ್ಟವಾಗಿ ಹದಿನೇಳು ಸಾವಿರಕ್ಕೆ ವ್ಯಾಪಾರವಾಯಿತು.ಟೀಹರೀ ರಾಣಿಯ ಆಸ್ತಿ ಅದು. ಸನಿಹದಲ್ಲಿಯೇ ವಿಶಾಲವಾದ "ಬಿರ್ಲಾ ಭವನ". ಆ ದಿನದ ಡೈರಿಯಲ್ಲಿ ರಾಹುಲರು "ಹರ್ನ್ ಕ್ಲಿಫ್"ನ ಹೆಸರು "ಮಾರ್ಕ್ಸ್ ಭವನ" ಎಂದು ಬರೆದರು. ಆದರೆ ಅವರ ದೀರ್ಘವಾಸದಲ್ಲಿ ಆ ಮುಂದೆ ಕೂಡಾ ಆ ಬಂಗಲೆಯ ಹೆಸರು "ಹರ್ನ್ ಕ್ಲಿಫ್" ಎಂದೇ ಕಾಯಮ್ಮಾಯಿತು.

ಈಗ ನೈನಿತಾಲ್‌ಗೆ ಹೋಗಿ ಬಿಡಾರವನ್ನು ತರಬೇಕು. ಅಲ್ಲಿಗೆ ಹೋಗಿ ನೋಡಿದರೆ ಕಲ್ಕತ್ತಾದ ಪ್ರಕಾಶಕರು ಬಾಕಿ ಹದಿನೈದು ಸಾವಿರವನ್ನು ಆಗಲೇ ಕಳಿಸಿ ಬಿಟ್ಟಿದ್ದರು. ಹರಡಿಕೊಂಡ ಪುಸ್ತಕಗಳು ಮತ್ತೆ ಪೆಟ್ಟಿಗೆಯೊಳಗೆ ಬಂದಿಯಾದವು. ಮನೆಯ ಸಾಮಾನುಗಳನ್ನೆಲ್ಲ ಸಂಪೂರ್ಣ ಪ್ಯಾಕ್ ಮಾಡಿ ಟ್ರೈನು ಮತ್ತು ಬಸ್ಸುಗಳಲ್ಲಿ ಪಯಣಿಸುತ್ತ ತನ್ನ ಹೊಸ ಮನೆ "ಹರ್ನ್ ಕ್ಲಿಫ್"ಗೆ ಬಂದು ತಲುಪಿದರು. ಸುಮಾರು ಏಳೂ ಮುಕ್ಕಾಲು ವರ್ಷಗಳ ಕಾಲ ರಾಹುಲ ಕುಟುಂಬ ಈ "ಹರ್ನ್ ಕ್ಲಿಫ್" ಬಂಗಲೆಯಿಂದ ಕದಲದೆ ಅಲ್ಲೇ ವಾಸವಾಗಿತ್ತು.

ಹೊಸ ಮನೆಯೊಂದಿಗೆ ಹೊಸ ಕೆಲಸಗಳು ಅನಿವಾರ್ಯವಾಗಿ ಕೂಡಿಕೊಳ್ಳುತ್ತವೆ. ಮನೆ ಒಪ್ಪ ಮಾಡುವುದು, ಹಳೆ ವಸ್ತುಗಳ ರಿಪೇರಿ, ಸಾಮಾನು ಜೋಡಣೆ, ಮನೆಗೆ ಬೇಕಾದ ಹೊಸ ವಸ್ತುಗಳ ಖರೀದಿ ಹೀಗೇ. ಇದನ್ನೆಲ್ಲ ಮಾಡುತ್ತಿರುವಾಗ ರಾಹುಲರಿಗೆ ತನ್ನ ನಿಸ್ಪೃಹ ಅಲೆಮಾರಿ ಜೀವನದ ಆ ದಿನಗಳು ನೆನಪಾಗತೊಡಗಿದವು. ಅಂದು ಅವರು ನಿಜಕ್ಕೂ ದಂಡ-ಕಮಂಡಲಧನರಾಗಿದ್ದರು. ಯಾವ ಹೊತ್ತಿನಲ್ಲಿಯೂ ಅವರ ಆಸೆಯೆಂದರೆ ಸಾಮಾನುಗಳನ್ನೆಲ್ಲ ಬೆನ್ನಿಗೇರಿಸಿಕೊಂಡು ಸಂಚರಿಸುವುದು.

ಪುನಃ ಯೋಚಿಸುತ್ತಿದ್ದರು "ಮನೆ ಮಾಡಿಕೊಂಡಿರುವ ಈ ಹೊತ್ತಿನಲ್ಲಿ ಚಿಂತಿಸುವ ವಿಷಯವೇ ಇದು ? ಯಾರಾದರೂ 'ನಗೃಹಂ ಗೃಹಮಿತ್ಯಾಹುಃ ಗೃಹಿಣೀ ಗೃಹಮುಚ್ಯತೇ" ಎಂದರೆ ಗೃಹದೊಂದಿಗೆ ಗೃಹಿಣಿಯೂ ಬಂದಾಯಿತು. ಕಮಲಾಳ ಪರಿಚಯವಾದದ್ದು ಮತ್ತು ಅವಳೊಂದಿಗೆ ಆತ್ಮೀಯತೆ ಬೆಳೆದದ್ದು ಬೇರೊಂದು ಸಂದರ್ಭಕ್ಕಾಗಿ ಮತ್ತು ಉದ್ದೇಶಗಳಿಗಾಗಿ. ಆದರೆ ಆ ಆತ್ಮೀಯತೆ ಈಗ ಮತ್ತೊಂದೇ ರೂಪ ಪಡೆಯುತ್ತಾ ಇತ್ತು. ಕಡೆಗೂ ಈ ಸಮಾಜ ನಾನು ಮತ್ತು ಕಮಲ ಜೊತೆಗೇ ವಾಸವಾಗಿರುವುದನ್ನು ಯಾವ ಅರ್ಥದಲ್ಲಿ ಗ್ರಹಿಸುತ್ತದೆಂಬ ಕುರಿತು ನನಗೇನೂ ಕಾಳಜಿ ಇರಲಿಲ್ಲವಾದರೂ ಪರರ ಟೀಕೆ ಕಮಲಾಳ ಮೇಲೆ ಪರಿಣಾಮ ಬೀರುತ್ತವೆ ಎಂಬುದನ್ನು ಗಮನಿಸಲೇ ಬೇಕು. ಇದನ್ನೆಲ್ಲ ನೋಡುತ್ತಿದ್ದಂತೆ ಸಂಚಾರಿ ಜೀವನದ ಕನಸು ಇನ್ನು ಖಂಡಿತವಾಗಿ ವ್ಯರ್ಥ ವಿಚಾರವೆನಿಸಿ ಬಿಟ್ಟಿತ್ತು."

ಮಸ್ಸೂರಿಯಲ್ಲಿ ವಾಸವಾಗಿದ್ದ ದೀರ್ಘ ಕಾಲದಲ್ಲಿ ಅಲ್ಲಿನ ಎರಡು ಕುಟುಂಬಗಳೊಡನೆ ರಾಹುಲರಿಗೆ ಮೊದಲಿನಿಂದಲೂ ವಿಶೇಷ ಬೆಸುಗೆ ಇತ್ತು. ಅವುಗಳಲ್ಲೊಂದು, ಡಾ। ಸತ್ಯಕೇತು ವಿದ್ಯಾಲಂಕಾರರ ಕುಟುಂಬ. ಇತಿಹಾಸದ ಅನೇಕ ಪಠ್ಯಪುಸ್ತಕಗಳ ಕರ್ತೃವಾಗಿದ್ದ ಡಾ। ಸತ್ಯಕೇತು ಗುರುಕುಲ ಕಾಂಗಡೀಯ ಸ್ನಾತಕರು. ಪ್ಯಾರಿಸ್ ಯುನಿವರ್ಸಿಟಿಯಲ್ಲಿ ಡಿ.ಲಿಟ್ ಪಡೆದವರು ಅವರ ಪತ್ನಿ ಸುಶೀಲಾ ದೇವಿ ಶಾಸ್ತ್ರಿ ಒಬ್ಬ ವಿದುಷಿ. ಈ ಡಾಕ್ಟರ್ ಸಾಹೇಬರು ಇತಿಹಾಸದ ಪುಸ್ತಕಗಳನ್ನು ಬರೆಯುತ್ತ ಹೋಗುತ್ತಿದ್ದಂತೆ ಮಸ್ಸೂರಿಯ "ಲಕ್ಸ್ ಮೌಂಟ್"ನಲ್ಲಿ ಒಂದು ಹೋಟೆಲನ್ನು ನಡೆಸಿಕೊಂಡು ಹೋಗುತ್ತಿದ್ದರು !

ಇನ್ನೊಂದು ಕುಟುಂಬ ಮಸ್ಸೂರಿಯ ಲಂಧೌರ್ ಬಾಜಾರ್‌ನಲ್ಲಿರುವ ಕಿಸನ ಸಿಂಹರದು. 1943ರಲ್ಲಿ ರಾಹುಲರು ಉತ್ತರಾ ಖಂಡದ ಪ್ರವಾಸ ಮುಗಿಸಿ ಮಸ್ಸೂರಿಗೆ ಬಂದಾಗ ಕಿಸನ್ ಸಿಂಹ ಲಂಧೌರ್ ಬಾಜಾರ್‌ನ ತನ್ನ ಸಣ್ಣದೊಂದು ಅಂಗಡಿ ಮತ್ತು ವಾಸದ ಪುಟ್ಟಮನೆ ತೋರಿಸಿ "ತೊಂದರೆಯೇನೋ ಆದೀತು-ಆದರೆ ಈ ಕುಟೀರ (ನಿಮಗಾಗಿ) ಹಾಜರಿದೆ" ಎಂದು ನುಡಿದಿದ್ದರು. ರಾಹುಲರು ಆ 'ಕುಟಿಯಾ'ದಲ್ಲಿಯೇ ತಂಗಿದ್ದರು. ಆತ ಮೂಲತಃ ಕನ್ನೌರ್‌ನ ಒಂದು ಹಳ್ಳಿಯವನು. ಟಿಬೇಟಿಗೆ ಅನೇಕ ಬಾರಿ ಹೋಗಿ ಬಂದವರು. ಅಲ್ಲಿನ ಭಾಷೆಯನ್ನು ಮಾತೃಭಾಷೆಯಂತೆ ಆಡುತ್ತಿದ್ದರು. ಈಗ ಮಸ್ಸೂರಿಯಲ್ಲಿ ಸಣ್ಣಪುಟ್ಟ ಸಾಮಾನುಗಳ ಒಂದು ಅಂಗಡಿ ಇತ್ತು. ಹೆಂಡತಿ ಮಕ್ಕಳಿದ್ದರು. ಹೇಗೋ ಅಂತೂ ಹೊಟ್ಟೆಪಾಡು ಸಾಗುತ್ತಿತ್ತು.

ಎಲ್ಲಿಯ ಪ್ಯಾರಿಸ್ ರಿಟರ್ನ್ಡ್ ಡಾ। ಸತ್ಯಕೇತು ವಿದ್ಯಾಲಂಕಾರರು, ಎಲ್ಲಿ ಕನ್ನೌರ‌ನ ಓದುಬರಹ ಬಾರದ ಕಿಸನ್ ಸಿಂಹರು ! ರಾಹುಲರಿಗೆ ಕಿಸನ್ ಸಿಂಹರ ಮೇಲೆ ಮತ್ತೆ ಸ್ವಲ್ಪ ವಿಶೇಷ ಪ್ರೀತಿ. "ಮಸ್ಸೂರಿಯಲ್ಲಿ ನನಗಾತ ಸ್ವಜನ ಬಂಧುವಿನಂತೆಯೇ ಆಗಿದ್ದ."

ಮಸ್ಸೂರಿವಾಸದ ಮೊದಲ ದಿನಗಳಲ್ಲಿಯೇ ಇನ್ನೂ ಒಬ್ಬ ವ್ಯಕ್ತಿಯೊಡನೆ ರಾಹುಲರಿಗೆ ನಿಕಟ ಬಾಂಧವ್ಯ ಏರ್ಪಟ್ಟಿತು. ಆ ವ್ಯಕ್ತಿ ಅಮೃತಸರದ ಸ್ವಾಮೀ ಹರಿಶರಣಾನಂದರು. 1890ರ ಆಚೀಚೆ ಕಾನ್ಪುರದಲ್ಲಿ ಜನಿಸಿದ ಅವರು ಬಾಲ್ಯದಲ್ಲಿಯೇ ತಂದೆ ತಾಯಿಯನ್ನು ಕಳೆದುಕೊಂಡು ಸಾಧುಗಳ ಸಂಪರ್ಕಕ್ಕೆ ಬಂದು ವರ್ಷಗಟ್ಟಲೆ ಸಂಚಾರದಲ್ಲೇ ಇದ್ದರು. ಮಾನಸ ಸರೋವರ ಹಾಗೂ ಹಿಮಾಲಯದ ಇತರ ಅನೇಕ ದುರ್ಗಮ ಸ್ಥಳಗಳಿಗೆ ಪ್ರವಾಸ ಕೈಗೊಂಡಿದ್ದರು. ಯೋಗ ಸಾಧನೆಯನ್ನು ಮಾಡಿ ಅದರಲ್ಲಿ ಬೇಸರ ಬಂದು ವೈದ್ಯಕೀಯ ಅಧ್ಯಯನ ನಡೆಸಿದರು. ಆಯುರ್ವೇದ ಗ್ರಂಥಗಳ ಶೋಧನೆಯಲ್ಲಿ ತೊಡಗಿಕೊಂಡರು. ಅಮೃತಸರದಲ್ಲಿ ವೈದ್ಯಕೀಯ ವೃತ್ತಿ ಆರಂಭಿಸಿಯೂ ಬಿಟ್ಟರು. ತನ್ನದೇ "ಪಂಜಾಬ್ ಆಯುರ್ವೇದಿಕ್ ಫಾರ್ಮಸಿ"ಯನ್ನು ಸ್ಥಾಪಿಸಿದರು. ಲಕ್ಷಾಧಿಪತಿಯಾದರು. ವ್ಯಾವಹಾರಿಕರಾಗಿದ್ದರು. ಆದರೆ ದೇವರು ಧರ್ಮದ ಮೇಲೆ ವಿಶ್ವಾಸವಿರಲಿಲ್ಲ.

ರಾಹುಲರೊಂದಿಗೆ ಹರಿಶರಣಾನಂದಜೀಯವರ ಮೊದಲ ದೀರ್ಘ ಭೇಟಿ–ಮಾತುಕತೆಯಾದದ್ದು 1950ರ ಆಗಸ್ಟ್‌ನಲ್ಲಿ. ಅಂದರೆ ಮಸ್ಸೂರಿ ಮುಟ್ಟಿದ ನಾಲ್ಕು ವಾರಗಳ ಬಳಿಕ. "ಅದು ನನ್ನ ಸ್ಮರಣೀಯ ದಿನ. ಜನ್ಮಾಂತರಗಳಿಂದ ಅಗಲಿದ ಒಬ್ಬ ಮಿತ್ರನಂತಹ ಬಂಧುವಿನ ಸಾಕ್ಷಾತ್ಕಾರವಾದ ದಿನವದು. ಈ ನಂಟು ಬೆಳೆಯುತ್ತ ಹೋಯಿತು. ನಾನವರನ್ನು "ಭೈಯಾ" ಎಂದೇ ಕರೆಯ ತೊಡಗಿದೆ." 1956ನೇ ಇಸವಿಯಲ್ಲಿ ರಾಹುಲರು "ಸಂಚಾರೀ ಸ್ವಾಮಿ" ("ಘುಮಕ್ಕಡ್ ಸ್ವಾಮಿ") ಎಂಬ ಹೆಸರಿನಲ್ಲಿ ಸ್ವಾಮೀ ಹರಿಶರಣಾನಂದರ ಜೀವನ ಚರಿತ್ರೆ ಬರೆದರು.

ಈಗ ಮಿತ್ರರಿಗೆ ಪರಿಚಯಸ್ಥರಿಗೆ ಮಸ್ಸೂರಿಯಲ್ಲಿ ರಾಹುಲಜೀಯ ಮನೆಯಿದೆ ಎಂಬ ಸುದ್ದಿ ಹರಡಿತು. ಒಂದು ದಿನ, 1917ರ ಆರ್ಯ ಸಮಾಜ ಪ್ರಚಾರಕ. ಒಡನಾಡಿ, ಮಾಸ್ಟರ್ ವಿಶ್ವಂಭರ ದಯಾಲರು ಭೇಟಿ ಮಾಡಲು ಬಂದಾಗ ತುಂಬ ಸಂತೋಷಗೊಂಡು ರಾಹುಲಜೀ ಕೆಲ ದಿನಗಳ ಮೇಲೆ ವಿದ್ಯಾರ್ಥಿ ಜೀವನದ ದಿನಗಳಿಂದಲೂ ಪರಿಚಿತ ಹಾಗೂ ಪ್ರೇರಕರಾಗಿದ್ದ ಪಂಡಿತ ನರದೇವ ಶಾಸ್ತ್ರೀಯವರು ನೋಡಲು ಬಂದರು. ಸೆಪ್ಟೆಂಬರ್‌ನಲ್ಲಿ ಗಢವಾಲ್‌ನ ಕಲೆ ಮತ್ತು ಸಂಸ್ಕೃತಿಯ ವಿಮರ್ಶಕ ಬ್ಯಾರಿಸ್ಟರ್ ಮುಕುಂದೀಲಾಲಜೀ ಅವರ ಆಗಮನವಾಯಿತು. ಅವರನ್ನು ಕಂಡು ರಾಹುಲರಿಗೆ ಜೈಸ್ವಾಲರನ್ನು ಭೇಟಿಯಾದಂತೆಯೆ ಅನಿಸಿತು. ಜೈಸ್ವಾಲರಂತೆ ಮುಕುಂದೀ ಲಾಲಜೀಯವರೂ ಆಕ್ಸ್‌ಫರ್ಡ್‌ನ ಸ್ನಾತಕರು ಮತ್ತು ಬ್ಯಾರಿಸ್ಟರ್, ಇಬ್ಬರಲ್ಲಿಯೂ ನಿಕಟ ಪರಿಚಯವೂ ಇತ್ತು. ರಾಹುಲರು ತನ್ನ "ಗಢವಾಲ್" ಗ್ರಂಥವನ್ನು ಬ್ಯಾರಿಸ್ಟರ್ ಮುಕುಂದೀ ಲಾಲರಿಗೇ ಅರ್ಪಿಸಿದ್ದಾರೆ.

ಮಸ್ಸೂರಿಗಿಂತ ಮೊದಲು ರಾಹುಲರಿಗೆ ತಮ್ಮದೇ ಆದ ಮನೆಯೊಂದು ಸ್ಥಿರವಿರಲಿಲ್ಲ. ಆಗ ಅವರು ತಮಗೆ ಸಿಕ್ಕ ಪುಸ್ತಕಗಳನ್ನು ಹೆಚ್ಚಾಗಿ ಹಂಚಿ ಬಿಡುತ್ತಿದ್ದರು. ಆದರೆ ತನ್ನ ಸಂಸ್ಕೃತ ಹಾಗೂ ಪಾಲಿ, ಇತಿಹಾಸ ಮತ್ತು ಪುರಾತತ್ವಗಳಿಗೆ ಸಂಬಂಧಿಸಿದ ಕೆಲ ಮಹತ್ವಪೂರ್ಣ ಗ್ರಂಥಗಳನ್ನು ಬಿಹಾರ್ ರಿಸರ್ಚ್ ಸೊಸೈಟಿಯ (ಪಟ್ನಾ) ಲೈಬ್ರೆರಿಯಲ್ಲಿ ಇಟ್ಟಿದ್ದರು. ಈಗಂತೂ ಸ್ವಂತ ಮನೆ ಆಯಿತು, ಪಾಟ್ನಾದಿಂದ ಆ ಪುಸ್ತಕಗಳನ್ನು ತರಿಸಿಕೊಂಡರು. ಪ್ರಕಾಶಕ ಮಿತ್ರರಿಂದ ಹೊಸ ಪುಸ್ತಕಗಳು ದೊರೆಯತೊಡಗಿದುವು. ಲೇಖಕನಿಗೆ ಉಪಯುಕ್ತವಾದ ಒಂದು ಒಳ್ಳೆಯ ಪುಸ್ತಕ ಸಂಗ್ರಹವೂ ಸಿದ್ಧಗೊಂಡಿತು. ಇದೇ ಮುಂದೆ 'ರಾಹುಲ ಸಂಗ್ರಹಾಲಯ' (ಡಾರ್ಜಿಲಿಂಗ್) ಎನಿಸಿಕೊಂಡಿತು. "ಲೇಖನೀ ಪುಸ್ತಿಕಾ ನಾರೀ ಪರಹಸ್ತ ಗತಾ ಗತಾ" ಎಂಬುದನ್ನವರು ತಿಳಿಯದವರೇನಲ್ಲ. ಅದಕ್ಕೂ ತುಸು ಅವಕಾಶ ಬಿಟ್ಟು ಬಿಟ್ಟಿದ್ದರು.

ರಾಹುಲರು ಸ್ವಾರ್ಥ ರಾಜಕಾರಣಿಗಳನ್ನು, ಶ್ರೀಮಂತ ಸೇಠರು, ಮಠಾಧೀಶ, ಧರ್ಮಾಚಾರ್ಯರುಗಳ ಕುರಿತು ಬರೆಯುವಾಗ ತೀಕ್ಷ್ಣ ಶಬ್ದಗಳನ್ನು ಯಾವ ಹಿಂಜರಿಕೆಯಿಲ್ಲದೆ ಬಳಿಸಿದರೆ, ತನ್ನ ಸಮಾನ ಲೇಖಕ ಲೇಖಕಿಯರ ಬಗ್ಗೆ, ಮತಭೇದವಿದ್ದಾಗ್ಯೂ, ಹೆಚ್ಚಾಗಿ ಮೃದು ಶಬ್ದಗಳನ್ನೇ ಪ್ರಯೋಗಿಸುತ್ತಿದ್ದರು. ಅವರ "ವೋಲ್ಗಾ ಸೇ ಗಂಗಾ' ಪುಸ್ತಕ ಪ್ರಕಟವಾದಾಗ (1942) ಡಾ। ಭಗವತಿಶರಣ ಉಪಾಧ್ಯಾಯರು ಈ ರೀತಿಯ ಕೆಲ ಕಥೆಗಳನ್ನು ಪ್ರಥಮತಃ ತಾನೇ ಬರೆದದ್ದು ಎಂದು ದಾವೆ ಹೂಡಿದರು. ಆ ಕಾಲದ ಸಾಹಿತ್ಯ ಜಗತ್ತಿನಲ್ಲಿ ಸಾಕಷ್ಟು ಚರ್ಚೆಯಾದ ವಿಷಯವಿದು. ರಾಹುಲರು ತಾನು 1933ರಿಂದಲೇ ಇಂತಹ ಒಂದು ಇತಿಹಾಸ-ಕಥೆಯ ಗ್ರಂಥ ಬರೆಯುವ ಯೋಜನೆ ಹಾಕಿಕೊಂಡಿದ್ದೆ. "ಕಾಲ ಸರ್ವವನ್ನೇ ಭಗವತೀ ಶರಣರು ಒಂದು ಪುಸ್ತಕದಲ್ಲಿ ಬರೆದು ಹಾಕಿದ್ದರೆ ಬಹುಶಃ ನಾನು ಈ ಕೆಲಸಕ್ಕೆ ಕೈಯೇ ಹಾಕುತ್ತಿರಲಿಲ್ಲ" ಎಂದಷ್ಟೇ ಬರೆದರು. ಇಷ್ಟೇ ಅಲ್ಲ, ಭಗವತ ಶರಣರೆಂದರೆ ಅವರಿಗೆ ತುಂಬ ಪ್ರೀತಿ ಇತ್ತು. ಅವರ ವಿದ್ವತ್ತಿನ ಬಗ್ಗೆ ಮೆಚ್ಚುಗೆ ಇತ್ತು. ಅನೇಕ ಬಾರಿ ರಾಹುಲರು ಅವರ ಸಹಾಯಕ್ಕಾದವರು ಕೂಡ. ನಂತರ ಹಿಂದೀ ವಿಶ್ವಕೋಶಕ್ಕೆ ರಾಹುಲರನ್ನು ಪ್ರಧಾನ ಸಂಪಾದಕರನ್ನಾಗಿ ಮಾಡುವ ಮಾತುಕತೆ ನಡೆದಾಗ ಅವರು ಭಗವತಶರಣರನ್ನು ತನ್ನ ಪ್ರಮುಖ ಸಹಾಯಕರನ್ನಾಗಿ ಮಾಡಿಕೊಳ್ಳುವುದು ಅಗತ್ಯವೆಂದುಕೊಂಡಿದ್ದರು. ಆದರೆ ಭಗವತಶರಣರು ಬಹುಶಃ ಬೇರೇನೋ ಆಸೆಯಿಂದಿದ್ದರು. ಕೊನೆಗೂ ರಾಹುಲರು ಪ್ರಧಾನ ಸಂಪಾದಕರಾಗಲು ಆಗಲಿಲ್ಲ. ಇದರಿಂದೆಲ್ಲ ರಾಹುಲರು ಎಷ್ಟು ನೊಂದರು, ಅವರ ತನುಮನ ಜೀವನದ ಮೇಲೆ ಇದು ಎಂತಹ ಪರಿಣಾಮ ಮಾಡಿತು ಎಂಬುದನ್ನೆಲ್ಲ ಅವರ ಕೆಲ ನಿಕಟವರ್ತಿಗಳು ಚೆನ್ನಾಗಿ ಬಲ್ಲರು.

ಮೇಲೆ ಹೇಳಿದ ಘಟನೆ ನಡೆದದ್ದು 1956-57ರಲ್ಲಿ. ರಾಹುಲರು 1956 ಏಪ್ರಿಲ್ 9ರ ನಂತರದ ತನ್ನ ಜೀವನಯಾತ್ರೆಯನ್ನು ಬರೆದಿಡಲಿಲ್ಲ, ಬರೆಯ ಬಯಸಲೂ ಇಲ್ಲ. ಈಗ ತನ್ನ ಡೈರಿಗಳನ್ನು 'ಜೀವನ ಯಾತ್ರೆ'ಯ ಪುಟಗಳಲ್ಲಿ ಸೇರಿಸುವುದು ಅವರಿಗೆ ಹಿಂದಿನಷ್ಟು ಸುಲಭವೂ ಆಗಿರಲಿಲ್ಲ.

ಮಸ್ಸೂರಿಯಲ್ಲಿ ವಾಸವಾಗಿದ್ದ ಕಾಲಖಂಡದ 'ಜೀವನ ಯಾತ್ರೆ'ಯನ್ನು 1956ರಲ್ಲಷ್ಟೇ, ಅದೂ ಅತ್ಯಂತ ಕಷ್ಟದಿಂದ ಬರೆಯಲು ಸಾಧ್ಯವಾಯಿತು. ತನ್ನ ಜೀವಿತ ಕಾಲದಲ್ಲಿ ಅದು ಪ್ರಕಟವಾಗುವುದನ್ನು ನೋಡಬೇಕೆಂಬ ವಿಶೇಷ ಉತ್ಸುಕತೆಯೂ ಅವರಲ್ಲಿರಲಿಲ್ಲ. (ಆ "ಜೀವನ ಯಾತ್ರೆ" ಎರಡು ಭಾಗಗಳಲ್ಲಿ ರಾಹುಲರು ತೀರಿಕೊಂಡ ನಾಲ್ಕು ವರ್ಷಗಳ ಬಳಿಕವಷ್ಟೆ ಪ್ರಕಟವಾಯಿತು). ಅದರಲ್ಲಿ ಅನಪೇಕ್ಷಿತವಾಗಿ ಕೆಲ ಅಪ್ರಿಯ ವಿಚಾರಗಳನ್ನು ಬರೆಯಬೇಕಾಗಿ ಬಂದದ್ದೇ ಕಾರಣವಿರಬಹುದು. ಅವುಗಳಲ್ಲಿ ಒಂದು: ರಾಹುಲರನ್ನು ಆಳವಾಗಿ ಗಾಯಗೊಳಿಸಿದ ಡಾ। ರಾಮವಿಲಾಸ ಶರ್ಮಾ ಅವರ ಮಿಥ್ಯಾರೋಪ. ಅಂದಿನ ರಾಜಕೀಯ ತಂತ್ರಕ್ಕನುರೂಪವಾಗಿ ದೆಹಲಿಯ ಸಾಪ್ತಾಹಿಕ "ನವಯುಗ"ದಲ್ಲಿ ಕೆಲ ಲೇಖನಗಳನ್ನು ಬರೆದು ರಾಹುಲರು ಮಾರ್ಕ್ಸ್‌ವಾದಿಗಳಲ್ಲ, ಕೇವಲ ಬೌದ್ಧರು ಎಂದು ಡಾ। ರಾಮವಿಲಾಸ ಅವರು ರುಜುಪಡಿಸಲು ಪ್ರಯತ್ನಿಸಿದರು. ಇದಕ್ಕೆ ರಾಹುಲರ ಟಿಪ್ಪಣಿ: "ಇದರಲ್ಲಿ ಸತ್ಯಾಂಶವಿದ್ದರೂ ಹೆಚ್ಚಿನಂಶ ಸುಳ್ಳು. ರಾಮವಿಲಾಸಜೀ ಎಂಥವರೆಂದರೆ ಏನಾದರೂ ತಲೆಗೆ ಹೊಕ್ಕಿದ್ದೇ ಆದರೆ ಮತ್ತದಕ್ಕೆ ಗತಿ ಕಾಣಿಸಲು ಯಾವುದಕ್ಕೂ ಹಿಂದೆ ಮುಂದೆ ನೋಡದವರು."

ಡಾ। ರಾಮವಿಲಾಸರ ಇನ್ನೊಂದು ಆರೋಪ ಇನ್ನಷ್ಟು ಕೀಳು ಮಟ್ಟದ್ದು. ಸರಕಾರ ರಾಹುಲರಿಗೆ ಮತ್ತು ಡಾ। ರಘುವೀರ ಅವರಿಗೆ ಲಕ್ಷಗಟ್ಟಲೆ ಹಣಕೊಟ್ಟು ಪಾರಿಭಾಷಿಕ ಕೆಲಸ ಮಾಡಿಸುತ್ತದೆ ಎಂದವರು 1954ರ ಜುಲೈನಲ್ಲಿ ಒಂದು ಪತ್ರಿಕೆಗೆ ಬರೆದಿದ್ದರು.

ರಾಹುಲಜೀಗೆ ಇದನ್ನು ಓದಿ ಸಹಜವಾಗಿಯೇ ಅತೀವ ದುಃಖವಾಯಿತು. ಆದಂತೂ ಅವರ ಆರ್ಥಿಕ ಮುಗ್ಗಟ್ಟಿನ ಕಾಲ. ಕೈ ಬಿಗಿ ಹಿಡಿದು ಮನೆ ನಡೆಸುತ್ತಿದ್ದರು. ಈ ಎಡೆಯಲ್ಲಿ ಒಬ್ಬ 'ಮಾರ್ಕ್ಸ್‌ವಾದಿ' ಲೇಖಕ-ಬಂಧುವಿನ ಈ ಮಿಥ್ಯಾರೋಪ. ರಾಹುಲಜೀ ಪ್ರತಿಕ್ರಿಯೆಯಾಗಿ ಬರೆದರು "ಈ ಹಸೀ ಸುಳ್ಳಿಗೂ ಒಂದು ಅಂತ್ಯವಿದೆಯೇ ? ಇಂತಹ ಮನುಷ್ಯ ಹೇಗೆ ಕ್ರಾಂತಿಭಕ್ತನಾಗಲು ಸಾಧ್ಯ ? ಓರ್ವ ಪ್ರತಿಭಾಶಾಲಿಯ ಈ ಅಧಃಪತನ ನೋಡಿ ನನಗಂತೂ ಬಹಳ ಬೇಸರವಾಯಿತು,....ಡಾ। ರಘುವೀರ ಮತ್ತು ನಮ್ಮ ಪಾರಿಭಾಷಿಕ ಶಬ್ದನಿರ್ಮಾಣ ಸಂಬಂಧವಾದ ನೀತಿಯಲ್ಲಿ ಭೂಮಿ ಆಕಾಶದಷ್ಟು ಅಂತರವಿದೆ. ಅವರ ಜೊತೆ ನನ್ನ ಹೆಸರು ಸೇರಿಸಿರುವುದೇ ಶರ್ಮಾಜಿ ಎಂತಹ ನೀಚತನಕ್ಕೆ ಇಳಿದಿದ್ದಾರೆಂಬುದನ್ನು ಹೇಳುತ್ತದೆ."

ಮಸ್ಸೂರಿಯಲ್ಲಿ ಸೊಪ್ಪು-ತರಕಾರಿ ಬಹಳ ದುಬಾರಿಯಾಗಿತ್ತು. "ಹರ್ನ್‌ಕ್ಲಿಫ್"ನಲ್ಲಿ ಬೇಕಷ್ಟು ಖಾಲಿ ಸ್ಥಳವಿದ್ದು ರಾಹುಲಜೀ ಪಾತಿ ಅಗೆಸಿದರು. ಸ್ವತಃ ಅಗೆದರು, ಗೊಬ್ಬರ, ತರಕಾರಿ ಬೀಜ ತಂದು ಹಾಕಿದರು. ಪ್ರಥಮ ಬಾರಿಗೆ ತೋಟಗಾರಿಕೆಯ ಪ್ರಯೋಗ, ಹೆಚ್ಚು ಯಶಸ್ವಿಯೇನೂ ಆಗಲಿಲ್ಲ. ತರಕಾರಿ ಬೆಳೆಯಿಸುವ ಈ ಪ್ರಯೋಗ ಎರಡು ಎರಡೂವರೆ ವರ್ಷಗಳ ವರೆಗೆ ಸಾಗಿತಾದರೂ ವಾನರಸೇನೆಯ ಕಾಲಕಾಲದ ದಾಳಿಯಿಂದಾಗಿ ಅದು ಸಫಲವಾಗಲೇ ಇಲ್ಲ.

ಸಾಹಿತ್ಯ ಸಮ್ಮೇಳನದ ಪಾರಿಭಾಷಿಕ ಶಬ್ದನಿರ್ಮಾಣ ಕಾರ್ಯದಿಂದ ರಾಹುಲರು ಬೇರೆಯಾಗಿದ್ದರಷ್ಟೆ. ಈಗ ರಾಷ್ಟ್ರಭಾಷಾ ಪ್ರಚಾರ ಸಮಿತಿ (ವರ್ಧಾ)ಯ ಸಾಹಿತ್ಯ ನಿರ್ಮಾಣ ಯೋಜನೆಯ ಜವಾಬ್ದಾರಿ ಹೊತ್ತಿದ್ದರು. 1950ನೆಯ ಇಸವಿಯ ಕೊನೆಯಲ್ಲಿ ಅದರ ತಯಾರಿ ಆರಂಭಿಸಿದ್ದರು. ಮಹಾದೇವ ಸಾಹಾ ಅವರಿಗೆ ಮಸ್ಸೂರಿಗೆ ಬರಲು ಪತ್ರ ಬರೆದರು, ನಾಗಾರ್ಜುನರಿಗೂ. ಡಾ। ಸತ್ಯಕೇತು ಅವರು ಹಿಂದಿಯಲ್ಲಿ "ಫ್ರೆಂಚ್ ಸ್ವಯಂಶಿಕ್ಷಕ" ಬರೆಯಲಾರಂಭಿಸಿದರು. ಒಂದು ಪುಟ್ಟ ಹಿಂದೀ ಕೋಶ ತಯಾರಿಸುವ ಯೋಜನೆಯೂ ಇತ್ತು.

ಸ್ವಯಂ ಒಂದು ಸಂಸ್ಥೆಯಾಗಿದ್ದರು ರಾಹುಲಜೀ. ದಣಿವರಿಯದೆ ದುಡಿಯಬಲ್ಲವರು. ಕೈಗೆತ್ತಿಕೊಂಡ ಕೆಲಸವನ್ನು ನಿಗದಿತ ವೇಳೆಯ ಒಳಗೇ ಪೂರ್ತಿಗೊಳಿಸಿ ಬಿಡುತ್ತಿದ್ದರು. ಆದರೆ ಇತರರಿಗೆ ಇಷ್ಟು ಸಾಧ್ಯವಿರಲಿಲ್ಲ. ಸಮಿತಿಯ ಸಾಹಿತ್ಯ ನಿರ್ಮಾಣ ಯೋಜನೆ ಒಂದು ಸಾಮೂಹಿಕ ಕೆಲಸ. ಅದರಲ್ಲಿ ರಾಹುಲರು ತನಗೆ ಹಿತ ಕಂಡ ಕೆಲವರನ್ನು ಆರಿಸಿಕೊಂಡಿದ್ದರು. ಇವರೆಲ್ಲ ತಮ್ಮನ್ನು ಪ್ರಗತಿಪ್ರಿಯರೆಂದುಕೊಂಡಿದ್ದರೂ ಕೆಲಸದಲ್ಲಿ ಮನನೆಟ್ಟು ಮುಳುಗುವ ಜೀವಿಗಳಲ್ಲ. ವರ್ಧಾದ ಹಿಂದೀ ಪ್ರಚಾರ ಸಮಿತಿ, ಮುಖ್ಯತಃ ಹಿಂದೀ ಪರೀಕ್ಷೆ ಏರ್ಪಡಿಸುವ ಸಂಸ್ಥೆ, ಪರೀಕ್ಷೆ ಮತ್ತು ಪಠ್ಯಪುಸ್ತಕಗಳೇ ಅದರ ಆದಾಯದ ಏಕಮಾತ್ರ ಮೂಲ ಎಂಬುದನ್ನು ರಾಹುಲರು ಯೋಚಿಸಲಿಲ್ಲ. ಅವರೋ, ಪರ್ವತ ಪ್ರಾಂತದಲ್ಲಿ. ವರ್ಧಾದ ಸಮಿತಿ ಮತ್ತದರ ಪ್ರಚಾರ ಹಿಂದಿಯೇತರ ಪ್ರದೇಶಗಳಲ್ಲಿ. ಯೋಜನೆ ಅವಶ್ಯವಾಗಿ ಸೋಲಲೇ ಬೇಕಿತ್ತು, ಆದರೆ ಅಷ್ಟರೊಳಗೆ ಸಾಕಷ್ಟು ಕಹಿ ಅನುಭವಗಳೂ ಆದವು.

ಪರಿಭಾಷೆಗಳ ವಿಶೇಷಜ್ಞ ಸಮಿತಿಯ ಸಭೆಯಲ್ಲಿ ಭಾಗವಹಿಸಲು ರಾಹುಲರು 1950ರ ನವೆಂಬರ್‌ನಲ್ಲಿ ದೆಹಲಿಗೆ ಹೋದರು. 'ಭೈಯಾ' (ಸ್ವಾಮೀ ಹರಿಶರಣಾನಂದ)ನ ಒತ್ತಾಯಕ್ಕೆ ಅಲ್ಲಿಂದಲೇ ಅಮೃತಸರಕ್ಕೆ ಹೋಗಿ ಎರಡು ದಿನವಿದ್ದು ಮಸ್ಸೂರಿಗೆ ವಾಪಸಾದರು. ಅಲ್ಲಿ, ರಾಹುಲಜೀ ದೆಹಲಿಗೆ ಹೊರಟ ದಿನವೇ ಮಸ್ಸೂರಿಗೆ ಬಂದಿದ್ದ, ಮಹಾದೇವ ಸಾಹಾ ಚಳಿಗೆ ಕಂಗೆಟ್ಟು ಕುಳಿತಿದ್ದರು.

ಸಂವಿಧಾನದ ಸಂಸ್ಕೃತ ಅನುವಾದಕ್ಕಾಗಿ ರಚನೆಯಾದ ಸಮಿತಿಯಲ್ಲಿ ರಾಹುಲಜೀ ಕೂಡ ಒಬ್ಬ ಸದಸ್ಯರು. ಇನ್ನೊಬ್ಬ ಸದಸ್ಯರು ವೃದ್ಧಾಪ್ಯದ ಕಾರಣ ಅತ್ತ ಇತ್ತ ಓಡಾಡಲು ಅಶಕ್ತರಾಗಿದ್ದ ಡಾ। ಪಾಂ.ವಾ.ಕಾಣೇ. ಹಾಗಾಗಿ ಸಮಿತಿಯ ಸಭೆಯನ್ನು ಮುಂಬಯಿಯಲ್ಲಿ ಕರೆಯಲಾಗಿತ್ತು. ನವೆಂಬರ್ 27ರಂದು ರಾಹುಲರು ಮುಂಬಯಿಗೆ ಹೊರಟರು. ಹೋಗುತ್ತ ಬರುತ್ತ ಹೆಚ್ಚಾಗಿ ಅವರ ಮೊಕ್ಕಾಂ ಡೆಹರಾಡೂನ್‌ನ ಅಧ್ಯಾಪಕ ಪಂಡಿತ ಗಯಾ ಪ್ರಸಾದ ಶುಕ್ಲ ಅವರ ಮನೆಯಲ್ಲಿ. ರೈಲಿನಲ್ಲಿ ದಿಲ್ಲಿ ಮಾರ್ಗವಾಗಿ ಮುಂಬಯಿಗೆ ತೆರಳಿ ಮಲಬಾರ್ ಹಿಲ್‌ನಲ್ಲಿ ಸೇಠ್ ಘನಶ್ಯಾಮದಾಸ್ ಪೋದ್ದಾರರ ಮನೆಯಲ್ಲಿ ತಂಗಿದರು. 'ಗಢವಾಲ್' ಪುಸ್ತಕ ಬರೆಯುತ್ತಿದ್ದರಿಂದ 'ಕೇದಾರಖಂಡ' ಮತ್ತು ಇತರ ಸಂಸ್ಕೃತ ಪುಸ್ತಕಗಳು ಬೇಕಾಗಿದ್ದುವು. ಅದಕ್ಕಾಗಿ ವೆಂಕಟೇಶ್ವರ ಪ್ರೆಸ್ಸಿಗೆ ಹೋದರು. ಅಲ್ಲಿಂದ ಪ್ರಕಟವಾಗುತ್ತಿದ್ದ, ತಾನು ಚಿಕ್ಕಂದಿನಿಂದಲೂ ನೋಡುತ್ತ ಬಂದ ಪುಸ್ತಕಗಳ ನೆನಪಾಯಿತು; ಪ್ರೆಸ್ ನೋಡಿದರು, 'ಕೇದಾರಖಂಡ'ವೂ ಸಿಕ್ಕಿತು.

ಮರುದಿನ 'ಧರ್ಮಯುಗ'ಕ್ಕೆ ಹೋಗಿ ಸಂಪಾದಕ ಡಾ। ಹೇಮಚಂದ್ರ ಜೋಶಿಯವರನ್ನು ಕಂಡರು. ಇಳಾಚಂದ್ರಜೀ ಅವರೂ ಅಲ್ಲಿದ್ದರು. ಅದೇ ದಿನ ರಾಹುಲರು ಕಾಮ್ರೇಡ್ ಡಾಂಗೆಯವರನ್ನು ಭೇಟಿ ಮಾಡಿದರು. ರಾತ್ರಿ ಒಂದು ಚೀನೀ ಸಿನೆಮಾ ನೋಡಿದ್ದಾಯಿತು. ಎಂಟು ದಿನಗಳ ಹಿಂದೆ ಅವರು ಅಮೃತಸರದಲ್ಲಿ 'ಭೈಯ್ಯಾ'ನ ಮನೆಯಲ್ಲಿ ಮೆಟ್ಟಲಿಳಿಯುತ್ತಿದ್ದಾಗ ಬಿದ್ದು ಮೊಣಕಾಲು ಕೆತ್ತಿ ಹೋಗಿತ್ತು. ಆಗೇನೋ ಅಂಥದ್ದೇನೂ ತೊಂದರೆ ಇಲ್ಲ ಅನಿಸಿದ್ದು, ಮುಂಬಯಿಗೆ ಬರುತ್ತಲೂ ಗಾಯ ಕೆರಳಿ ಬಿಟ್ಟಿತ್ತು. ಡಾಕ್ಟರ್ ಹತ್ತಿರ ಹೋಗಿ ಮಧುಮೇಹಕ್ಕಾಗಿ ಇನ್ಸುಲಿನ್ ಮತ್ತು ಗಾಯಕ್ಕೆ ಪೆನ್ಸಿಲಿನ್ ಇಂಜೆಕ್ಷನ್ ತೆಗೆದುಕೊಳ್ಳಬೇಕಾಯಿತು. ಮಧುಮೇಹದಿಂದಾಗಿ ಬೇಗ ಒಣಗುವುದಿಲ್ಲವಾದ್ದರಿಂದ ಈಗ ಗಾಯ ಆಯಿತೆಂದರೆ ಚಿಂತೆಯಾಗುತ್ತಿತ್ತು.

ಡಿಸೆಂಬರ್ 1ರಿಂದ 7ರ ವರೆಗೆ ಪ್ರತಿದಿನ ಬೆಳಿಗ್ಗೆ ಅನುವಾದ ಸಮಿತಿ ಸಭೆ. ಡಾ। ಮಂಗಲದೇವ ಶಾಸ್ತ್ರಿ, ಡಾ। ಬಾಬೂರಾಮ ಸಕ್ಸೇನಾ, ಸುನೀತಿ ಬಾಬು ಮತ್ತು ಡಾ। ಕಾಣೆ ಉಪಸ್ಥಿತರಿರುತ್ತಿದ್ದರು. ನಂತರ ಪಂಡಿತ ಗಿರಿಧರ ಶರ್ಮಾ ಮತ್ತು ಶ್ರೀ ಬಾಲಸುಬ್ರಹ್ಮಣ್ಯ ಅಯ್ಯರ್ ಕೂಡ ಬಂದು ಕೂಡಿಕೊಂಡರು.

ಒಂದು ದಿನ ರಾಹುಲಜೀ ಮುಂಬಯಿಯ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಮ್‌ನ ಕ್ಯುರೇಟರ್ ಡಾ। ಮೋತೀಚಂದ್ರರನ್ನು ಕಾಣಲು ಹೋದಾಗ ಅವರು ಹತ್ತಿರದ ಒಂದು ಒಳ್ಳೆಯ ಹೋಟೇಲಿಗೆ ಕರೆದುಕೊಂಡು ಹೋದರು. ಅಲ್ಲಿ ಇಡೀ ಕೋಳಿಯ ಊಟವಾಯಿತು. ಮಿತ್ರರೊಂದಿಗೆ ಮಾಂಸಾಹಾರದ ಇಂತಹ ಸುಖದ ಸಂದರ್ಭಗಳನ್ನು ಅವರು ಎಂದೂ ಕಳೆದುಕೊಳ್ಳುತ್ತಿರಲಿಲ್ಲ. "ಡಾ। ಮೋತೀಚಂದ್ರರ ಚಿಕ್ಕಪ್ಪ ಭಾರತೇಂದು ಹರಿಶ್ಚಂದ್ರ ತನ್ನ ಕಾಲಕ್ಕಿಂತಲೂ ತುಂಬ ಮುಂದಿದ್ದವರು. ಆದರೆ ಇಡೀ ಕೋಳಿಯೂಟದ ಸಾಹಸವನ್ನು ಅವರು ಕೂಡ ಮಾಡಿರಲಿಕ್ಕಿಲ್ಲ." "ಜೀವಂತವಿರುವಾಗ

ಈ ಸೌಭಾಗ್ಯ ಪ್ರಾಪ್ತವಾಗದಿದ್ದಲ್ಲಿ ಸತ್ತ ಮೇಲಾದರೂ ಇರುವಂಥದೇ. ಬಾ ಪರಮವೈಷ್ಣವ, ಇಲ್ಲವಾದರೆ 'ಘ್ರಾಣಂ ಅರ್ಧ ಭೋಜನಂ' ಆಗುವುದಂತು ಸರಿಯೇ" ಎಂದು ಬರೆದಿದ್ದಾರೆ ರಾಹುಲಜೀ.

ಮುಂಬಯಿಯಿಂದ ರಾಹುಲರು ವರ್ಧಾಕ್ಕೆ ಹೋದರು. ಅಲ್ಲಿ ರಾಷ್ಟ್ರಭಾಷಾ ಪ್ರಚಾರ ಸಮಿತಿಯ ಸಾಹಿತ್ಯ ಯೋಜನೆಯ ಕುರಿತು ಆನಂದಜೀಯವರೊಡನೆ ಮಾತುಕತೆ ನಡೆಸಿ ಕೆಲ ನಿರ್ಧಾರ ಕೈಗೊಳ್ಳಲಾಯಿತು. ಅಂದು ರಾಹುಲಜೀಯವರ ಪೂರ್ವ ಪರಿಚಿತರಾದ ವೈಜನಾಥ ಸಿಂಹ 'ವಿನೋದ' ಕೂಡ ವರ್ಧಾದಲ್ಲಿಯೇ ಇದ್ದರು. ಮುಂದೆ ನಾಗಪುರ ಮತ್ತು ದೆಹಲಿಯಲ್ಲಿ ಗಾಡಿ ಬದಲಿಸಲು ಕೆಲ ಹೊತ್ತು ನಿಂತು 1950ರ ಡಿಸೆಂಬರ್ 15ರಂದು ಮಸ್ಸೂರಿಗೆ ವಾಪಸಾದರು.

ಗಾಯ ಇನ್ನಷ್ಟು ಬಿಗಡಾಯಿಸಿತ್ತು. ಒಂದು ರೀತಿಯಲ್ಲಿ ಕುಂಟರಾಗಿ ಹಿಂದಿರುಗಿದ್ದರು. ಗುಣವಾಗಲು ಎರಡು-ಎರಡೂವರೆ ತಿಂಗಳು ಬೇಕಾಯಿತು. ಇನ್ನು ಮುಂದೆ ನಿಯಮಬದ್ಧವಾಗಿ ಇನ್ಸುಲಿನ್ ತೆಗೆದುಕೊಳ್ಳಬೇಕು, ಹೆಚ್ಚು ತಿರುಗಾಟ ಕೂಡದು ಎಂಬ ಪಾಠ ಕಲಿತಂತಾಯಿತು. ಹೆಚ್ಚಾಗಿ ರಾತ್ರಿ ಊಟ ಖೋತಾ ಆಯಿತು. ಇನ್ಸುಲಿನ್ ತೆಗೆದುಕೊಳ್ಳದಿದ್ದರೆ ತಲೆ ಧಿಂ ಎನ್ನುತ್ತಿತ್ತು. ಡಯಾಬಿಟಿಸ್ ಅವರ ಶರೀರ ಪ್ರಕೃತಿ, ದುಡಿಯುವ ಶಕ್ತಿ, ದಿನಚರಿ ಎಲ್ಲದರ ಮೇಲೆ ಪರಿಣಾಮ ಬೀರಿತ್ತು. ಅವರಿಗೀಗ ಐವತ್ತೆಂಟು ವರ್ಷ

1950ರ ಕೊನೆಯ ತಿಂಗಳಲ್ಲಿ ನಡೆದ ಒಂದು ಮಹತ್ವಪೂರ್ಣ ಘಟನೆ: ರಾಹುಲರ ವಿವಾಹ. ಈ ಘಟನೆಯನ್ನು ಅವರೇ ಚಿಂತಿಸಿ, ಮಂಥಿಸಿ ಬರೆದ ಶಬ್ದಗಳಲ್ಲಿ ಹೇಳವುದು ಹೆಚ್ಚು ಸಮಂಜಸ.

'ಕಮಲಾ ಜೊತೆಗಿರುತ್ತ ಈಗ ಒಂದೂವರೆ ವರ್ಷದ ಮೇಲಾಗಿತ್ತು. ನಾನು ಅವಳೊಂದಿಗೆ ಅವಳು ನನ್ನೊಂದಿಗೆ ವಾಸಿಸಲೇ ಬೇಕಾಗಿತ್ತು. ಸ್ತ್ರೀಪುರುಷರ ಇಂತಹ ನಿಕಟ ಸಂಬಂಧವನ್ನು ಅನಿಶ್ಚಿತ ಸ್ಥಿತಿಯಲ್ಲಿ ಇಡುವುದು ಉಚಿತವಾಗಿರಲಿಲ್ಲ. ಪುರುಷರ ರಾಜ್ಯದಲ್ಲಿ ಮಹಿಳೆಯರಿಗೆ ಇದು ಅಸಹನೀಯ ಸ್ಥಿತಿ. ಆದುದರಿಂದ ಡಿಸೆಂಬರ್ 18ರಂದು ನಾವಿಬ್ಬರೂ ಪತಿಪತ್ನಿಯರಾಗುವುದೆಂದು ನಿಶ್ಚಯಿಸಿಕೊಂಡೆವು. ಡಿಸೆಂಬರ್ 23ರಂದು ಸುಮಾರು 11 ಗಂಟೆಗೆ ಉಷಾ-ಬಾಬಾರ ಸಂಗಡ ಡಾ। ಸತ್ಯಕೇತು ಮತ್ತು ಶೀಲಾ ಬಂದರು. ಅವರ ಜೊತೆಗೆ ಮಹದೇವ ಭಾಯಿಯೂ ಬಂದರು. ಸುಮಾರು 12 ಗಂಟೆಗೆ ಡಾ। ಸತ್ಯಕೇತು ಅವರ ಪೌರೋಹಿತ್ಯದಲ್ಲಿ ನಮ್ಮ ವಿವಾಹವಾಗಿಬಿಟ್ಟಿತು.....ನಾನಿದನ್ನು ಬೇಡವೆಂದಿದ್ದರೆ ಅದು ಸೀಮಿತ ಸ್ವಾರ್ಥಪರತೆಯಾಗುತ್ತಿತ್ತಲ್ಲದೆ ಕಮಲಾಗೆ ದೊಡ್ಡ ಅನ್ಯಾಯ ಮಾಡಿದಂತೆಯೂ ಆಗುತ್ತಿತ್ತು. ಮರುದಿನವೇ, ದಶಂಬರ 24ರಂದು ಪರೀಕ್ಷೆಗೆ ಬರೆಯಲು ಕಮಲಾ ಡೆಹರಾಡೂನಿಗೆ ಹೊರಟು ಹೋದಳು. ಪರೀಕ್ಷೆ ಮಾತ್ರವಲ್ಲ, ಅವಳಿಗೆ ಕಾಲಿಂಪೊಂಙಗೂ ಹೋಗಬೇಕಿತ್ತು. ಎಂದರೆ ಇನ್ನು ಹಿಂದಿರುಗುವುದು ತಿಂಗಳುಗಳ ಬಳಿಕವೇ. ಮಹಾದೇವ ಸಾಹಾ ಅವರು ಕೂಡ ಜೊತೆಗೆ ಹೋದರು.'

1950ನೇ ಇಸವಿಯ ಕೊನೆಯ ದಿನ ರಾಹುಲರು ಇಡೀ ವರ್ಷ ಬರೆದ ಬರೆಹಗಳ ಪಟ್ಟಿಮಾಡಿದರು. 'ಮಧುರ ಸ್ವಪ್ನ' ಮತ್ತು 'ಡಾರ್ಜಿಲಿಂಗ್ ಪರಿಚಯ' ಪ್ರಕಟವಾಗಿವೆ.'ಕುಮಾವ್ಹೂಂ' ಮುಗಿದು ಪ್ರೆಸ್ಸಿಗೆ ಹೋಗಿದೆ. 'ಆದಿ ಹಿಂದೀ ಕೀ ಕಹಾನಿಯಾಂ ಔರ್ ಗೀತ್' ಮುದ್ರಣಗೊಂಡಿದೆ. 'ಗಢವಾಲ್'ನ ಇನ್ನೂರು ಪುಟ ಬರೆದಾಗಿದೆ. ಆ ವರ್ಷದಲ್ಲಾದ ಕೆಲಸದಿಂದ ರಾಹುಲರಿಗೆ ಸಂತೋಷವೆನಿಸಿತ್ತು.

# ಸಮಿತಿಯ ಸಾಹಿತ್ಯ ಯೋಜನೆ

1951ನೇ ಇಸವಿಯ ಹೊಸ ವರ್ಷ ಆರಂಭವಾಯಿತು. 'ಹರ್ನ್‌ಕ್ಲಿಫ್'ನಲ್ಲಿ ಕೇವಲ ಇಬ್ಬರೇ ಇದ್ದರು. ರಾಹುಲ್‌ಜೀ ಮತ್ತು ಅಡುಗೆಯ ಮಾತಬರಸಿಂಹ. ಗಾಯದ ಕಿರಿಕಿರಿ, ಪೆನ್ಸಿಲಿನ್ ಇಂಜೆಕ್ಷನ್ ತೆಗೆದುಕೊಳ್ಳುತ್ತ ಇದ್ದರು ರಾಹುಲ್‌ಜೀ. ಆದರೆ ಈ ಕಾರಣದಿಂದೇನೂ ಬರವಣಿಗೆ ನಿಲ್ಲುವಂತಹುದಲ್ಲ. 'ದಖ್ಖಿನೀ ಹಿಂದೀ ಕಾವ್ಯಧಾರಾ' ಬರವಣಿಗೆ ಹಮ್ಮಿಕೊಂಡಿದ್ದರು. ಇದಕ್ಕಾಗಿ ಹೈದರಾಬಾದ್ ಸಮ್ಮೇಳನ (1949) ನಡೆದಾಗಿನಿಂದಲೂ ಸಾಮಗ್ರಿಯನ್ನು ಸಂಗ್ರಹಿಸಿಕೊಳ್ಳುತ್ತ ಬಂದಿದ್ದರು. 14ನೇ ಮತ್ತು 15ನೇ ಶತಮಾನದಲ್ಲಿ ಉತ್ತರ ಭಾರತದಿಂದ ದಕ್ಷಿಣಕ್ಕೆ ಬಂದ ವಿಜಯಿ ಮುಸಲ್ಮಾನರಿಂದಾಗಿ ಅಲ್ಲಿ ಪಸರಿಸಿದ ಹಿಂದಿ 'ಕೌರವೀ'ಯದೇ ಒಂದು ರೂಪ. ಅದರಲ್ಲಿ ಪಂಜಾಬೀ, ರುಹೇಲೀ ಹಾಗೂ ಕನೌಜೀ ಶಬ್ದಗಳೂ ಸೇರಿಕೊಂಡಿದ್ದುವು. ದಕ್ಷಿಣಕ್ಕೆ ಬಂದ ರಾಜ್ಯಪಾಲರು, ಸಣ್ಣಪುಟ್ಟ ಅಧಿಕಾರಿಗಳು, ಸೇನಾ ತುಕಡಿಗಳು, ಸಿಪಾಯಿಗಳು ಹಾಗೂ ಅವರ ಹೆಂಡತಿ ಮಕ್ಕಳು ಪರಿವಾರ ಬಳಸುತ್ತಿದ್ದ ಹಿಂದಿ ಅದು. ಈ ಹಿಂದಿಗೆ ಬಳಿಕ 'ದಖ್ಖಿನೀ' ಎಂಬ ಹೆಸರು ಬಂತು. ದರ್ಬಾರಿನ ಭಾಷೆ ಪಾರ್ಸಿಯಾಗಿತ್ತು. ಆದರೆ ಮುಸ್ಲಿಂ ಸಂತರು ತಮ್ಮ ಕವಿತೆಗಳಲ್ಲಿ ಬಳಸಲು ದಖ್ಖಿನಿ ಹಿಂದಿಯನ್ನು ಆಯ್ದುಕೊಂಡಿದ್ದರು. ರಾಹುಲರು ಈ ಕವಿತೆಗಳ ಸಂಕಲನ ಮಾಡಿ ಒಂದು ವಿದ್ವತ್ಪೂರ್ಣ ಭೂಮಿಕೆಯನ್ನು ಬರೆದರು.

ರಾಷ್ಟ್ರಭಾಷಾ ಪ್ರಚಾರ ಸಮಿತಿಯ ಸಾಹಿತ್ಯ-ಯೋಜನೆಯ ಕೆಲಸವನ್ನು ಆರಂಭಿಸಿ ಕೊಡಬೇಕಿತ್ತು. ಕೆಲಸ ಮಾಡುವವರನ್ನು ಆರಿಸುವ ಸಮಸ್ಯೆ ಎದ್ದಾಗ ಉಳಿದೆಲ್ಲರಿಗಿಂತ ತಮ್ಮ ಪರಿಚಿತರ ಬಗ್ಗೆ ಆಸಕ್ತಿ ತಾಳುವುದು ಸ್ವಾಭಾವಿಕ ತಾನೆ? ಮಹಾದೇವ ಸಾಹಾ ಸುಮಾರು ಒಂದು ತಿಂಗಳ ಬಳಿಕ ವಾಪಸು ಬಂದಿದ್ದು ಈಗ ಸಾಹಿತ್ಯ ಯೋಜನೆಯ ಕಾರ್ಯಕ್ಕೆ ಸಿದ್ಧರಿದ್ದರು. ಮಹಾದೇವ ಸಾಹಾ ಅವರ ಹಳೆಯ ಮಿತ್ರ ವೈಜನಾಥ ಸಿಂಹ 'ವಿನೋದ'ರೂ ಬಂದರು. ಜನವರಿಯ ಕೊನೆಯಲ್ಲಿ ಮಹೇಂದ್ರ ಕುಮಾರ ನ್ಯಾಯಾಚಾರ್ಯರು, ಅಮೋಲೆ ಕುಮಠೇಕರ್ ಮತ್ತು ಸ್ವಾಮಿ ಸತ್ಯಸ್ವರೂಪರು, ಮಾರ್ಚ್ ಮಧ್ಯದಲ್ಲಿ ನಾಗಾರ್ಜುನರು ಎಲ್ಲ ಬಂದು ಸೇರಿಕೊಂಡರು. ಒಬ್ಬ ಟೈಪಿಸ್ಟ್ ಕೂಡ ನೇಮಕಗೊಂಡರು. ಈ ಕೆಲಸಕ್ಕಾಗಿಯೇ 'ಹರ್ನ್‌ಕ್ಲಿಫ್'ನ ಹತ್ತಿರದಲ್ಲೇ ಇದ್ದ 'ಹರ್ನ್‌ಹಿಲ್' ಬಂಗಲೆಯನ್ನು ಬಾಡಿಗೆಗೆ ಹಿಡಿದರು. ರಾಹುಲರು ಸಾಹಿತ್ಯ ಯೋಜನೆಯ ವೇತನ ರಹಿತ 'ನಿರ್ದೇಶಕ'ರಾಗಿದ್ದರು. ಉಳಿದ ಸಹೋದ್ಯೋಗಿಗಳ ವೇತನ ಖರ್ಚು ರಾಷ್ಟ್ರಭಾಷಾ ಪ್ರಚಾರ ಸಮಿತಿಯ ಜವಾಬ್ದಾರಿಯಾಗಿತ್ತು.

ಈಗ ವಸ್ತುಸ್ಥಿತಿಯನ್ನು ನೋಡಿದರೆ ರಾಷ್ಟ್ರಭಾಷಾ ಪ್ರಚಾರ ಸಮಿತಿಯ ಕಾರ್ಯಾಲಯ ಆ ದೂರದ ವರ್ಧಾದಲ್ಲಿ. ಅಲ್ಲಿಯೇ ಸಮಿತಿಯ ಸ್ವಂತ ಪ್ರೆಸ್ಸು. ಸಮಿತಿಯ ಮಂತ್ರಿ ಆನಂದಜೀಯವರ ಸ್ಥಾಯಿ ನಿವಾಸವೂ ಅಲ್ಲಿಯೇ. ಆದರೆ ಸಮಿತಿಯ ಸಾಹಿತ್ಯ ನಿರ್ಮಾಣ ಯೋಜನೆಯ ಕೆಲಸ

ನಡೆಯುತ್ತಿರುವುದು ಸುಮಾರು ಎರಡು ಸಾವಿರ ಕಿಲೋಮೀಟರ್ ದೂರದ ಗಿರಿ ಪ್ರದೇಶದಲ್ಲಿ. ಮಸ್ಸೂರಿಯ ಪೇಟೆಯಿಂದಲೂ ಸಾಕಷ್ಟು ದೂರವಿರುವ ನಿರ್ಜನವನದಲ್ಲಿ. ರಾಹುಲರೇನೋ ಕಠಿಣ ಸಾಧನೆಗೆ ತಮ್ಮನ್ನು ಅರ್ಪಿಸಿಕೊಂಡವರು. ಆದರೆ ಸಹಕಾರ್ಯಕರ್ತರು ತಮ್ಮ ಹತ್ತನೇ ಒಂದಂಶದಷ್ಟು ಕಷ್ಟಪಟ್ಟು ಅಭ್ಯಾಸವಿಲ್ಲದವರು ಎಂದು ಅವರಿಗೆ ತಿಳಿಯಬೇಕಿತ್ತು. ಪರಿಣಾಮ ಶೀಘ್ರವೇ ಕಾಣಿಸಿಕೊಂಡಿತು. 'ಕಷ್ಟಗಳು ಎದುರಾಗ ತೊಡಗಿದುವು. ತಾವು ಕೆಲಸಕ್ಕಾಗಿ ಅಲ್ಲ, ಸಂಬಳಕ್ಕಾಗಿ ಕೆಲಸ ಮಾಡುವವರು ಎಂದು ಕೆಲವರ ಭಾವನೆಯಾಗಿತ್ತು. ಕೆಲಸಕ್ಕೆ ತೊಡಗಿ ಇನ್ನೂ ತಿಂಗಳು ಕಳೆದಿಲ್ಲ, ಸಂಬಳ ಹೆಚ್ಚಿಸುವ ಸಮಸ್ಯೆ ಎದ್ದಾಯಿತು'. ಒಂದಿಬ್ಬರಂತೂ ರಾಹುಲರನ್ನು 'ಶೋಷಕ'ನೆಂದೂ ನುಡಿದು ಬಿಟ್ಟರು. ಪರಸ್ಪರ ಕಿತ್ತಾಟವೂ ಸುರುವಾಯಿತು.

ಸಾಹಿತ್ಯ ನಿರ್ಮಾಣದ ವತಿಯಿಂದ ನಡೆದ ಕೆಲಸಗಳನ್ನು ಗಮನಿಸಬೇಕೆಂದರೆ: ಡಾ| ಸತ್ಯಕೇತು ಅವರು 'ಫ್ರೆಂಚ್ ಸ್ವಯಂಶಿಕ್ಷಕ' ಸಿದ್ಧಗೊಳಿಸಿದ್ದರು. ಇದಕ್ಕೆ ಕೊಂಚ ವಿಶೇಷ ಟೈಪಿನ ಅವಶ್ಯಕತೆಯಿತ್ತು. ಅವರ ವಿದುಷಿ ಪತ್ನಿ ಜೇದನ ಕಾದಂಬರಿ 'ಲಾ ಫೋತ್ವಾ'ವನ್ನು 'ಸಂಕರಾ ದ್ವಾರ್' ಎಂಬ ಹೆಸರಿನಲ್ಲಿ ಅನುವಾದ ಮಾಡಿದ್ದಳು. ಮಾರಿಷಸ್‌ನ ಮಾಧವ ವಾಜಪೇಯಿ, ರೋಮ್ಯಾರೋಲಾರ 'ಜಾನ್ ಕ್ರಿಸ್ಟಾಫ್'ನ ಅನುವಾದ ಮಾಡಲು ಒಪ್ಪಿಕೊಂಡಿದ್ದರು. ಒಂದು ಪುಟ್ಟ ಹಿಂದೀ ಕೋಶವೂ ತಯಾರಾಗುತ್ತ ಇತ್ತು. ಇನ್ನೂ ಅನೇಕ ಯೋಜನೆಗಳಿದ್ದವು.

ರಾಹುಲಜೀ ಮತ್ತು ಆನಂದಜೀಯವರ ಸಲಹೆ ಮೇರೆಗೆ ಸಾಹಿತ್ಯ ನಿರ್ಮಾಣದ ಈ ಯೋಜನೆಯನ್ನೇನೋ ಹಾಕಿಕೊಂಡಿದ್ದರೂ ಸಮಿತಿ ಇದನ್ನು ಕಾರ್ಯೋನ್ಮುಖಗೊಳಿಸಲು ಸಮರ್ಥವಿರಲಿಲ್ಲ: ಕೇವಲ ಇಚ್ಛೆ ಮತ್ತು ದುಡ್ಡಿನ ಬಲ ಮಾತ್ರದಿಂದಲೇ ಕೆಲಸವೆಲ್ಲ ನಡೆದು ಬಿಡುವುದಿಲ್ಲ. ಕೇವಲ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸುವಂತಹ ಈ ಸಮಿತಿಯ ಬಳಿಯಲ್ಲಿ ಸಾಹಿತ್ಯದ ವಿಕ್ರಯದ ಬಗ್ಗೆ ಏನೇನೂ ವ್ಯವಸ್ಥೆ ಇರಲಿಲ್ಲ.

ಸಮಿತಿಯ ಕೆಲಮಂದಿ ಮಸ್ಸೂರಿಗೆ ಬಂದಿದ್ದರು. ರಾಹುಲರಿಗೆ ಇಷ್ಟವಾದ ಕೆಲ ಮಂದಿ ವರ್ಧಾ ಸಮಿತಿಯಲ್ಲಿಯೂ ಕೆಲಸ ಮಾಡುತ್ತಿದ್ದರು. ಬಲಭದ್ರ ಠಾಕೂರರು ಇಲ್ಲಿದ್ದರು. ಪ್ರೆಸ್ ಕೆಲಸದಲ್ಲಿ ವಿಳಂಬವಾಗತೊಡಗಿದಾಗ ರಾಹುಲರು ನಾಗಾರ್ಜುನರನ್ನು ವರ್ಧಾಕ್ಕೆ ಕಳುಹಿಸಿ ಕೊಟ್ಟರು. 'ವಿನೋದ' ಅವರೂ ಸಾಹಿತ್ಯದ ಕೆಲಸದ ಮೇಲೆ ವರ್ಧಾಕ್ಕೆ ಹೋಗಿದ್ದರು.

ಸಮಿತಿಯ ಮುಖ್ಯ ಕಾರ್ಯಗಳೆಂದರೆ – ಹಿಂದಿಯೇತರ ಪ್ರದೇಶಗಳಲ್ಲಿ ತಮ್ಮ ಪ್ರಚಾರಕರ ಸಹಾಯದಿಂದ ಪರೀಕ್ಷೆಗಳನ್ನು ಏರ್ಪಡಿಸುವುದು, ಹಿಂದೀ ಪ್ರಚಾರ ಮಾಡುವುದು. ಆದರೆ ಈಗ ಸಾಹಿತ್ಯದ್ದೇ ಮೇಲುಗೈಯಾಗತೊಡಗಿತ್ತು. ಸಮಿತಿಯ ಬೆಳವಣಿಗೆಯಲ್ಲಿ ಆನಂದಜೀಯವರಿಗೆ ಸಹಾಯಕರಾಗಿದ್ದ ವ್ಯಕ್ತಿಗಳು ಖಂಡಿತವಾಗಿಯೂ ನಿಷ್ಠ ಕಾರ್ಯಕರ್ತರೇನೋ ಹೌದು, ಆದರೆ ಸಾಹಿತ್ಯದ ಕಡೆ ಅವರಿಗೆ ಒಲವು ಇರಲಿಲ್ಲ. ಈಗ ರಾಹುಲರಿಂದಾಗಿ ಕೆಲ ಅಪ್ಪಟ ಸಾಹಿತ್ಯ ಪ್ರೇಮಿಗಳು ಅಲ್ಲಿ ಸೇರಿಕೊಂಡು ಬಿಟ್ಟಿದ್ದರು. ಅವರು ಅಲ್ಲಿದ್ದ ಹಳೆಯ ಕಾರ್ಯಕರ್ತರೆದುರು ತಾವು ಸ್ವಲ್ಪ ವಿಶಿಷ್ಟರೆಂಬಂತೆ ನಡೆದುಕೊಳ್ಳುತ್ತಿದ್ದರು; ತಮ್ಮನ್ನು 'ಅಭಿಜಾತ'ರೆಂದುಕೊಂಡಿದ್ದರು. ಆನಂದಜೀ ಮತ್ತು ಅವರ ಕಾರ್ಯಕರ್ತರನ್ನು ಅವರು ಏಕೆ ಗೌರವಿಸಿದರು ? ಸಂಘರ್ಷ ಅನಿವಾರ್ಯವಾಗಿತ್ತು.

ಸಮ್ಮೇಳನ ಅಧ್ಯಕ್ಷರಾಗಿ ರಾಹುಲರ ಕಾರ್ಯಾವಧಿ ಮುಗಿದಾಗ ಸಮಿತಿಗೆ ರಾಜೀನಾಮೆ ಕೊಡುವ ತಮ್ಮ ಇಚ್ಛೆಯನ್ನು ಆನಂದಜೀ ಅನೇಕ ಸಲ ವ್ಯಕ್ತಪಡಿಸಿದ್ದರು. ಆದರೆ ರಾಹುಲರು ತಡೆದದ್ದರಿಂದ ಹಾಗೆ ಮಾಡಿರಲಿಲ್ಲ. ಈಗಲೋ, ಸಮಿತಿಯ ಒಳಜಗಳಗಳಷ್ಟೇ ಅಲ್ಲ. ಮಾತೃಸಂಸ್ಥೆಯಾದ ಹಿಂದೀ ಸಾಹಿತ್ಯ ಸಮ್ಮೇಳನ (ಪ್ರಯಾಗ) ಕೂಡ ನ್ಯಾಯಾಲಯದ ಬಾಗಿಲು ತಲುಪಿತ್ತು. ಅಂತಿಮವಾಗಿ ಆನಂದಜೀ ಸಮಿತಿಗೆ ರಾಜೀನಾಮೆ ಕೊಟ್ಟರು. ಅತ್ತ ಮಸ್ಸೂರಿಯಲ್ಲಿಯೂ ವರ್ಷಾಂತ್ಯದಲ್ಲಿ ಸಾಹಿತ್ಯ-ನಿರ್ಮಾಣ ಕಾರ್ಯವನ್ನು ಸಮಾಪ್ತಿಗೊಳಿಸಬೇಕಾಯಿತು. ಹೀಗೆ ಸಮಿತಿಯ ಸಾಹಿತ್ಯ ನಿರ್ಮಾಣ ಯೋಜನೆಯು ಅವಸ್ಥೆಯೂ ಸಮ್ಮೇಳನದ ಪಾರಿಭಾಷಿಕ ನಿರ್ಮಾಣ ಯೋಜನೆಯಂತೆಯೇ ಆಗಿ ಬಿಟ್ಟಿತು.

ಆದರೆ ರಾಹುಲರ ಸ್ವಂತ ಯೋಜನೆಗಳು, ಅನೇಕ ಪ್ರತಿಕೂಲ ಪರಿಸ್ಥಿತಿಗಳ ಹೊರತಾಗಿಯೂ ಪೂರ್ಣಗೊಳ್ಳುತ್ತಲೇ ಇದ್ದುವು. "ಗಢವಾಲ್"ನ ಹೆಚ್ಚಿನ ಭಾಗ ಬರೆದು ಮುಗಿಸಿದ್ದರು. ಈಗ ಅದರಲ್ಲಿ "ಕೇದಾರ-ಬದರೀ ಯಾತ್ರೆ"ಸೇರಿಸಬೇಕಿತ್ತು. "ಹಿಮಾಲಯ ಪರಿಚಯ ಪುಸ್ತಕ ಮಾಲಾ"ದ ಕುರಿತು ರಾಹುಲರು ಯಾವ ರೀತಿ ವ್ಯವಸ್ಥೆ ಮಾಡಿಕೊಂಡಿದ್ದರೆಂದರೆ ಪುಸ್ತಕದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಭಾಗವನ್ನು ಮೊದಲು ಬರೆದು ಬಿಡುವುದು, ಆ ಮೇಲೆ ಹಿಮಾಲಯ ಪ್ರದೇಶಗಳಲ್ಲಿ ಪ್ರವಾಸ, ಈ ಪ್ರವಾಸ ಅವರ ಎರಡನೆಯದೋ ಮೂರನೆಯದೋ ಆಗಿದ್ದೀತು-ಸಂಶೋಧನೆ ಮಾಡಿ ಅವನ್ನು ಪುಸ್ತಕಕ್ಕೆ ಸೇರಿಸುವುದು. "ಕುಮಾವೂಂ" ಬರೆಯುವಾಗ ಹೀಗೆಯೇ ಮಾಡಿದ್ದರು.

ಈಗ ರಾಹುಲರು 'ಗಢವಾಲ್' (ಕೇದಾರ)ನಲ್ಲಿದ್ದರು. 1951ರ ಮೇ ತಿಂಗಳ ಹೆಚ್ಚಿನ ಭಾಗವನ್ನು ಬದರೀ-ಕೇದಾರ ಯಾತ್ರೆಯಲ್ಲಿ ಕಳೆದರು. ಬದರೀ ಕೇದಾರ ಯಾತ್ರೆಯನ್ನು ಅವರು ಹಿಂದೆಯೇ ಒಮ್ಮೆ ಮಾಡಿದ್ದರು. ಆದರೆ ಈಗ, ಐವತ್ತೆಂಟರ ವಯಸ್ಸಿನಲ್ಲಿ, ಒಬ್ಬ ಪುರಾವಿದನ ಕಣ್ಣಿನಿಂದ ಗಢಭೂಮಿಯನ್ನು ನೋಡಬೇಕಿತ್ತು. ಎಲ್ಲ ಸಿದ್ಧತೆ ಮಾಡಿಕೊಂಡು ಮೇ 2ರಂದು ಒಬ್ಬರೇ ಮಸ್ಸೂರಿಯಿಂದ ಪ್ರವಾಸ ಹೊರಟರು. ರೈಫಲ್ ಮತ್ತು ರಿವಾಲ್ವರ್‌ನ ಲೈಸೆನ್ಸ್ ಸಿಕ್ಕಿತ್ತು. ರೈಫಲನ್ನು ಮೊದಲೇ ಕೊಂಡಿದ್ದರು. ಡೆಹರಾಡೂನಿಗೆ ಹೋಗಿ ಅಲ್ಲಿ ಒಂದು ಸಣ್ಣ ರಿವಾಲ್ವರನ್ನು ಕೊಂಡರು. ಇಡೀ ಯಾತ್ರೆಯುದ್ದಕ್ಕೂ ಈ ರಿವಾಲ್ವರ್ ಮತ್ತು ಕ್ಯಾಮರಾ ಜೊತೆಗೇ ಇದ್ದುವು.

"ಗಢವಾಲ"ದಲ್ಲಿ ಈ ಪ್ರವಾಸದ ವಿಸ್ತಾರವಾದ ಸಚಿತ್ರ ವಿವರಣೆ ಮತ್ತು 'ಜೀವನ ಯಾತ್ರಾ'ದಲ್ಲಿ ಸಂಕ್ಷಿಪ್ತ ವಿವರಣೆ ಸೇರಿಕೊಂಡಿವೆ. ಈ ಪ್ರವಾಸದಲ್ಲಿ ರಾಹುಲರು ದೇಗುಲ ಹಾಗೂ ವಿಗ್ರಹಳ ದಾಖಲೆ ಪಠಣ ಹಾಗೂ ಕಾಲ ಜ್ಞಾನಕ್ಕಾಗಿ ಬಹಳ ಪರಿಶ್ರಮಿಸಿದರು. ಸಾಮಾನು ಹೊರಲು ಹಾಗೂ ಅಡುಗೆ ಕೆಲಸಕ್ಕೆ ಒಬ್ಬ ನೇಪಾಳಿ ತರುಣ ಸಿಕ್ಕಿದ್ದ. ಮೊದಲು ಹೋದದ್ದು ಕೇದಾರನಾಥ ಮಂದಿರಕ್ಕೆ. "ನೋಡಿದಷ್ಟಕ್ಕೆ ತಿಳಿದು ಬರುವುದೇನೆಂದರೆ ನಾಲ್ಕನೆಯ ಶತಮಾನದಲ್ಲಿಯೇ ಇಲ್ಲಿ ಯಾವುದೋ ದೇವಸ್ಥಾನವಿತ್ತು. ಮತ್ತು ಅವತ್ತಿನ ಪಾಶುಪತರಿಗೆ ಅದು ಅತ್ಯಂತ ಪ್ರಮುಖ ಸ್ಥಳವಾಗಿತ್ತು. ಕೇದಾರಖಂಡ ಕ್ರಿಸ್ತಶಕದ ಆರಂಭದಿಂದಲೂ ಪವಿತ್ರವೆನಿಸಿ ಬಿಟ್ಟಿತ್ತು. ಹೀಗಾಗಿ ಇಲ್ಲಿ ಎಲ್ಲೆಲ್ಲಿಯೂ ಪುರಾತನ ಅವಶೇಷಗಳು ದೊರೆಯುತ್ತವೆ."

ಕೇದಾರನಾಥಕ್ಕೆ ಹೋಗುವ ಮೊದಲು ಉತ್ತರಾಖಂಡದ ಕುರಿತು ಚೆನ್ನಾಗಿ ತಿಳಿದಿದ್ದ ಪಂಡಿತ ವಿಶಾಲ ಮಣಿಯವರನ್ನು ಕಂಡಿದ್ದರು. ಅವರು ಕಾಳೀ ಮಠದಲ್ಲಿ ಅದ್ಭುತ ವಿಗ್ರಹಗಳಿರುವ ಬಗ್ಗೆ

ಹೇಳಿದ್ದರು. ಕೇದಾರದಿಂದ ಹಿಂದಿರುಗುತ್ತ ರಾಹುಲರು ಅವರ ಜೊತೆ ಕಾಳೀ ಮಠಕ್ಕೆ ಹೋದರು. ನಿಜವಾಗಿಯೂ ಅಲ್ಲಿ ಅನುಪಮ ವಿಗ್ರಹಗಳಿದ್ದುವು. ಕಾಳೀಮಠ ಎಲ್ಲಾ ಪಾಶುಪತರ ಕೇಂದ್ರವಾಗಿತ್ತು. ಅಲ್ಲಿನ ಮುಖ್ಯ ದೇವಾಲಯದಲ್ಲಿನ ಒಂದು ಶಿಲಾಲೇಖವನ್ನು ರಾಹುರಲು ಓದಿಕೊಂಡರು. ಅಲ್ಲಿನ ಒಂದು ವಿಗ್ರಹದ ಕುರಿತು: "ಗೌರೀ ಮಂದಿರದಲ್ಲಿ ನಲ್ವತ್ತು ಇಂಚು ಉದ್ದದ ಇಪ್ಪತ್ತನಾಲ್ಕು ಇಂಚು ಅಗಲದ ಹರಗೌರಿಯ ಅತ್ಯಂತ ಸುಂದರವಾದ ಶಿಲಾ ವಿಗ್ರಹ ಇತ್ತು. ಅದನ್ನು ನೋಡಿ ನಾನು ಆಶ್ಚರ್ಯಚಕಿತನಾದೆ. ಚತುರ್ಭುಜ ಶಿವ, ದ್ವಿಭುಜಳಾದ ಗೌರಿ, ಕೆಳಗೆ ಗಣಪತಿ ಮತ್ತು ಮಯೂರಾ ರೂಢ ಕಾರ್ತಿಕೇಯ. ದಾನಿಯನ್ನೂ ಮೂರ್ತಿಯ ಜೊತೆ ಕೆತ್ತಿದ್ದರು. ಹರಗೌರಿಯ ಇಷ್ಟು ಸುಂದರ ಅಖಂಡ ವಿಗ್ರಹ ಭಾರತ-ವರ್ಷದಲ್ಲಿ ಮತ್ತೆಲ್ಲಿಯೂ ಇರಲಿಕ್ಕಿಲ್ಲ" ಎಂದು ಬರೆದಿದ್ದಾರೆ.

ರಾಹುಲರು ಮುಂದೆ ಊಷೀ ಮಠ, ತುಂಗನಾಥ ಮತ್ತು ಗೋಪೇಶ್ವರ ಮೂಲಕವಾಗಿ ಬದರೀನಾಥದ ಮುಖ್ಯ ಮಾರ್ಗವನ್ನು ತಲುಪಿಕೊಂಡರು. ಇಲ್ಲಿಂದ ಮುಂದೆ ನೇಪಾಳೀ ತರುಣನನ್ನು ಬಿಟ್ಟು ಬಿಟ್ಟರು. ಮುಂದಿನ ಪಯಣದಲ್ಲಿ ಬೇರೆ ಜೊತೆಗಾರರಲ್ಲದೆ ಒಂದು ಕುದುರೆಯೂ ಸಿಕ್ಕಿತು. ಜೋಶೀಮಠ ಹಾದು ಬದರೀನಾಥಕ್ಕೆ ಹೋದರು. ಅಲ್ಲಿ ಅವರ ಗುರುತಿನವರು ಸಿಕ್ಕಿ ವಸತಿ-ಊಟ ಇತ್ಯಾದಿಗಳಿಗೆ ಒಳ್ಳೆಯ ವ್ಯವಸ್ಥೆಯಾಯಿತು.

ಬದರೀನಾಥ ವಾಸ್ತವವಾಗಿ ಬುದ್ಧ ವಿಗ್ರಹವೆಂದು ಅನೇಕರು ಹೇಳಿರುವುದನ್ನು ಕೇಳಿದ್ದರು ರಾಹುಲಜೀ. 'ನಿರ್ವಾಣ ದರ್ಶನ'ದ ಸಮಯ, ಅಂದರೆ ಸ್ನಾನ ಮಾಡಿಸುವಾಗ ವಿಗ್ರಹದ ಮೇಲಿದ್ದುದನ್ನೆಲ್ಲ ಕಳಚಿದ ಹೊತ್ತಿನಲ್ಲಿ, ಒಂದೂವರೆ ಮೀಟರ್ ದೂರದಿಂದ ಅದನ್ನು ನೋಡುವ ಅವಕಾಶವನ್ನು ರಾಹುಲರಿಗೆ ಮಾಡಿಕೊಟ್ಟರು. ಗರ್ಭಗೃಹದೊಳಗೆ ಪ್ರಮುಖ ಅರ್ಚಕ ನಂಬೂದರೀ ರಾವಲ ಮತ್ತು ಅವರ ಸಹಾಯಕ ಡಿಮರೀ ಪೂಜಾರಿ-ಈ ಇಬ್ಬರನ್ನು ಬಿಟ್ಟರೆ ಬೇರೆ ಯಾರಿಗೂ ಪ್ರವೇಶವಿರಲಿಲ್ಲ. ವಿಗ್ರಹವನ್ನು ಕೈಯಿಂದ ಮುಟ್ಟುವಂತಿರಲಿಲ್ಲ. ನಿರ್ವಾಣ ದರ್ಶನದ ನಂತರ ರಾಹುಲರು ನಿಷ್ಕರ್ಷೆ ಮಾಡಿದರು. "ಮೂರ್ತಿ ಪದ್ಮಾಸನಸ್ಥ ಭೂಮಿಸ್ಪರ್ಶ ಮುದ್ರಾಯುಕ್ತ ಬುದ್ಧನದು. ಇದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ."

ಮರುಪ್ರಯಾಣದಲ್ಲಿ ರಾಹುಲರು ಎರಡು ದಿನ ಡೆಹರಾಡೂನ್‌ನಲ್ಲಿ ತಂಗಿ ಇಪ್ಪತ್ತಮೂರು ದಿನಗಳ ಬಳಿಕ ಮೇ 26ರಂದು ಮಸ್ಸೂರಿಗೆ ವಾಪಸಾದರು. ಕಮಲಾಳ ಚಿಕ್ಕಪ್ಪನ ಮಗ ಮಂಗಲ ಸಿಂಹ ಕೂಡ ಬಂದು ಬಿಟ್ಟಿದ್ದರು. ಮಂಗಲ್ ತಾನು ಒಬ್ಬ ನುರಿತ ಟೈಪಿಸ್ಟ್ ಆಗಿ ತುಂಬ ಉಪಯೋಗಕ್ಕೆ ಬರುವವನೆಂದು ಶೀಘ್ರವೇ ತೋರಿಸಿ ಕೊಟ್ಟ.

ಬ್ಯಾಂಕ್ ಲೆಕ್ಕ ನೋಡಿ ರಾಹುಲರಿಗೆ ಚಿಂತೆಯಾಗ ತೊಡಗಿತು. ಪ್ರಯಾಗದ ಪ್ರಕಾಶಕರು ರಾಯಲ್ಟಿ ಲೆಕ್ಕದಲ್ಲಿ ರೂ.4,362-00 ಕಳುಹಿಸಿದಾಗ ಚಿಂತೆ ತುಸು ದೂರವಾಯಿತು. "ಆತ್ಮಗೌರವವನ್ನು ನಾನು ಅತ್ಯಂತ ದೊಡ್ಡ ಧನವೆಂದು ಎಣಿಸುವುದರಿಂದ ದುಡ್ಡು ನೀರಿನಂತೆ ಖರ್ಚಾಗುವುದು ನೋಡಿ ಆತಂಕವಾಗುತ್ತದೆ. ಇನ್ನೂ ಹೆಚ್ಚಿಗೆ ಹೇಳಬೇಕೆಂದರೆ ಆತ್ಮಗೌರವವನ್ನು ಪ್ರಾಣಕ್ಕಿಂತಲೂ ಮಿಗಿಲೆಂದು ಭಾವಿಸುವವನು ನಾನು. ಖರ್ಚಿನ ಮೇಲೆ ನಿಯಂತ್ರಣವಿಡಲು ಅನೇಕ ಬಾರಿ ಪ್ರಯತ್ನಿಸಿದೆ. ಆದರೆ ತಿಂಗಳಿಗೆ ಐನೂರು ರೂಪಾಯಿಗಿಂತ ಕಡಿಮೆ ಖರ್ಚಿನ ಸಂಭವವೇ ಇಲ್ಲ. ವರ್ಷಾಂತ್ಯದಲ್ಲಿ ಎಷ್ಟು ಕಡಿಮೆ ಉಳಿದಿತ್ತೆಂದರೆ ಕೆಲಸದವನಿಗೆ ರಜೆ ಕೊಡಬೇಕಾಯಿತು."

ರಾಹುಲರು 1926ರಲ್ಲಿ ಲಡಾಖ್ ಪ್ರವಾಸದಿಂದ ಹಿಂದಿರುಗುವಾಗ ಹನ್ಲೇ ವಿಹಾರದ ಲಾಮಾ ಲಾಸಾದ ಸೇಂಗ್‌ಟುಕ್ ಎಂಬ ಹೆಸರಿನ ಹೆಣ್ಣು ನಾಯಿಯನ್ನು ಉಡುಗೊರೆ ಕೊಟ್ಟಿದ್ದರಷ್ಟೆ. ಆದರೆ ಮಾರ್ಗ ಮಧ್ಯೆ ಸೇಂಗ್‌ಟುಕ್ ಊಟ-ಪಾನ ಬಿಟ್ಟು ತೀರಿಕೊಂಡಿತ್ತು. ಆಗ ರಾಹುಲರು ತೀವ್ರವಾಗಿ ಶೋಕಿಸಿದ್ದರು. ಈಗ ಮಸ್ಸೂರಿಯ ಮಂಗಗಳಿಂದ ತನ್ನ ತರಕಾರಿ ರಕ್ಷಿಸಿಕೊಳ್ಳಲು ಒಂದು ನಾಯಿ ಇರಲಿ ಎಂದು ಯೋಚಿಸಿದರು. ಕಿಸನ್ ಸಿಂಹನ ಸಹಾಯದಿಂದ ಒಂದು ಆಲ್ಸೇಶಿಯನ್ ನಾಯಿ ಮರಿ ಸಿಕ್ಕಿತು. ಮನೆಯ ಗೃಹಿಣಿ ಸಿಟ್ಟಿನಿಂದ ಆ ನಾಯಿ ಮರಿಗೆ 'ಭೂತ' ಎಂದು ಹೆಸರಿಟ್ಟಳು. ಈ ಭೂತನಾಥ ಶೀಘ್ರವೇ ರಾಹುಲ ಕುಟುಂಬದ ಒಂದು ಭಾಗವೇ ಆಗಿಬಿಟ್ಟ.

ರಾಹುಲರು ಭಾನುವಾರದ ದಿನವನ್ನು ಭೇಟಿಗೆ ಬಂದು ಹೋಗುವವರಿಗಾಗಿ ಮೀಸಲಿಟ್ಟಿದ್ದರು. ಮಸ್ಸೂರಿಯ ಪ್ರವಾಸಕ್ಕೆ ಅನುಕೂಲವಾದ, ಎರಡು ಋತುಗಳಿವೆ. ಮೇ, ಜೂನ್ ಮತ್ತು ಅಕ್ಟೋಬರ್. ಆಗ ಅನೇಕ ಮಂದಿ ಭೇಟಿಗೆ ಬರುತ್ತಿದ್ದರು. ರವಿವಾರವಂತೂ ಆ ಸಂಖ್ಯೆ ಅತ್ಯಧಿಕ. "ಹೆಚ್ಚಾಗಿ ನಾವು ಚಹದ ವ್ಯವಸ್ಥೆ ಮಾಡಬೇಕಾಗುತ್ತಿತ್ತು. ಸ್ವಾಗತ, ಉಪಚಾರ, ಚಹಾಪಾನ ಮತ್ತು ಭೋಜನ ಈ ಎಲ್ಲದರಲ್ಲಿ ಎಷ್ಟು ಸಂತೋಷ ಸಿಗುತ್ತದೆ; ಆದರೆ ಖಾದ್ಯ ಸಾಮಗ್ರಿ ದುರ್ಲಭ ಹಾಗೂ ತುಟ್ಟಿಯಾಗಿ ಬಿಟ್ಟಿತ್ತು". ಹೀಗಿತ್ತು, ಹಿಂದಿಯ ವಿಖ್ಯಾತ ಲೇಖಕ ಧುರಂಧರ ಮಹಾಪಂಡಿತ ರಾಹುಲ ಸಾಂಕೃತ್ಯಾಯನ ಅವರ ಆರ್ಥಿಕ ಸ್ಥಿತಿ.

ಪ್ರವಾಸಿಗರ ಋತುವಿನಲ್ಲಿ ಪಂಡಿತ ಕನ್ಹೈಯಾಲಾಲ ಮಿಶ್ರ 'ಪ್ರಭಾಕರ' ಅವರು ಬಂದು ಸಮೀಪದ "ಹರ್ನ್ ಹಿಲ್"ನಲ್ಲಿ ತಂಗಿದರು. ಜೂನ್‌ನಲ್ಲಿ ಶ್ರೀಮತಿ ಸತ್ಯವತೀ ಮಲ್ಲಿಕ ತಮ್ಮ ಪುತ್ರ ಮತ್ತು ಸೋದರಿಯ ಮಗನ ಜೊತೆ ಬಂದರು. ಛಪರಾದಲ್ಲಿನ ಹಳೆಯ ಪರಿಚಯದ ವೈದ್ಯ ರಾಮರಕ್ಷ ಪಾಠಕ್ ಮತ್ತು ಡಾ| ಶಿವದಾಸ ಸೂರ ಮಸ್ಸೂರಿಗೆ ಬಂದವರು ಅನೇಕ ಸಲ ಸಿಕ್ಕಿದರು. ಭೈಯ್ಯಾ (ಹರಿಶರಣಾನಂದ) ಮತ್ತು ಭಾಭೀ (ಜಾನಕೀ ದೇವೀ) ಜುಲೈ ಮಧ್ಯದಲ್ಲಿ ಬಂದು "ಲಕ್ಸ್‌ಮೌಂಟ್"ನಲ್ಲಿ ತಂಗಿದರು. ಆಗಸ್ಟ್‌ನಲ್ಲಿ ಮಸ್ಸೂರಿಗೆ ಬಂದ ಬ್ಯಾರಿಸ್ಟರ್ ಮುಕುಂದೀ ಲಾಲ್ ಅಂತೂ ಭೇಟಿಯಾಗುತ್ತಲೇ ಇದ್ದರು. ಸೆಪ್ಟೆಂಬರ್‌ನಲ್ಲಿ ಬಂದ ಮಹಮೂದ್ ಜಫರ್ ಮತ್ತು ಡಾ| ರಶೀದ್ ಜಹಾಂ ಅವರೊಡನೆ ಕೊಂಚ ಹೊತ್ತು ಮಾತ್ರ ಮಾತುಕತೆ ಸಾಧ್ಯವಾಯಿತು. ಅಕ್ಟೋಬರದ ಕೊನೆಗೆ ಭೈಯ್ಯಾ-ಭಾಭೀ ಮಸ್ಸೂರಿಯಿಂದ ಹೊರಟು ಹೋದರು. ಕಾಶ್ಮೀರ ಕುಟುಂಬದ ಸುಸಂಸ್ಕೃತ ಮಹಿಳೆ ಮೋಹಿನೀ ಜುಲ್ಶೀಯ ಪರಿಚಯವಾಯಿತು.

ದಶಂಬರ್ 4ರಂದು ಲಾಸಾದಿಂದ ಗೇಶೇ ಧರ್ಮವರ್ಧನರ ನಿಧನ ವಾರ್ತೆ ಹೊತ್ತ ಪತ್ರ ಬಂತು. ರಾಹುಲರು ಒಮ್ಮೆಗೇ ಉದ್ಗರಿಸಿದರು "ದುಃಖ ಎಲ್ಲಿ ಎಂದರೆ ಮೊಗ್ಗು ಅರಳದೇನೇ ಕಮರುವಲ್ಲಿ". ದಶಂಬರ್‌ದ ಕೊನೆಗೆ ಆನಂದಜೀ ಬಂದರು. ಸಮಿತಿಯ ಮಂತ್ರಿಪದ ಬಿಡುವ ನಿರ್ಧಾರ ತಿಳಿಸಿ ಮರುದಿನವೇ ವಾಪಸು ಹೊರಟು ಹೋದರು.

ಇಡೀ ವರ್ಷದಲ್ಲಾದ ಬರವಣಿಗೆಯ ಕೆಲಸ ಸಂತೋಷ ನೀಡಿತ್ತು. "ಗಢವಾಲ" ಮತ್ತು "ಕುಮಾವ್ರೂಂ" ಪೂರ್ತಿಯಾಗಿದ್ದುವು. ಐನೀಯ ಕಾದಂಬರಿ "ಅದೀನಾ" ಅದೇ ವರ್ಷದ "ಮಾಯಾ" ಪತ್ರಿಕೆಯ ಒಂದು ಅಂಕದಲ್ಲಿ ಪೂರ್ತಿ ಪ್ರಕಟವಾಯಿತು. 1951ರಲ್ಲಿ ಆದ ಅತ್ಯಂತ ಮುಖ್ಯ ಕೆಲಸವೆಂದರೆ "ಮಧ್ಯ-ಏಶಿಯಾ ಕಾ ಇತಿಹಾಸ್" ಬರವಣಿಗೆಯನ್ನು ಕೈಗೆತ್ತಿಕೊಂಡದ್ದು. 1952ರ ಕೊನೆಗೆ ಈ ಗ್ರಂಥದ ಎರಡೂ ಭಾಗಗಳು ಪೂರ್ತಿಯಾದವು.

"ಮೇರೀ ಜೀವನ ಯಾತ್ರಾ"ದ ಎರಡನೇ ಭಾಗದಲ್ಲಿ ಅಕ್ಟೋಬರ್ 1944ರ ವರೆಗಿನ ಚಿತ್ರಣವಿದೆ. ರಾಹುಲರು ಆ ನಂತರದ ತಮ್ಮ ಜೀವನ ಕತೆಯನ್ನು ಬರೆಯಲಿಲ್ಲ. ಆ ವರ್ಷ "ರೂಸ್ ಮೇಂ ಪಚ್ಚೀಸ್ ಮಾಸ್" ಬರೆಯಲು ತೊಡಗಿ, ಅದನ್ನು ಒಂದು ತಿಂಗಳಲ್ಲಿ ಮುಗಿಸಿಯೂ ಬಿಟ್ಟರು. ಈಗ ಅವರು ಮಂಗಲ ಸಿಂಹನಿಂದ ನೇರ ಟೈಪ್‌ರೈಟರ್‌ನಲ್ಲಿ ಬರೆಸುತ್ತಿದ್ದರು. "ಯಾತ್ರಾ ಕೇ ಪನ್ನೇ"ಗಾಗಿ ಹಿಂದಿನ ಉಳಿದೆಲ್ಲ ಯಾತ್ರೆಗಳ ಕುರಿತು ಬರೆಸಲಾರಂಭಿಸಿದರು.

ರಾಹುಲರ ರಾಜಕೀಯ ಜೀವನದ ಅನೇಕ ಜೊತೆಗಾರರು ಈಗ ಉನ್ನತ ಸರಕಾರೀ ಪದವಿಗಳಲ್ಲಿದ್ದರು. ಆದರೆ ಸ್ವಂತಕ್ಕಾಗಿ ಅವರೊಂದಿಗೆ ಸಂಪರ್ಕವಿರಿಸಿಕೊಳ್ಳುವುದು ರಾಹುಲರ ಧೋರಣೆಗೆ ವಿರುದ್ಧವಾಗಿತ್ತು. ಆದರೆ ಇದು ರಾಷ್ಟ್ರಪತಿ ರಾಜೇಂದ್ರ ಬಾಬು ಒಬ್ಬರ ಮಟ್ಟಿಗೆ ತಮ್ಮ ಈ ಧೋರಣೆ ಅನ್ವಯವಾಗಿರಲಿಲ್ಲ. ತನ್ನ-ಅವರ ಹಳೆಯ ನಂಟಿನಿಂದ ಸಾರ್ವಜನಿಕ ಕೆಲಸಗಳಿಗಾಗಿ ರಾಜೇಂದ್ರ ಪ್ರಸಾದರಿಗೆ ಯಾವಾಗ ಪತ್ರ ಬರೆಯಲೂ ಅವರಿಗೆ ಸಂಕೋಚವೆನಿಸುತ್ತಿರಲಿಲ್ಲ. ಕುಲೂ-ಲಾಹುಲ್‌ನ ಗಡಿ ಪ್ರದೇಶವಾದ ಜಾನ್‌ಸ್ಕರ್‌ನ ಭೋಟ್ ಭಾಷೆಯಾಡುವ ಬೌದ್ಧಧರ್ಮೀಯರು ಹಸಿವಿನಿಂದ ಸಾಯುತ್ತಿದ್ದಾರೆ ಎಂದು ತಿಳಿದು ಬಂದದ್ದೇ ಅವರು ಈ ಬಗ್ಗೆ ರಾಜೇಂದ್ರ ಬಾಬೂಗಳಿಗೆ ಬರೆದರು. ನೆರವು ಕಳಿಸಲಾಗಿದೆ ಎಂದು ಅವರಿಂದ ಉತ್ತರ ಬಂತು. ರಾಜೇಂದ್ರ ಬಾಬೂ ಅವರಿಗೆ ರಾಹುಲರ ಮೇಲೆ ಅಪಾರ ಆದರಾಭಿಮಾನಗಳಿದ್ದವು.

ಸದಾಕಾಲ ರಾಹುಲರು ಓದು ಬರವಣಿಗೆಯಲ್ಲಿಯೇ ಮುಳುಗಿರುತ್ತಾರೆ ಅಂತೇನಿಲ್ಲ. ಜನ ಜೀವನದೊಳಗೂ ಅವರು ಅಷ್ಟೇ ಸಹಜವಾಗಿ ಬೆರೆಯುತ್ತಿದ್ದರು. ಅದೇ ವರ್ಷ ಪಹಾಡೀ ದೀಪಾವಳಿ ಉತ್ಸವದಲ್ಲಿ ಭಾಗವಹಿಸಲು ಮಸ್ಸೂರಿಯಿಂದ ಮೂರು ನಾಲ್ಕು ಕಿಲೋಮೀಟರ್ ದೂರದ ಕಂಡೀ ಗಾಂವ್‌ಗೆ ಹೋದರು. ಉತ್ಸವದಲ್ಲಿ ಸ್ತ್ರೀ-ಪುರುಷರೆಲ್ಲರೂ ಮದ್ಯಪಾನ ಮಾಡಿ ಹಾಡು ಕುಣಿತದಲ್ಲಿ ತಲ್ಲೀನರಾಗಿದ್ದರು. ರಾಹುಲರೋ, ಜೀವಮಾನವಿಡೀ ಮದ್ಯಪಾನದಿಂದ ದೂರವಿದ್ದವರು; ಬರೆಯುತ್ತಾರೆ 'ಮೂರೂವರೆ ಸಾವಿರ ವರ್ಷಗಳ ಹಿಂದೆ ಸಪ್ತಸಿಂಧುವಿನ ಆರ್ಯರು ಸೋಮರಸ ಕುಡಿದು ಇದೇ ರೀತಿಯಲ್ಲಿ ಮನೋರಂಜನೆಯಲ್ಲಿ ಮಗ್ನರಾಗುತ್ತಿದ್ದರೇನೋ?'

ರಾಹುಲರು ಈಗ 'ಗೃಹಪತಿ'. ಮನೆ ಯಜಮಾನನಾದವನ ಕರ್ತವ್ಯಗಳ, ವಿಶೇಷತ: ಅತಿಥಿ ಸತ್ಕಾರದ ಪಾಲನೆ ಮಾಡುವುದು ಅವಶ್ಯ ಎಂದೆನಿಸುತ್ತಿದ್ದರು. ಜೀವನವಿಡೀ ತಾವು ಪಡೆದ ಆತಿಥ್ಯದ ಸ್ವಲ್ಪಾಂಶವನ್ನಾದರೂ ತೀರಿಸಲು ತಮಗೆ ಸಾಧ್ಯವಾದೀತೇ ಎಂದು ಯೋಚಿಸುತ್ತಿದ್ದರು. ಆದರೆ 1951ನೆಯ ಇಸವಿಯ ಕೊನೆಯ ತಿಂಗಳಲ್ಲಿ ಒಟ್ಟು ಉಳಿದದ್ದು 1550ರುಪಾಯಿ. ಮುಂದಿನ ಬೇಸಗೆಯಲ್ಲಿ ಬರಲಿರುವ ಅತಿಥಿಗಳ ಬಗ್ಗೆ ಯೋಚನೆಯಾಗತೊಡಗಿತು. ಸತ್ಕಾರ ಕೇವಲ 'ತೃಣಾನಿ ಭೂಮಿರುದಕಂ ವಾಕ್ಚತುರ್ಥೀ'ಯಷ್ಟೇ ಆಗದಿರಲಿ ಎಂದು ಚಿಂತಿಸಿದರು.

# ನೇಪಾಳ ಪ್ರವಾಸ

ಒಂದು ಕಾಲದ ಸಂಚಾರಿರಾಜ ರಾಹುಲರು ಈಗ ಹೆಚ್ಚು ಕಡಿಮೆ ಕ್ಷೇತ್ರ ಸನ್ಯಾಸ ತೆಗೆದುಕೊಂಡು ಮಸ್ಸೂರಿಯಲ್ಲಿದ್ದರು. ಊರೂರುಗಳಿಂದ ಆಮಂತ್ರಣ-ಕರೆಗಳು ಬರುತ್ತಿದ್ದರೂ ಅವನ್ನೆಲ್ಲ ಸ್ವೀಕರಿಸಲು ಈಗವರಿಗೆ ಸಾಧ್ಯವಿರಲಿಲ್ಲ. 1952ನೇ ವರ್ಷವಿಡೀ ಅವರು ಮಸ್ಸೂರಿಯಿಂದ ಹೊರಗೆ ಎಲ್ಲಿಗೂ ಹೋಗಲಿಲ್ಲ. ಆ ವರ್ಷ ಜನವರಿಯಲ್ಲಿ ಅವರ ದಿನಚರಿಯೆಂದರೆ: ಏಳು ಕಾಲು ಗಂಟೆಗೆ ಎದ್ದು, ಪ್ರಾತರ್ವಿಧಿ ಮುಗಿಸಿ, ಸ್ವಲ್ಪ ಕೆಲಸ, ನಂತರ ಚಹಾ. ಹನ್ನೊಂದು ಗಂಟೆಯವರೆಗೆ ಕಮಲಾಗೆ ಪಾಠ ಹೇಳುವುದು, ಬರೆಸುವುದು. ಆ ಬಳಿಕ ಸ್ವಾಧ್ಯಾಯ. ಅಥವಾ ಸಂಶೋಧನೆ. ಒಂದರಿಂದ ಒಂದೂವರೆಯ ವರೆಗೆ ಊಟ. ಬಳಿಕ ಟಪ್ಪಾಲು ಹಾಗೂ ಪತ್ರ-ಪತ್ರಿಕೆಗಳನ್ನು ಓದುವುದು. ನಾಲ್ಕೂವರೆ-ಐದಕ್ಕೆ ಸಂಜೆಯ ಚಹಾ. ಬರೆದಿಟ್ಟ ಪುಸ್ತಕಗಳನ್ನು ತಿದ್ದುವುದು. ಸಂಜೆ ಎಂಟೂವರೆಗೆ ಭೋಜನ, ಏನಾದರೂ ಓದುವುದು, ಓದಿಸುವುದು ಅಥವಾ ಬರೆಯುವುದು, ಒಂಭತ್ತು ಗಂಟೆಗೆ ರೇಡಿಯೋ ಸಮಾಚಾರ ಕೇಳುವುದು. ಮತ್ತೆ ಒಂದೆರಡು ಗಂಟೆ ಓದಿ, ಸುಮಾರು ಹನ್ನೊಂದು ಗಂಟೆಗೆ ಮಲಗುವುದು.

ಪತ್ನಿಯನ್ನು ಸ್ವಾವಲಂಬಿಯಾಗಿಸುವುದು ಹೇಗೆಂಬುದೇ ರಾಹುಲರಿಗೆ ಈಗಿದ್ದ ಒಂದು ದೊಡ್ಡ ಚಿಂತೆ. ರಾಹುಲರೊಂದಿಗೆ ನಿಕಟ ಸಂಪರ್ಕಕ್ಕೆ ಬರುವ ಮುಂಚೆಯೇ ಅವಳು ಮೆಟ್ರಿಕ್ ಮುಗಿಸಿದ್ದಳು. ನಂತರ 'ವಿಶಾರದ' ಮಾಡಿಕೊಂಡಳು. ಈ ವರ್ಷ ಇಂಟರ್ ಪರೀಕ್ಷೆಯನ್ನು ಪಾಸು ಮಾಡಿದ್ದಳು. ಇನ್ಸುಲಿನ್ ಬಿಡದೆ ತೆಗೆದುಕೊಳ್ಳುವಲ್ಲಿ ರಾಹುಲರಿಗೆ ತುಂಬ ನೆರವಾಗುತ್ತಿದ್ದಳು.

ಜನವರಿ ಎರಡನೆಯ ವಾರ ದೇಶದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯ ಫಲಿತಾಂಶಗಳು ಹೊರ ಬಿದ್ದವು. ವಾಮ ಪಂಥೀಯರ ಪರಸ್ಪರ ಜಗಳದಿಂದಾಗಿ ಉತ್ತರ ಪ್ರದೇಶ ಮತ್ತು ಬಿಹಾರಗಳಲ್ಲಿ ಕಾಂಗ್ರೆಸ್ ಭಾರೀ ಜಯ ಗಳಿಸಿತು. ಒಂದು ಕಾಲದಲ್ಲಿ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದವರಾದ್ದರಿಂದ ವಾಮಪಂಥೀಯರ ಸೋಲಿನ ಕಾರಣಗಳನ್ನು ರಾಹುಲರು ಸಮರ್ಥವಾಗಿ ಗ್ರಹಿಸಬಲ್ಲವರಾಗಿದ್ದರು. 'ಕಮ್ಯುನಿಸ್ಟರ ನಿಷ್ಕ್ರಿಯತೆ ಹೀಗೆ ತೊಲಗೀತು? ವಾಸ್ತವವಾಗಿ ಅವರಲ್ಲಿ ಒಂದು ಬಗೆಯ ಪಂಥ ಸಂಕುಚಿತತೆ ಇದೆ. ತಮ್ಮ ವಿಚಾರ ಮತ್ತು ಮಿತ್ರ ಸಮೂಹದ ಒಂದು ಕೋಶ ಮಾಡಿಕೊಂಡು ಅದರೊಳಗೆ ಇದ್ದು ಬಿಡುವುದರಲ್ಲೇ ಅವರು ಸಂತೋಷ ಕಾಣುತ್ತಾರೆ. ಅವರು ಜನಸಾಮಾನ್ಯರ ನಡುವೆ ಹಾಗೂ ಹಳ್ಳಿಗಳಿಗೆ ನುಗ್ಗಬೇಕು – ಹೇಗೆ ಮಾಂಸದ ಒಳಗೆ ಎಲುಬು ತನ್ನನ್ನು ಮರೆ ಮಾಡಿಕೊಂಡು ಒಂದಾಗಿ ಇರುತ್ತದೆ, ಹಾಗೆಯೇ. ಇನ್ನೂ ಅವರು ಜನಭಾಷೆಗಳ ಮೂಲಕ ಜನರೊಡನೆ ಬೆರೆಯುವ ಪ್ರಯತ್ನ ಮಾಡಿಯೇ ಇಲ್ಲ. ಲೋಕ ಭಾಷೆಗಳಲ್ಲಿ ತಮ್ಮ ಸಾಹಿತ್ಯವನ್ನು ಸಿದ್ಧ ಮಾಡಿಲ್ಲ.'

ರಾಹುಲರು ಹಿಂದೀ ಸಾಹಿತ್ಯ ಸಮ್ಮೇಳನದ (1947) ಅಧ್ಯಕ್ಷರಾಗಿದ್ದಾಗ ಅದರ ಅಂತರ್ಯದಲ್ಲಾಗಲೀ ಗುಂಪುಗಾರಿಕೆ ಸುರುವಾಗಿಬಿಟ್ಟಿತ್ತು. ರಾಹುಲರ ಜೊತೆ ಡಾ। ಉದಯ ನಾರಾಯಣ ತಿವಾರಿ ಬಹಳ ಕಷ್ಟದಿಂದಲೇ ಪ್ರಧಾನ ಮಂತ್ರಿಯಾಗಿ ಚುನಾಯಿತರಾಗಿದ್ದರು. ಪ್ರಯಾಗದವರು-ಪ್ರಯಾಗದವರಲ್ಲ, ಯುನಿವರ್ಸಿಟಿಯವರು-ಯುನಿವರ್ಸಿಟಿಯವರಲ್ಲ, ದಾರಾ ಗಂಜಿನವರು-ದಾರಾಗಂಜಿನವರಲ್ಲ, ಇಂತಹ ಭೇದಗಳು ಹುಟ್ಟಿಕೊಂಡಿದ್ದುವು. ಮತ್ತೂ ಇದು ಮುಂದೆ ಸಾಗಿ ಪ್ರಕಾಶಕರು-ಪ್ರಕಾಶಕರಲ್ಲ ಎಂಬಷ್ಟರ ಮಟ್ಟಿಗೂ ಬೆಳೆದುಕೊಂಡಿತು. ಪಂಡಿತ ಜಯಚಂದ ವಿದ್ಯಾಲಂಕಾರರು ಅಧ್ಯಕ್ಷರಾದ ಬಳಿಕ ಈ ಭೇದ ಉಗ್ರ ಸಂಘರ್ಷದ ರೂಪತಾಳಿತು. ರಾಹುಲರು ಸಮ್ಮೇಳನದ ಸ್ಥಾಯಿ ಸಮಿತಿಯ ಸದಸ್ಯರಾಗಿದ್ದರು. ಮಾರ್ಚ್ (1952) ನಲ್ಲಿ ಒಂದು ದಿನ ಅವರಿಗೆ ಕೋರ್ಟಿನಿಂದ ಸಮನ್ ಬಂತು. ಸಮ್ಮೇಳನದ ಮೇಲೆ ಜಯಚಂದಜೀ ಮೊಕದ್ದಮೆ ಹೂಡಿದ್ದಾರೆಂದು ತಿಳಿದದ್ದು ಆಗಲೇ. ಜಯಚಂದಜೀ ರಾಹುಲರ ಹಳೆಯ ಸ್ನೇಹಿತರಾಗಿದ್ದವರು, ಆದರೂ ರಾಹುಲರು ಸ್ಪಷ್ಟವಾಗಿ ಬರೆಯುತ್ತಾರೆ 'ನನ್ನ ದೃಷ್ಟಿಯಲ್ಲಿ ಯಾವನೇ ಒಬ್ಬ ಗೌರವಾನ್ವಿತ ಸಾಹಿತಿ ಈ ರೀತಿ ಮಾಡುವುದು ಖಂಡಿತ ಯುಕ್ತವಲ್ಲ. ಅವರಿಗೇನು ಕೆಲಸವಿರಲಿಲ್ಲವೇ, ತಾನೇ ಮುಂದೆ ನಿಂತು ಸಮ್ಮೇಳನವನ್ನು ಮೊಕದ್ದಮೆಯ ಆಖಾಡ ಮಾಡಿಡಲು?'

1952, ಎಪ್ರಿಲ್ 9 ರಂದು ರಾಹುಲರ ಜನ್ಮದಿನ. ಅದಕ್ಕೂ ಹಿಂದೆ ಜನ್ಮದಿನ ಆಚರಿಸುವಲ್ಲಿ ಅವರಾಗಲೀ ಅವರ ಮಿತ್ರರಾಗಲೀ ಗಮನ ಹರಿಸಿದವರಲ್ಲ. ಆದರೆ ಆ ದಿನ ಪತ್ನಿ ಕಮಲಾ ಅವರ ಜನ್ಮದಿನ ಆಚರಿಸಲು ನಿಶ್ಚಯಿಸಿದಳು. ಮಧ್ಯಾಹ್ನ ಒಂದು ಸಣ್ಣ ಪಾರ್ಟಿ ನಡೆಯಿತು. ಸತ್ಯಕೇತು ಕುಟುಂಬ ಮತ್ತು ಇಬ್ಬರು ಮೂವರು ಇತರ ಆತ್ಮೀಯರು – ಇಷ್ಟೇ ಜನ. ಮೊದಲ ಸಲ ಜನ್ಮದಿನದ ಆಚರಣೆ, ರಾಹುಲರಿಗೆ ಕೊಂಚ ವಿಚಿತ್ರವೆನಿಸಿತ್ತು.

ಮೇ, ಜೂನ್‌ನ ಪ್ರವಾಸಿಗರ ಕಾಲ ಆಗಮಿಸುತ್ತಿದ್ದಂತೆ ತಮ್ಮ ಭೇಟಿಗಾಗಿ ಬರುವವರ ಮತ್ತು ಅತಿಥಿಗಳ ಆಗಮನ ಸುರು. ಈ ಬಾರಿ ಧೂಪನಾಥರು, ಬಲಭದ್ರ ಠಾಕೂರರು, ಸ್ವಾಮಿ ಸತ್ಯಸ್ವರೂಪರು ಎಲ್ಲ ಬಂದರು. ಕಳೆದ ಸಲ ಜೋಧಪುರದ ಜಾಗೀರುದಾರಿಣಿ ಠಾಕುರಾನೀ ಗುಲಾಬ್ ಕುಮಾರಿ ಭಾರೀ ಠಾಕು ಠೀಕಿನಿಂದ ಮಸ್ಸೂರಿಗೆ ಆಗಮಿಸಿದ್ದಳು. ರಾಹುಲರನ್ನೂ ಭೋಜನಕ್ಕೆ ಆಹ್ವಾನಿಸಿದ್ದಳು. ಈ ಸಲ ಅವಳ ಠೀವಿ ತುಸು ಕ್ಷೀಣಿಸಿತ್ತು. ಕೆಲ ದಿನಗಳ ಬಳಿಕ ಗುಜರಾತಿನ ರಾಣಿ ಬೇರಿಯಾಳ ಪರಿಚಯವಾದಾಗ ರಾಹುಲರಿಗೆ ಶತಮಾನಗಳಷ್ಟು ಹಳೆಯ ಸಾಮಂತ ಜೀವನ ಅಸ್ತಮಾನವನ್ನು ಸಮೀಪಿಸುತ್ತಿದೆ ಎಂದೆನಿಸಿತು. ಸಮಯವಾದರೆ ಸಾಮಂತ ಬದುಕಿನ ಅವಶೇಷಗಳ ಬಗ್ಗೆ ಬರೆಯಬೇಕು ಎಂದುಕೊಂಡವರು ಮೇ ತಿಂಗಳ ಕೊನೆಯ ವಾರದಲ್ಲೆ 'ರಾಜಸ್ಥಾನೀ ರಾಣಿವಾಸ' ಬರೆಯಲು ಸಹ ತೊಡಗಿಬಿಟ್ಟರು.

ಒಂದು ಕಾಲದಲ್ಲಿ ರಾಹುಲರಿಗೆ ಫಿಲ್ಮ್ ನೋಡುವುದರಲ್ಲಿ ಬಹಳ ಆಸಕ್ತಿ ಇತ್ತು. ಆದರೆ ನೋಡಿದ ಫಿಲ್ಮ್‌ಗಳಲ್ಲಿ ಹೆಚ್ಚಿನವು ಅವರಿಗೆ ಇಷ್ಟವಾಗಿರಲಿಲ್ಲ. ಈಗ ಪೃಥ್ವೀರಾಜ-ರಾಜ ಕಪೂರರ ಹೊಸ ಫಿಲ್ 'ಅವಾರಾ' ಬಂತು, ಹೋಗಿ ನೋಡಿದರು. ಫಿಲ್ಮ್ ಚೆನ್ನಾಗಿದೆ ಅನಿಸಿ ಸಂತೋಷಪಟ್ಟರು.

'ಹರ್ನ್ ಕ್ಲಿಫ್'ಗೆ ಬಂದು ಎರಡು ವರ್ಷಗಳು ಕಳೆಯುತ್ತಿದ್ದಂತೆ ಅದರ ದೋಷಗಳೂ ಗೋಚರವಾಗ ತೊಡಗಿದವು. ಸುಮ್ಮನೆ ರಿಪೇರಿ ವಗೈರೆಗೆ ಇಪ್ಪತ್ತು ಸಾವಿರಕ್ಕೂ ಹೆಚ್ಚು ಇದರ ಮೇಲೆ

ಖರ್ಚು ಮಾಡುವ ಬದಲು ಯಾವುದಾದರೂ ಬಂಗಲೆಯನ್ನು ನಾನ್ನೂರು ಐನೂರು ವಾರ್ಷಿಕ ಬಾಡಿಗೆಗೆ ಹಿಡಿಯುವುದು ಉತ್ತಮವೆನಿಸಿತು. ಮನೆಯೆಂಬ ಗೂಟಕ್ಕೆ ತಮ್ಮನ್ನು ಕಟ್ಟಿಕೊಳ್ಳುವುದು ಇದೇ ಮೊದಲಿಗೆ ಕೆಟ್ಟದೆನಿಸಿತು.

ರಾಹುಲರು ಒಬ್ಬ ಬೌದ್ಧ ವಿದ್ವಾಂಸರಾಗಿ ಖ್ಯಾತರಾಗಿದ್ದರು. ಟಿಬೇಟಿಗೆ ನಾಲ್ಕು ಬಾರಿ ಹೋಗಿ ಅಲ್ಲಿನ ಬೌದ್ಧ ಗ್ರಂಥಗಳನ್ನು ಉಳಿಸಿದ್ದರು. ಅದಕ್ಕಿಂತ ಮೊದಲು 'ಧರ್ಮಪದ' ಬಿಟ್ಟು ಬೇರೆ ಯಾವ ಬೌದ್ಧ ಗ್ರಂಥವೂ ಹಿಂದೀ ಅನುವಾದದಲ್ಲಿ ಸಿಗುತ್ತಿರಲಿಲ್ಲ. ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಹಿಂದಿಯಲ್ಲಿ ಸ್ವತಃ ಬರೆದದ್ದಲ್ಲದೆ ಇತರರಿಗೂ ಬರೆಯಲು ಅವರು ಪ್ರೇರೇಪಿಸಿದರು. ರಾಹುಲರನ್ನು ಬೌದ್ಧ ಸಾಹಿತ್ಯ ಭಂಡಾರದ ಬಾಗಿಲಿಗೆ ಕರೆ ತಂದವರು ಯಾರೆಂದರೆ ಲಕ್ನೋ ಬೌದ್ಧ ವಿಹಾರದ ಭದಂತ ಬೋಧಾನಂದ ಮಹಾಸ್ಥವಿರರು. 1916ರಲ್ಲಿ ಆರ್ಯಸಮಾಜ ಪ್ರಚಾರಕರ ರೂಪದಲ್ಲಿ ರಾಹುಲರು ಪ್ರಥಮ ಬಾರಿಗೆ ಬೋಧಾನಂದಜೀಯವರನ್ನು ಲಕ್ನೋದಲ್ಲಿ ಭೇಟಿಯಾಗಿದ್ದರು. ಆಗ ಬೋಧಾನಂದಜೀ ಬೌದ್ಧ ಸಾಹಿತ್ಯ, ತ್ರಿಪೀಟಿಕಾ ಮುಂತಾದವುಗಳ ಬಗ್ಗೆ ರಾಹುಲರಿಗೆ ಪ್ರಾಥಮಿಕ ಜ್ಞಾನ ನೀಡಿದ್ದರು. ಅಂದಿನ ಪರಿಚಯ ನಂತರದಲ್ಲಿ ಗಾಢ ಆತ್ಮೀಯತೆಯಾಗಿ ಬೆಳೆಯಿತು. ನನಗೂ ಬೋಧಾನಂದರನ್ನು ಒಂದಕ್ಕೂ ಹೆಚ್ಚು ಬಾರಿ ನೋಡುವ ಅವಕಾಶ ಸಿಕ್ಕಿದೆ. ರಾಹುಲಜೀ, ಆನಂದಜೀ ಮತ್ತು ಶಾಂತಿ ಭಿಕ್ಷು ಶಾಸ್ತ್ರಿಯವರ ಬಗ್ಗೆ ಅವರಿಗೆ ಅಪಾರ ಪ್ರೀತಿ ಇತ್ತು.

1952ರ ಜುಲೈಯಲ್ಲಿ ಬೋಧಾನಂದಜೀಯವರು ನಿಧನರಾದರು. ಸುದ್ದಿ ತಿಳಿದು ರಾಹುಲರಿಗಾದ ದುಃಖವನ್ನು ಊಹಿಸಿಕೊಳ್ಳಬಹುದಷ್ಟೆ? ಬೋಧಾನಂದಜೀ ಅವರ ಜೀವನದ ಕುರಿತು ರಾಹುಲರೊಂದು ಲೇಖನ ಬರೆದರು.

ಭೈಯ್ಯಾ (ಹರಿಶರಣಾನಂದಜೀ)ನ ರೂಪದಲ್ಲಿ ರಾಹುಲರಿಗೆ ಸೋದರ ಸಿಕ್ಕಿದ. ಭೈಯ್ಯಾ-ಭಾಭೀ ಜೊತೆಗೆ ಅವರದು ಆಳವಾದ ಆತ್ಮೀಯ ಸಂಬಂಧ. ಅವರು ಪ್ರತೀ ವರ್ಷ ಮಸ್ಸೂರಿಗೆ ಬಂದು ಮೂರು ನಾಲ್ಕು ತಿಂಗಳು ಇರುತ್ತಿದ್ದರು. ಮುಂದೆ ಭಾಭೀಗೆ ಹೃದಯಾಘಾತವಾಗಿ ಬದುಕಿನಲ್ಲಿ ನೀರವತೆ ಹಾಗೂ ಭಯ ತುಂಬಿಕೊಂಡಿತು.

ರಾಹುಲರು ರೈತ ಕಾರ್ಮಿಕ ಆಂದೋಲನದಲ್ಲಿ ಭಾಗವಹಿಸಿದರು. ಸತ್ಯಾಗ್ರಹವನ್ನು ಯೋಚಿಸಿದ್ದರು, ಕಿಸಾನ್ ಸಭಾದ ಅಧ್ಯಕ್ಷರಾಗಿದ್ದರು, ಜೈಲಿಗೂ ಹೋಗಿದ್ದರು, ಈಗ ಬರವಣಿಗೆಗೆ ತಮ್ಮನ್ನು ಸಮರ್ಪಿಸಿಕೊಂಡಿದ್ದರು. ಆದರೆ ಅವರ ಸ್ನೇಹಿತರು ಮಸ್ಸೂರಿಯಲ್ಲಿ ಕಾರ್ಮಿಕ ಸಂಘದ ಅಧ್ಯಕ್ಷರಾಗಲು ಒತ್ತಾಯಿಸಿದಾಗ, ಕೊನೆಗೆ ಒಪ್ಪಿಕೊಳ್ಳಬೇಕಾಯಿತು. ಸಂಘದಲ್ಲಿ ಮುಖ್ಯವಾಗಿ ಹೊರೆ ಹೊರುವ, ರಿಕ್ಷಾ ಎಳೆಯುವ ನೇಪಾಳೀ ಹಾಗೂ ಗಢವಾಲೀಯರೇ ಇದ್ದರು. ರಾಹುಲರ ಅಧ್ಯಕ್ಷತೆಯಲ್ಲಿ ಅವರಿಗಾಗಿ ತಗಡಿನ ಶೆಡ್ ಆಗಿದ್ದಲ್ಲದೆ ವೇತನದ ಪರಿಷ್ಕಾರವೂ ಆಯಿತು.

ಈ ವರ್ಷದ ಹೊಸ ಯೋಜನೆಯೆಂದರೆ, ಕಡೇ ಪಕ್ಷ ಅನುಭವಕ್ಕಾಗಿ, ಸ್ವಂತದ 'ರಾಹುಲ ಪ್ರಕಾಶನ'ದ ಆರಂಭ. ಪ್ರಕಾಶನ ಮತ್ತು ಪ್ರಕಾಶಕರ ವಿಷಯದಲ್ಲಿ ಅವರಿಗೆ ಬಹಳ ಕಿರಿಕಿರಿಯುಂಟಾಗಿತ್ತು ಎಂದು ಹೇಳುತ್ತಾರೆ. ಆದುದರಿಂದ ಸ್ವತಃ ಪ್ರಕಾಶಕನಾದರೆ ಹೇಗೆ ಎಂಬ ವಿಚಾರ ಬಂದಿರಬೇಕು. ಮೂರು ಪುಸ್ತಕಗಳು ಈ ಪ್ರಕಾಶನದಿಂದ ಹೊರ ಬಂದವು. 'ರಾಜಾಸ್ಥಾನೀ ರಾಣಿವಾಸ', 'ವೋಲ್ಗಾ ಸೆ ಗಂಗಾ' (ಇಂಗ್ಲಿಷ್) ಮತ್ತು 'ಬಹುರಂಗೀ ಮಧುಪುರೀ'. ಆದರೆ

ಮಾರಾಟ ವ್ಯವಸ್ಥೆ ರಾಹುಲರಿಂದ ಆಗುವಂತಹುದಲ್ಲ. ಏಜೆಂಟನಾಗಿ ನೇಮಕಗೊಂಡವ ರಾಹುಲರಿಂದಷ್ಟೇ ಅಲ್ಲ, ಡಾ। ಸತ್ಯಕೇತು ಅವರಿಂದಲೂ ಸ್ವಲ್ಪ ಅಡ್ವಾನ್ಸ್ ಹಣ ಪಡೆದು, ಪರಾರಿಯಾದ.

ಈಗ ರಾಹುಲರ ಸಮಕಾಲೀನರೂ ಹಳೆಯ ಪರಿಚಿತರೂ, ಒಬ್ಬೊಬ್ಬರಾಗಿ ಪ್ರಪಂಚದಿಂದ ಕಣ್ಮರೆಯಾದರು. ಡಿಸೆಂಬರ್‌ನಲ್ಲಿ ಸಾಹಿತ್ಯಾಚಾರ್ಯ ಪಂಡಿತ ರಾಮದಹೀನ ಮಿಶ್ರರು ತೀರಿಕೊಂಡ ಸುದ್ದಿ ಬಂತು. ಅವರ 'ಗ್ರಂಥಮಾಲಾ ಕಾರ್ಯಾಲಯ' (ಪಾಟ್ನಾ)ದಿಂದ ರಾಹುಲರ ಎರಡು ಗ್ರಂಥಗಳು ಹೊರ ಬಂದಿದ್ದವು. ಅವರೂ, ಅವರ ಪುತ್ರರೂ ರಾಹುಲರ ಆತ್ಮೀಯ ವೃಂದದಲ್ಲಿ ಸೇರಿದ್ದರು. 'ಮಾಗಿದ ಮಾವುಗಳು ಒಂದೊಂದಾಗಿ ಉದುರಲೇ ಬೇಕು. ಆದರೆ ಬರಿದಾದ ಕೊಂಬೆಗಳು ಕೆಲಕಾಲ ಜಾನಿಸುತ್ತಲೇ ಇರುತ್ತವೆ' –ಎಂದು ಬರೆದರು ರಾಹುಲರು.

ರಾಹುಲರಿಗೆ ಲೋಕಭಾಷೆ ಮತ್ತು ಲೋಕ ಸಾಹಿತ್ಯದಲ್ಲಿ ಅಪಾರ ಆಸಕ್ತಿ. ಹಿಂದಿಯ ಕಥೆಗಾರ ಹಿರಿರಾಜ ಕಿಶೋರನ ಸೋದರಿ ಸತ್ಯಾಗುಪ್ತಾ, ಎಂ.ಎ. ಮಾಡಿಕೊಂಡು ಮುಂದೆ ಉದ್ಯೋಗಕ್ಕಾಗಿ ಅವರ ಸಲಹೆ ಕೇಳಿದಾಗ ಅವರು ಕೌರವೀ ಲೋಕ ಸಾಹಿತ್ಯ ಸಂಗ್ರಹಿಸಲು ಹೇಳಿದರು. ಸತ್ಯಾ ಆ ಕೆಲಸವನ್ನು ಪೂರ್ತಿಗೊಳಿಸಿ ಪಿ.ಹೆಚ್.ಡಿ ಗಳಿಸಿದಾಗ ಅತೀವ ಸಂತೋಷಗೊಂಡರು ರಾಹುಲಜೀ. ಹಾಗೆಯೇ, ಅದೇ ವರ್ಷ ದಶಂಬರದಲ್ಲಿ ರಾಮನಾರಾಯಣ ಉಪಾಧ್ಯಾಯರ ನಿಮಾಡೀ ಲೋಕಗೀತೆಗಳ ಸಂಗ್ರಹ ನೋಡಿ ಅಷ್ಟೇ ಖುಶಿ ಪಟ್ಟರು.

ದಾಂಪತ್ಯವೆಂದರೆ ಸುಖ–ದುಃಖ, ಸಿಟ್ಟು–ಜಗಳ–ರಾಜಿ ಇದ್ದೇ ಇರುತ್ತದೆ. ಎಂದ ಮೇಲೆ ರಾಹುಲರ ದಾಂಪತ್ಯ ಇದಕ್ಕೆ ಹೇಗೆ ಹೊರತಾದೀತು?

1952ನೆಯ ಇಸವಿಯಲ್ಲಿ ಸಾಕಷ್ಟು ಕೆಲಸಗಳಾದುವು. ಅತ್ಯಂತ ಮುಖ್ಯವಾಗಿ 'ಮಧ್ಯ ಏಶ್ಯಾ ಕಾ ಇತಿಹಾಸ' (ಎರಡು ಭಾಗಗಳು) ಪೂರ್ತಿ ಮುಗಿಯಿತು. 'ಗಢವಾಲ್' ಕೂಡ. 'ರಾಜಸ್ಥಾನೀ ರಾಣಿವಾಸ' ಪ್ರೆಸ್ಸಿನಲ್ಲಿತ್ತು. 'ನೇಪಾಲ್' ಬರೆದಾಗಿದ್ದರೂ ಈಗ ನೇಪಾಳದ ಪ್ರವಾಸ ಮಾಡಿ ಅದಕ್ಕೊಂದು ಅಂತಿಮ ರೂಪ ಕೊಡುವುದು ಬಾಕಿ ಉಳಿದಿತ್ತು.

ರಾಹುಲಜೀ (ಸಾಧು ರಮೋದಾರ ದಾಸ) ಮೊದಲ ಸಲ 1923ನೇ ಇಸವಿಯಲ್ಲಿ ನೇಪಾಳಕ್ಕೆ (ಕಾಠ್ಮಂಡೂ) ಹೋಗಿದ್ದಾಗ, ಅಲ್ಲಿ ಒಂದೂವರೆ ತಿಂಗಳ ಕಾಲ ಇದ್ದರು. ಎರಡನೇ ಸಲ 1929ರಲ್ಲಿ, ಆಗ ಅವರು ಟಿಬೇಟಿಗೆ ಹೋಗಬೇಕಾಗಿದ್ದವರು ನೇಪಾಳದಲ್ಲಿ ಅಜ್ಞಾತವಾಸದಲ್ಲಿರಬೇಕಾಗಿ ಬಂದಿತ್ತು. ಮಾರುವೇಷದಲ್ಲಿ ಲಾಸದವರೆಗೂ ಪ್ರಯಾಣ ಮಾಡಬೇಕಾಯಿತು. ಆ ನಂತರದ ಎರಡು ಟಿಬೇಟ್ ಪ್ರವಾಸದ ಸಮಯ ನೇಪಾಳದ ಮೂಲಕವೇ ಹೋಗಿ ಬಂದು ಮಾಡಿದರು. ಆದರೆ ನಾಲ್ಕನೇ ಟಿಬೇಟ್ ಪ್ರವಾಸದಲ್ಲಿ, ಅವರು ನೇಪಾಳ ಮಾರ್ಗವನ್ನು ಬಳಸಿರಲಿಲ್ಲ.

ಮೂರನೆಯ ಸಲ ಟಿಬೇಟ್‌ಗೆ ತೆರಳುವ ದಾರಿಯಲ್ಲಿ (1936 ಇ) ಕಾಠ್ಮಂಡೂವಿನಲ್ಲಿ ಒಂದು ತಿಂಗಳು ಕಳೆದ ರಾಹುಲರು ಅಂದು ಅಲ್ಲಿನ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸಂಪತ್ತಿನ ಪ್ರತ್ಯಕ್ಷ ಅವಲೋಕನ ಹಾಗೂ ಅಧ್ಯಯನ ನಡೆಸಿದ್ದರು. ಡಾ। ಕಾಶೀ ಪ್ರಸಾದ ಜೈಸ್ವಾಲ್ ಕೂಡ ಆಗ ಕಾಠ್ಮಂಡೂಗೆ ಬಂದಿದ್ದರು. ಅವತ್ತಿನಿಂದಲೇ ರಾಹುಲರಿಗೆ ನೇಪಾಳದ ಕುರಿತು ಬರೆಯಬೇಕೆಂಬ ಅಭಿಲಾಷೆ ಇತ್ತು. ಈಗ ಆ ಗ್ರಂಥ ಸಿದ್ಧವಾಗಿತ್ತು.

'ಹಿಮಾಲಯ ಪರಿಚಯ'ಕ್ಕೆ ಸಂಬಂಧಿಸಿದಂತೆ ಅವರು ಮಾಡಿದ್ದೇನೆಂದರೆ, ಬರವಣಿಗೆ ಮುಗಿದೊಡನೆ ಅಂತಿಮ ರೂಪ ಕೊಡಲು ಹಾಗೂ ತಾಜಾ ವಿವರ ಸೇರಿಸಲು ಹಿಮಾಲಯ ಪ್ರದೇಶದಲ್ಲಿ ಪುನಃ ಪ್ರವಾಸ ಹೊರಟದ್ದು.

ಹೊಸ ವರ್ಷ (1953) ಬಂತು. ರಾಹುಲರು ತಮ್ಮ ನೇಪಾಳಿ ಮಡದಿಯನ್ನು ಕರೆದುಕೊಂಡು ಜನವರಿ ನಾಲ್ಕರಂದು ನೇಪಾಳ ಪ್ರವಾಸಕ್ಕೆ ಹೊರಟರು. ಮೊದಲ ಪ್ರವಾಸಗಳಲ್ಲಿ ಅವರು ರಕ್ಸೌಲ್-ಭೀಮ ಫೇರಿ, ಸೀಸಾ ಗಢಿ-ಚಂದಾ ಗಢೀಯ ಪರ್ವತಗಳನ್ನು ದಾಟಿ ನೇಪಾಳ ತಲುಪಿದ್ದರು. 1952ನೆಯ ಇಸವಿಯಲ್ಲಿ ನಾನೂ ಅದೇ ಮಾರ್ಗವಾಗಿ ಕಾಠ್ಮಂಡೂವಿಗೆ ಹೋಗಿದ್ದೆ. ಅಲ್ಲಿಯವರೆಗೆ ಮೋಟರು ರಸ್ತೆ ಆಗಿರಲಿಲ್ಲ.

ಈ ಸಲ ರಾಹುಲರು ಪಾಟ್ನಾದಿಂದ ವಿಮಾನ ಮಾರ್ಗವಾಗಿ ನೇಪಾಳಕ್ಕೆ ಹೋಗುವವರಿದ್ದರು. ಪಾಟ್ನಾದಲ್ಲಿ ಎರಡು ದಿನ ಉಳಿದರು. ಮ್ಯೂಸಿಯಂಗೆ ಹೋಗಿ ತಾನು ಟಿಬೇಟಿನಿಂದ ತಂದಿದ್ದ ವಸ್ತುಗಳನ್ನು ನೋಡಿದರು. ಜೈಸ್ವಾಲ್ ಪ್ರತಿಷ್ಠಾನದಲ್ಲಿ ಡಾ। ಅ.ಸ.ಆಲತೇಕರ ಅವರನ್ನು ಕಂಡಾಗ ತಾವು ಸಂಪಾದಿಸಿದ, ಬಹಳ ಕಾಲ ಉಪೇಕ್ಷೆಗೊಳಗಾಗಿದ್ದ 'ಪ್ರಮಾಣ ವಾರ್ತಿಕ ಭಾಷ್ಯ'ದ ಹೆಚ್ಚಿನ ಭಾಗ ಮುದ್ರಣಗೊಂಡಿದೆ ಎಂದು ತಿಳಿದು ಬಹಳ ಸಂತೋಷಗೊಂಡರು.

ಜನವರಿ ಎಂಟರಂದು 55 ನಿಮಿಷಗಳ ವಿಮಾನಯಾನದ ಬಳಿಕ ರಾಹುಲರು ಕಾಠ್ಮಂಡೂವಿನ ನಿಲ್ದಾಣದಲ್ಲಿ ಇಳಿದರು. ಆಗ ಅಲ್ಲಿ ಜನಕಲಾಲ ಶರ್ಮಾ, ಧರ್ಮರತ್ನ ಯಮಿ, ಮುಂತಾದ ಮಹನೀಯರು ಅವರನ್ನು ಸ್ವಾಗತಿಸಲು ಬಂದು ನಿಂತಿದ್ದರು. ಉಳಿದುಕೊಳ್ಳಲು ಎರಡು ಮೂರು ಕಡೆ ವ್ಯವಸ್ಥೆಯಾಗಿತ್ತು. ಆದರೆ ಮಾತುಕತೆ, ಭೇಟಿ, ತಿರುಗಾಟ ಈ ಎಲ್ಲ ದೃಷ್ಟಿಯಿಂದ ಧರ್ಮರತ್ನ ಯಮಿಯವರ ಪೇಟೆ ಮನೆಯನ್ನೇ ರಾಹುಲರು ಹೆಚ್ಚು ಇಷ್ಟಪಟ್ಟರು. ಫೆಬ್ರವರಿ ಒಂದರ ವರೆಗೆ ಒಟ್ಟು ಇಪ್ಪತ್ತೆರಡು ದಿನಗಳಲ್ಲಿ ಕಾಠ್ಮಂಡೂ ಮತ್ತು ಆಸುಪಾಸಿನ ಅನೇಕ ಸ್ಥಳಗಳ ವೀಕ್ಷಣೆ, ಅನೇಕರೊಂದಿಗೆ ಭೇಟಿ. ಹೋದಹೋದಲ್ಲೆಲ್ಲ ಸ್ವಾಗತ ಕಾದಿತ್ತು. ನೇಪಾಳದಲ್ಲಿ ಈಗ ಹೊಸ ಆಡಳಿತವಿತ್ತು.

ರಾಜಗುರು (ಮಾಹಿಲಾ ಗುರು) ಪಂಡಿತ ಹೇಮರಾಜ ಶರ್ಮಾ ಅವರನ್ನು 1923ರಲ್ಲಿಯೇ ಮೊದಲ ಸಲ ರಾಹುಲರು ಭೇಟಿ ಮಾಡಿದ್ದರು. ಆ ನಂತರ ಅನೇಕ ಸಂಧರ್ಭಗಳಲ್ಲಿ ಅವರ ಭೇಟಿ ಆಗುತ್ತಲೇ ಇತ್ತು. ಇಬ್ಬರಲ್ಲಿ ಶಾಸ್ತ್ರ ಸಂಬಂಧ ಚರ್ಚೆಗಳೂ ಆಗಿದ್ದುವು. ರಾಹುಲರು ಕಮ್ಯುನಿಸ್ಟರಾದರೆ ಪಂಡಿತ ಹೇಮರಾಜ ಶರ್ಮಾ ಅವರು ಸಾಮಂತಶಾಹಿ ಬೆಂಬಲಿಗರು. ಆದರೂ ಇಬ್ಬರೂ ಒಳ್ಳೆಯ ಸ್ನೇಹಿತರಾಗಿದ್ದರು. ಕಾಠ್ಮಂಡೂ ತಲುಪಿದ ಮಾರನೆಯ ದಿನವೇ ರಾಹುಲರು ಹೇಮರಾಜ ಶರ್ಮಾ ಅವರನ್ನು ನೋಡಲು ಹೋದರು. ಅವರೊಡನೆ ಎರಡು ಮೂರು ಗಂಟೆಗಳ ಕಾಲ ಸಾಹಿತ್ಯ ಮತ್ತು ಸಂಶೋಧನೆ ಕುರಿತ ಚರ್ಚೆ ನಡೆಯಿತು.

ನೇಪಾಳದ ಬೌದ್ಧ ನೇವಾರ (ನೇಪಾಳೀಯರಲ್ಲಿ ಒಂದು ಪುರಾತನ ಜಾತಿ) ಸಾಹೂಗಳಿಗೆ ರಾಹುಲರೆಂದರೆ ಬಹಳ ಪ್ರೀತ್ಯಾದರವಿತ್ತು. ಮೊದಲ ದಿನವೇ ಅವರು ಭಾಜೂರತ್ನ ಸಾಹೂ ಅವರಲ್ಲಿಗೆ ಹೋದರು. ಸ್ವಯಂಭೂ ಸಮೀಪದ ಆನಂದ ವಿಹಾರ ರೂಪುಗೊಂಡದ್ದು ಭಾಜೂರತ್ನರ ದಾನದಿಂದ; ಕಾಲಿಮ್ಪೋಙನ ಧರ್ಮೋದಯ ವಿಹಾರವೂ ಭಾಜೂರತ್ನ ಸಾಹೂ ಮತ್ತು ಅವರ ಪುತ್ರ ಮಣಿಹರ್ಷ ಜ್ಯೋತಿಯವರ ದಾನದ ಫಲ. ರಾಹುಲರು ಕಲ್ಕತ್ತೆಗೆ ಹೋದಾಗ ಹೆಚ್ಚಾಗಿ

ಉಳಿಯುತ್ತಿದ್ದುದು ಸಾಹು ಮಣಿಹರ್ಷ ಜ್ಯೋತಿಯವರ ಮನೆಯಲ್ಲಿಯೇ. ಟಿಬೇಟ್ ಪ್ರವಾಸ ಕಾಲದಲ್ಲಿ ತುಂಬ ಸಹಾಯ ಮಾಡುತ್ತಿದ್ದ ದಿವಂಗತ ಧರ್ಮಮಾನ ಸಾಹೂ ಮತ್ತು ಅವರ ಕುಟುಂಬವನ್ನು ರಾಹುಲರು ಮರೆಯುವುದಾದರೂ ಹೇಗೆ? ರಾಹುಲರಿಗೆ ಧರ್ಮಮಾನ ಸಾಹೂ ಮತ್ತು ಅವರ ಮಕ್ಕಳು ಕಾಠ್ಮಂಡೂ ಹಾಗೂ ಲಾಸಾದಲ್ಲಿ ಮಾಡಿದ ಉಪಕಾರ ಅಷ್ಟಿಷ್ಟಲ್ಲ. ಧರ್ಮಮಾನರೀಗ ದಿವಂಗತರು. ಮಕ್ಕಳು ಲಾಸಾದಲ್ಲಿದ್ದರು. ಮನೆಯ ಸೊಸೆಯಂದಿರು ಆತ್ಮೀಯತೆಯಿಂದ ರಾಹುಲರನ್ನು ಸ್ವಾಗತಿಸಿದರು.

ನೇಪಾಳದಲ್ಲಿ ಕವಿ ಲಕ್ಷ್ಮೀಪ್ರಸಾದ ದೇವಕೋಟಾ ಅವರನ್ನು ರಾಹುಲರು ಈ ಬಾರಿ ಎರಡು ಸಲ ಭೇಟಿ ಮಾಡಿದರು. ದೇವಕೋಟಾ ಮತ್ತು ನಿರಾಲಾ ಅವರ ನಡುವೆ ಅನೇಕ ವಿಷಯಗಳಲ್ಲಿ ಸಾಮ್ಯವಿದೆ ಎಂದು ಅವರಿಗನಿಸಿತು. ಆ ದಿನಗಳಲ್ಲಿ ನಿರಾಲಾ ಇಂಗ್ಲೀಷ್‌ನಲ್ಲಿ ಮಾತಾಡುತ್ತಿದ್ದರು ಮತ್ತು ದೇವಕೋಟಾ ಇಂಗ್ಲಿಷ್‌ನಲ್ಲಿ ಗಿತ ನಾಟಕವೊಂದನ್ನು ರಚಿಸುತ್ತಿದ್ದರು. ನಿರಾಲಾರಂತೆ ದೇವಕೋಟಾ ಕೂಡ ಸದಾಕಾಲ ಪರಮಪ್ರಸನ್ನ ಚಿತ್ತರು. ಇಬ್ಬರದೂ ಅಕೃತ್ರಿಮ ಸೌಹಾರ್ದ ಗುಣ, ಅಪ್ರತಿಮ ಕಾವ್ಯ ಪ್ರತಿಭೆ. 'ಈ ಸಲದ ನೇಪಾಳಿ ಪ್ರವಾಸದಲ್ಲಿ ಅತಿ ಹೆಚ್ಚು ಆಕರ್ಷಿಸಿದ ವ್ಯಕ್ತಿಯೆಂದರೆ ಮಹಾಕವಿ ದೇವಕೋಟಾ'. ನೇಪಾಳ ಪ್ರವಾಸ ಈ ಬಾರಿ ಸಾಕಷ್ಟು ಕಾರ್ಯಭಾರಗಳಿಂದ ವ್ಯಸ್ತವಾಗಿತ್ತು. ಧರ್ಮರತ್ನ ಯಮಿಯವರ ಮನೆ ನಿರಂತರ ಗೋಷ್ಠಿಯ ಸ್ಥಳವಾಗಿ ಬಿಟ್ಟಿತ್ತು. ಆದರೆ ರಾಹುಲರ ಧ್ಯಾನವೆಲ್ಲ ತಮ್ಮ ಪುಸ್ತಕಗಳು ಹಾಗೂ ಆಕರ ಸಾಮಾಗ್ರಿಗಳ ಮೇಲಿತ್ತು. ಕಾಠ್ಮಂಡೂ ಮ್ಯೂಸಿಯಂ, ಬೋಧಾ ಮತ್ತು ಸ್ವಯಂಭೂ ಸ್ತೂಪಗಳನ್ನು ಸಂದರ್ಶಿಸಿ ತಾವು ಮೊದಲ ಸಲದ ಪ್ರವಾಸದಲ್ಲಿ ಅಜ್ಞಾತವಾಸದಲ್ಲಿದ್ದ ಕಿರಿದು ವಿಹಾರವನ್ನು ನೋಡಲು ಹೋದರು. ವಿಗ್ರಹಗಳನ್ನು ಪುರಾತತ್ವದ ದೃಷ್ಟಿಕೋನದಿಂದ ನೋಡಲು ಮತ್ತೊಮ್ಮೆ ಪಶುಪತಿ ಮಂದಿರಕ್ಕೆ ಹೋದರು. ಹುನುಮಾನ್ ಢೋಕಾ ಮೊದಲಾದ ಅರಮನೆಗಳನ್ನು, ಸಿಂಹ ದರ್ಬಾರನ್ನು, ಥಾಪಾಥಲ್ಲಿ ಮೊಹಲ್ಲೆಯಲ್ಲಿನ ಹಳೆಯ ಸ್ಮಾರಕಗಳನ್ನು ಭಾದಗಾಂವುಗೆ ಹೋಗಿ ಅಲ್ಲಿನ ಹಳೆಯ ಅರಮನೆಗಳನ್ನು ಹಾಗೂ ಮಂದಿರಗಳನ್ನು ನೋಡಿದರು. ಯಾವುದೋ ಕಾಲದಲ್ಲಿ ಭಾದಗಾಂವ್ರೂ ರಾಜಧಾನಿ ನಗರಿಯಾಗಿತ್ತು. ಬೆಟ್ಟದ ತಗ್ಗಿನಲ್ಲಿನ ಮತ್ತೆರಡು ರಾಜಧಾನಿ – ಕಾಂತಿಪುರ (ಕಾಠ್ಮಂಡೂ) ಮತ್ತು ಪಾಟನಗಳನ್ನು ನೋಡಿ ಬಂದರು. ಪುರಾತತ್ವಜ್ಞರಾದ ಜನಕಲಾಲ ಶರ್ಮ ರಾಹುಲರಿಗೆ ಪ್ರವಾಸದುದ್ದಕ್ಕೂ ಮಾರ್ಗದರ್ಶಕರಾಗಿದ್ದರು.

ಬಾಬುರಾಮ ಆಚಾರ್ಯ, ಬಾಲಚಂದ್ರ ಶರ್ಮಾ, ಬಾಲಕೃಷ್ಣ ಸಮ, ಡಾ।ದಿಲ್ಲೀ ರಮಣ ರೇಗ್ಮೀ, ಕೇಸರ ಶಂಶೇರ್, ಬಾಲಕೃಷ್ಣ ಶಂಶೇರ ಮುಂತಾದ ಅನೇಕ ವಿದ್ವಾಂಸರು, ಸಾಹಿತಿಗಳು ಮತ್ತು ವಿದ್ಯಾಪ್ರೇಮಿಗಳೊಡನೆ ಭೇಟಿ, ಮಾತುಕತೆ ನಡೆಯಿತು. ಫೆಬ್ರವರಿ ಒಂದರಂದು ಯಮಿ ಕುಟುಂಬ ಮತ್ತು ಸ್ನೇಹಿತರಿಂದ ಬೀಳ್ಕೊಂಡು ವಿಮಾನದ ಮೂಲಕ ಪಾಟ್ನಾಕ್ಕೆ ವಾಪಸಾದರು.

ಪಾಟ್ನಾದಲ್ಲಿ ಅನೇಕ ಸ್ನೇಹಿತರನ್ನು ನೋಡಿದ್ದಾಯಿತು. ಆಚಾರ್ಯ ಶಿವಪೂಜನ ಸಹಾಯರನ್ನು ನೋಡಲು ಸಮ್ಮೇಳನ ಭವನಕ್ಕೆ ಹೋಗುತ್ತಿರುವಾಗ ಗಾಡಿಯಿಂದ ಬೇಗ ಇಳಿಯುವ ಭರದಲ್ಲಿ ರಾಹುಲರು ಬಿದ್ದುಬಿಟ್ಟರು. ಬಲ ಮೊಣಕಾಲಲ್ಲಿ ಎರಡು ಕಡೆ ಗಾಯವಾಗಿ ರಕ್ತ ಒಸರಲಾರಂಭಿಸಿತು. ಗಾಯ ಹೇಗೂ ಸುಲಭದಲ್ಲಿ ಒಣಗುವ ಆಸೆಯಿಲ್ಲವಾದ್ದರಿಂದ ನಡುವೆ ತಂಗುವ ಕಾರ್ಯಕ್ರಮ ಕೈಬಿಟ್ಟು ಸೀದಾ ಮಸ್ಸೂರಿಗೆ ಮರಳಲು ನಿರ್ಧರಿಸಿದರು.

ನೇಪಾಳ ಪ್ರವಾಸ ಮುಗಿದಿತ್ತು. ಈಗ 'ನೇಪಾಳ' ಪುಸ್ತಕವನ್ನು ಪ್ರಕಟಣೆಗೆ ಕೊಡಬಹುದಿತ್ತು. ಕಾಠ್ಮಂಡೂವಿನಿಂದ ಪಾಟ್ನಾ ತಲುಪಿದ ಮರುದಿನ ಫೆಬ್ರವರಿ 2 (1953)ರಂದು ಅಲ್ಲಿನ ಶ್ರೀ ಮೋಹನಲಾಲ ವಿಶ್ನೋಯಿ ಅವರು 'ನೇಪಾಳ'ವನ್ನು ತಾನು ಪ್ರಕಟಿಸುತ್ತೇನೆಂದು ಒತ್ತಾಯದಿಂದ ಕೇಳಿಕೊಂಡಾಗ ರಾಹುಲರು ಅದರ ಒಂದು ಭಾಗವನ್ನು ಅಂದೇ ಅವರಿಗೆ ಕೊಟ್ಟುಬಿಟ್ಟರು. ಪ್ರಕಾಶಕರು ಅದರ 304 ಪುಟಗಳನ್ನು ಛಾಪಿಸಿದರು. ಆದರೆ ಅನಂತರ ಕೆಲಸ ಮುಂದೋಡಲೂ ಇಲ್ಲ, ಯಾವ ನಿರ್ಧಾರಕ್ಕೂ ಬರಲಿಲ್ಲ.

1961ರ ಮೇ ತಿಂಗಳಲ್ಲಿ ರಾಹುಲರು ಅಸ್ವಸ್ಥ ಸ್ಥಿತಿಯಲ್ಲಿ ಶ್ರೀಲಂಕೆಯಿಂದ ಡಾರ್ಜಿಲಿಂಗಿಗೆ ಮರಳಿದ್ದರು. ಅವರ ಅನೇಕ ಸಾಮಾನುಗಳು ವಿದ್ಯಾಲಂಕಾರ ವಿಹಾರದ ಅವರ ಕೋಣೆಯಲ್ಲಿದ್ದುವು. 1961ರ ಜೂನ್ ಇಪ್ಪತ್ತೆರಡರಂದು ರಾಹುಲರು ಡಾರ್ಜಿಲಿಂಗ್‌ನಿಂದ ಆನಂದಜೀಗೆ ಶ್ರೀಲಂಕಾ ವಿಳಾಸಕ್ಕೆ ಪತ್ರ ಬರೆದರು. "ನಾನು ಕಳಿಸಲು ತಿಳಿಸಿ ಬರೆದಿದ್ದ ಪುಸ್ತಕಗಳಲ್ಲಿ ಅತ್ಯಂತ ಮುಖ್ಯವಾಗಿ 'ನೇಪಾಲ'ದ ಅಚ್ಚಾದ ಫಾರ್ಮನ್ನು (19)ಇಟ್ಟಿದ್ದೆ. ಅದೆಲ್ಲಾದರೂ ಕಳೆದು ಹೋಯಿತೆಂದರೆ ಪುಸ್ತಕವೇ ಕಳೆದು ಹೋಯಿತೆಂದುಕೊಳ್ಳಿ. ಹಾಗಾಗಿಯೇ ನಾನು 'ನೇಪಾಲ'ವನ್ನು ರಿಜಿಸ್ಟರ್ಡ್ ಬುಕ್ ಪೋಸ್ಟ್‌ನಲ್ಲಿ ಕಳಿಸಲು ಹೇಳಿದ್ದೆ....'ನೇಪಾಲ' ಪ್ರಕಟಿಸಲು ಕಲ್ಕತ್ತದಲ್ಲಿ ಹೊಸ ಪ್ರಕಾಶಕರು ಸಿದ್ಧವಾಗಿದ್ದಾರೆ. ಆ ಫಾರ್ಮ್ ಅಗತ್ಯವಾಗಿ ಬೇಕಾಗಿದೆ. ಅದರ ಇನ್ನೊಂದು ಪ್ರತಿ ಇಲ್ಲ. ಪ್ರೆಸ್‌ನವರು ಕೊಡುತ್ತಾರೆಂಬ ಭರವಸೆ ಇಲ್ಲ."

ಆದರೆ ಅವರ 'ನೇಪಾಲ' ಇಂದಿಗೂ ಅಪ್ರಕಟಿತ. ಮಸ್ಸೂರಿಗೆ ಹಿಂದಿರುಗಿದಾಗ ಸ್ವಾಗತಿಸಿದ್ದು 'ಭೂತನಾಥ'ರು. ಈಗ ರಾಹುಲರಿಗೆ ತನ್ನ ಗಾಯದ ಬಗ್ಗೆ ಚೆನ್ನಾಗಿ ಮುತುವರ್ಜಿ ವಹಿಸಬೇಕಿತ್ತು. ಬಲ ಮೊಣಕಾಲು ಮಡಚಲು ಆಗುತ್ತಿರಲಿಲ್ಲ. ತವರಿಗೆ ಹೋಗಿದ್ದ ಮಡದಿ ಹಿಂದಿರುಗಿದ್ದು ಸುಮಾರು ಒಂದು ತಿಂಗಳ ಮೇಲೆ .

1953ರ ಮಾರ್ಚ್ 5, ರಂದು ಸ್ಟಾಲಿನ್ ನಿಧನದ ವಾರ್ತೆ ಬಂದಿತು. ರಾಹುಲರು ಸ್ಟಾಲಿನ್ ಮೇಲೆ ಒಂದು ಲೇಖನ ಬರೆದರು. ಅದೇ ವರ್ಷ 'ಲೆನಿನ್', 'ಮಾರ್ಕ್ಸ್' ಮತ್ತು 'ಮಾವ್ರೋ-ತ್ಸೆ-ತುಂಗ' ಜೀವನ ಚರಿತ್ರೆಗಳನ್ನು ಬರೆದರು.

ರಾಹುಲರ ಗುರುಬಂಧು ಪಂಡಿತ ಶಾಂತಿ ಭಿಕ್ಷು ಶಾಸ್ತ್ರಿ ಅವರು ಬೌದ್ಧ ಭಿಕ್ಷುವಿನ ಕಾಷಾಯ ತ್ಯಜಿಸಿ ಗೃಹಸ್ಥನಾಗಿದ್ದೇನೆಂದು ತಿಳಿಸಿದಾಗ ರಾಹುಲರು ಬರೆದರು 'ಯಾರೇ ಆಗಲಿ, ಸ್ವಚ್ಛಂದ ಜೀವನದಿಂದ ಬಂಧನಕ್ಕೆ ಸಿಲುಕುವುದನ್ನು ನಾನಿಷ್ಟಪಡುವುದಿಲ್ಲ. ಗೃಹಸ್ಥನಾದ ಮೇಲೆ, ಮನುಷ್ಯನ ದುಡಿಯುವ ಶಕ್ತಿ ಅರ್ಧ ಕಡಿಮೆಯಾಗುತ್ತದೆ. ಆದರೆ ಶಾಂತಿ ಭಿಕ್ಷುವಿನ ವಿಚಾರದಲ್ಲಿ ಹಾಗಾಗಲಿಲ್ಲ. ಅವರು ಸಂಸ್ಕೃತ ಮತ್ತು ಬೌದ್ಧ ಸಾಹಿತ್ಯದ ಪಂಡಿತರಾಗಿದ್ದರು. ಟಿಬೇಟೀ ಮತ್ತು ಚೀನೀಯನ್ನು ಚೆನ್ನಾಗಿ ಓದಿದ್ದರು. ಶಾಂತಿನಿಕೇತನ ಬಿಟ್ಟ ಮೇಲೆಯೂ ಸಂಶೋಧನೆ ಮತ್ತು ಬರವಣಿಗೆಯನ್ನು ಮುಂದುವರಿಸಿಕೊಂಡೇ ಬಂದರು. ಜರ್ಮನಿಯಲ್ಲಿಯೂ ಇದ್ದರು. ಅವರ ನೇಪಾಳೀ ಮಡದಿ, ಸುಮಾರಾಗಿ ಅವರ ಜೊತೆಗೇ ವಿದೇಶದಲ್ಲಿಯೂ ಇದ್ದಳು.

1953ರ ಏಪ್ರಿಲ್ 9ರಂದು ರಾಹುಲಜೀಗೆ ಅರವತ್ತು ವರ್ಷ ತುಂಬಿತು. ಅವತ್ತು ಎಲ್ಲರಿಗಿಂತ ಮೊದಲು ಅಮೃತ ರಾಯ್ ಅವರಿಂದ ತಂತಿ ಮೂಲಕ ಶುಭಾಶಯ ಬಂತು. ಇನ್ನೂ ಅನೇಕ

ಶುಭಾಶಯಗಳು ಬಂದುವು. 'ಶುಭಾಶಯಗಳು ವೃದ್ಧಾಪ್ಯವನ್ನು ನೆನಪು ಮಾಡಿಕೊಡುತ್ತಿದ್ದುವು. ನಾನು ಅಂತರಾವಲೋಕನ ಮಾಡಿಕೊಳ್ಳಲೇ ಬೇಕೆನ್ನುವಂತಾಯಿತು. ವೃದ್ಧಾಪ್ಯದ ಪ್ರವೃತ್ತಿಗಳು ನನ್ನೊಳಗೆ ಪ್ರವೇಶಿಸಿಲ್ಲವಲ್ಲ ಎಂದು ಎಚ್ಚರಗೊಳ್ಳುವಂತಾಯಿತು.'

ಮತ್ತೆ ಬಂತು ಪ್ರವಾಸಿಗರ ಕಾಲ. ಹಳಬರು ಮತ್ತು ಹೊಸಬರ ಆಗಮನ, ಭೇಟಿ ಮಸ್ಸೂರಿಯಲ್ಲಿರುತ್ತ ಈಗ ಮೂರು ವರ್ಷ ಪೂರ್ತಿಯಾಗಿತ್ತು. ಮಸ್ಸೂರಿಯ ರಂಗುರಂಗಿನ ಜೀವನವನ್ನು ಕಥಾರೂಪದಲ್ಲಿ ಬರೆಯಬೇಕೆಂದು ರಾಹುಲರು ಯೋಚಿಸಿದರು. ಆಗೋಸ್ಟ್‌ನಲ್ಲಿ 'ಜೌನ್ ಸಾರ್-ಡೆಹರಾಡೂನ್' ಬರೆಯಲು ತೊಡಗಿದರು.

ಈಗ ಹೊಸತೊಂದು ಜವಾಬ್ದಾರಿ. ಮದುವೆಯಾದ ಹೊಸದರಲ್ಲಿ ರಾಹುಲರು ಮಕ್ಕಳು ಬೇಡವೆಂದು ತೀರ್ಮಾನಿಸಿಕೊಂಡಿದ್ದರು. ಆದರೆ ಈಗ ಕಮಲಾ ತಾಯಿಯಾಗಲಿದ್ದಳು. ಭೈಯ್ಯಾ-ಭಾಭೀ ಮಸ್ಸೂರಿಗೆ ಬಂದು, ಅವರದೇ ಆರೈಕೆಯಲ್ಲಿದ್ದ ಕಮಲಾ ಮಸ್ಸೂರಿಯ ಸೇಂಟ್ ಮೇರಿ ಆಸ್ಪತ್ರೆಯಲ್ಲಿ ಸೆಪ್ಟೆಂಬರ್ 20ರಂದು ಜಯಾಗೆ ಜನ್ಮವಿತ್ತಳು.

ಜಯಾ ಹುಟ್ಟುವ ಕೆಲವೇ ದಿನಗಳ ಮೊದಲು, ಲೋಲಾ ಅನೇಕ ವರ್ಷಗಳ ಬಳಿಕ ಬರೆದ ಒಂದು ಪತ್ರ ಬಂದಿತ್ತು. ರಾಹುಲರು ಇಗೋರ್‌ನ ಜನ್ಮದಿನಕ್ಕೆ (ಸೆಪ್ಟೆಂಬರ್ ಐದು) ಶುಭಾಶಯದ ತಂತಿ ಕಳಿಸಿದ್ದರು. 'ಕಮಲಾಗೆ ಈ ಪತ್ರ ಬಂದದ್ದು ಕೇಳಿ ಬಹಳ ದುಃಖವಾಯಿತು'. ಆಮೇಲೆ ಸುಮಾರು ಎರಡು ತಿಂಗಳ ಬಳಿಕ ಲೆನಿನ್ ಗ್ರಾಡ್‌ನಿಂದ ಮತ್ತೆ ಕಾಗದ ಹಾಗೂ ಫೋಟೋ ಬಂದಾಗ ಮನೆಯಲ್ಲಿ ಸಹಜವಾಗಿ ಕಲಹವೆದ್ದಿತು. ಯಾರದು ಸರಿ, ಯಾರದು ತಪ್ಪು ಎಂಬುದರ ವಿವೇಚನೆ ಮಾಡುವುದೇ ಈಗ ವ್ಯರ್ಥ. ಆದರೆ ರಾಹುಲರ ವ್ಯಕ್ತಿತ್ವವನ್ನು ಸರಿಯಾಗಿ ಗುರುತಿಸಲು ಕಲಹದ ಕಾರಣ ವಿಶ್ಲೇಷಣೆಯನ್ನು ಅವರು ಹೇಗೆ ಮಾಡಿದರೆಂಬುದನ್ನು ತಿಳಿಯುವುದು ಅವಶ್ಯ.

'ಏನ್ನೆಯಿಂದ ನಾನು ನನ್ನ ದೃಷ್ಟಿಯಲ್ಲಿ, ಇನ್ನು ಈ ಜೀವಮಾನ ಪರ್ಯಂತ, ಕೆಳಗಿಳಿದೆ. ಕಮಲಾಳ ಗ್ರಹಿಕೆ ಸರಿ. ನಾನವಳ ಅಸಹಾಯಕ ಸ್ಥಿತಿಯ ಲಾಭ ಪಡೆದೆ – ಹಾಂ, ಪರೋಪಕಾರ, ದಯೆ ತೋರಿಕೆ, ಇನ್ನೂ ಏನೇನೋ ನೆಪ ಮಾಡಿಕೊಂಡು. ಅವಳು ನನ್ನ ಮೇಲೆ ವಿಶ್ವಾಸವಿಡತೊಡಗಿದಳೇಕೆ?'

ಈ 'ಅಪರಾಧ ಸ್ವೀಕೃತಿ' ಮಹಾಪಂಡಿತ ರಾಹುಲ ಸಾಂಕೃತ್ಯಾಯವರನ್ನು ಇನ್ನಷ್ಟು ದೊಡ್ಡವರನ್ನಾಗಿ ಮಾಡುತ್ತದೆ.

ಎರಡು ವರ್ಷಗಳ ಹಿಂದೆ ರಾಹುಲರು ಮಹಾ ಸಂಚಾರಿ ನರೇಂದ್ರಯಶ್ ಅವರ ಕುರಿತು ಒಂದು ಲೇಖನ ಬರೆದಾಗ, ಆಗಲೇ ಈ ಅದ್ಭುತ ಚರಿತ್ರದ ಆಧಾರದ ಮೇಲೊಂದು ಐತಿಹಾಸಿಕ ಕಾದಂಬರಿಯನ್ನು ಬರಿಯಬೇಕೆಂದು ಯೋಚಿಸಿದ್ದರು. ಈಗ ನವೆಂಬರ್ 21ರಂದು ಆ ಕಾದಂಬರಿ 'ವಿಸ್ಮೃತ ಯಾತ್ರೀ'ಯನ್ನು ಆರಂಭಿಸಿ ವರ್ಷಾಂತ್ಯದಲ್ಲಿ ಬರೆದು ಮುಗಿಸಿದರು.

ಹೀಗೆ 1953ರಲ್ಲಿ ಸಾಕಷ್ಟು ಬರವಣಿಗೆಯಾಯಿತು. ಮೂರು ಸಾವಿರ ಪುಟಗಳಿಗಿಂತಲೂ ಮಿಕ್ಕಿ ಬರೆದರು. ಈ ಸಾಧನೆ ಸಂತೋಷ ಕೊಟ್ಟಿತಾದರೂ, ಈ ವರ್ಷದ ಅತ್ಯಂತ ಹೆಚ್ಚು ಸಂತೋಷ ಕೊಟ್ಟ ಸಿದ್ಧಿಯೆಂದರೆ – ಮಗಳು ಜಯಾ.

# ಹಿಮಾಲಯ ದರ್ಶನ

ಒಂದು ಪ್ರಾಚೀನ ಪರಂಪರೆಯ ಅನುಸಾರ ಹಿಮಾಲಯಕ್ಕೆ ಐದು ಖಂಡಗಳಿವೆ.

ಖಂಡಾಃ ಪಂಚ ಹಿಮಾಲಯಸ್ಯ ಕಥಿತಾ ನೈಪಾಲ-ಕೂರ್ಮಾಚಲೌ।

ಕೇದಾರೋಽಥ ಜಲಂಧರೋಽಥ ರುಚಿರಃ ಕಶ್ಮೀರ-ಸಂಜ್ಞೋಂತಿಮಃ।

1) ನೇಪಾಳ 2) ಕೂರ್ಮಾಚಲ (ಕುಮಾವ್ರೂಂ3) ಕೇದಾರ (ಗಢವಾಲ್4) ಜಲಂಧರ್ (ಸಿಮ್ಲಾ-ಕಾಂಗಡಾ) ಮತ್ತು 5) ಕಾಶ್ಮೀರ – ಆ ಐದು ಖಂಡಗಳು.

'ಕುಮಾವ್ರೂಂ' ಬರೆದ ಮೇಲೆ (1950) ರಾಹುಲರಿಗೆ 'ಹಿಮಾಲಯ ಪರಿಚಯ'ವನ್ನು ಪೂರ್ತಿ ಬರೆದು ಬಿಡುವ ಯೋಚನೆ ಬಂತು. ಈ ಮುಂಚೆ ಅವರು 'ಕಿನ್ನರ ದೇಶ್ ಮೇಂ' ಮತ್ತು 'ಡಾರ್ಜಿಲಿಂಗ್' ಬರೆದು ಮುಗಿಸಿದ್ದರು. ಈಗ ಡಾರ್ಜಿಲಿಂಗ್‌ನಿಂದ ಚಂಬಾ (ಲೆಸ್ತಾ ನದಿಯಿಂದ ಚೇನಾಬ್ ನದೀವರೆಗಿನ) ತನಕದ ಹಿಮಾಲಯದ ಪರಿಚಯ ಹಿಂದಿಯಲ್ಲಿ ಪ್ರಸ್ತುತ ಪಡಿಸಬೇಕು.

ಮಸ್ಸೂರಿಗೆ ಬಂದ ನಂತರ 'ಗಢವಾಲ್' ಮತ್ತು 'ನೇಪಾಳ' ಬರವಣಿಗೆ ಮುಗಿಸಿದರು. 1955ರಲ್ಲಿ 'ಜೌನ್‌ಸಾರ್-ಡೆಹರಾಡೂನ್' ಕೂಡ ಪೂರ್ತಿಯಾಯಿತು. ಈಗ ಉಳಿದದ್ದು ಎರಡು ಖಂಡಗಳು ಮಾತ್ರ. ಜಲಂಧರ್ (ಸಿಮ್ಲಾ-ಹಿಮಾಚಲ ಪ್ರದೇಶ) ಮತ್ತು ಕಾಶ್ಮೀರ. 1948ರ ಬೇಸಗೆಯಲ್ಲಿ ರಾಹುಲರು ಕನ್ನೌರ-ಕಿನ್ನರ (ಸಟ್ಲೇಜ್ ಮೇಲ್ಗಡೆಯ ಬೆಟ್ಟದ ಕಣಿವೆ ಪ್ರದೇಶ) ಪ್ರದೇಶ ಪ್ರವಾಸ ಮಾಡಿ ಬಂದು 'ಕಿನ್ನರ ದೇಶ್ ಮೇಂ' ಬರವಣಿಗೆಗೆ ತೊಡಗಿದ್ದರು. ವಾಸ್ತವವಾಗಿ ಇದು ಹಿಮಾಚಲ ಪ್ರದೇಶದ ಒಂದು ಭಾಗದ ಪರಿಚಯವೇ.

ಆದರೆ ಈಗ ಇಡೀ ಹಿಮಾಚಲ ಪ್ರದೇಶದ ಪರಿಚಯವನ್ನು ಲೆಸ್ತಾದಿಂದ ಚೇನಾಬ್‌ವರೆಗಿನ ಎಲ್ಲ ಹಿಮಾಲಯ ಖಂಡಗಳ ವಿವರಣೆಯನ್ನು ಬರೆಯುವ ಸಂಕಲ್ಪ ಮಾಡಿದ್ದರು. 1954ರ ಜನವರಿ 7ರಂದು ಕೆಲಸ ಕೈಗೆತ್ತಿಕೊಂಡಾಯಿತು. ಅವರ ಯೋಜನೆಯಂತೆ ಪುಸ್ತಕವನ್ನು ಪೂರ್ತಿಗೊಳಿಸಿ ಅದೇ ವರ್ಷದ ಬೇಸಗೆಯಲ್ಲಿ ಹಿಮಾಚಲ ಪ್ರದೇಶದ ಪ್ರವಾಸ ಮಾಡಬೇಕಿತ್ತು. 'ಕಿನ್ನರ ದೇಶ್‌ಮೇಂ' ಪುಸ್ತಕದ ವಿವರಣೆಯನ್ನು ಅವರು 'ಹಿಮಾಚಲ ಪ್ರದೇಶ'ದ ಪಾಂಡು ಲಿಪಿಯಲ್ಲಿಯೂ ಮಾಡಿದ್ದರು. ಇದರಲ್ಲಿ 'ಪಾಂಡು ಲಿಪಿ'ಯಿರುವ ಪ್ರಸ್ತಾಪ ಮಾಡಬೇಕಾಯಿತು, ಏಕೆಂದರೆ ಈ ಪುಸ್ತಕ ಕೂಡ ಇದುವರೆಗೆ ಪ್ರಕಟವಾಗಿಲ್ಲ.

'ಹಿಮಾಲಯ ಪರಿಚಯ'ದ ಕೊನೆಯ ಐದನೇ ಖಂಡ 'ಕಾಶ್ಮೀರ'ವನ್ನು ಬರೆಯುವ ಸಂಕಲ್ಪವೇನೂ ಇರಲಿಲ್ಲ. ಆದರೆ ಅವರ 'ಮೇರೀ ಲಡಾಖ್ ಯಾತ್ರಾ'ದಲ್ಲಿ ಈ ಐದನೇ ಖಂಡದ ಕುರಿತು ಸ್ವಲ್ಪ ಪ್ರಸ್ತಾಪ ಮಾಡಿ ನಿಲ್ಲಿಸಿಬಿಟ್ಟಿದ್ದರು. 1953ರಲ್ಲಿ, ಅರವತ್ತನೇ ವಯಸ್ಸಿನಲ್ಲಿ 'ಕಾಶ್ಮೀರದ ಕುರಿತು ವಿಸ್ತಾರವಾಗಿ ಬರಯಲೋಸುಗ ಇನ್ನೊಂದು ಬಾರಿ ಅಲ್ಲಿಗೆ ಪ್ರವಾಸ

ಹೋಗಬೇಕಾದೀತು. ಆದರೆ ನನ್ನ ದೇಹಸ್ಥಿತಿ ಮತ್ತು ಶರೀರ ಅದಕ್ಕೆ ಅವಕಾಶ ಕೊಡುತ್ತಿಲ್ಲ' ಎಂದು ರಾಹುಲರು ಬರೆದಿದ್ದಾರೆ.

ಆದರೂ, ಅವರು 1958ರ ಬೇಸಗೆಯಲ್ಲಿ ಕಾಶ್ಮೀರಕ್ಕೆ ಹೋಗೇ ಹೋದರು. ಇದು ಅವರು ಅಲ್ಲಿಗೆ ನೀಡಿದ ನಾಲ್ಕನೇ ಭೇಟಿ. ಪ್ರಾಯಶಃ 'ಹಿಮಾಲಯ ಪರಿಚಯ'ದ ಐದನೇ ಖಂಡ ಬರೆಯುವ ಉದ್ದೇಶವೂ ಅವರಿಗಿತ್ತು. ಆದರೆ ಚೀನಾ ಯಾತ್ರೆಯ ಆಹ್ವಾನ ದೊರೆತ ಕಾರಣ ಆ ಪ್ರವಾಸ ಅರ್ಧಕ್ಕೇ ನಿಂತಿತು. ಹೀಗಾಗಿ 'ಹಿಮಾಲಯ ಪರಿಚಯ'ದ ನಾಲ್ಕು ಭಾಗಗಳು ಮಾತ್ರ, ಅವರು ಸಂಕಲ್ಪಮಾಡಿಕೊಂಡಷ್ಟೇ ಪೂರ್ಣಗೊಂಡವು.

ಆದರೆ ಆ ಸಂಕಲ್ಪ ಅದರ ನಿಜವಾದ ಅರ್ಥದಲ್ಲಿ ಪೂರ್ತಿಯಾಯಿತೇ? 'ಹಿಮಾಲಯ ಪರಿಚಯ'ದ ಪ್ರಕಟಣೆಯ ಅವಸ್ಥೆ ಏನಾಗಿದೆ? ಧಾರಾಳ ದಾಸ್ತಾನಿದೆ. ಭಾರತೀಯ ಭಾಷೆಯ ಅಭಿಮಾನಿಗಳಾದ ನಮಗಿದು ಲಜ್ಜಾಸ್ಪದ ವಿಚಾರ.

ರಾಹುಲರಿಗೆ ಅಲಹಾಬಾದಿನ ಲಾ ಜರ್ನಲ್ ಪ್ರೆಸ್ ಬಗ್ಗೆ ತುಂಬ ಮೆಚ್ಚುಗೆ. ಪ್ರೆಸ್ ಮೇನೇಜರ್ ಶ್ರೀ ಕೃಷ್ಣಪ್ರಸಾದ ದರ್ ಅವರು ಶೀಘ್ರ ಹಾಗೂ ಚೊಕ್ಕ ಮುದ್ರಣದಲ್ಲಿ ಭಾರತದಲ್ಲೇ ಸರ್ವಶ್ರೇಷ್ಠ ಮುದ್ರಣಾಲಯವನ್ನಾಗಿ ಇದನ್ನು ಬೆಳೆಸಿದ್ದರು. 1933ರಿಂದ ರಾಹುಲರ ಪುಸ್ತಕಗಳು ಇಲ್ಲಿಯೇ ಮುದ್ರಣಗೊಳ್ಳುತ್ತ ಬಂದಿದ್ದವು. ನಂತರ ಆ ಪ್ರೆಸ್ ಸೇಠ್‌ಗಳಿಗೆ ಹಸ್ತಾಂತರಗೊಂಡಿತು. ಆದರೆ ಮೇನೆಜರ್ ಆಗಿ ದರ್ ಸಾಹೇಬರನ್ನೇ ಅವರು ಶಾಶ್ವತವಾಗಿ ಇರಿಸಿಕೊಂಡರು. ಮುಂದೆ ಆ ಪ್ರೆಸ್ ಪ್ರಕಾಶನವನ್ನು ಆರಂಭಿಸಿದಾಗ ದರ್ ಸಾಹೇಬ ರಾಹುಲರಿಂದ ಪುಸ್ತಕಗಳನ್ನು ಕೋರಿದರು. 'ಹಿಮಾಲಯ ಪರಿಚಯ'ದ ಎರಡು ಗ್ರಂಥಗಳು, 'ಗಢವಾಲ್' ಮತ್ತು 'ಕುಮಾವ್ರೂಂ'ಗಳನ್ನು ಅವರಿಗೆ ಕೊಟ್ಟರು ರಾಹುಲಜೀ. ಸ್ವಲ್ಪ ಮುಂಗಡ ಹಣವೂ ಸಿಕ್ಕಿತು.

ದರ್ ಸಾಹೇಬರ ಮೇಲ್ವಿಚಾರಣೆಯಲ್ಲಿ 'ಗಢವಾಲ್'ನ ಪ್ರಕಟಣೆ ಬಿರುಸಿನಿಂದ ಮುಂದರೋಡಿತು. ಚಿತ್ರಗಳು, ವಿಸ್ತೃತನಾಮಸೂಚಿ ಹಾಗೂ ವಿಷಯಸೂಚಿಯ ಸಹಿತ ಕುಮಾವ್ರೂಂ ಕೂಡ ಮೋನೋದಲ್ಲಿ ಪಂಚ್ ಆಗಿತ್ತು. ಆದರೆ ಅದೇ ವೇಳೆ ಪ್ರೆಸ್ ಮಾಲಿಕರು ದರ್ ಸಾಹೇಬರನ್ನು ಕೆಲಸದಿಂದ ತೆಗೆದು ಹಾಕಿದರು.

'ಹಿಮಾಲಯ ಪರಿಚಯ'ದ ಎಲ್ಲ ಪುಸ್ತಕಗಳು ಲಾ ಜರ್ನಲ್ ಪ್ರೆಸ್‌ನಲ್ಲಿಯೇ ಪ್ರಕಟಗೊಳ್ಳುವ ಬಗ್ಗೆ ದರ್ ಸಾಹೇಬರೊಂದಿಗೆ ಒಪ್ಪಂದವಾಗಿತ್ತು. ಆದರೆ 'ನೇಪಾಳ' ಖಂಡಕ್ಕಾಗಿ ಮುಂಗಡ ನೀಡಲು ಮಾಲಿಕರು ಒಪ್ಪದಿದ್ದಾಗ ರಾಹುಲರು ಅದನ್ನು ಪಾಟ್ನಾದ ಒಬ್ಬ ಪ್ರಕಾಶಕರಿಗೆ ಕೊಟ್ಟರು. ಅಲ್ಲಿಂದ 'ನೇಪಾಳ'ದ ಉದ್ಧಾರ ಇವತ್ತಿನವರೆಗೂ ಆಗಿಲ್ಲ.

'ನೇಪಾಳ' ತಮಗೆ ಸಿಗಲಿಲ್ಲವೆಂಬ ನೆಪ ಮಾಡಿಕೊಂಡು ಲಾ ಜರ್ನಲ್ ಪ್ರೆಸ್ಸಿನವರು 'ಕುಮಾವ್ರೂಂ' ಅನ್ನು ಪ್ರಕಟಿಸಲು ನಿರಾಕರಿಸಿದರು. 'ನಿನ್ನ ಮನೆ ಹಾಳಾಗ' ಎಂಬ 'ಆಶೀರ್ವಾದ' ಬಿಟ್ಟರೆ ರಾಹುಲಜೀ ಇನ್ನೇನು ಮಾಡುವಂತಿದ್ದರು; ಮುಂಗಡ ಹಣವನ್ನು ವಾಪಸು ಮಾಡಿದರು. ವಾರಣಾಸಿಯಿಂದ ಕುಮಾವ್ರೂಂ ಪ್ರಕಟಣೆಯ ವ್ಯವಸ್ಥೆಯಾಯಿತು.

ಈ ರೀತಿ 'ಗಢವಾಲ್' ಮತ್ತು 'ಕುಮಾವ್ರೂಂ' ಪ್ರಕಟಗೊಂಡವೇನೋ ಸರಿ, ಆದರೆ ಅವು ಪುನರ್ಮುದ್ರಣಗೊಂಡಿಲ್ಲವಾದ ಕಾರಣ ಇಂದು ಲಭ್ಯವಿಲ್ಲ. 'ನೇಪಾಳ' ಮತ್ತು 'ಹಿಮಾಚಲ ಪ್ರದೇಶ' ಎರಡೂ ಇಂದಿಗೂ ಅಪ್ರಕಟಿತವಾಗಿ ಉಳಿದಿವೆ.

ಹಿಮಾಲಯದ ಈ ಐದು ಖಂಡಗಳ ಬಗ್ಗೆ ರಾಹುಲರು ಎಷ್ಟು ಪ್ರಮುಖ ಮಾಹಿತಿ ನೀಡಿದ್ದಾರೆನ್ನಲು 'ಗಢವಾಲ್' ನೋಡಬೇಕು. ಹಿಮಾಲಯದ ವಿವಿಧ ಕ್ಷೇತ್ರಗಳ ಕುರಿತು ಇಂಗ್ಲಿಷರೂ ಲೇಖನಗಳನ್ನು ಬರೆದಿದ್ದಾರೆ, ಗಜೆಟಿಯರ್ ಕೂಡ ಇದೆ. ಆದರೆ ರಾಹುಲರ ವಿವರಣೆಗಳಲ್ಲಿ ಇತಿಹಾಸ, ಸಂಸ್ಕೃತಿ, ಧರ್ಮ, ರೀತಿ-ರಿವಾಜು, ಜಾತಿಗಳು, ಭಾಷೆಗಳು- ಇತ್ಯಾದಿಗಳ ಬಗ್ಗೆ ಎಷ್ಟು ಪ್ರಾಮಾಣಿಕವಾದ ವಿವರಗಳಿವೆಯೋ ಅವು ಬೇರೆ ಕಡೆ ದುರ್ಲಭ. ಈ ಪುಸ್ತಕಗಳಲ್ಲಿ ಅವರು ಬರೆದಿರುವ ಕೆಲ ಸತ್ಯಸ್ಯ ಸತ್ಯ ವಿಚಾರಗಳೂ ಇವುಗಳ ಪ್ರಕಾಶನಕ್ಕೆ ಅಡ್ಡಿಯಾಗಿವೆ.

ಪುಸ್ತಕ ಪೂರ್ತಿಯಾದ ಕೂಡಲೇ ಪ್ರೆಸ್ಸಿಗೆ ಹೋದರೆ ರಾಹುಲರಿಗೆ ಸಂತೋಷವೆನಿಸುತ್ತಿತ್ತು. 'ಪುಸ್ತಕಗಳನ್ನು ಬರೆಯವುದರಲ್ಲಿ ಆಗುವ ಆನಂದಕ್ಕಿಂತ ಎಷ್ಟೋ ಹೆಚ್ಚು ಆನಂದ ಅದರ ಪ್ರೂಫ್ ತಿದ್ದುವುದರಲ್ಲಿ ನನಗಾಗುತ್ತದೆ. "ಪುಸ್ತಕಗಳನ್ನು ಬರೆಯುವದೆಂದರೆ ಗರ್ಭಧಾರಣೆ ಮಾಡಿದ ಹಾಗೆ. ಪ್ರಕಟಣೆ ಎನ್ನುವುದು ಅದಕ್ಕೆ ಜನ್ಮ ಕೊಟ್ಟಂತೆ". ತನ್ನ ಜೀವಿತ ಕಾಲದಲ್ಲಿ 'ನೇಪಾಳ' ಮತ್ತು 'ಹಿಮಾಚಲ ಪ್ರದೇಶ'ಗಳು ಜನಿಸದೇ ಹೋದುದನ್ನು ಕಂಡು ರಾಹುಲಜೀಯವರಿಗೆ ಎಷ್ಟು ವ್ಯಥೆಯಾಗಿರಬಹುದು!

ಹಾಂ, 1954ರ ಹೊಸ ವರ್ಷದ ಎರಡನೆಯ ವಾರದಿಂದಲೇ ರಾಹುಲರು 'ಹಿಮಾಚಲ ಪ್ರದೇಶ' ಬರವಣಿಗೆಗೆ ತೊಡಗಿದ್ದರು. ಇದಕ್ಕೂ ಮೊದಲು ಹಮ್ಮಿಕೊಂಡ ಇನ್ನೊಂದು ಕೆಲಸ: 1953ರಲ್ಲಿಯೇ ಮಾರ್ಕ್ಸ, ಲೆನಿನ್, ಸ್ಟಾಲಿನ್, ಮಾವ್ರೋ-ತ್ಸೇ-ತುಂಗ್ ಅವರ ಜೀವನ ಚರಿತ್ರೆಗಳನ್ನು ಬರೆದಿದ್ದರಷ್ಟೆ. ಈಗ, ಹಿಡಿದ ಕೈಯಲ್ಲೇ, ಜನಸಾಮಾನ್ಯರ ಭಾಷೆಯಲ್ಲಿ ಕಮ್ಯುನಿಸ್ಟ್ ದೃಷ್ಟಿಕೋನವನ್ನು ಒಂದೊಂದು ಫಾರ್ಮಿನಂತೆ ಮೂರೂವರೆ ಡಜನು ಪುಸ್ತಿಕೆಗಳನ್ನು ಬರೆದು ಬಿಡಬೇಕೆಂಬ ಯೋಜನೆ ಅವರದಾಗಿತ್ತು. ಜನವರಿ 6-7ರಂದು 'ಕಮ್ಯುನಿಸ್ಟರು ಏನು ಬಯಸುತ್ತಾರೆ?' ಎಂಬ ಮೊದಲ ಪುಸ್ತಿಕೆಯನ್ನು ಬರೆದರು. 'ರಾಹುಲ ಪ್ರಕಾಶನ'ದಿಂದ ಅದು ಮುದ್ರಿತವಾಯಿತು. ಆದರೆ ಮುಂದಿನ ಪುಸ್ತಿಕೆಗಳನ್ನು ಬರೆಯುವ ಗೋಜಿಗೆ ಅವರು ಹೋಗಲಿಲ್ಲ. ಬಹುಶಃ ಪ್ರಕಾಸನ-ವಿತರಣೆಯ ವ್ಯವಸ್ಥೆ ಆಗಿರಲಿಲ್ಲವೆಂದು ತೋರುತ್ತದೆ. ಆದರೆ ರಾಹುಲಜೀಯವರ ಅಭ್ಯಾಸದಂತೆ ಆ ಮೂವತ್ತೆಂಟು ಪುಸ್ತಿಕೆಗಳ ವಿಷಯ-ಸೂಚಿಯನ್ನಂತೂ ಅವರು ಅವಶ್ಯ ಸಿದ್ಧ ಪಡಿಸಿಟ್ಟಿರಲೇಬೇಕು.

ಮಸ್ಸೂರಿಯಲ್ಲಿ ವಿಪರೀತ ಚಳಿ ಇತ್ತು. ರಾಹುಲರು ಸಂಸಾರ ಸಮೇತ ಅಮೃತಸರಕ್ಕೆ, ಭೈಯ್ಯಾನ ಮನೆಗೆ ಹೋಗಿ ನೆಲಸಿದರು. ಮಾರ್ಚ್‌ನಲ್ಲಿ ಮಂಚ ಬಿಟ್ಟು ಏಳದಷ್ಟು ಜ್ವರ ಬಂತು. ಆದರೂ ಓದುವ, ಪ್ರೂಫ್ ನೋಡುವ ಕೆಲಸ ಮಾಡಿಕೊಂಡೇ ಇದ್ದರು. 1954 ಎಪ್ರಿಲ್ 10ರಂದು ಪುನಃ ಹಿಮಾಚಲ ಪ್ರದೇಶಕ್ಕೆ ಪ್ರವಾಸ ಹೊರಡಲು ನಿರ್ಧರಿಸಿದರು. ಧೂಪನಾಥಜೀ ಮತ್ತು ನೇಪಾಳದ ಜನಕಲಾಲ ಶರ್ಮಾ ಇಬ್ಬರೂ ಜೊತೆಗೆ ಹೊರಡಲು ಸಿದ್ಧರಾದರೂ ಜನಕಲಾಲ, ಪಹಾಡೀ ಯುವಕ, ವೈದ್ಯಕೀಯ ಬಲ್ಲಾತ, ಇತಿಹಾಸ-ಪುರಾತತ್ವಗಳ ಬಗ್ಗೆ ಆಸಕ್ತಿ ಇರುವಾತ. ಆದ್ದರಿಂದ ಅವರನ್ನೇ ರಾಹುಲರು ತಮ್ಮ ಜೊತೆಗೆ ಕರೆದುಕೊಂಡು ಹೋದರು.

ಹಿಮಾಚಲಕ್ಕಾಗಿ ಹೊರಡುವ ಮೂರು ದಿನಗಳ ಹಿಂದೆ ಕಿಸನ್ ಸಿಂಹರನ್ನು ನೋಡುವ ಆಸೆಯಿಂದ ಲಂಢೌರಗೆ ಹೋದರು. ದೆಹಲಿಯಿಂದ ಹಿಂದಿರುಗಿರಬಹುದು ಎಂದು ಹೋಗಿ ನೋಡಿದರೆ ಅಂಗಡಿಗೆ ಬೀಗ ಹಾಕಿದೆ. ದೆಹಲಿಯಲ್ಲಿಯೇ ಅವರು ಏಪ್ರಿಲ್ ಒಂದರಂದು ತೀರಿಕೊಂಡರೆಂದು ತಿಳಿಯಿತು. ರಾಹುಲಜೀಗೆ ಅವರು ತುಂಬ ಪ್ರಿಯರಾದವರು. ಆತ ಅವರಿಗೆ 'ಮೋಮೋ' (ಆವಿಯಲ್ಲಿ ಬೇಯಿಸಿದ ಟಿಬೇಟಿನ ಒಂದು ಬಗೆಯ ಮಾಂಸಾಹಾರಿ ಸಮೋಸಾ)

ಊಟ ಕೊಟ್ಟದ್ದು ಎಷ್ಟು ಸಲವೋ. ಅವರು ಮಸ್ಸೂರಿಯಲ್ಲಿ ಇನ್ನಿಲ್ಲವೆಂಬ ನೋವು ವ್ಯಾಕುಲತೆ ರಾಹುಲರನ್ನು ಸದಾ ಬಾಧಿಸುತ್ತಿತ್ತು. 'ಈ ಜೀವಮಾನ ಪರ್ಯಂತ ಅವರನ್ನು ಹೇಗೆ ಮರೆತೇನು?' ಎಂದು ದುಃಖಿಸಿದ್ದಾರೆ ರಾಹುಲಜೀ.

ಎಪ್ರಿಲ್ 10 (1954)ರಂದು ರಾಹುಲರು ಜನಕಲಾಲರನ್ನು ಕರೆದುಕೊಂಡು ಹಿಮಾಚಲ ಯಾತ್ರೆಗೆ ಹೊರಟರು. ಬರವಣಿಗೆಗಾಗಿ ಸಾಮಾಗ್ರಿಯನ್ನು ಸಂಗ್ರಹಿಸಲು ಅವರ ಹಲವಾರು ಪರಿಚಿತರು ಹಾಗೂ ಅಪರಿಚಿತರಿಗೆಲ್ಲ ಮೊದಲೇ ಪತ್ರ ಬರೆದು ಹಾಕಿದ್ದರು. ಕೆಲವರಿಗೆ 'ಗಢವಾಲ್' ಪ್ರತಿ ಸಹ ಕಳಿಸಿದ್ದರು. ಯಾವ ತರಹದ ಮಾಹಿತಿ ಬೇಕೆಂಬ ಬಗ್ಗೆ ಅವರಿಗೊಂದು ಮಾದರಿ ಇರಲಿ ಎಂದು. ಡೆಹರಾಡೂನ್‌ನಲ್ಲಿ ಇಳಿದು ಬಸ್ಸಿನಲ್ಲಿ ನಾಹನ್‌ಗೆ ಹೋಗಿ ಅಲ್ಲಿನ ಪುರಾತನ ಜಗನ್ನಾಥ ಮಂದಿರವನ್ನು ನೋಡಿದರು, ಹಾಗೆಯೇ ದದಾಹು ಮತ್ತು ಹತ್ತಿರದ ರೇಣುಕಾ ಸರೋವರವನ್ನು ಸಹ ನೋಡಿ ಬಂದರು. ಅಲ್ಲಿ ಪರಶುರಾಮ ಮಂದಿರವೂ ಇದೆ. ತಂದೆ ಜಮದಗ್ನಿಯ ಆಜ್ಞೆಯಂತೆ ಪರಶುರಾಮ ತನ್ನ ತಾಯಿಯನ್ನು ವಧಿಸಿದ್ದು ಇಲ್ಲಿಯೇ, ಬಳಿಕ ಆಕೆ ಸರೋವರದ ರೂಪ ತಾಳಿದಳು ಎಂದು ಹೇಳುತ್ತಾರೆ. ಇಲ್ಲಿ ಪ್ರತಿ ವರ್ಷ ದೊಡ್ಡ ಜಾತ್ರೆ ನಡೆಯುತ್ತದೆ.

ನಾಹಾನ್‌ನಿಂದ ಬಸ್‌ನಲ್ಲಿ ಸಿಮ್ಲಾ ಮಾರ್ಗವಾಗಿ ಪ್ರಯಾಣ ಮಾಡುತ್ತಿದ್ದಾಗ ಸರಾಹ್ನಾ, ಸೋಲನ್ ಮುಂತಾದ ಊರುಗಳು ಸಿಕ್ಕಿದುವು. ಸಿಮ್ಲಾದಲ್ಲಿ ಮೂರು ದಿನ ಉಳಿದು, ಸರಕಾರೀ ಮೂಲಗಳಿಂದ ಸಾಕಷ್ಟು ಸಾಮಗ್ರಿ ಸಂಗ್ರಹಿಸಿದರು. ಭೇಟಿ-ಚರ್ಚೆ ಎಲ್ಲ ಮುಗಿಸಿ, ಸಿಮ್ಲಾದಿಂದ ಸಟ್ಲೆಜ್ ತೀರದ ಬಿಲಾಸ್‌ಪುರಕ್ಕೆ ತೆರಳಿದರು. ಅಲ್ಲಿನ ದೇವಾಲಯ ನೋಡಿದರು. ಅಲ್ಲಿನ ರಾಜ ಸುಸಂಸ್ಕೃತನಿದ್ದ. ರಾಹುಲರನ್ನು ಬರಮಾಡಿಕೊಂಡ. ರಾಜ ಮಹಲಿನಲ್ಲಿಯೇ ಅವರು ಆ ರಾತ್ರಿ ಕಳೆದರು. ಆಗಿನ್ನೂ ಭಾಕ್ರಾ ಅಣೆಕಟ್ಟು ಪೂರ್ತಿಯಾಗಿರಲಿಲ್ಲ. ಅದು ಪೂರ್ತಿಗೊಂಡ ನಂತರ, ರಾಹುಲರು ಉಳಿದುಕೊಂಡಿದ್ದ ಆ ಮಹಲು, ನೋಡಿದ ಮಂದಿರ, ಎಲ್ಲವೂ ಭಾಕ್ರಾ ಸಾಗರದಲ್ಲಿ ಮುಳುಗಡೆಯಾದವು. ಕೆಲ ದಿನಗಳ ಬಳಿಕ ಈ ಬಿಲಾಸಪುರ ಜಲಸಮಾಧಿಯಾಗುವುದಲ್ಲ ಎಂದು ಯೋಚಿಸುತ್ತಲೇ ರಾಹುಲರು ಮಂಡೀಗೆ ಹೊರಟರು. ದಾರಿಯಲ್ಲಿ ಸುಂದರ ನಗರವನ್ನು ನೋಡಿದರು. ಮಂಡೀಯಲ್ಲಿ ಅವರ ಹಳೆಯ ಪರಿಚಯದ ಸುಂದರ ಲಾಲಜೀ ಮತ್ತು ಡೆಪ್ಯುಟಿ ಕಮಿಶನರ್ ಆಂಟೋನಿ ರಾಹುಲರಿಗೆ ತುಂಬ ಸಹಾಯ ಮಾಡಿದರು. ಆದರೆ ಅಲ್ಲಿನ ಖನಿಜ ಉಪ್ಪಿನ ಗಣಿಯ ಬಗ್ಗೆ ವಿವರ ಸಿಗಲೇ ಇಲ್ಲ. ವ್ಯಾಸ ಕೇ ಪರೇಯಲ್ಲಿ ಹಳೆಯ ರಾಜಧಾನಿ ಮಂದಿರ, ತ್ರಿಲೋಕನಾಥ ಮಂದಿರದಲ್ಲಿ 1400ನೇ ಇಸವಿಯ ಆಚೀಚಿನ ಒಂದು ಶಿಲಾಲೇಖ ಇತ್ಯಾದಿ ನೋಡಿದರು. ಮಂಡಿಯಲ್ಲಿ ಒಂದು ಸಾಹಿತ್ಯಗೋಷ್ಠಿ ಹಾಗೂ ಒಂದು ಸಭೆಯಲ್ಲಿ ಅವರ ಭಾಷಣವೂ ಆಯಿತು.

ಮಂಡಿಯಿಂದ ಇಬ್ಬರೂ ಕುಲೂ, ಅಲ್ಲಿಂದ ಮನಾಲಿ, ಅಲ್ಲಿಯ ದೇವಸ್ಥಾನಗಳ ದರ್ಶನ, ಆಕರಗಳ ಸಂಗ್ರಹಣೆ. ಮನಾಲಿಯಿಂದ ಮತ್ತೆ ಮಂಡೀಗೆ ವಾಪಸಾಗಬೇಕಿತ್ತು. ಹೋಗುತ್ತ ಬರುತ್ತ ಕಟರಾಯಿಸ್ಥಾನ ಸಿಕ್ಕಿದಾಗ ರಾಹುಲರಿಗೆ 1937ರ ಪ್ರವಾಸ ನೆನಪಿಗೆ ಬಂತು. ಆಗ ಅವರು ಮತ್ತು ಆನಂದಜೀ ಇಲ್ಲಿಂದ ನದಿ ದಾಟಿಕೊಂಡು ನಗರದಲ್ಲಿನ ರ್‍ಯೊರಿಕ್ ಕುಟುಂಬದ ಮನೆ 'ಉರುಸ್ವತೀ'ಗೆ ಹ್ಯೋಗಿದ್ದರು. ಈ ಸಲವೂ ಅಲ್ಲಿಗೆ ಹೋಗಬೇಕೆಂದು ಇಚ್ಛೆಯಾಯಿತು. ಆದರೆ ಈಗ ಆ ರ್‍ಯೊರಿಕ್ ನಿವಾಸ ಖಾಲಿ ಬಿದ್ದಿತ್ತು.

ಮಂಡೀಗೆ ಹಿಂದಿರುಗಿದವರು ಕಾಂಗ್ರಾ ಕಡೆಗೆ ಹೊರಟರು. ಮಾರ್ಗದಲ್ಲಿ ವೈಜನಾಥದಲ್ಲಿ ಇಳಿದು ಅಲ್ಲಿನ ಪ್ರಾಚೀನ ಮಂದಿರದಲ್ಲಿ ಹನ್ನೊಂದನೇ ಶತಮಾನದ ಎರಡು ಶಿಲಾಲೇಖಗಳಿರುವುದನ್ನು ನೋಡಿದರು. ಪ್ರಾಚೀನ ಕಾಲದಲ್ಲಿ ಇಲ್ಲಿ ಕಿರಾತ ಜನಾಂಗದ ಆಧಿಪತ್ಯವಿತ್ತು. ಆದುದರಿಂದಲೇ ಪುರಾತನ ಕಾಲದಲ್ಲಿ ಇದಕ್ಕೆ ಕಿರ್ ಗ್ರಾಮ ಎಂಬ ಹೆಸರು. ರಾಹುಲರ ಅಭಿಮತದ ಪ್ರಕಾರ ಈ ಕಿರಾತರೇ, ಆರ್ಯರು ಕರೆದ ದಸ್ಯುಗಳು ಹಾಗೂ ಅವರ ಶತ್ರುಗಳು. ಋಗ್ವೇದದ ಕಾಲದಲ್ಲಿ ಶಂಬರ, ಕಿರಾತರ ನಾಯಕನಾಗಿದ್ದ. ಕಾಂಗ್ರಾ ಪ್ರದೇಶದಲ್ಲಿ ಅವನ ಅಧೀನದಲ್ಲಿ ನೂರು ದುರ್ಗಗಳಿದ್ದುವು.

ಕಾಂಗ್ರಾದ ಪಠಿಯಾರ್ ಗಾಂವ್‌ನಲ್ಲಿ ಕ್ರಿಸ್ತಪೂರ್ವಎಂಟನೆಯ ಶತಮಾನದ ಒಂದು ಬ್ರಾಹ್ಮೀ ಶಿಲಾಲೇಖ ಸಿಕ್ಕಿದೆ ಎಂದು ರಾಹುಲರಿಗೆ ತಿಳಿದಿತ್ತು. ಅದನ್ನು ನೋಡಲು ಪಠಿಯಾರ್‌ಗೆ ಹೋದರು. ಆ ಹಳ್ಳಿಯ ಗದ್ದೆಗಳ ನಡುವೆ ಒಂದು ಬಂಡೆಕಲ್ಲಿನ ಮೇಲೆ ಬ್ರಾಹ್ಮೀ ಮತ್ತು ಖರೋಷ್ಠೀಯಲ್ಲಿ 'ಬಾಕುಲಸ್ ಪುಷ್ಕರಿಣಿ' ಎಂದು ಬರೆದಿತ್ತು. ಪುಷ್ಕರಿಣಿ ಈಗ ಅಲ್ಲಿರಲಿಲ್ಲ. ಆದರೆ ಶಿಲಾಲೇಖದಲ್ಲಿ ಉಲ್ಲೇಖಿಸಿದ ರಠ್ಠೀ ಜನರು ರಾಠೀ ಹೆಸರಿನಿಂದ ಈಗಲೂ ಅಲ್ಲಿದ್ದಾರೆ.

ಕಾಂಗ್ರಾ ತಲುಪಿ ನಗರದ ವಜ್ರೇಶ್ವರೀ ಭವಾನಿ ಮಂದಿರ ನೋಡಿದರು. ಮರುದಿನ ಪರ್ವತದ ಮೇಲಿನ ಕಾಂಗ್ರಾದ ಪುರಾತನ ಕೋಟೆಯನ್ನು ನೋಡಿ, ಕಾಂಗ್ರಾದಿಂದ ಜ್ವಾಲಮುಖೀ, ಅಲ್ಲಿಂದ ಮತ್ತೆ ಕಾಂಗ್ರಾ, ಮುಂದೆ ಧರ್ಮಶಾಲಾ. ಅಲ್ಲಿ ಕೆಲ ಮಾಹಿತಿ ದೊರೆಯಿತು, ಭಾಕಸೂಕುಂಡ ತೀರ್ಥವನ್ನೂ ನೋಡಿದ್ದಾಯಿತು. ಧರ್ಮಶಾಲಾದ ಸಮೀಪದಲ್ಲಿಯೇ ಖಜಿಯಾರ್ ಸ್ಥಾನದಲ್ಲಿ ಪಠಿಯಾರ್‌ನಲ್ಲಿ ಇದ್ದಂತಹ ಒಂದು ಶಿಲಾಲೇಖ ದೊರಕಿತ್ತು. ಗದ್ದೆ ದಾಟಿಕೊಂಡು ಅದನ್ನು ನೋಡಲು ಹೋದರು. ಆ ಶಿಲಾಲೇಖದಲ್ಲಿ – ಇಲ್ಲಿ ಕೃಷ್ಣಯಶನು ಬೌದ್ಧ ಭಿಕ್ಷುಗಳಿಗಾಗಿ ವಿಹಾರ ಕಟ್ಟಿಸಿದ್ದ – ಎಂದಿತ್ತು. ಧರ್ಮಶಾಲಾದಿಂದ ಪಠಾಣ ಕೋಟೆ. ಪಠಾಣ ಕೋಟೆಗೂ ಪಠಾಣರಿಗೂ ಏನೂ ಸಂಬಂಧವಿಲ್ಲ ಎನ್ನುತ್ತಾರೆ. ಮುಸ್ಲಿಂ ಇತಿಹಾಸಕಾರರೂ ಇದನ್ನು 'ಪೈಠನ್' ಎಂದಿದ್ದಾರೆ. ಇದು 'ಪ್ರತಿಷ್ಠಾನ'ದ ಅಪಭ್ರಂಶ. ವಾಸ್ತವವಾಗಿ ಇದು ತೀರ ಉತ್ತರದಲ್ಲಿರುವ ಪ್ರತಿಷ್ಠಾನಪುರ. ಇನ್ನೊಂದು ಪ್ರತಿಷ್ಠಾನಪುರ ಅಲಹಾಬಾದಿನಲ್ಲಿತ್ತು. ಮಹಾರಾಷ್ಟ್ರದ ಗೋದಾವರೀ ತಟದಲ್ಲಿ ಇರುವ ಮೂರನೇ ಪ್ರತಿಷ್ಠಾನಪುರ ಇವತ್ತಿಗೂ 'ಪೈಠನ್' ಹೆಸರಿನಲ್ಲಿಯೇ ಪ್ರಸಿದ್ಧವಾಗಿದೆ. ಪಠಾನ್ ಕೋಟ್‌ನಲ್ಲಿನ 'ಕೋಟ್' ಅಂದರೆ 'ಕೋಟೆ'. ಇಲ್ಲಿಂದಲೇ ಪರ್ವತ ಪ್ರದೇಶಕ್ಕೆ ಪ್ರವೇಶ ಮಾರ್ಗ ಆರಂಭ. ಹಾಗಾಗಿ ಬಹಳ ಪ್ರಾಚೀನದಿಂದಲೂ ಪಠಾನ್ ಕೋಟ್‌ನ ಕೋಟೆ ಬಹಳ ಮಹತ್ವ ಪಡೆದಿದೆ.

ಪಠಾಣ್ ಕೋಟ್‌ನಿಂದ ಚಂಬಾಕ್ಕೆ ಹೋಗಬೇಕಿತ್ತು. ಮಾರ್ಗದಲ್ಲಿ ಬನೀಖೇತ್‌ನಲ್ಲಿ ಇಳಿದು ಬಸ್‌ನಲ್ಲಿ ಡಾಲಹೌಸೀಗೆ ಹೋದರು. ಅಲ್ಲಿ ಮೂರು ಗಂಟೆ ಕಾಲ ಸುತ್ತಾಡಿ ನೋಡಿದ ಬಳಿದ 'ನನಗೆ ಹಿಮಾಲಯದ ಊರುಗಳಲ್ಲಿ ಎಲ್ಲಕ್ಕಿಂತ ಡಾಲ್‌ಹೌಸಿಯೇ ಸುಂದರ ಅನಿಸಿತು' ಎಂದು ರಾಹುಲರು ಬರೆದಿದ್ದಾರೆ. ಬನೀಖೇತ್‌ಗೆ ವಾಪಾಸು ಬಂದು ಅಲ್ಲಿಂದ ಮತ್ತೆ ಬಸ್ ಹಿಡಿದು ಚಂಬಾ ತಲುಪಿದರು. ಅದು 1954, ಎಪ್ರಿಲ್ 27ರ ರಾತ್ರಿ. ಪಂಡಿತ ಜಯವಂತ ರಾಮ್ ಮನೆಯಲ್ಲಿ ಉಳಿದುಕೊಳ್ಳುವ ವ್ಯವಸ್ಥೆಯಾಯಿತು. ಮರುದಿನ ಡೆಪ್ಯುಟಿ ಕಮಿಶನರ್ ನೇಗೀ ಠಾಕೂರ ಸೇನ್ ಅವರು ತಮ್ಮಲ್ಲಿಗೆ ಬರಬೇಕೆಂದು ರಾಹುಲರನ್ನು ಆಮಂತ್ರಿಸಿದರು. ರಾಹುಲರಿಗೆ ಭರಮಾರ್‌ಗೂ ಹೋಗಬೇಕಿತ್ತು.

ಆದ್ದರಿಂದ ಅಲ್ಲಿಂದ ಹಿಂದಿರುಗಿದವ ನಿಮ್ಮಲ್ಲಿ ಉಳಿದುಕೊಳ್ಳುತ್ತೇನೆ ಎಂದರು. ಡೆಪ್ಯುಟಿ ಕಮಿಶನರ್, ರಾಹುಲರಿಗೆ ಎಲ್ಲ ರೀತಿಯ ಸಹಾಯ ನೀಡುವುದಾಗಿ ಮಾತು ಕೊಟ್ಟರು.

ಚಂಬಾ ಬಹಳ ಪುರಾತನವಾದ, ಅನೇಕ ಮಂದಿರಗಳಿರುವ, ಪ್ರಾಚ್ಯ ಸಾಮಗ್ರಿಗಳ ದೃಷ್ಟಿಯಿಂದಲಂತೂ ಅತ್ಯಂತ ಸಂಪನ್ನವಾದ ನಗರ. ರಾಹುಲರು ಅಲ್ಲಿನ ಭೂರೀಸಿಂಹ ಸಂಗ್ರಹಾಲಯಲ್ಲಿ ಚಿತ್ರ, ತಾಮ್ರಪತ್ರ, ಪಾಂಡು ಲಿಪಿ ಮತ್ತು ವಿಗ್ರಹಗಳನ್ನೆಲ್ಲ ಅವಲೋಕಿಸಿದರು. ಚಂಬಾದ ಪುರಾತನ ರಾಜಧಾನಿ ಭರಮಾರನ್ನು ನೋಡಬೇಕಿತ್ತು. ರಾಖ್‌ವರೆಗೆ ಬಸ್ಸು ಹೋಗುತ್ತಿತ್ತು. ಮುಂದಿನ ಪ್ರಯಾಣಕ್ಕಾಗಿ ನೇಗೀ ಸಾಹೇಬರು ಎರಡು ಕುದುರೆಗಳ ಏರ್ಪಾಟು ಮಾಡಿಕೊಟ್ಟರು.

ಎಪ್ರಿಲ್ 30ರಂದು ಮುಂಜಾನೆ ರಾಹುಲರೂ ಜನಕಲಾಲರೂ ಚಂಬಾದ ಬಸ್ ನಿಲ್ದಾಣಕ್ಕೆ ಹೋಗಿ ಭರಮಾರ್ ಕಡೆಗೆ ರಾಖ್ ತನಕ ಹೋಗುವ ಬಸ್ಸಿನಲ್ಲಿ ಕುಳಿತರು. ಆ ರಸ್ತೆಯೋ ಸಂಚಾರಕ್ಕೆ ಅಷ್ಟಕ್ಕಷ್ಟೇ. ರಾಹುಲರು ಡ್ರೈವರ್ ಪಕ್ಕ ಕುಳಿತಿದ್ದರು. ಗಾಡಿ ಎಂಟು ಕಿಲೋಮೀಟರ್ ದೂರ ಸಾಗಿರಬಹುದು, ಆಗ ಒಮ್ಮೆಗೇ ಬಲದ ಕಡೆ ವಾಲುತ್ತಿದೆ ಅನಿಸಿತು. ಹೇಳಬೇಕೆನ್ನುವುದರೊಳಗೆ ಬಲ ಮಗ್ಗುಲಾಗಿ ಮಗುಚಿ ನಿಂತೂ ಬಿಟ್ಟಿತು. ಡ್ರೈವರ್ ಸ್ಟೀರಿಂಗ್‌ನಲ್ಲಿ ಸಿಲುಕಿಕೊಂಡ. ಬಸ್ಸಿನ ಎಡ ಭಾಗದ ಕಿಟಕಿಗಳು ಆಕಾಶ ನೋಡುತ್ತಿದ್ದುವು. ಅಲ್ಲಿಂದಲೇ ಕೆಲವರು ಹೊರಬಂದರು. ಉಳಿದವರನ್ನು ಮತ್ತು ಡ್ರೈವರನ್ನು ಹಿಡಿಹಿಡಿದು ಹೊರಗೆಳೆಯ ಬೇಕಾಯಿತು. ಯಾರಿಗೂ ಗಂಭೀರ ಗಾಯವಾಗಲಿಲ್ಲ. ಅದೇ ದೊಡ್ಡ ಆಶ್ಚರ್ಯ. ರಾಹುಲಜೀಯ ಕಾಲಿನಲ್ಲಿ ಒಂದು ಕಡೆ ತರಚಿದ ಗಾಯವಾಯಿತು. ಒಂದು ಹತ್ತು ಹೆಜ್ಜೆ ಮೇಲೇರಿ ಎಡ ಬದಿಗೆಲ್ಲಾದರೂ ಬಿತ್ತೋ, ಅಪಘಾತದ ಸುಳಿವು ಕೊಡಲು ಕೂಡ ಒಂದು ನರಪಿಳ್ಳೆ ಉಳಿಯುತ್ತಿರಲಿಲ್ಲ. ಅವತ್ತು ಸತ್ಯಕ್ಕೂ ಪ್ರಯಾಣಿಕರ ಪ್ರಾಣ ಕೂದಲೆಳೆಯ ಅಂತರದಲ್ಲಿ ಉಳಿದಿತ್ತು. ಜನ ಪದೇ ಪದೇ ದೇವರನ್ನು ವಂದಿಸುತ್ತ ಇದ್ದರು. ಈ ಕುರಿತು ರಾಹುಲರು 'ಜೀವನ-ಮರಣದ ಚಿಂತೆಯಲ್ಲಿಯೇ ಸಾಯುವುದನ್ನು ಘೃಣವಾಗಿ ಭಾವಿಸುವವನು ನಾನು. ದೇವರು ಇಂದೂ ಇಲ್ಲ, ಹಿಂದೆಂದೂ ಇರಲಿಲ್ಲ ಎಂಬುದನ್ನು ತಿಳಿದವನಾಗಿರುವ ನಾನು ಯಾವ ಭಗವಂತನನ್ನು ವಂದಿಸಲಿ?' ಎಂದಿದ್ದಾರೆ.

ರಾಖ್‌ನಲ್ಲಿ ಕುದುರೆ ವ್ಯವಸ್ಥೆ ಕಾಯುತ್ತಿರುವುದರಿಂದ ರಾಹುಲರೂ ಜನಕಲಾಲರೂ ಅಪಘಾತದ ಸ್ಥಳದಲ್ಲಿ ನಿಲ್ಲದೆ ನಡೆದುಕೊಂಡೇ ರಾಖ್ ಕಡೆಗೆ ಮುಂದುವರಿದರು. ಭರಮಾರ್ ತಲುಪಿದರು. ಇದು ಆಡು-ಕುರಿ ಸಾಕಿ ಬದುಕುವ ಗದ್ದೀ ಜನರ ಕ್ಷೇತ್ರ. 'ಬ್ರಹ್ಮಪುರ'ವೆಂಬ ಹೆಸರು ಕೆಟ್ಟು ಭರಮಾರ್ ಎನಿಸಿಕೊಂಡಿರುವ ಇದು ರಾಜಧಾನಿ ನಗರವಾಗಿತ್ತು. ಇಲ್ಲಿ ಅನೇಕ ದೇಗುಲಗಳಿವೆ. ಇವುಗಳಲ್ಲಿ ಹಿತ್ತಾಳೆಯ ಮೂರ್ತಿಗಳು ಸುರಕ್ಷಿತವಾಗಿವೆ. ದುರ್ಗಮ ಮಾರ್ಗದಿಂದಾಗಿ ಮೂರ್ತಿ ಭಂಜಕರಿಗೆ ಭರಮಾರ್ ಕಡೆಗೆ ಬರಲು ಸಾಧ್ಯವಾಗಿರಲಿಲ್ಲ. ಶಿವಮಂದಿರದ ಎದುರಿನ ದೊಡ್ಡ ಹಿತ್ತಾಳೆಯ ಬಸವನ ಮೇಲೆ ಕ್ರಿ.ಶ. ಏಳನೇ ಶತಮಾನದ ಅಕ್ಷರಗಳಲ್ಲಿ ರಾಗಾ ಮೇರುವರ್ಮ ಬರೆಸಿದ ಲೇಖವನ್ನು ರಾಹುಲರು ಓದಿದರು.

ಅಲ್ಲಿಂದ ಮತ್ತೆ ಚಂಬಾಕ್ಕೆ. ಪಠಾಣ್ ಕೋಟ್ ಮತ್ತು ಅಮೃತಸರದ ದಾರಿಯಾಗಿ ಹಿಂದಿರುಗಬೇಕಿತ್ತು. ಪಠಾಣ್ ಕೋಟ್‌ವರೆಗೆ ಬಸ್ಸಿನಲ್ಲಿ ಪ್ರಯಾಣಿಸಿ, ಅಲ್ಲಿಂದ ರೈಲು ಹಿಡಿದರು. ಅಮೃತಸರದಲ್ಲಿ 'ಭೈಯ್ಯಾ'ನ ಜೊತೆಯಲ್ಲಿ ಒಂದು ದಿನ ಕಳೆದರು. ಅಲ್ಲಿಂದ ಡೆಹರಾಡೂನ್‌ಗೆ ಹೋಗಿ ಮೇ 8ರಂದು ಮಸ್ಸೂರಿಗೆ, ಮರಳಿದರು.

ಮಸ್ಸೂರಿಯಲ್ಲಿ ಪ್ರವಾಸಿಗರ ಕಾಲ ಆರಂಭವಾಗಿತ್ತು. ಈ ಬಾರಿಯೂ ಅತಿಥಿಗಳು, ಆಪ್ತೇಷ್ಟರು, ನೋಡಲು ಮತ್ತು ಮಾತಾಡಲು ಬರುವವರ ಸಂಖ್ಯೆ ಬಹಳವಾಗಿತ್ತು. ಧೂಪನಾಥರು ಮೊದಲೇ ಬಂದಿದ್ದರು. ರಾಹುಲರ ಕಡೆಯ ತಮ್ಮ ಶ್ರೀನಾಥ ಪಾಂಡೇ ಕೂಡ ದೆಹಲಿಯಿಂದ ಬಂದು ಬಿಟ್ಟಿದ್ದ. ಸ್ವಾಮಿ ಸತ್ಯಸ್ವರೂಪ, ಬೇನೀಪುರೀ, ಜಗದೀಶ ಚಂದ್ರ ಮಾಥೂರ್, ವಿಷ್ಣು ಪ್ರಭಾಕರ್, ಚಿತ್ರಕಾರ ಕುಮಾರಿಲ ಸ್ವಾಮಿ, ಬ್ಯಾರಿಸ್ಟರ್ ಮುಕುಂದಲಾಲ್, ಶ್ರೀಮತಿ ರಜನೀ ಪಣಿಕ್ಕರ್, ಸರದಾರ್ ಪೃಥ್ವೀ ಸಿಂಹ ಮುಂತಾದ ಅನೇಕ ಪರಿಚಿತರ ಆಗಮನವಾಯಿತು. ಪ್ರತಿ ವರ್ಷದಂತೆ 'ಭೈಯ್ಯಾ-ಭಾಭೀ' ಕೂಡ ಬಂದರು.

1954ರ ಜೂನ್ ಐದರಿಂದ ಏಳರವರೆಗೆ ಡೆಹರಾಡೂನ್‌ನಲ್ಲಿ ಹಿಂದೀ ಸಾಹಿತ್ಯ ಸಮ್ಮೇಳನ ನಡೆಯಿತು. ರಾಹುಲಜೀ ಅದನ್ನು ಉದ್ಘಾಟಿಸಿದರು. ವೃಂದಾವನ ಲಾಲ್ ವರ್ಮಾ ಸಮ್ಮೇಳನದ ಅಧ್ಯಕ್ಷರು. ಟಂಡನ್‌ಜೀ ಕೂಡ ಬಂದಿದ್ದರು. ಅಲಹಾಬಾದಿನ ಉದಯ ನಾರಾಯಣ ತಿವಾರಿ, ವಾಚಸ್ಪತಿ ಪಾಠಕ್ ಮುಂತಾದವರೂ ಉಪಸ್ಥಿತರಿದ್ದರು. ಅದೇ ಸಮಯದಲ್ಲಿ ಕೌರವೀ ಭಾಷಣ ಸಮ್ಮೇಳನವೂ ಜರುಗಿತು. ಹಿಂದಿಯ ಮೂಲ ಬೋಲೀ 'ಕೌರವೀ' ಎಂದು ಪ್ರಚುರ ಪಡಿಸಿದವರು ರಾಹುಲರೇ.

ಸಮ್ಮೇಳನದ ಬಳಿಕ ಉದಯ ನಾರಾಯಣರು, ಪಾಠಕರು ಮುಂತಾದ ಮಿತ್ರರು ಮಸ್ಸೂರಿಗೆ ಬಂದು 'ಹರ್ನ್ ಕ್ಲಿಫ್'ನಲ್ಲಿ ತಮ್ಮೊಡನೆ ಎರಡು ದಿನ ಕಳೆದಾಗ ರಾಹುಲರಿಗೆ ಆದ ಆನಂದ ಅಷ್ಟಿಷ್ಟಲ್ಲ. ಆ ಎರಡು ದಿನ, ಅವರು ಓದು-ಬರವಣಿಗೆ ಎರಡನ್ನೂ ಪೂರ್ಣ ಮರೆತಿದ್ದರು.

ಆರ್ಥಿಕ ಸಂಕಷ್ಟಗಳು ಈಗ ಅವರನ್ನು ಕಂಗೆಡಿಸ ತೊಡಗಿದ್ದುವು. ಹಿಂದಿನ ವರ್ಷದ ಇಡೀ ರಾಯಲ್ಟಿಯ ಲೆಕ್ಕವಾಗಿ ಕೇವಲ 1700 ರೂಪಾಯಿ ಮಾತ್ರ ಸಿಕ್ಕಿತ್ತು. ಖರ್ಚು ಕಡಿಮೆ ಮಾಡಲೇ ಬೇಕೆಂದು ಮನವರಿಕೆಯಾಯಿತು. ಮಗಳು ಜಯಾಳ ಭವಿಷ್ಯದ ಯೋಚನೆ ಕಾಡುತ್ತಿತ್ತು. ಈ ವರ್ಷ ಕಮಲಾ ಬಿ.ಎ. ಪಾಸು ಮಾಡಿ ಎಂ.ಎ. ಗೆ ಹೋಗಲು ಸಿದ್ಧತೆ ನಡೆಸಿರುವುದೊಂದು ಹರ್ಷದ ಸಂಗತಿ.

ಸೆಪ್ಟಂಬರ್ (1954)ನಲ್ಲಿ ರಾಹುಲರು ಸಂಶೋಧನೆ, ಸಂಪಾದನೆ ಮತ್ತು ಅನುವಾದದ ಒಂದು ಬಹುಮುಖ್ಯ ಕೆಲಸವನ್ನು ಆರಂಭಿಸಿಕೊಂಡರು. ಅದರ ಹಿನ್ನೆಲೆ ಹೀಗಿದೆ: 1934ರಲ್ಲಿ ರಾಹುಲರು ಎರಡನೆಯ ಬಾರಿಗೆ ಟಿಬೇಟಿಗೆ ಪ್ರವಾಸದಲ್ಲಿ ಸಾಕ್ಯಾ ವಿಹಾರಕ್ಕೆ ಗೇಶೇ ಧರ್ಮವರ್ಧನರ ಜೊತೆ ಹೋಗಿದ್ದರಷ್ಟೆ. ಒಂದು ದಿನ ಅಲ್ಲಿನ ಒಂದು ಮಂದಿರದ ಅರ್ಚಕರ ಬಳಿ ತಾಡೋಲೆ ಗ್ರಂಥಗಳ ಒಂದು ಕಟ್ಟು ಇದೆ ಎಂದು ಸುಳಿವು ಸಿಕ್ಕಿತು. ಟಿಬೇಟನಲ್ಲಿ ಮರಣೋನ್ಮುಖರ ಬಾಯಿಗೆ ತಾಳೆಗ್ರಂಥಗಳನ್ನು ತೊಳೆದ ಜಲ ಬಿಂದು ಬಿಡುವ ಕ್ರಮವಿತ್ತು. ನಮ್ಮಲ್ಲಿ ಗಂಗಾಜಲ ಬಿಡುತ್ತಾರಲ್ಲ ಹಾಗೆ. ಯಾಕೆಂದರೆ ಅಲ್ಲಿ ಭಾರತೀಯ ತಾಡೋಲೆ ಗ್ರಂಥಗಳನ್ನು ಬಹಳ ಪವಿತ್ರವೆಂದು ಪರಿಗಣಿಸುತ್ತಾರೆ. ಆದ್ದರಿಂದಲೇ ಅರ್ಚಕರು ದಕ್ಷಿಣೆಯ ಆಸೆಯಿಂದ ತಾಡೋಲೆ ಚೂರುಗಳನ್ನು ಹೆಚ್ಚಾಗಿ ಪ್ರಸಾದ ರೂಪದಲ್ಲಿ ಹಂಚುತ್ತಿದ್ದರು.

ಸಾಕ್ಯಾದ ಅಂತಹ ಒಬ್ಬ ಅರ್ಚಕನಿಂದ ಗೇಶೇ ಧರ್ಮವರ್ಧನರು ತಾಳೆಗ್ರಂಥಗಳ ಒಂದು ಕಟ್ಟನ್ನು ಎತ್ತಿಕೊಂಡು ಬಂದಿದ್ದರು. ಅದರಲ್ಲಿ ಸಿದ್ಧ ಸರಹಪಾದರ 'ದೋಹಾಕೋಶ'ದ ಪುಟಗಳೂ ಇದ್ದವು.

'ಪ್ರಸಾದ'ವಾಗಲಿರುವ ಈ ಅತ್ಯಂತ ಮಹತ್ವದ ಪುಟಗಳನ್ನು ಅರ್ಚಕರಿಗೆ ಹಿಂದಿರುಗಿಸುವುದು ರಾಹುಲರಿಗೆ ಆಗದ ಮಾತಾಗಿತ್ತು. ದಕ್ಷಿಣೆ ಸಿಕ್ಕಿದ್ದರಿಂದ ಅರ್ಚಕನೂ ಅದನ್ನು ಹಿಂದಿರುಗಿಸುವಂತೆ ಒತ್ತಾಯಿಸಲಿಲ್ಲ. ಈ ತಾಳೆಪತ್ರಗಳನ್ನು ರಾಹುಲರು ಇಪ್ಪತ್ತು ವರ್ಷಗಳಿಂದ ಇಟ್ಟುಕೊಂಡಿದ್ದರು.

ಸರಹಪಾದರು ಕ್ರಿ.ಶ.ಎಂಟನೇ ಶತಮಾನದಲ್ಲಿ ಇದ್ದವರು. ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ನಂತರ ಬೌದ್ಧ ಭಿಕ್ಷುವಾಗಿ, ನಾಲಂದಾದಲ್ಲಿ ಅಧ್ಯಯನ ಅಧ್ಯಾಪನ ಮಾಡಿದರು. ಆಗ ಅವರ ಭಿಕ್ಷು-ನಾಮ 'ರಾಹುಲ ಭದ್ರ' ಎಂದಿತ್ತು. ನಂತರ ಅವರು ಭಿಕ್ಷು ವೇಷ ಹಾಗೂ ಪಂಡಿತ ಸಮ್ಮಾನಗಳನ್ನೆಲ್ಲ ತ್ಯಜಿಸಿ ವಜ್ರಯಾನದ ಮಾರ್ಗವನ್ನು ಆರಿಸಿಕೊಂಡರು. ಸರೋಜ ವಜ್ರ ಎಂದು ಹೆಸರಾದರು. ಮುಂದೆ ಶರ (ಬಾಣ) ವಾಲ ಜನಾಂಗದ ಒಬ್ಬ ತರುಣಿಯನ್ನು ತನ್ನ ಸಂಗಾತಿಯನ್ನಾಗಿ- ಇವರಿಗೆ ಸಿದ್ಧ ಭಾಷೆಯಲ್ಲಿ 'ಮಹಾ ಮುದ್ರಾ' ಎನ್ನುತ್ತಾರೆ - ಮಾಡಿಕೊಂಡರು. ತಾನೂ ಕಡ್ಡಿಗಳಿಂದ ಶರಗಳನ್ನು ತಯಾರಿಸುತ್ತಾ, ಮುಕ್ತವಾಗಿ ಸಂಚರಿಸತೊಡಗಿದರು. ಜನಭಾಷೆಯಲ್ಲಿ (ಅಪಭ್ರಂಶ) ದೋಹೇಗಳನ್ನು ಕಟ್ಟಿ ಹೇಳಲಾರಂಭಿಸಿದರು, 'ಸರಹಪಾ' ಎಂದೇ ಪ್ರಸಿದ್ಧರಾದರು. ಅಪಭ್ರಂಶವೇ ಬ್ರಜ, ಅವಧೀ, ಮೈಥಿಲೀ, ಬಂಗಾಲೀ ಮುಂತಾದ ಆಧುನಿಕ ಭಾಷೆಗಳ ತಾಯಿ. ಸುಮಾರು 750ನೇ ಇಸವಿಯಿಂದ ಹಿಡಿದು 1300ನೇ ಇಸವಿಯ ವರೆಗೆ ಸರಹಪರಂತಹ ಸಿದ್ಧರು ಸ್ವಯಂಭೂ ಅಂತಹ ಮಹಾನ್ ಜೈನಕವಿಗಳು ಅಪಭ್ರಂಶದಲ್ಲಿ ಕಾವ್ಯ ರಚನೆ ಮಾಡಿದರು. ಈಗ ಲಭ್ಯವಿರುವ ಅಪಭ್ರಂಶ ಕಾವ್ಯ ಸಾಹಿತ್ಯದಲ್ಲಿ ಸರಹಪಾದರ ದೋಹೇಗಳೇ ಅತ್ಯಂತ ಪ್ರಾಚೀನದವು.

ಆದರೆ ನಡುವೆ ಅನೇಕ ಶತಮಾನಗಳ ಕಾಲ ಭಾರತದಲ್ಲಿ ಸರಹಪಾದರ ಗುರುತು-ಹೆಸರು ಸಹ ಇರಲಿಲ್ಲ. ಟಿಬೇಟ್ ಅವರ ಹೆಸರನ್ನು ಉಳಿಸಿತು, ಅವರನ್ನು ಅಪಾರವಾಗಿ ಗೌರವಿಸಿತು. ಈ ಶತಮಾನದ ಆರಂಭದಲ್ಲಿ ಟಿಬೇಟೀ ಸಾಮಗ್ರಿಗಳ ಸಂಶೋಧನೆಯಿಂದ ಸರಹ ಮತ್ತೆ ಬೆಳಕಿಗೆ ಬಂದರು. ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರೀ ತನ್ನ 'ಬೌದ್ಧಗಾನ ಓ ದೋಹಾ'ದಲ್ಲಿ ಸರಹ ಅವರ ಸುಮಾರು ಐವತ್ತು ದೋಹೇಗಳನ್ನು ಉಲ್ಲೇಖಿಸಿದ್ದಾರೆ. ಕ್ರಿ.ಶ.1938ರಲ್ಲಿ ಪ್ರಕಟಗೊಂಡ ಡಾ। ಪ್ರಬೋಧ ಚಂದ್ರ ಬಾಗಚೀಯವರ 'ದೋಹ ಕೋಶ'ದಲ್ಲಿ 112 ದೋಹೆಗಳಿವೆ.

1954ರ ಸೆಪ್ಟೆಂಬರ್‌ನಲ್ಲಿ ಒಂದು ದಿನ ರಾಹುಲರು ಸಾಕ್ಯಾದಲ್ಲಿ ಸಿಕ್ಕಿದ ತಾಡೋಲೆಗಳನ್ನು ಹೀಗೇ ಸುಮ್ಮನೆ ತೆರೆದು ನೋಡಿದರು. ನಂತರ ಮ.ಮ.ಹರಿಪ್ರಸಾದ ಶಾಸ್ತ್ರಿ ಮತ್ತು ಡಾ। ಬಾಗಚೀ ಅವರ ದೋಹೆಗಳೊಂದಿಗೆ ಹೋಲಿಸತೊಡಗಿದರು. ತಾಳಪತ್ರಗಳು ಹನ್ನೊಂದನೇ ಮತ್ತು ಹನ್ನೆರಡನೇ ಶತಮಾನದ ಲಿಪಿಯಲ್ಲಿದ್ದುವು. ರಾಹುಲಜೀ ಅವರ ಬಳಿ ಇದ್ದ ಪ್ರತಿ ಎಲ್ಲಕ್ಕಿಂತ ಹಳೆಯದೂ ಅತ್ಯಂತ ಮುಖ್ಯವಾದದ್ದೂ ಆಗಿತ್ತು. ಅದರಲ್ಲಿ ಸರಹ ಅವರ 163 ದೋಹೆಗಳಿದ್ದುವು. ತಂಜೂರ್‌ನಲ್ಲಿ ಅವರ ಟಿಬೇಟೀ ಭಾಷೆಗೆ ಅನುವಾದಗೊಂಡ 134 ದೋಹೆಗಳು ದೊರೆತವು. ಹೀಗೆ ಅತ್ಯಂತ ಹೆಚ್ಚು ಸಂಖ್ಯೆಯಲ್ಲಿ ಸರಹ ಅವರ ದೋಹೆಗಳು ರಾಹುಲರಿಗೆ ಲಭಿಸಿದ್ದುವು.

ಬಹಳ ಹಿಂದೆಯೇ ರಾಹುಲರು ಬರೆದ 'ವಜ್ರಯಾನ ಔರ್ ಚೌರಾಸೀ ಸಿದ್ಧ' ಮತ್ತು 'ಹಿಂದೀ (ಅಪಭ್ರಂಶ) ಕೇ ಪ್ರಾಚೀನತಮ ಕವಿ ಔರ್ ಕವಿತಾಯೇಂ' (ಎರಡೂ 'ಪುರಾತತ್ವ ನಿಬಂಧಾವಲೀ'ಯಲ್ಲಿ ಸಂಗ್ರಹವಾಗಿವೆ) ಎಂಬ ವಿಸ್ತಾರವಾದ ಲೇಖನಗಳಲ್ಲಿ ಸರಹ ಅವರನ್ನೂ ಕೂಡಿ ಈ ಇಡೀ ವಿಷಯದ ಸಂಶೋಧನಾತ್ಮಕ ಅಧ್ಯಯನ ಪ್ರಸ್ತುತ ಪಡಿಸಿದ್ದರು. 'ಚೌರಾಸೀ ಸಿದ್ಧ'

ಲೇಖನ ಇಂಗ್ಲಿಷ್ ಮತ್ತು ಫ್ರೆಂಚ್‌ನಲ್ಲಿಯೂ ಅಚ್ಚಾಗಿತ್ತು. ಆದರ ನಂತರ 1944ನೇ ಇಸವಿಯಲ್ಲಿ ಅವರು 'ಹಿಂದೀ ಕಾವ್ಯ ಧಾರಾ' ಬರೆದು ಸರಹ, ಕಣ್ಹಪ, ಸ್ವಯಂಭೂ ಮತ್ತು ಅನೇಕ ಅಪಭ್ರಂಶ ಕವಿಗಳ ಕಾವ್ಯದ ಒಂದು ಅದ್ಭುತ ಸಂಕಲನವನ್ನೇ ನೀಡಿದ್ದರು.

ಈಗ ತನ್ನ ಬಳಿಯಿರುವ ತಾಡೋಲೆಗಳ ಮಹತ್ವ ಅವರಿಗೆ ಸ್ಪಷ್ಟವಾಯಿತು. ಅವುಗಳಿಂದ ದೋಹೆಗಳನೆತ್ತಿ ಬರೆದಿಡಲು ತೊಡಗಿದರು. ಇವುಗಳ ಸಂಪಾದನ ಹಾಗೂ ಹಿಂದೀ ಛಾಯಾನುವಾದ ಮಾಡಿ ಒಂದು ಸಂಕ್ಷಿಪ್ತ ಪೀಠಿಕೆ ಬರೆದು ಪ್ರಕಟಿಸಿ ಬಿಡುವುದೆಂದು ಯೋಚಿಸಿದರು. ಆದರೆ ಕೆಲಸ ಗಾಢವಾಗುತ್ತ ಹೋಯಿತು. ಸರಹ ಅವರ ಹದಿನಾಲ್ಕು ಹದಿನೈದು ಮೂಲ ಗ್ರಂಥಗಳು ನಷ್ಟವಾಗಿದ್ದುವು. ಆದರೂ ಅವುಗಳ ಟಿಬೇಟೀ ಅನುವಾದಗಳು ಲಭ್ಯವಿದ್ದುವು. ಅವುಗಳನ್ನೂ ಹಿಂದಿಗೆ ಅನುವಾದಿಸಿದರು. ಬಹಳ ಕಠಿಣ ಕೆಲಸವಾಗಿತ್ತದು. 'ಸಾಕಷ್ಟು ಪರಿಶ್ರಮದ ಕೆಲಸವಾಗಿತ್ತು'. ಎಂದು ರಾಹುಲರು ತಮ್ಮ ಮತ್ಯಾವ ಪುಸ್ತಕದ ಕುರಿತೂ ಹೇಳಿದಂತಿಲ್ಲ. ಶೀಘ್ರವಾಗಿ ಎಪ್ಪತ್ತೊಂಭತ್ತು ಪುಟಗಳ ವಿಸ್ತಾರವಾದ ಒಂದು ಪೀಠಿಕೆ ಬರೆದು 1955ರ ಜನವರಿಯಲ್ಲಿ ಮುಂಬಯಿಯಲ್ಲಿ ಏರ್ಪಡಿಸಲಾದ ಎರಡು ಭಾಷಣಗಳಲ್ಲಿ ಪ್ರಸ್ತುತಪಡಿಸಿಯೂ ಬಿಟ್ಟರು. ದೊಡ್ಡ ಅಳತೆಯ ಸುಮಾರು ಐನೂರು ಪುಟಗಳ 'ದೋಹಾ ಕೋಶ' ಗ್ರಂಥ ಬಿಹಾರ ರಾಷ್ಟ್ರಭಾಷಾ ಪರಿಷತ್ (ಪಾಟ್ನಾ)ದಿಂದ 1957ರಲ್ಲಿ ಪ್ರಕಟವಾಯಿತು.

1954ರ ಅಕ್ಟೋಬರ್‌ನ ಆರಂಭದಲ್ಲಿ, ಅಸಹಕಾರ ಕಾಲದ ಒಡನಾಡಿ ಬಿಹಾರದ ಕಾರ್ಯಾನಂದ ಶರ್ಮಾ ಅವರು ಕೆಲ ದಿನಗಳಿಗಾಗಿ ಮಸ್ಸೂರಿಗೆ, ರಾಹುಲರ ಬಳಿಗೆ, ಬಂದರು. ಆಗ ರಾಹುಲರು ಪ್ರಕಾಶಕರು ಹಾಗೂ ಸ್ನೇಹಿತರನ್ನು ಭೇಟಿಯಾಗಲು ಹದಿನೈದು ದಿನಗಳ ಮಟ್ಟಿಗೆಂದು ಹೊರಟು ಪ್ರಯಾಗಕ್ಕೆ ಹೋಗಿ ಅಲ್ಲಿ ಪಂಡಿತ ಕ್ಷೇತ್ರೇಶಚಂದ್ರ ಚಟ್ಟೋಪಾಧ್ಯಾಯ, ಪಂಡಿತ ಉದಯ ನಾರಾಯಣ ತಿವಾರಿ ಮುಂತಾದ ಅನೇಕ ಮಿತ್ರರನ್ನು ಕಂಡರು. ಹೇಗೂ ದಾರಾಗಂಜಿಗೆ ಹೋಗಿ ನಿರಾಲಾರನ್ನು ಭೇಟಿ ಮಾಡದಿರುವ ಮಾತೇ ಇಲ್ಲ. ರಾಹುಲರು ಆಗ ಸರಹಪಾದರ ಕುರಿತು ಕೆಲಸ ಮಾಡುತ್ತಲೇ ಇದ್ದರಾಗಿ ನಿರಾಲಾ ಅವರ ಅಸ್ವಾಸ್ಥ್ಯ ನೋಡಿ ಸರಹ ಅವರ ನೆನಪಾಯಿತು. 'ನಿರಾಲಾ ಅವರು ಸಿದ್ಧ ಪಂಥ ಹಿಡಿದವರಲ್ಲ. ಆದರೂ ಸಿದ್ಧರ ಎಲ್ಲ ಗುಣಗಳೂ ಅವರಲ್ಲಿದ್ದುವು. ಅವರು ಸಿದ್ಧರ ಮಾರ್ಗವನ್ನು ಅಂಗೀಕರಿಸಿ ಮಹಾಮುದ್ರಾಯುಕ್ತರಾಗಿದ್ದಿದ್ದರೆ ಅವರಿಂದ ಇನ್ನಷ್ಟು ಉಪಕೃತರಾಗುತ್ತಿದ್ದೆವು ಎಂದು ಎಷ್ಟೋ ಸಲ ನನಗೆ ಅನಿಸುತ್ತಿರುತ್ತದೆ'.

ಪ್ರಯಾಗದಿಂದ ಬನಾರಸಿಗೆ ಹೋಗಿ ಅಲ್ಲಿ ತನ್ನ ಹಳೆಯ ಸ್ನೇಹಿತ ದಿ। ಬಾಬಾ ಶಿವಪ್ರಸಾದಜೀ ಅವರ 'ಸೇವಾ ಉಪವನ'ದಲ್ಲಿ ಉಳಿದರು. ಈ ಸಲವೂ ತನ್ನ ವಿದ್ಯಾರ್ಥಿ ಜೀವನದ ಮೋತೀರಾಮ ಬಾಗ್ ನೋಡಲು ಹೋದರು. ತೋಟ ಹಾಳಾಗಿತ್ತು. ಬ್ರಹ್ಮಚಾರಿ ಚಕ್ರಪಾಣಿಯವರ ಕುಟೀರ ಹಾಗೇ ಇತ್ತು. ಆದರೆ ಅಂದು ಇದ್ದವರು ಯಾರೂ ಇರಲಿಲ್ಲ. ಪಂಡಿತ ಹಜಾರೀ ಪ್ರಸಾದ ದ್ವಿವೇದೀ ಅವರ ಮನೆಗೆ ಹೋದರು. ಪಂಡಿತ ರಾಮಚಂದ್ರ ಶುಕ್ಲ ಅವರ ಮನೆಗೆ ಹೋಗಿ ಅವರ ಫೋಟೋವನ್ನು ಅನಾವರಣ ಮಾಡಿದರು.

ಕಾಶೀ ಯಾತ್ರೆಯೆಂದರೆ, ಜೊತೆಗೆ ಸಾರನಾಥದ ಯಾತ್ರೆಯೂ ಅವಶ್ಯ ಆಗಲೇ ಬೇಕು; ದೇವಾಲಯ ಹಾಗೂ ಪುರಾತನ ಸ್ಮಾರಕಗಳನ್ನು ಮರಳಿ ವೀಕ್ಷಿಸಿದ ಬಳಿಕ ಬರ್ಮಾ ಧರ್ಮಶಾಲೆಗೆ ಹೋಗಿ ಹಳೆಯ ಪರಿಚಯದ ಮಹಾಸ್ಥವಿರ ಕಿತ್ತಿಮಾ ಅವರನ್ನು ಕಂಡರು. ರಾಹುಲರ ತಮ್ಮನ ಮಗ

ಉದಯ ನಾರಾಯಣ ಪಾಂಡೆ ಮಹಾಬೋಧಿ ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದರು. ಕಿತ್ತಿಮಾಜೀಯವರ ವಾಸ ಸ್ಥಳದ ಪಕ್ಕದಲೇ ಅವರೂ ವಾಸಿಸುತ್ತಿದ್ದರು.

ಬನಾರಸಿಗೆ ಹಿಂದಿರುಗಿದರೆ ಮತ್ತೆ ಭೇಟಿ, ಚರ್ಚೆ, ಬಿಡುವಿಲ್ಲದ ಕಾರ್ಯಕ್ರಮಗಳು. ರಾಯ್ ಕೃಷ್ಣದಾಸರ 'ಕಲಾಭವನ' ವಿಶ್ವವಿದ್ಯಾಲಯಕ್ಕೆ ಸೇರಿತ್ತು. ಆಜಮಗಢ ಜಿಲ್ಲೆಯವರಾದ, ರಾಹುಲರ ಪರಿಚಯದ, ಪರಮೇಶ್ವರೀಲಾಲ ಗುಪ್ತರು ಈಗ ಅಲ್ಲಿ ಕ್ಯುರೇಟರ್ ಆಗಿದ್ದರು. ರಾಹುಲರು ಆ ಸಂಗ್ರಹಾಲಯದ ವಿಗ್ರಹ, ಚಿತ್ರ ಹಾಗೂ ಮುದ್ರೆಗಳನ್ನು ನೋಡಿದರು.

ಬನಾರಸಿನಿಂದ ಪಾಟ್ನಾಗೆ ಹೋದರು. ಹಳೆಯ ಮಿತ್ರ ಗೋರಖನಾಥ ತ್ರಿವೇದಿಯವರ ಅಳಿಯ ಪಂಡಿತ ದೇವೇಂದ್ರನಾಥ ಶರ್ಮಾ ಅವರ ಮನೆಯಲ್ಲಿ ತಂಗಿದರು. ಸಮ್ಮೇಳನದ ಭವನದಲ್ಲಿ ಆಚಾರ್ಯ ಶಿವಪೂಜನ ಸಹಾಯ್ ಅವರನ್ನು ಭೇಟಿಯಾದರು.'ಇಂತಹ ಸರಳ ಹಾಗೂ ಮಧುರ ಸ್ವಭಾವದ ಸಾಹಿತಿ ಸಿಗುವುದು ಬಹಳ ಕಷ್ಟ' ಎಂದು ಅವರ ಬಗ್ಗೆ ರಾಹುಲರು ಬರೆದಿದ್ದಾರೆ. ನಾಗಾರ್ಜುನರು ಪಾಟ್ನಾದಲ್ಲೇ ಇದ್ದರು. ಅವರ ಜೊತೆಯಲ್ಲಿ ಮ್ಯೂಸಿಯಂಗೆ ಹೋದರು. ಜೈಸ್ವಾಲ್ ಪ್ರತಿಷ್ಠಾನದಿಂದ ತಂಜೂರಿನ ಸರಹಪಾದರ ಕವಿತೆಗಳಿರುವ ಭಾಗಗಳನ್ನು ತೆಗೆದುಕೊಂಡು ಅಲ್ಲಿಂದ ಪಾರ್ಟಿ ಆಫೀಸಿಗೆ ಹೋಗಿ ಹಳೆಯ ಗೆಳೆಯರನ್ನು ಕಂಡರು. ಸಮಯ ಮಾಡಿಕೊಂಡು ನಾಲಂದಾಕ್ಕೂ ಹೋಗಿ ಅಲ್ಲಿ ಭಿಕ್ಷು ಜಗದೀಶ ಕಾಶ್ಯಪ ಅವರ ಮೇಲ್ವಿಚಾರಣೆಯಲ್ಲಿ ಪ್ರಗತಿ ಹೊಂದುತ್ತಿದ್ದ ಪಾಲಿ ಪ್ರತಿಷ್ಠಾನದ ಕಾರ್ಯಕಲಾಪಗಳನ್ನು ನೋಡಿದರು.

ಪಾಟ್ನಾದಿಂದ ರಾಹುಲರು ಲಕ್ನೋಕ್ಕೆ ಬಂದರು. ಅನುಕೂಲತೆಯ ದೃಷ್ಟಿಯಿಂದ ಅವರು, ಅಲ್ಲಿ ಯಶಪಾಲರ ಮನೆಯಲ್ಲಿ ಉಳಿದರು. ಭಿಕ್ಷು ಪ್ರಜ್ಞಾನಂದಜೀ ಅವರು ರಾಹುಲರನ್ನು ಬುದ್ಧ ವಿಹಾರಕ್ಕೂ ಕರೆದುಕೊಂಡು ಹೋದರು. ಇಲ್ಲಿಯೂ ರಮೇಶ ಸಿಂಹ ಮುಂತಾದ ಮಿತ್ರರನ್ನು ಕಂಡು, ಲಕ್ನೋದಿಂದ ಮಸ್ಸೂರಿಗೆ ಹಿಂದಿರುಗಿ ಸರಹ ಅವರ ಕವಿತೆಗಳನ್ನು ಭೋಟ್ ಭಾಷೆಯಿಂದ ಹಿಂದಿಗೆ ಅನುವಾದಿಸುವ ಕೆಸಲದಲ್ಲಿ ತೀವ್ರವಾಗಿ ಮುಳುಗಿಕೊಂಡರು.

ನವೆಂಬರ್ ಕೊನೆಯಲ್ಲಿ ರಾಹುಲರು ಭಾರತ-ಸೋವಿಯತ್ ಮೈತ್ರಿ ಸಂಘದ ಸಮ್ಮೇಳನದಲ್ಲಿ ಭಾಗವಹಿಸಲು ನಾಲ್ಕೈದು ದಿನಗಳಿಗಾಗಿ ದೆಹಲಿಗೆ ಹೋದರು. ಅಲ್ಲಿಂದ ಮರಳಿ, 1954ರ ಡಿಸೆಂಬರ್ ಎರಡನೆಯ ವಾರದಲ್ಲಿ ಹೀಗೆ ಬರೆದಿದ್ದಾರೆ, 'ನಾನು 62 ವರ್ಷದ ಅಂಚಿನಲ್ಲಿದ್ದೆ. ದೇಹದಲ್ಲಿ ಮೂರು ವರ್ಷಗಳ ಹಿಂದೆ ಇದ್ದಷ್ಟು ಶಕ್ತಿ ಈಗಿರಲಿಲ್ಲ. ಸ್ವಲ್ಪ ನಡೆದಾಡಿದರೂ ದಣಿವೆನಿಸುತ್ತಿತ್ತು. ಎದೆ ಒಳಗಿನಿಂದ ನೋಯ ತೊಡಗುತ್ತಿತ್ತು.' ಎಂದು ಬರೆದಿದ್ದಾರೆ. ಈ ಚಳಿಗಾಲದಲ್ಲಿ ಮಸ್ಸೂರಿಯಲ್ಲಿರುವುದು ಬೇಡ ಎಂದು ನಿರ್ಧರಿಸಿದರು. 'ಹರ್ನ್ ಕ್ಲಿಫ್'ಅನ್ನು ಮಾರಿ ಬಾಡಿಗೆ ಮನೆಯಲ್ಲಿ ವಾಸ ಮಾಡುವ ಯೋಚನೆಯೂ ಇತ್ತು.

ಅದೇ ಡಿಸೆಂಬರ್ ತಿಂಗಳಿನಲ್ಲಿ ಮಸ್ಸೂರಿಯಿಂದ ಹೊರ ಹೋಗುವ ಸಂದರ್ಭ ಒದಗಿ ಬಂತು. ಸರಹಪಾದರ ಮೇಲೆ ಭಾಷಣ ನೀಡುವಂತೆ ಕೋರಿ ಮುಂಬಯಿಯಿಂದ ಆಮಂತ್ರಣ ಬಂದಿತು. ರಾಹುಲರು ಅದನ್ನು ಸ್ವೀಕರಿಸಿದರು. ಅಲ್ಲಿಯೇ ಒಬ್ಬ ಹೃದಯರೋಗತಜ್ಞನಿಂದ ಪರೀಕ್ಷೆ ಮಾಡಿಸಿಕೊಳ್ಳುವುದೆಂದು ಯೋಚಿಸಿದರು. 1954ರ ಡಿಸೆಂಬರ್ 30 (1954)ರಂದು ಮುಂಬಯಿಗೆ ಹೊರಟರು.

# ಪುನಃ ಪಾರ್ಟಿಯಲ್ಲಿ

ರಾಹುಲರಿಗೆ ಹೊಸ ವರ್ಷದ (1955) ಸೂರ್ಯ ಮುಂಬಯಿಯಲ್ಲಿ ಉದಯಿಸಿದ. ಮಲಬಾರ್ ಹಿಲ್‌ನ ಪೋದ್ದಾರರ ಮನೆ ಎಲ್ಲ ರೀತಿಯಲ್ಲಿಯೂ ಅನುಕೂಲವಾಗಿತ್ತು. ಮುಂಬಯಿ ಆಸ್ಪತ್ರೆಯಲ್ಲಿ ಪರೀಕ್ಷೆ ಮಾಡಿಸಲೂ ಸೇಠಜೀ ಸಹಾಯ ನೀಡಲಿದ್ದರು. ಪೋದ್ದಾರರು ಎಲ್ಲ ಸೇಠರಂತಲ್ಲ ಎಂಬುದು ರಾಹುಲರ ಅನುಭವ.

ಮೊದಲ ದಿನವೇ ಮೂವರು ವಿದ್ವಾಂಸರ ಭೇಟಿಯಾಯಿತು. ಮ್ಯೂಸಿಯಂನ ಕ್ಯುರೇಟರ್ ಡಾ| ಮೋತೀಚಂದ ಅವರನ್ನು ಭೇಟಿಯಾಗಲು ಹೋದಾಗ, ಅವರ ಮನೆಯ್ಲಲಿಯೇ ಇದ್ದ ರಾಯ್ ಕೃಷ್ಣದಾಸ್ ಮತ್ತು ಡಾ| ವಾಸುದೇವ ಶರಣ ಅಗರವಾಲ್ ಅವರೊಂದಿಗೆ ಎರಡು ಗಂಟೆಗಳ ಕಾಲ, ಸತ್ಸಂಗದಲ್ಲಿ ಕಳೆದಂತಾಯಿತು. ಜನವರಿಯ ಮೂರು ಮತ್ತು ನಾಲ್ಕರಂದು 'ಜ್ಞಾನಸತ್ರದ' ಆಶ್ರಯದಲ್ಲಿ ರಾಷ್ಟ್ರಭಾಷಾ ಸಮಿತಿಯಲ್ಲಿ ಏರ್ಪಾಟಾದ ಸಭೆಯಲ್ಲಿ ಸರಹಪಾದರ ಮೇಲೆ ರಾಹುಲರು ಎರಡು ಭಾಷಣ ನೀಡಿದರು. ಅಂದೇ ಪಂಡಿತ ನಾಥೂರಾಂ ಪ್ರೇಮಿ ಅವರನ್ನು ಕಾಣಲು ಹೋದಾಗ ಅಲ್ಲಿ ಡಾ| ಹೀರಾಲಾಲ ಜೈನ ಮತ್ತು ಪ್ರೊ.ಉಪಾಧ್ಯೆ ಅವರ ಭೇಟಿಯೂ ಆಗಿಬಿಟ್ಟಿತು. ಮರುದಿನ ಪೋದ್ದಾರರ ಸಹಾಯದಿಂದ ಮುಂಬಯಿ ಆಸ್ಪತ್ರೆಯಲ್ಲಿ ಪರೀಕ್ಷೆ ಮಾಡಿಸಿಕೊಳ್ಳುವ ಕೆಲಸವೂ ಮುಗಿಯಿತು. ರಿಪೋರ್ಟ್ ಸಿಗಲು ತಡವಿತ್ತು. ರಾಹುಲರು ಪಾರ್ಟಿ ಆಫೀಸಿಗೆ ಹೋದರು. ಈಗ ಕಮ್ಯುನಿಸ್ಟ್ ಪಾರ್ಟಿಯ ಕೇಂದ್ರ ಕಚೇರಿ ದೆಹಲಿಗೆ ಸ್ಥಳಾಂತರಗೊಂಡಿತ್ತು. ಜನವರಿ 9ರಂದು ಮಸ್ಸೂರಿಗೆ ವಾಪಸಾದರು.

ಕಮಲಾ ಎರಡನೆಯ ಮಗುವಿಗೆ ತಾಯಿಯಾಗಲಿದ್ದಾಳೆ. ಚಳಿಗಾಲಕ್ಕಾಗಿ ಮಸ್ಸೂರಿಯ ಮೇರಿ ಆಸ್ಪತ್ರೆ ಮುಚ್ಚಿತ್ತು. ಆದ್ದರಿಂದ ದೆಹಲಿಗೆ ಹೋಗುವುದೆಂದು ತೀರ್ಮಾನವಾಗಿ ಜನವರಿ 16 ರಂದು ಸಪರಿವಾರ ಅವರು ಅಲ್ಲಿಗೆ ತಲುಪಿದರು. ದರಿಯಾಗಂಜ್‌ನಲ್ಲಿ 'ಭೈಯ್ಯಾ'ನ ಮನೆಯಲ್ಲಿ ತಂಗುವ ವ್ಯವಸ್ಥೆಯಾಯಿತು. ಹೆರಿಗೆಗಾಗಿ ಖಾನ್ ಮಾರ್ಕೆಟಿನ ಒಂದು ಪ್ರೈವೇಟ್ ಆಸ್ಪತ್ರೆಯಲ್ಲಿ ಏರ್ಪಾಟಾಯಿತು. 1955ರ ಜನವರಿ 31ರಂದು ಜಯಾಗೆ ಒಬ್ಬ ತಮ್ಮ, ಜೇತಾ, ಜನಿಸಿದ.

ಶೀಘ್ರವೇ ಇನ್ನೊಂದು ಸ್ಮರಣೀಯ ದಿನ. 1939ರ ಅಕ್ಟೋಬರಿನಲ್ಲಿ ರಾಹುಲರು ಪ್ರಥಮಬಾರಿಗೆ ಕ್ರಮಬದ್ಧವಾಗಿ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರಾಗಿದ್ದರಷ್ಟೇ? 1947ರಲ್ಲಿ, ಮುಂಬಯಿ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ, ಪಾರ್ಟಿಯಿಂದ ಬೇರೆಯಾಗ ಬೇಕಾಯಿತು. ಈಗ ಏಳು ವರ್ಷಗಳ ಬಳಿಕ ಮತ್ತೆ ಸದಸ್ಯನಾಗುವ ಸಂದರ್ಭ ಬಂತು. 1955ರ ಫೆಬ್ರವರಿ 5ರಂದು ರಾಹುಲಜೀ, ಪಾರ್ಟಿಯ ಕೇಂದ್ರ ಕಛೇರಿಗೆ ಹೋದರು. ಸೆಕ್ರೆಟರಿ ಅಜಯ ಘೋಷ್ ಅವರೊಡನೆ ಮಾತುಕತೆ ನಡೆಯಿತು. ತಾವು ಪುನಃ ಪಾರ್ಟಿಸದಸ್ಯರಾಗುವ ವಿಚಾರ ಎತ್ತಿದಾಗ ಅಜಯ ಘೋಷ್ ಅದನ್ನು ಸ್ವಾಗತಿಸಿದರು.

ರಾಹುಲಜೀ ಅಂದೇ ಅರ್ಜಿ ಸಲ್ಲಿಸಿದರು. 'ಅವತ್ತು ನಾನು ಬಹಳ ಸಂತೋಷಗೊಂಡೆ. ಪಾರ್ಟಿ ಸದಸ್ಯನಾಗದೇನೇ ಎಲ್ಲಿ ಮಹಾಪ್ರಯಾಣಕ್ಕೆ ಹೊರಡಬೇಕಾಗುತ್ತದೋ ಎಂದು ಹೆದರಿಕೊಂಡಿದ್ದೆ. ನನ್ನ ಹಳೆಯ ಕಾಮ್ರೇಡರೊಂದಿಗೆ ಮನಬಿಚ್ಚಿ ಬರೆಯುತ್ತಿದ್ದರೂ ಒಂದು ರೀತಿಯ ಪೃಥಕ್ಕತೆ ನೋಡಿ ಜೀವ ಬೇಸರಗೊಳ್ಳುತ್ತಿತ್ತು. ಇನ್ನು ಬದುಕಿರುವ ಪರ್ಯಂತ ಪಾರ್ಟಿಯ ಸದಸ್ಯನಾದೆ ಎಂದುಕೊಂಡೆ'.

ಒಂದು ದಿನ ರಾಹುಲಜೀ ರಾಜಕಮಲ್ ಪ್ರಕಾಶನಕ್ಕೆ ಹೋದಾಗ ಅಲ್ಲಿ 'ಮೈಲಾ ಆಂಚಲ್'ನ ಪ್ರತಿ ಸಿಕ್ಕಿತು. ಬಿಡುವಿದ್ದ ಕಾರಣ ಮೊದಲಿಂದ ಕಡೆಯವರೆಗೂ ಓದಿದರು. 'ನಾನು ಫಣೀಶ್ವರನಾಥ ರೇಣು ಅವರ ಬರೆಹಕ್ಕೆ ಶರಣಾಗಿ ಬಿಟ್ಟೆ. ದೊಡ್ಡ ಕಾದಂಬರಿ ಕ್ಷೇತ್ರದಲ್ಲಿ ಪ್ರೇಮಚಂದರ ನಂತರ ಇಷ್ಟು ಸುಂದರವಾಗಿ ಬರೆದಿರುವವರು ಇನ್ನಾರೂ ಇಲ್ಲ ಎಂದೇ ನನ್ನ ತಿಳುವಳಿಕೆ' ಎಂದು ಈ ಕುರಿತು ಬರೆದಿದ್ದಾರೆ.

ಫೆಬ್ರವರಿ 11ರ ಕಮ್ಯುನಿಸ್ಟ್ ಪಾರ್ಟಿಯ ಮುಖಪತ್ರ 'ನ್ಯೂಏಜ್'ನಲ್ಲಿ ರಾಹುಲಜೀ ಮರಳಿ ಪಾರ್ಟಿ ಸೇರಿದ ಸುದ್ದಿ ಪ್ರಕಟವಾಗಿತ್ತು. ಸಂಯೋಗವಶಾತ್ ಅದೇ ದಿನ ಬಾಬೂ ರಾಜೇಂದ್ರ ಪ್ರಸಾದರೊಂದಿಗೆ ರಾಹುಲರ ಭೇಟಿ ನಿಗದಿಯಾಗಿತ್ತು. ರಾಹುಲರು ಹೋದರು; ಸ್ವಾಸ್ಥ್ಯ, ಸಾಹಿತ್ಯ ಮತ್ತು ಟಿಬೇಟಿನ ಕುರಿತು ಮಾತುಕತೆಯಾದ ಮೇಲೆ 'ಏನಾದರೂ ಸಹಾಯದ ಅಗತ್ಯವಿದೆಯೇ' ಎಂದು ರಾಜೇಂದ್ರ ಪ್ರಸಾದರು ಕೇಳಿದರು. ರಾಹುಲಜೀ ಹೇಳಿದ್ದಿಷ್ಟೇ, 'ನನ್ನ ಆರೋಗ್ಯ ಹಿಂದಿನಂತಿಲ್ಲ. ಆದರೆ ಟಿಬೇಟಿನಲ್ಲಿ ಹಳೆಯ ಮಠಗಳನ್ನು ಮತ್ತು ಪುಸ್ತಕಾಲಯಗಳನ್ನು ಮುಕ್ತ ತೆರೆಡುವ ಸುದ್ದಿ ಕೇಳುತ್ತಿದೆಯಾದ್ದರಿಂದ ಟಿಬೇಟಿಗೆ ಹೋಗಬೇಕೆಂದಿದ್ದೇನೆ. ಆಗ ಪಾಸ್‌ಪೋರ್ಟಿಗಾಗಿ ನೀವು ಸಹಾಯ ಮಾಡಬೇಕಾದೀತು.' – ರಾಜೇಂದ್ರ ಬಾಬೂ ಇದಕ್ಕಾಗಿ ಪ್ರಯತ್ನ ಕೂಡಾ ಮಾಡಿದರು.

ಮರುದಿನ ಫೆಬ್ರವರಿ 12ರಂದು, ಮೊದಲಬಾರಿಗೆ ರಾಹುಲರ ಮನಸ್ಥಿತಿಯ ಮೇಲೆ ಕೆಲವರ್ಷಗಳ ವರೆಗೆ ಸಾಕಷ್ಟು ಪರಿಣಾಮ ಮಾಡಿದ, ಒಂದು ವಿಷಯವೆದ್ದಿತು. ಅ ದಿನ ಪಂಡಿತ ಹಜಾರೀ ಪ್ರಸಾದ ದ್ವಿವೇದೀ ಮತ್ತು ಡಾ। ರಾಜಬಲೀ ಪಾಂಡೆ ಒಂದು ಪ್ರಸ್ತಾಪ ತೆಗೆದುಕೊಂಡು ಬಂದರು. "ಕಾಶೀ ನಗರದ ಪ್ರಚಾರಿಣೀ ಸಭೆ 'ಹಿಂದೀ ವಿಶ್ವಕೋಶ'ವನ್ನು ಪ್ರಕಟಿಸುವ ಒಂದು ಯೋಜನೆಯನ್ನು ಕೇಂದ್ರ ಶಿಕ್ಷಣ ಇಲಾಖೆಗೆ ನೀಡಿದೆ. ಐದು ವರ್ಷಗಳಲ್ಲಿ ಆರು ಲಕ್ಷ ರುಪಾಯಿ ವೆಚ್ಚದಲ್ಲಿ ಈ ಕೆಲಸವನ್ನು ಪೂರೈಸ ಬೇಕು. ಪ್ರಧಾನ ಸಂಪಾದಕರು ಹಾಗೂ ನಾಲ್ವರು ಸಹಾಯಕ ಸಂಪಾದಕರಿರುತ್ತಾರೆ. ನೀವು ಪ್ರಧಾನ ಸಂಪಾದಕರಾಗಲು ಒಪ್ಪಿಕೊಂಡರೆ ನಮ್ಮ ಕೆಲಸದ ದೊಡ್ಡದೊಂದು ಅಡಚಣೆಯೇ ದೂರವಾಗುತ್ತದೆ" ಎಂದರು.

ಅ ಹೊತ್ತಿನಲ್ಲಿ ಯಾವ ನಿರ್ಧಾರಕ್ಕೂ ಬಾರದ ರಾಹುಲರು ಕೆಲ ತಿಂಗಳುಗಳ ಬಳಿಕವಷ್ಟೆ ಒಪ್ಪಿಗೆ ಕಳಿಸಿಕೊಟ್ಟರು.

ಅದೇ ವೇಳೆ ದೆಹಲಿ ನಿವಾಸದಲ್ಲಿ ಒಂದು ಸಾಹಿತ್ಯಗೋಷ್ಠಿ ಹಾಗೂ ಜೇತಾ ಜನನದ ಪ್ರಯುಕ್ತ ಏರ್ಪಡಿಸಿದ ಒಂದು ಚಹಾ ಕೂಟದಲ್ಲಿ ಅನೇಕ ಸಾಹಿತಿಗಳೊಡನೆ ಚರ್ಚೆ ಮಾತುಕತೆ ನಡೆಯಿತು. ಫೆಬ್ರವರಿ 15ರಂದು ಕುಟುಂಬದ ಒಬ್ಬ ಹೆಚ್ಚಿನ ಸದಸ್ಯನೊಂದಿಗೆ ಸಪರಿವಾರ ಮಸ್ಸೂರಿಗೆ ವಾಪಾಸಾದರು.

ಆದರೆ ಈಗ ಅವರಿಗೆ ಮಸ್ಸೂರಿ ಬೇಸರ ಬಂದಿತ್ತು. 'ಹರ್ನ್‌ಕ್ಲಿಫ್'ನ್ನು ಮಾರಲು ನಿಶ್ಚಯಿಸಿದರು. ಅದೇ ಮೇ ತಿಂಗಳಲ್ಲಿ ಸ್ಟೇಟ್ಸ್‌ಮನ್ ಪತ್ರಿಕೆಯಲ್ಲಿ ಒಂದು ಪ್ರಕಟಣೆಯನ್ನೂ ಕೊಟ್ಟರು. ಆದರೆ ಮನೆಯನ್ನು ಅರ್ಧ ಬೆಲೆಗೆ ಕೊಳ್ಳಲು ಸಹ ಯಾರೂ ಮುಂದೆ ಬರಲಿಲ್ಲ. ಮಸ್ಸೂರಿಯಲ್ಲಿ ಎಂಟು ತಿಂಗಳು ಬಾಡಿಗೆ ಮನೆಯಲ್ಲಿರುವುದು, ಮತ್ತು ಉಳಿದ ನಾಲ್ಕು ತಿಂಗಳು ಡೆಹರಾಡೂನಿಗೆ ಹೋಗಿ ಬಿಡುವುದು ಎಂದು ಯೋಚಿಸಿದರು. ಆದರೆ ಕಮಲಾ, ತನ್ನ ಮತ್ತು ಮಕ್ಕಳ ದೃಷ್ಟಿಯಿಂದ ತವರೂರು ಕಾಲಿಂಪೋಙನಲ್ಲಿಗೆ ಹೋಗಲು ಹೆಚ್ಚು ಇಷ್ಟಪಟ್ಟರು. ಕೊನೆಗೆ ರಾಹುಲಜೀ ನಿರ್ಧಾರವನ್ನು ಅವರಿಗೇ ಬಿಟ್ಟು ಬಿಟ್ಟರು.

ಈ ಬಾರಿಯ ಪ್ರವಾಸಿಗರ ಕಾಲದಲ್ಲೂ ಅನೇಕ ಅತಿಥಿಗಳು ಮತ್ತು ಪರಿಚಯಸ್ಥರ ಆಗಮನವಾಯಿತು. ಆನಂದಜೀ ಸೀಸನ್ನಿನ ಮೊದಲೇ ಬಂದು ಎರಡು ದಿನ ಇದ್ದು ಹೋಗಿದ್ದರು. ಬಹಳ ವರ್ಷಗಳ ಹಿಂದೆ ರಾಹುಲರು ತನಗೊಪ್ಪಿಸಿದ 'ಜಾತಕ'ದ ಅನುವಾದ ಕಾರ್ಯ ಆರು ಖಂಡಗಳಲ್ಲಿ ಪೂರ್ತಿಯಾಗಿದೆ ಎಂದು ಅವರು ಹೇಳಿದಾಗ ತುಂಬ ಸಂತೋಷ ಪಟ್ಟರು ರಾಹುಲಜೀ.

'ದೋಹಾಕೋಶ'ದ ಕೆಲಸ ಮುಗಿದಿತ್ತು. ಈಗ ಅಕಾಸ್ಮಾತ್ತಾಗಿ ಹೊಸತೊಂದು ಕಾರ್ಯ ಹೊಳೆಯಿತು. 1927-28ರಲ್ಲಿ ಶ್ರೀಲಂಕಾದ ವಿದ್ಯಾಲಂಕಾರ ವಿಹಾರದಲ್ಲಿ ಸಂಸ್ಕೃತ ಅಧ್ಯಾಪಕರಾಗಿ ರಾಹುಲಜೀ ಹೋದಾಗ ಅಲ್ಲಿನ ಭಿಕ್ಷುಗಳಿಗೆ ಸುಲಭವಾಗಿ ಸಂಸ್ಕೃತ ಕಲಿಸುವ ಉದ್ದೇಶದಿಂದ ಅವರು ಐದು ಕಿರು ಹೊತ್ತಗೆಗಳನ್ನು ಬರೆದಿದ್ದರು. 'ಸಂಸ್ಕೃತ ಪಾಠಮಾಲಾ' ಎಂಬ ಈ ಪುಸ್ತಕಗಳು ಸಿಂಹಳ ಭಾಷೆ ಮತ್ತು ಲಿಪಿಯಲ್ಲಿ ಅಂದೇ ಮುದ್ರಣವಾಗಿದ್ದುವು. ಅಲ್ಲಿ ಅವುಗಳ ಅನೇಕ ಆವೃತ್ತಿಗಳೂ ಪ್ರಕಟವಾದವು.

ಈಗ ಹಿಂದಿಯ ಜೊತೆ ಅವನ್ನು ಹೊಸ ಬಗೆಯಲ್ಲಿ ಸಿದ್ಧಪಡಿಸಬೇಕೆಂಬ ಇಚ್ಛೆಯುಂಟಾಗಿ 'ಸಂಸ್ಕೃತ ಪಾಠಮಾಲಾ'ದ ಆ ಐದು ಪುಸ್ತಕಗಳ ಸಂಶೋಧಿತ-ಪರಿವರ್ಧಿತ ಸಂಸ್ಕರಿತ ಆವೃತ್ತಿಯನ್ನು ಸಿದ್ಧಪಡಿಸುವ ಕೆಲಸದಲ್ಲಿ ತೊಡಗಿಕೊಂಡರು. ಈ ಪುಸ್ತಕಗಳು ಚೌಖಂಬಾ, ವಾರಣಾಸಿಯಿಂದ 1956ರಲ್ಲಿ ಪ್ರಕಟಗೊಂಡವು.

'ಸಂಸ್ಕೃತ ಪಾಠಮಾಲಾ'ದ ಹಿಂದೀ ಸಂಸ್ಕರಣವನ್ನು ತಯಾರು ಮಾಡುತ್ತಿದ್ದಾಗ ಹಿಡಿದ ಕೈಯಲ್ಲೇ 'ಸಂಸ್ಕೃತ ಕಾವ್ಯಧಾರಾ'ವನ್ನೂ ಪೂರ್ತಿಗೊಳಿಸಬೇಕೆಂಬ ಇಚ್ಛೆಯುಂಟಾಯಿತು. ಹಿಂದೀ ಅನುವಾದ ಸಹಿತ ಸಂಸ್ಕೃತ, ಪಾಲಿ, ಪ್ರಾಕೃತ ಮತ್ತು ಅಪಭ್ರಂಶಗಳ ಪ್ರಾತಿನಿಧಿಕ ಕಾವ್ಯ ಸಂಕಲನವೊಂದನ್ನು ಸಿದ್ಧಪಡಿಸಬೇಕೆಂದು ಅವರು ಬಹುವರ್ಷಗಳಿಂದ ಯೋಚಿಸುತ್ತಲೇ ಬಂದಿದ್ದರು. 'ಅಪಭ್ರಂಶ ಕಾವ್ಯ'ವನ್ನು 'ಹಿಂದೀ ಕಾವ್ಯಧಾರಾ' ಎಂದು 1944ರಲ್ಲಿ ಸಿದ್ಧಪಡಿಸಿದ್ದರು. ಸಂಸ್ಕೃತ, ಪಾಲಿ ಮತ್ತು ಪ್ರಾಕೃತ ಕಾವ್ಯಧಾರೆಗಳನ್ನು ಇತರ ವಿದ್ವಾಂಸರಿಂದ ತಯಾರುಗೊಳಿಸಬೇಕೆಂದೂ ಅವರಿಗೆ ಆಸೆಯಿತ್ತು. ಆದರೆ ದೀರ್ಘಕಾಲ ಕಳೆದರೂ ಯಾರೂ ಈ ಕೆಲಸಕ್ಕೆ ಕೈ ಹಾಕಲಿಲ್ಲವಾಗಿ ಸ್ವಯಂ ರಾಹುಲರೇ 1955ರಲ್ಲಿ 'ಸಂಸ್ಕೃತ ಕಾವ್ಯಧಾರಾ' (1096 ಪುಟ) ಕೆಲಸವನ್ನು ಮುಗಿಸಿಬಿಟ್ಟರು. ಮುಂದೆ 'ಪಾಲಿ ಕಾವ್ಯಧಾರಾ'ವನ್ನು. ಆದರೆ ಈ ಕೃತಿ ಇಂದಿಗೂ ಬೆಳಕು ಕಂಡಿಲ್ಲ. 'ಪ್ರಾಕೃತ ಕಾವ್ಯಧಾರಾ'ವನ್ನು ಸಿದ್ಧಪಡಿಸಲು ಇಂದಿನವರೆಗೂ ಯಾರಿಗೂ ಸಾಧ್ಯವಾಗಿಲ್ಲ.

'ಸಂಸ್ಕೃತ ಕಾವ್ಯಧಾರಾ'ದಲ್ಲಿ ಹನ್ನರಡನೇ ಶತಮಾನದ ಪೂರ್ವ ಬಂಗಾಳದ ಕವಿ ಆಚಾರ್ಯ ಗೋವರ್ಧನರ ಏಕಮಾತ್ರ ಕೃತಿ 'ಆರ್ಯಾ ಸಪ್ತಶತೀ'ಯ ಕೆಲ ಮಾದರಿಗಳು ಸಂಕಲಿತವಾಗಿವೆ.

ಅವುಗಳಲ್ಲಿ ಒಂದು ಆರ್ಯವನ್ನು ರಾಹುಲರು ತಮ್ಮ ದಾಂಪತ್ಯ ಜೀವನದ ಸಂದರ್ಭದಲ್ಲಿ ಆಗಾಗ ನೆನೆಯುತ್ತಾರೆ.

ನಿಷ್ಕಾರಣಾಪರಾಧಂ ನಿಷ್ಕಾರಣ ಕಲಹರೋಷ ಪರಿತೋಷಮ್।

ಸಾಮಾನ್ಯ ಮರಣಜೀವನ ಸುಖದುಃಖ ಜಯತಿ ದಾಂಪತ್ಯಮ್ ॥

ಸಿಮ್ಲಾದಲ್ಲಿ ಪ್ರವಾಸದಲ್ಲಿದ್ದಾಗ ಅವರಿಗೆ ಒಬ್ಬ ರದ್ದಿ ವ್ಯಾಪಾರಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯ ವೀರರ ಜೀವನ ಕತೆಗಳ ಬಹಳ ಸ್ವಾರಸ್ಯಮಯ ನಿರೂಪಣೆಯಿದ್ದ ಒಂದು ಹಳೆಯ ಪುಸ್ತಕ ಸಿಕ್ಕಿತು. ಇದನ್ನು ಈಗ ಎಂದರೆ 1955ರಲ್ಲಿ ಅವರು 'ಭಾರತ ಮೇಂ ಅಂಗ್ರೇಜೀ ರಾಜೊಂಕೇ ಸಂಸ್ಥಾಪಕ್' ಎಂಬ ಹೆಸರಿನಲ್ಲಿ ಅನುವಾದ ಮಾಡಿಟ್ಟರು.

ಈ ವರ್ಷವೇ ಪೂರ್ತಿಗೊಳಿಸಿದ ಇನ್ನೊಂದು ಕೃತಿಯೆಂದರೆ 'ಚಂದ್ರಸಿಂಹ ಗಢವಾಲೀ (1891-1979) ಅವರ ಜೀವನ ಚರಿತ್ರೆ. 1930ರ ಎಪ್ರಿಲ್ 23ರಂದು ಪೇಶಾವರದಲ್ಲಿ ಒಂದು ಘಟನೆ ನಡೆಯಿತು. ಖಾನ್ ಅಬ್ದುಲ್ ಗಫಾರ್‌ಖಾನ್‌ರನ್ನು ಬಂಧಿಸಿದ್ದರ ವಿರುದ್ಧ ಅವರ ಅನುಯಾಯಿಗಳು ಮತ್ತು ಅನೇಕ ನಿಶ್ಶಸ್ತ್ರ ಸತ್ಯಾಗ್ರಹಿಗಳು ಪೇಶಾವರದ ಕಿಸ್ಸಾ ಖಾನೀ ಬಜಾರ್ ಮತ್ತು ರಸ್ತೆಗಳಲ್ಲಿ ಪ್ರದರ್ಶನ ನಡೆಸುತ್ತ ಇದ್ದರು. ಬ್ರಿಟಿಷ್ ಆಫೀಸರ್ ಮತ್ತು ಸೇನಾ ತುಕುಡಿ ಕೂಡ ಬಂದಿತ್ತು. ಚಂದ್ರಸಿಂಹ ಗಢವಾಲಿ ಅವರ ನೇತೃತ್ವದ ಗಢವಾಲೀ ಕಂಪೆನಿ ಸತ್ಯಾಗ್ರಹಿಗಳನ್ನು ಸುತ್ತುವರಿದಿತ್ತು. ಹಕುಂ ನೀಡಿದ್ದರೂ ಸತ್ಯಾಗ್ರಹಿಗಳು ಕದಲಲಿಲ್ಲ. ಆಗ ಕಮಾಂಡರ್ ರಿಕೆಟ್ ಗಢವಾಲಿ ಕಂಪನಿಗೆ ಗೋಲೀಬಾರು ಮಾಡಲು ಆಜ್ಞಾಪಿಸಿದ. ಕೂಡಲೇ ಚಂದ್ರಸಿಂಹ ಗಢವಾಲಿ ಮುಂದೆ ಬಂದು, 'ಗಢವಾಲೀ, ಗೋಲೀ ನಹೀ ಚಲೇಗೀ' ಎಂದರು. ಗಢವಾಲ್ ಸಿಪಾಯಿಗಳು ಆಯುಧ ನೆಲಕ್ಕಿಟ್ಟು ಬಿಟ್ಟರು; ಕಮಾಂಡರ್ ತನ್ನ ಹುಕುಂ ಉಲ್ಲಂಘಿಸಿದ ಕಾರಣ ಕೇಳಿದರೆ ಚಂದ್ರಸಿಂಹರ ಉತ್ತರ: 'ಸತ್ಯಾಗ್ರಹಿಗಳು ನಿರಾಯುಧರಾಗಿದ್ದರು. ನಿರಾಯುಧರ ಮೇಲೆ ಗುಂಡು ಹಾರಿಸುವುದು ನಮ್ಮ ಧರ್ಮಕ್ಕೆ ವಿರುದ್ಧವಾದದ್ದು. ನಾವು ಸೈನ್ಯಕ್ಕೆ ಸೇರಿರುವುದು ದೇಶ ರಕ್ಷಣೆ ಮಾಡಲಿಕ್ಕೇ ಹೊರತು ನಿರಾಯುಧ ಸೋದರರ ಮೇಲೆ ಗುಂಡು ಹಾರಿಸಲಿಕ್ಕಲ್ಲ'. ವಾಸ್ತವವಾಗಿ ಕೆಲದಿನಗಳ ಹಿಂದೆಯೇ ಚಂದ್ರಸಿಂಹರು ನಿರಾಯುಧ ಸತ್ಯಾಗ್ರಹಿಗಳ ಮೇಲೆ ತಾವು ಗುಂಡು ಹಾರಿಸುವ ಹುಕುಂ ಪಾಲಿಸುವುದಿಲ್ಲ ಎಂದು ತಮ್ಮ ಗಢವಾಲಿ ಸಂಗಡಿಗರಿಂದ ಪ್ರತಿಜ್ಞೆ ಮಾಡಿಸಿದ್ದರು.

ಆ ಕಂಪನಿಯ ಹೆಚ್ಚಿನ ಗಢವಾಲಿ ಸಿಪಾಯಿಗಳನ್ನು ಕೆಲಸದಿಂದ ತೆಗೆದು ಹಾಕಿದರು. ಅನೇಕರಿಗೆ ಮೂರರಿಂದ ಇಪ್ಪತ್ತು ವರ್ಷದವರೆಗೆ ಶಿಕ್ಷೆಯಾಯಿತು. ಚಂದ್ರಸಿಂಹ ಗಢವಾಲಿ ಅವರಿಗೆ ಆಜನ್ಮ ಕಾರಾಗೃಹವಾಸದ ಶಿಕ್ಷೆ ವಿಧಿಸಲ್ಪಟ್ಟಿತು. ಅಷ್ಟೇ ಅಲ್ಲ ಅವರ ಐದು ಎಕರೆ ಜಮೀನು, ಎರಡು ಎತ್ತು, ನೇಗಿಲು, ಒಂದು ದನ – ಎಲ್ಲವನ್ನು ಮುಟ್ಟುಗೋಲು ಹಾಕಿಕೊಂಡರು. ಅವರ ಪತ್ನಿ ಮತ್ತು ಮಕ್ಕಳು ಅಪಾರ ಕಷ್ಟ ಸಹಿಸಬೇಕಾಗಿ ಬಂತು.

ಚಂದ್ರಸಿಂಹ ಗಢವಾಲೀಯವರ ಪರ ಮೊಕದ್ದಮೆಯ ವಕೀಲಿಯನ್ನು ಬ್ಯಾರಿಸ್ಟರ್ ಮುಕುಂದೀಲಾಲರು ವಹಿಸಿದ್ದರು. ಅವರು ಈಗ ಆ ಮೊಕದ್ದಮೆಯ ಫೈಲನ್ನು ರಾಹುಲಜೀ ಅವರಿಗೆ ಒಪ್ಪಿಸಿದರು. 1933ನೆಯ ಇಸವಿಯವರೆಗೆ ಬರೆದಿಟ್ಟ ಅವರ ಆತ್ಮಕಥೆಯೂ ಲಭ್ಯವಿತ್ತು. ರಾಹುಲರು 1955ರ ಸೆಪ್ಟೆಂಬರ್ 7ರಂದು ಅವರ ಜೀವನ ಚರಿತ್ರೆ ಬರೆಯಲು ಆರಂಭಿಸಿದರು – ಜೊತೆಗೇ

ಗಢವಾಲರಿಗೆ ಮಸ್ಸೂರಿಗೆ ಬರಲು ಕೋರಿ ಒಂದು ಪತ್ರವನ್ನು ಬರೆದರು. ಅವರು ಸೆಪ್ಟೆಂಬರ್ 26ರಂದು ಬಂದು ಅಕ್ಟೋಬರ್ 7ರವರೆಗೆ ತನ್ನ ಜೊತೆಗಿದ್ದ ಸಮಯದಲ್ಲಿ ಮಧ್ಯಾಹ್ನದ ಹೊತ್ತು ಅವರ ಜೀವನ ಚರಿತ್ರೆಯ ಟಿಪ್ಪಣಿ ಮಾಡಿಕೊಂಡು ಮರುದಿನ ಅವನ್ನು ಟೈಪ್‌ರೈಟರಿಗೆ ಡಿಕ್ಟೇಟ್ ಮಾಡುತ್ತಿದ್ದರು ರಾಹುಲಜೀ. ಚಂದ್ರಸಿಂಹ ಗಢವಾಲೀಯವರನ್ನು ಅವರು 'ದೊಡ್ಡಣ್ಣ' ಎನ್ನುತ್ತಿದ್ದರು. 'ವೃದ್ಧಾಪ್ಯದ ಪ್ರಭಾವ ಇದ್ದರೂ ಯುವಕರಂತೆ ಉತ್ಸಾಹಿಯಾಗಿದ್ದರು. ದೊಡ್ಡ ಸಾಹಸೀ ಪುರುಷ ಕರ್ಮಠ ಹಾಗೂ ಸ್ವಚ್ಛ ಹೃದಯಿ. ನಿರ್ಭೀತಿ ಹಾಗೂ ನಿರ್ಲೋಭದ ಸಾಕ್ಷಾತ್ ಸ್ವರೂಪ. ತಮ್ಮ ವಿಚಾರಗಳಲ್ಲಿ ಎಷ್ಟು ದೃಢವಾಗಿದ್ದರೆಂದರೆ ಆರ್ಥಿಕ ಸಂಕಷ್ಟಗಳನ್ನು ಲೆಕ್ಕಿಸುತ್ತಲೇ ಇರಲಿಲ್ಲ'. ರಾಹುಲರು ಸರ್ದಾರ್ ಪೃಥ್ವೀಸಿಂಹ ಅವರು ಜೀವನಚರಿತ್ರೆಯನ್ನು ಬರೆದರು. ಆದರೆ ಸರ್ದಾರ್ ಮತ್ತು ಗಢವಾಲೀ ಅವರ ನಡುವೆ ಅಗಾಧವಾದ ಅಂತರವಿತ್ತು. ಸರ್ದಾರ ಪೃಥ್ವೀಸಿಂಹ ಚೆನ್ನಾಗಿ ತಮ್ಮ ವ್ಯಕ್ತಿಗತ ಸಾಹಸ ಪ್ರದರ್ಶನಗಳ ಲಾಭವನ್ನು ಚೆನ್ನಾಗಿ ಪಡೆದುಕೊಂಡರು. ಅವರಿಗೆ ಬೇಕಾದಷ್ಟು ಸರಕಾರೀ ಸಹಾಯ ಸಿಕ್ಕಿತ್ತು. ಕಮ್ಯೂನಿಸ್ಟ್ ಪಾರ್ಟಿ ಕೂಡ ಅವರನ್ನು ಕಡೇ ದಿನದವರೆಗೂ ತನ್ನ ವಿಸ್ಮಯವಾಗಿರಿಸಿಕೊಂಡಿತು. ಅವರಿಗಿಂತ ಅನೇಕ ಪಟ್ಟು ಹೆಚ್ಚು ಸಾಹಿತಿಗಳೂ ಆಗಿದ್ದ ಚಂದ್ರಸಿಂಹ ಗಢವಾಲಿ ತಮ್ಮ ಜೀವನವನ್ನು ಕಷ್ಟದಲ್ಲಿಯೇ ಕಳೆದರು. ಇಷ್ಟಾದರೂ ಜೀವನದ ಕೊನೆಯ ಕ್ಷಣದವರೆಗೂಕಮ್ಯೂನಿಸ್ಟ್ ಪಾರ್ಟಿಯ ನಂಬಿಗಸ್ತನಾಗಿಯೇ ಉಳಿದರು.

ಅಕ್ಟೋಬರ್‌ನಲ್ಲಿ ಒಂದು ದಿನ ರಾಜಾ ಮಹೇಂದ್ರ ಪ್ರತಾಪ ಮಸ್ಸೂರಿಗೆ ಬಂದರು. ಅವರು ಮಹಾನ್ ಸ್ವಾತಂತ್ರ್ಯ ಸೇನಾನಿಯಂತೂ ಸರಿಯೇ. ಆದರೆ ರಾಹುಲರನ್ನು ಸೆಳೆದದ್ದು ಅವರ ಸಂಚಾರಿ ಬದುಕು. ಅವರ ಜೀವನಚರಿತ್ರೆ ಬರೆಯುವ ಅಪೇಕ್ಷೆಯಿಂದ ಒಂದು ವಿಸ್ತಾರವಾದ ಟಿಪ್ಪಣಿ ಮಾಡಿಕೊಳ್ಳಬೇಕೆಂದು ಕೊಂಡಿದ್ದರು. ಆದರೆ ರಾಜಾ ಸಾಹೇಬರು ನಿಂತಲ್ಲಿ ನಿಲ್ಲುವ ಜೀವವಲ್ಲ. ಆದುದರಿಂದ ಜೀವನ ಚರಿತ್ರೆ ಬರೆಯುವ ವಿಚಾರ ರಾಹುಲರ ಮನಸ್ಸಿನಲ್ಲಯೇ ಉಳಿದು ಹೋಯಿತು.

ಜೇತಾನಿಗೆ ಕೆಲದಿನಗಳಿಂದ ಜ್ವರ ಬರುತ್ತಾ ಇತ್ತು. ಜ್ವರ ಗುಣವಾದ ಮೇಲೆ ಬಲಗೈ ಎತ್ತಲು ಆಗಲಿಲ್ಲ. 'ಪೋಲಿಯೋ' ಹೆಸರು ಕೇಳೀ ತಂದೆ ತಾಯಿ ಸಹಜವಾಗಿಯೇ ಗಾಬರಿಗೊಂಡರು. ನಂತರದಲ್ಲಿ ಆ ಕೈಯನ್ನು ಬಳಸಲು ಸಾಧ್ಯವಿತ್ತಾದರೂ ಕೈಗೆ ಪೂರ್ಣ ಶಕ್ತಿ ಕೂಡಿ ಬರಲೇ ಇಲ್ಲ.

'ಹರ್ನ್‌ಕ್ಲಿಫ್' ಮಾರಾಟದ ಬಗ್ಗೆ ಪ್ರಕಟಣೆ ಕೊಟ್ಟರೂ ಕೊಳ್ಳುವವರು ಯಾರೂ ಸಿಗಲಿಲ್ಲ. ಕಾಮ್ರೇಡ್ ಡಾಂಗೆ, ಕಾರ್ಮಿಕ ಸಂಘಕ್ಕಾಗಿ ಮಸ್ಸೂರಿಯಲ್ಲಿ ಒಂದು ಮನೆ ಕೊಳ್ಳಬೇಕೆಂದಿದ್ದರು. ರಾಹುಲರು ಟ್ರೇಡ್ ಯೂನಿಯನ್ನಿಗಾಗಿ ಅಗ್ಗಕ್ಕೆ ಮಾರಲು ಸಿದ್ಧರಾದರು. ಬಂಗಲೆಯನ್ನು ಖರೀದಿಸಿದ್ದು 17 ಸಾವಿರಕ್ಕೆ. ರಿಪೇರಿ ಗಿಪೇರಿಗೆ ಸುಮಾರು ಮೂರು ಸಾವಿರ ರುಪಾಯಿ ಖರ್ಚಾಗಿತ್ತು. ಕಾಮ್ರೇಡ್ ಡಾಂಗೆ ಮನೆಯ ಬೆಲೆ ಕೇಳಿದಾಗ ರಾಹುಲರು ಹತ್ತು ಸಾವಿರ ಎಂದರು. 'ಒಪ್ಪಿಗೆ' ಎಂದರು ಡಾಂಗೇ. ಆದರೆ ರಾಹುಲರ ಮಾತುಗಳಲ್ಲೇ ಹೇಳಬೇಕಾದರೆ 'ಇನ್ನೂ ಬಟ್ಟಲಿಗೂ ತುಟಿಗೂ ನಡುವೆ ದೂರ ಸಾಕಷ್ಟಿತ್ತು.'

ಪ್ರಕಾಶಕರಿಂದ ಯಾವ ಭರವಸೆಯೂ ದೊರೆಯದೆ ನಾಳಿನ ಆರ್ಥಿಕ ಚಿಂತೆ ಕಾಡುತ್ತಿತ್ತು. ರಾಹುಲರು ಚೀನಾ ಅಥವಾ ಚೆಕೊಸ್ಲೋವೇಕಿಯಾಕ್ಕೆ ಹೋಗುವ ಮಾತಾಡುತ್ತಿದ್ದರೆ ಹೆಂಡತಿ ಕಾಲಿಂಪೋಜಗೆ ಹೋಗಲು ದೃಢ ನಿರ್ಧಾರ ಮಾಡಿದ್ದಳು.

ಕಳೆದ ವರ್ಷ ಡಿಸೆಂಬರ್‌ನ ಚಳಿಗೆ ಎದೆನೋವು ಬಂದದ್ದರಿಂದ ಈ ವರ್ಷ ಮಸ್ಸೂರಿಯಿಂದ ಹೊರಗಿದ್ದು ಬಿಡುವ ಕಾರ್ಯಕ್ರಮ ಹಾಕಿಕೊಂಡು 1955ರ ಡಿಸೆಂಬರ್ 14ರಂದು ಡೆಹರಾಡೂನಿಗೆ, ಎಂದಿನಂತೆ ಪಂಡಿತ ಗಯಾಪ್ರಸಾದ ಶುಕ್ಲರ ಮನೆಗೆ ಹೋದರು. 'ಹಿಮಾಚಲ ಪ್ರದೇಶ' ಮತ್ತು 'ಜೌನ್ ಸಾರ್ –ಡೆಹರಾಡೂನ್' ಬರವಣಿಗೆ ಪೂರ್ತಿಯಾಗಿ ಮುಗಿದಿತ್ತು. ಈಚಿನ ಎರಡು ವರ್ಷಗಳಲ್ಲಿ ಡೆಹರಾಡೂನಿನ ಸಮೀಪದ ಕಾಡಿನಲ್ಲಿ ಕೆಲ ಮಹತ್ವಪೂರ್ಣ ಅವಶೇಷಗಳು ದೊರೆತಿರುವದರಿಂದ ಬಂದ ಮರುದಿನವೇ ಶುಕ್ಲಾ ಅವರನ್ನೂ ಸರ್ವೇ ವಿಭಾಗದ ಮೆಹತಾ ಅವರನ್ನೂ ಜೊತೆ ಮಾಡಿಕೊಂಡು ಉತ್ಖನನ ಕಾರ್ಯ ನೋಡಲು ಹೋದರು. ಕ್ರಿ.ಶ. ಒಂದನೇ ಮತ್ತು ಎರಡನೇ ಶತಮಾನದಲ್ಲಿ ಈ ಪ್ರದೇಶದಲ್ಲಿ ರಾಜಾ ಶೀಲವರ್ಮಾ ನಾಲ್ಕು ಅಶ್ವಮೇಧ ಯಜ್ಞ ಮಾಡಿದ್ದ. ಅಲ್ಲಿ ಆ ಯಜ್ಞ ವೇದಿಕೆಗಳು ಕಾಣ ಸಿಕ್ಕಿದುವು. ಒಂದು ವೇದಿಕೆ ಗರುಡನ ಆಕಾರದಲ್ಲಿತ್ತು. ಕುಷಾಣ – ಬ್ರಾಹ್ಮೀ ಲಿಪಿಯಲ್ಲಿ ಬರೆದ ಬರಹಗಳಿದ್ದ ಕೆಲ ತುಂಡು ಇಟ್ಟಿಗೆಗಳೂ ದೊರೆತಿದ್ದವು.

ಹೊರಟ ಮಟ್ಟಿಗೇ ರಾಹುಲಜೀ ಯಮುನಾ ಸೇತುವೆ ದಾಟಿ ಮತ್ತಿಮ್ಮೆ ಕಾಲಸೀಗೂ ಹೋಗಿ ಬಂದರು. ಅಲ್ಲಿ ಒಂದು ಶಿಲೆಯ ಮೇಲೆ ಅಶೋಕನ ಶಾಸನ ಕೆತ್ತಲ್ಪಟ್ಟಿದೆ.

ಡಿಸೆಂಬರ್ 17 ರಂದು ದೆಹಲಿಗೆ ಹೋಗಿ 'ಭೈಯ್ಯಾ'ನ ಮನೆಯಲ್ಲಿ ತಂಗಿದರು. ದೆಹಲಿಯಲ್ಲಿ ಪ್ರಾದೇಶಿಕ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷ ಭಾಷಣ ಮಾಡಿದರು. ಈ ಬಾರಿ ರಹೀಮನ ಸಮಾಧಿ, ಹತ್ತಿರದಲ್ಲೇ ಇದ್ದ ನಿಜಾಮುದ್ದೀನ ದರ್ಗಾ, ಘಾಲಿಬ್‌ನ ಸಮಾಧಿ ಎಲ್ಲ ನೋಡಿದರು. ಬಳಿಯಲ್ಲಿಯೇ ಖುಸ್ರು ನಿದ್ರಿಸಿದ್ದ.

ದೆಹಲಿಯಿಂದ ಕಾನ್ಪುರಕ್ಕೆ ತೆರಳಿದರು. ಅಲ್ಲಿದ್ದ ಮೂರು ದಿನವಿಡೀ ಸಾಹಿತ್ಯಸಂಬಂಧವಾದ ಎಡೆಬಿಡದ ಕಾರ್ಯಕ್ರಮಗಳು. ಅಲ್ಲಿಂದ ಪ್ರಯಾಗ. ಪ್ರಯಾಗದಲ್ಲಿ ಪುಸ್ತಕದ ಮುದ್ರಣಕ್ಕಾಗಿ ವ್ಯವಸ್ಥೆ ಮಾಡಬೇಕಿತ್ತು. ಹಾಗಾಗಿ ಕಿತಾಬ್ ಮಹಲಿನ ಶ್ರೀನಿವಾಸ ಅಗರ್‌ವಾಲರ ಮನೆಯಲ್ಲಿ ಉಳಿದುಕೊಂಡರು. ಪ್ರಯಾಗಕ್ಕೆ ಬಂದ ಮೇಲೆ ನಿರಾಲಾರನ್ನು ನೋಡದೆ ಉಂಟೆ? 'ಇತ್ತೀಚೆಗೆ ಅವರು ಬರೀ ಇಂಗ್ಲಿಷ್‌ನಲ್ಲಿಯೇ ಮಾತನಾಡುತ್ತಿದ್ದರು. ಕೊಂಚ ಹೊತ್ತು ಮಾತಾಡಿ ನಾನೆದ್ದಾಗ ಅವರೂ ಹೊರಗೆ ಬಂದರು. ಫೋಟೋ ತೆಗೆದುಕೊಂಡರು. ನಮಸ್ಕಾರದೊಂದಿಗೆ ಬೀಳ್ಕೊಂಡೆವು'.

ಆಗ ನಾಗಾರ್ಜುನ ಮತ್ತು ಭಗವತಶರಣ ಉಪಾಧ್ಯಾಯರೂ ಪ್ರಯಾಗದಲ್ಲಿಯೇ ಇದ್ದರು. ಭಗವತ ಶರಣರ ಬಗ್ಗೆ ರಾಹುಲರು 'ನಾನೊಂದು ವೇಳೆ ಹಿಂದೀ ವಿಶ್ವಕೋಶದ ಪ್ರಧಾನ ಸಂಪಾದಕನಾಗಿದ್ದರೆ ಇದಕ್ಕೆ ಉಳಿದ ಎಲ್ಲರಿಗಿಂತ ಅವರು ಅಗತ್ಯ ಎಂದು ತಿಳಿಯುತ್ತಿದ್ದೆ. ಆದರೆ ಆ ಯೋಜನೆಯೋ ಕೇಂದ್ರೀಯ ಶಿಕ್ಷಣ ಮಂತ್ರಾಲಯದಿಂದಾಗಿ ಕೇಳುವವರಿಲ್ಲದೆ ಬಿದ್ದಿತ್ತು' ಎಂದು ಬರೆದಿದ್ದಾರೆ.

ವರ್ಧಾದಲ್ಲಿ ರಾಷ್ಟ್ರಭಾಷಾ ಪ್ರಚಾರ ಸಮಿತಿಯ ವತಿಯಿಂದ ಒಂದು ದೊಡ್ಡ ಸಾಹಿತ್ಯ ಸಮ್ಮೇಳನದ ಏರ್ಪಾಟಾಗಿತ್ತು. ಅನೇಕ ಸಾಹಿತಿ ಮಿತ್ರರು ಸಿಗುವರೆಂಬ ಆಸೆಯಿಂದ ರಾಹುಲರು ಆಮಂತ್ರಣ ಸ್ವೀಕರಿಸಿದ್ದರು. ಸಮ್ಮೇಳನಕ್ಕೆ ಅನೇಕ ಸಾಹಿತಿಗಳು ಆಗಮಿಸಿಯೂ ಇದ್ದರು. ಇತರ ಕಡೆಗಳಿಂದಲೂ, ಸಾಹಿತಿಗಳು ಮತ್ತು ಹಿಂದೀ ಕಾರ್ಯಕರ್ತರು ಬಂದಿದ್ದರು. ಕಾಲಿಂಪ್ಯೋಂಗನಿಂದ ಆನಂದಜೀ ಕೂಡ ಬಂದಿದ್ದರು. ಸಮ್ಮೇಳನ ಯಶಸ್ವಿಯಾಯಿತು.

ರಾಹುಲರ ಮಟ್ಟಿಗೆ ಹೊಸ ವರ್ಷ (1956) ಸೂರ್ಯ ಈ ಬಾರಿ ವರ್ಧಾದಲ್ಲಿ ಮೂಡಿ ಬಂದ.

# ಹಳೆಯ ನೆನಪುಗಳು

ರಾಹುಲ್‌ಜೀ ವರ್ಧಾಕ್ಕೆ ಹೋದರೆಂದರೆ, ಸೇವಾಗ್ರಾಮಕ್ಕೂ ಹೋಗಿಯೇ ಹೋಗುತ್ತಿದ್ದರು. ಹೊಸ ವರ್ಷದ ಮೊದಲ ದಿನ ಸೇವಾಗ್ರಮಾಕ್ಕೆ ಹೋಗಿ ಶಿಕ್ಷಣ ಸಂಘ ಮತ್ತು ಮಹಿಳಾ ಆಶ್ರಮಕ್ಕೆ ಭೇಟಿಕೊಟ್ಟರು. ಶಿಕ್ಷಣಾರ್ಥಿಗಳೆದುರು ಭಾಷಣವನ್ನೂ ಮಾಡಿದರು.

ವರ್ಧಾದಿಂದ ಮರಳಿ ಮಸ್ಸೂರಿಗಲ್ಲ, ಬದಲು ಪ್ರಯಾಗಕ್ಕೆ ಹೋಗಿ ಬನಾರಸ್, ಪಾಟ್ನಾ, ಛಪರಾ ಮತ್ತು ಮುಂದೆ ಕಲ್ಕತ್ತೆಗೂ ಹೋಗಬೇಕಿತ್ತು. ಸ್ನೇಹಿತರನ್ನು ಕಾಣುವುದಲ್ಲದೆ ಪ್ರಕಾಶಕರನ್ನು ಸಹ ಭೇಟಿಯಾಗಬೇಕಿತ್ತು. ಪುಸ್ತಕಗಳ ಪ್ರಕಾಶನ ವ್ಯವಸ್ಥೆ ಸಹ ಮಾಡಿಕೊಳ್ಳಬೇಕಾಗಿತ್ತು. ರಾಹುಲರ ಪುಸ್ತಕಗಳು ಚೆನ್ನಾಗಿ ಮಾರಾಟವಾಗುತ್ತಿದ್ದುವು. ಆದರೆ ತಮ್ಮ ಪ್ರಕಾಶಕರ ಬಗ್ಗೆ ಅವರಿಗೆ ಸಮಾಧಾನವಿರಲಿಲ್ಲ. 'ಪ್ರಕಾಶಕರ ವಿಷಯದಲ್ಲಿ ಲೇಖಕರ ದೂರು ಮುಗಿಯುವರೇ ಇಲ್ಲ. ಅಥವಾ ಬಹುಶಃ ಪ್ರಕಾಶಕರ ದೂರುಗಳು ಮುಗಿಯಿತೆಂದು ಹೇಳುವಂತೆಯೂ ಇಲ್ಲ. ಆದರೆ ಲೇಖಕ ಭಿಕ್ಷು ಅಲ್ಲವಾದರೂ ಬರಬೇಕಾದ ಹಣಕ್ಕೆ – ಬೊಗಸೆಯೊಡ್ಡಲೇ ಬೇಕಾಗುತ್ತದೆ. ಪ್ರಕಾಶಕನ ಕೈಮೇಲೆಯೇ. ಪ್ರಕಾಶಕ ಬಹಳ ಸಲ ಇದನ್ನು ದುರುಪಯೋಗಪಡಿಸಿಕೊಳ್ಳುತ್ತಾನೆ'

ಪ್ರಯಾಗಕ್ಕೆ ಬಂದು ಅಲ್ಲಿನ ಪ್ರಮುಖ ಪ್ರಕಾಶಕರ ಮನೆಯಲ್ಲಿ ತಂಗಿದರು. ಕಿತಾಬ್ ಮಹಲ್‌ನವರೊಂದಿಗೆ – ಶೇಕಡಾ ಇಪ್ಪತ್ತರ ಬದಲು ಶೇಕಡಾ ಹದಿನೈದರ ರಾಯಲ್ಟಿಗೆ ಒಪ್ಪಿಗೆ ಕೊಟ್ಟರು. ಆದರೆ ಪ್ರಕಾಶಕರು ಪ್ರತಿ ತಿಂಗಳು ಐನೂರು ರುಪಾಯಿ ಕಳಿಸುತ್ತ ಇರಬೇಕು ಲೆಕ್ಕಾಚಾರ ಆಗುತ್ತಲೇ ಇರಬೇಕು, ಅಂತೆಲ್ಲ ಒಪ್ಪಂದವಾಯಿತು. ರಾಹುಲರು ನಿಯಮಿತವಾಗಿ ತಿಂಗಳಿಗೆ ಐನೂರು ರೂಪಾಯಿ ಕೇಳಿದ್ದೇಕೆಂದರೆ ಅದಕ್ಕಿಂತ ಕಡಿಮೆ ಹಣ ಅವರಿಗೆ ಸಾಕಾಗುತ್ತಿರಲಿಲ್ಲ. ಗೃಹಸ್ಥ ಜೀವನದಿಂದಾಗಿ ಈಗ ಆರ್ಥಿಕ ಚಿಂತೆ ಅವರನ್ನು ಕಂಗೆಡಿಸ ತೊಡಗಿತ್ತು. ರಾಹುಲರ ಅಭಿಪ್ರಾಯದಲ್ಲಿ 'ಆರ್ಥಿಕ ಚಿಂತೆಯೆಂಬುದು ಸ್ವಾಭಿಮಾನಿ ಮತ್ತು ಅನೇಕ ಮಿತ್ರರಿರುವ ಮನುಷ್ಯನಿಗೆ ಮರ್ಮಾಂತಿಕವಾದದ್ದು'. ಬನಾರಸಿನಲ್ಲಿ ಬಿಡುವಿಲ್ಲದ ಕಾರ್ಯಕ್ರಮಗಳು, ಅನೇಕ ಕಡೆ ಭಾಷಣ, ಸಾಹಿತ್ಯಗೋಷ್ಠಿ; ವಿಶ್ವವಿದ್ಯಾಲಯದ 'ಕಲಾಭವನ' ನೋಡಿದರು. ಈ ಬಾರಿಯೂ ತನ್ನ ವಿದ್ಯಾರ್ಥಿ ಜೀವನದ ನೆನಪಿನ ಮೋತೀರಾಮ್ ಕಾ ಬಾಗ್ ನೋಡಿ ಬರಲು ಹೋದರು. ಈಗ ಅಲ್ಲಿ ಗೋಯಂಕಾ ಪಾಠಶಾಲೆ ಇತ್ತು. 'ಆದರೆ ಮೋತೀರಾಮ್ ಕಾ ಬಾಗ್' ಹೆಸರು ನನಗೆ ಪ್ರಿಯವಾದಷ್ಟು ಬೇರಾವ ಹೆಸರೂ ಪ್ರಿಯವಾಗಲಿಲ್ಲ. ತಮ್ಮ ಕಾಲದ ನಿಷ್ಕಪಟ ಸಂತ ಮಹಾ ವಿದ್ವಾಂಸ ಯಾಚಕ ಬ್ರಹ್ಮಚಾರಿಯ ಹೆಸರನ್ನು ಅಳಿಸಿ ಈ ವಿದ್ಯಾಲಯವನ್ನು ತೆರೆದಿದ್ದರು. ಸೇಠರುಗಳು ಬೇಕು ಬೇಕಾದಂತೆ ಮಾಡಲಿ ಎಂದು ಬಿಟ್ಟು ಬಿಡಲಿಕ್ಕೆ ಅವರೇನೂ ಧರ್ಮದಿಂದ ಹಣಗಳಿಸಿದವರಲ್ಲವಲ್ಲ'.

ಬನಾರಸಿಗೆ ಬಂದ ಮೇಲೆ ಸಾರನಾಥಕ್ಕೂ ಹೋಗಲೇಬೇಕಾಗಿತ್ತಲ್ಲ. ಅಲ್ಲಿನ ಶಾಲೆಯಲ್ಲಿ

ಅಧ್ಯಾಪಕರಾಗಿದ್ದ ಅವರ ಸೋದರನ ಮಗ ಉದಯನಾರಾಯಣ ಪಾಂಡೆಯಿಂದ ಕನ್ಪೈಲಾದ ಸೋದರ ಬಂಧು ಬಳಗದವರ ಈಚಿನ ಸಮಾಚಾರಗಳೆಲ್ಲ ತಿಳಿದುವು.

ರಾಹುಲ್‌ಜೀ ಬನಾರಸಿನಿಂದ ಪಾಟ್ನಾಕ್ಕೆ ಹೋದರು. ಬಿಡುವಿಲ್ಲದ ಕಾರ್ಯಕ್ರಮಗಳ ನಡುವೆ ಸಮಯ ಮಾಡಿಕೊಂಡು ರಾಜಗೃಹ ಮತ್ತು ನಾಲಂದಾಕ್ಕೂ ಹೋದರು. ನಾಲಂದಾದ ಪಾಲಿ ಇನ್ಸಟಿಟ್ಯೂಟ್‌ನ ಹೆಸರು ಈಗ 'ನಾಲಂದಾ ವಿಹಾರ' ಎಂದಿತ್ತು. ರಾಹುಲರಿಗೆ ಇದೇ ಹೆಚ್ಚು ಸಮರ್ಪಕವೆನಿಸಿತು. ರಾಹುಲರು ನಾಲಂದಾದಲ್ಲಿ ವಿದ್ಯಾಪೀಠ ಸ್ಥಾಪಿಸುವ ಕನಸು ಕಟ್ಟಿದ್ದ ಕಾಲವೊಂದಿತ್ತು. ಆ ಕಾಲದ ತನ್ನ ಪುಸ್ತಕಗಳ ಮೇಲೆ 'ಶ್ರೀ ನಾಲಂದಾಽಽರ್ಯ ವಿದ್ಯಾಲಯಾಯ ಸಾಂಕೃತ್ಯಾಯನಸ್ಯ' ಎಂದು ಮುದ್ರೆ ಕುಡ ಒತ್ತಿಟ್ಟಿದ್ದರು.

ನಾಲಂದಾದಲ್ಲಿ ಕಾಶ್ಯಪಜೀ ಅವರೊಂದಿಗೆ ಭೇಟಿ. ಪಾಲಿ ತ್ರಿಪೀಟಿಕಾ ಸಂಪಾದಿತವಾಗಿ ದೇವನಾಗರೀ ಲಿಪಿಯಲ್ಲಿ ಮುದ್ರಣವಾಗುತ್ತದೆ ಎಂದು ತಿಳಿಯಿತು. ರಾಹುಲರಿಗೆ ಇದೊಂದು ಪರಮ ಸಂತೋಷದ ಸುದ್ದಿ ಯಾಕೆಂದರೆ ಅವರು ಪಾಲಿ ಮತ್ತು ಬೌದ್ಧ ಧರ್ಮದ ಅಧ್ಯಯನ ಆರಂಭಿಸಿದ ಕಾಲದಲ್ಲಿ ದೇವನಾಗರಿಯಲ್ಲಿ 'ಧಮ್ಮಪದ'ವನ್ನು ಬಿಟ್ಟು ಬೇರೆ ಯಾವ ಪಾಲಿ ಗ್ರಂಥವೂ ಲಭ್ಯವಿರಲಿಲ್ಲ. ದೇವನಾಗರೀ ತ್ರಿಪೀಟಿಕಾದ ಕೊನೇಪಕ್ಷ ನೂರು ಅಥವಾ ಐವತ್ತಾದರೂ ಪ್ರತಿಗಳನ್ನು ಕೈಕಾಗದದ ಮೇಲೆ ಛಾಪಿಸಿ ಎಂದು ರಾಹುಲರು ಕಾಶ್ಯಪಜೀಗೆ ಸಲಹೆ ಮಾಡಿದರು. ಕಾರಣ ಕೈಕಾದದ ಮೇಲೆ ಮುದ್ರಣಗೊಂಡ ಪುಸ್ತಕಗಳು ಹೆಚ್ಚು ಕಾಲ ತಡೆಯುತ್ತವೆ. ರಾಹುಲರಿಗೆ ತಮ್ಮ 'ದೋಹಾಕೋಶ' ಮತ್ತು 'ಮಧ್ಯ ಏಶಿಯಾ ಕಾ ಇತಿಹಾಸ'ಗಳ ಐವತ್ತು-ನೂರು ಪ್ರತಿಗಳನ್ನು ಕೈಕಾಗದದ ಮೇಲೆ ಛಾಪಿಸಬೇಕೆಂದು ಬಹಳ ಮನಸ್ಸಿದ್ದಿತು.

ಪಾಟ್ನಾದಲ್ಲಿದ್ದಾಗಲೇ ಸೋನಪುರ -ಛಪರಾ - ಪರಸಾ -ಅತರಸನ್ ಮುಂತಾದ ಕಡೆ ಸುತ್ತಾಡ ಹೋಗಿದ್ದು ಒಳ್ಳೆಯದೇ ಆಯಿತು. ಅನೇಕ ಹಳೆಯ ಒಡನಾಡಿಗಳ ಸ್ನೇಹಿತರ ಭೇಟಿಯಾಯಿತು. 'ಮೇರೇ ಅಸಹಯೋಗ ಕೇ ಸಾಥೀ' ಪುಸ್ತಕ ಬರೆಯಲು ಪ್ರೇರಣೆ ಹಾಗೂ ಸಾಮಗ್ರಿ ಎರಡೂ ದೊರೆತವು. ಮೊದಲು ಹೋದದ್ದು ಸೋನಪುರಕ್ಕೆ. ಧೂಪನಾಥರ ಸೋದರನ ಮಗ ವೀರೇಂದ್ರರು ಜೊತೆಗಿದ್ದರು. ಸುದ್ದಿ ಅಗಲೇ ತಲುಪಿದ್ದರಿಂದ ಎಲ್ಲ ಕಡೆ ರಾಹುಲಬಾಬಾ ರವರಿಗೆ ಭಾರೀ ಸ್ವಾಗತ ದೊರೆಯಿತು. ಸೋನಪುರದ ಸ್ವರಾಜ್ಯ ಆಶ್ರಮದಲ್ಲಿ 'ಬಾಬಾ' ಅವರ ಭಾಷಣ. 'ಹಳೆಯ ಪರಿಚಿತರು ಮತ್ತು ಹೊಸ ಪೀಳಿಗೆಯವರು ತಮ್ಮ ಈ ಹಳೆಯ ಸ್ವಾತಂತ್ರ್ಯ ಹೋರಾಟಗಾರನಿಗೆ ಹೃತ್ಪೂರ್ವಕ ಸ್ವಾಗತ ಬಯಸಿದರು. ದನ್ಯ ಧನ್ಯವೆನಿಸಿತು'.

ನಯಾಗಂವ್‌ಗೆ ಬಂದು, ಅಲ್ಲಿನ ಶಾಲೆಯಲ್ಲಿ ಬಾಷಣ ಮಾಡಿದರು. ಭಿಖಾರೀ ಠಾಕೂರರು ಅದೇ ಶಾಲೆಯಲ್ಲಿ ಅಧ್ಯಾಪಕರಾಗಿದ್ದರು. 'ನನಗಂತೂ ಇಂತಹ ಜನರು ತಪಸ್ವಿಗಳಂತೆ ಕಾಣುತ್ತಾರೆ' ಎಂದಿದ್ದಾರೆ ರಾಹುಲಜೀ. 1947ರ ಡಿಸೆಂಬರ್‌ನಲ್ಲಿ ಗೋಪಾಲಗಂಜ್‌ನಲ್ಲಿ ಏರ್ಪಾಟಾದ ಭೋಜಪುರೀ ಸಮ್ಮೇಳನದ ಅಧ್ಯಕ್ಷಪದದಿಂದ ರಾಹುಲರು ಭೋಜಪುರೀಯಲ್ಲಿ ಭಾಷಣ ಮಾಡುತ್ತಾ 'ಹಮನೀ ಕೆ ಬೋಲೀ ಮೇಂ ಕೇತನ ಜೋರ ಹವೇ, ಕೇತನ ತೇಜಬಾ, ಈ ಅಪನೇ ಸಬ್ ಭಿಖಾರೀ ಠಾಕುರ್ ಕೇ ನಾಟಕ ಮೇಂ ದೇಖೀ ಲೇ।..... ಭಿಖಾರೀ ಠಾಕುರ್ ಹಮನೀ ಕೆ ಏಗೋ ಅನಪಢ್ ಹೀರ್‍ಾ ಹವೇ' ಎಂದು ಭಿಖಾರೀ ಠಾಕುರರ ಕುರಿತು ಪ್ರಶಂಸೆ ಮಾಡಿದ್ದರು.

ಅಲ್ಲಿಂದ ಛಪರಾ, ಎಂದಿನಂತೆ ಗೋರಖನಾಥ ತ್ರಿವೇದಿಯವರ ಮನೆಗೆ. ಸಂಜೆ ಟೌನ್ ಹಾಲ್‌ನಲ್ಲಿ ಭಾಷಣವಾಯಿತು. ಪರಸಾಕ್ಕೆ ಹೋಗಿ ಪುನಃ ಛಪಾರಾಕ್ಕೆ ಹಿಂದಿರುಗಬೇಕಿತ್ತು. ಇದು ಪರಸಾಕ್ಕೆ ಅವರು ಮೂವತ್ತು ವರ್ಷಗಳ ಬಳಿಕ ನೀಡಿದ ಭೇಟಿ. 1912ರಲ್ಲಿ ಪರಸಾ ಮಠದ ಉತ್ತರಾಧಿಕಾರಿಯಾಗಲು ಅಲ್ಲಿಗೆ ಹೋಗಿದ್ದವರು, ಅಮೇಲೆ ಮಹಂತಜೀ ಕರೆದಾಗೆಲ್ಲ ಅಲ್ಲಿಗೆ ಹೋಗಿದ್ದರು. 1927ರ ಮಾರ್ಚ್ 30ರಂದು ಕೌನ್ಸಿಲ್ ಚುನಾವಣೆ ಪ್ರಯುಕ್ತ ಒಬ್ಬ ಕಾಂಗ್ರೆಸ್ ಉಮೇದುವಾರನನ್ನು ಸಮರ್ಥಿಸಿ ಭಾಷಣ ಮಾಡಲು ಪರಸಾಕ್ಕೆ ಹೋಗಿದ್ದಾಗ ಅವರು ಸಾಧು ರಾಮೋದಾರದಾಸ ಎಂಬ ಹೆಸರಿನಲ್ಲಿ ರಾಜಕೀಯದಲ್ಲಿ ದುಡಿಯುತ್ತ ಇದ್ದರು. ಪರಸಾದ ಸಭೆಯಲ್ಲಿ ಎದುರು ಪಕ್ಷದ ಜಮೀನುದಾರನ ಕಡೆಯ ಜನರು ಗಲಾಟೆ ಗೌಜಿ ಮಾಡಿ ತಡೆಯೊಡ್ಡಿದಾಗ ಆ ರಾತ್ರಿಯೇ 'ಎಲ್ಲಿಯ ವರೆಗೆ ಜಮೀನುದಾರಿ ಪದ್ಧತಿ ಇರುತ್ತದೋ ಅಲ್ಲಿಯವರೆಗೆ ನಾನು ಪರಸಾದಲ್ಲಿ ಕಾಲಿಡುವುದಿಲ್ಲ – ಎಂದು ಪ್ರತಿಜ್ಞೆ ಮಾಡಿದ್ದರು.

ಜಮೀನುದಾರಿ ಪದ್ಧತಿ ಅಂತ್ಯಗೊಂಡಮೇಲೆ ಪ್ರಥಮ ಬಾರಿಗೆ ರಾಹುಲರು ಪರಸಾಕ್ಕೆ ಹೊರಟರು. ಅವರು ಅಲ್ಲಿನ ಮಠಕ್ಕೆ ಹೋಗಿ ಗುರುಬಂಧುಗಳನ್ನು ಭೇಟಿಮಾಡಿದರು. ಅವರು ಮಠದ ಆಸ್ತಿ ಸಂಪತ್ತಿನ ಬಗ್ಗೆ ಸಲಹೆ ನೀಡಿದರು. ಗಢ್‌ನಲ್ಲಿದ್ದ ಹಳೆಯ ಜಮೀನುದಾರೀ ಕುಟುಂಬವನ್ನು ಭೇಟಿ ಮಾಡಿದರು. ಮಠದ ವೈಷ್ಣವ ಸಾಧುವಾಗಿದ್ದಾಗ ರಾಹುಲರು ಕೆಲ ಭಕ್ತರಿಗೆ ಮಂತ್ರದೀಕ್ಷೆ ಕೊಟ್ಟಿದ್ದರು. ಅವರಲ್ಲಿ ಒಬ್ಬ ಮುದುಕ ವರ್ಷಗಳ ನಂತರ ತನ್ನ ಗುರುವಿನ ದರ್ಶನ ಮಾಡಿ ಗದ್ಗದಿತನಾದ. ರಾಹುಲರ ಚರಣಾಮೃತ ತೆಗೆದುಕೊಂಡ ಹೊರತು ಅವನು ಅವರನ್ನು ಬಿಡಲು ಸಿದ್ಧನಿರಲಿಲ್ಲ.

ರಾಹುಲರು ತನ್ನ ಮೊದಲ ಪುಸ್ತಕ 'ಬಾಯಿಸವೀಂ ಸದೀ'ಯಲ್ಲಿ ಕೊಟ್ಟ ದೊಡ್ಡ, ಹಳೆಯ, ಒಳ್ಳೆಯ ಹಾಗೂ ದಯನೀಯ ಸ್ಥಿತಿಯಲ್ಲಿನ 'ಗಾಂವ್' ಒಂದರ ಚಿತ್ರ ಇದೇ ಪರಸಾ ಗಾಂವ್‌ನದೇ. ಈಗಲೂ ಪರಸಾದ ಸ್ಥಿತಿ ಹಾಗೆಯೇ ಇತ್ತು.

ಹಿಂದಿರುಗುವಾಗ ಏಕಮಾದಲ್ಲಿ ತಂಗಿ, ಅಸಹಕಾರದ ಕಾಲದಲ್ಲಿದ್ದ ತನ್ನ ಒಡನಾಡಿಗಳನ್ನು ಕಂಡರು. ಇದು ಆರಂಭದಲ್ಲಿ ರಾಹುಲರ ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿದ್ದ ಸ್ಥಳ. ಅದೇ ದಿನ ಸಂಜೆ ಧೂಪನಾಥಜೀ ಅವರ ಊರು, ಅತರಸನ್‌ಗೆ. 1926ರಿಂದಲೇ ರಾಹುಲರಿಗೆ ಧೂಪನಾಥಜೀ ಅವರೊಂದಿಗೆ ಸ್ನೇಹ ಸಂಬಂಧವಿತ್ತಷ್ಟೆ?

ಛಪರಾಕ್ಕೆ ವಾಪಾಸು ಹೋದರೆ, ಅಲ್ಲಿಯೂ ಎಡೆಬಿಡದ ಕಾರ್ಯಕ್ರಮಗಳು. ಅಲ್ಲಿನ ರಾಜೇಂದ್ರ ಕಾಲೇಜಿಗೆ ಹೋದಾಗ ಅಲ್ಲಿ ಹಳೆಯ ಸ್ನೇಹಿತರನೇಕರು ಸಿಕ್ಕಿದರು. ಈ ಕಾಲೇಜಿನ ಬೆಳವಣಿಗೆಯಲ್ಲಿ ರಾಹುಲರ ಪಾಲೂ ಇತ್ತು. ರಾತ್ರಿಯೂಟ ಗೋರಖನಾಥ ತ್ರಿವೇದಿಯವರ ಮನೆಯಲ್ಲಾಯಿತು. ಈ ರೀತಿ ಮೂರು ದಿನಗಳ ಸೋನಪುರ – ಛಪರಾ –ಪರಸಾ ಮತ್ತು ಅತರಸನ್‌ಗಳಿಗೆ ಓಡು ಪ್ರವಾಸ ಮಾಡಿ ಜನವರಿ 19ರಂದು ರಾತ್ರಿ ಪಾಟ್ನಾಕ್ಕೆ ಮರಳಿ ಮೂರನೆಯ ದಿನ ಅಲ್ಲಿ ಕಳೆದನಂತರ ಕಲ್ಕತ್ತೆಗೆ ಹೊರಟರು. ಕಲ್ಕತ್ತೆಯಲ್ಲಿ ಎಂದಿನಂತೆ ಸಾಹು ಮಣಿಹರ್ಷಜ್ಯೋತಿ ಅವರ ಮನೆಯಲ್ಲಿ ಮೊಕ್ಕಾಂ ಮಾಡಿದರು. ಸುನೀತಿ ಬಾಬುಗಳ ಭೇಟಿ, ಸ್ವಾಮಿ ವಿವೇಕಾನಂದರ ಸೋದರ ಡಾ। ಭೂಪೇಂದ್ರ ದತ್ತ ಅವರನ್ನು ಎರಡು ಸಲ ಭೇಟಿ ಮಾಡಿದರು. ಭೂಪೇನ್ ದಾ ಕೂಡ ರಾಹುಲಜೀಯವರಂತೆ ನಿರೀಶ್ವರವಾದಿ ಮಾರ್ಕ್ಸಿಸ್ಟ್.

ಕಲ್ಕತ್ತೆಯಲ್ಲಿ ಪಂಡಿತ ವಿಧುಶೇಖರ ಭಟ್ಟಾಚಾರ್ಯ ಅವರನ್ನು ಅಗತ್ಯ ಕಾಣಬೇಕಿತ್ತು. ತನ್ನ ಮುರನೇ ಟಿಬೇಟ್ ಪ್ರವಾಸದಲ್ಲಿ ರಾಹುಲರು (1936) ಸಾಕ್ಯಾದಿಂದ ಅಸಂಗನ 'ಯೋಗಾಚಾರ ಭೂಮಿ'ಯ ಪ್ರತಿ ಬರೆದುಕೊಂಡು ಬಂದಿದ್ದರಷ್ಟೆ. ಪಂಡಿತ ವಿಧುಶೇಖರರು ಈ ಹತ್ತು ಹನ್ನೆರಡು ವರ್ಷಗಳಿಂದ ಅದರ ಸಂಪಾದನ ಕಾರ್ಯದಲ್ಲಿ ತೊಡಗಿ ಕೊಂಡಿದ್ದರು. ಆದರೆ ಪ್ರೆಸ್ಸಿನ ಅಸಹಕಾರದ ಕಾರಣ ಕೆಲಸವಿನ್ನೂ ಮುಗಿದಿರಲಿಲ್ಲ. ರಾಹುಲರೊಡನೆ 'ಈ ದೋಣಿಯನ್ನು ಈಗ ನೀವೇ ದಾಟಿಸಬೇಕು' ಎನ್ನುತ್ತ ಇದ್ದರು. ಮಹಾಬೋಧಿ ಸೊಸೈಟಿಯಲ್ಲಿ ರಾಹುಲರಿಂದ ಬುದ್ಧ ದರ್ಶನವಾದ ಮೇಲೆ ಭಾಷಣವಾಯಿತು. ಕಲ್ಲತ್ತೆಯಲ್ಲಿಯೇ ಅವರ 'ಬೌದ್ಧ ಸಂಸ್ಕೃತಿ' ಪುಸ್ತಕ ಮುದ್ರಣವಾಗುತ್ತ ಇತ್ತು. ಅದರ ಬ್ಲಾಕುಗಳಿಂದಲೇ ಹೇಗಿದೆಯೋ ಹಾಗೆ ಒಂದು ಪ್ರತಿ ಮಾಡಿಸಿಕೊಂಡು ಜನವರಿ 22ರಂದು ಕಲ್ಕತ್ತೆ ಬಿಟ್ಟರು. ಮೂರು ದಿನ ಲಕ್ನೋದಲ್ಲಿದ್ದು ಅಲ್ಲಿಯೂ ತನ್ನ ಪುಸ್ತಕಗಳ ಮುದ್ರಣ ಕೆಲಸ ಪರಿಶೀಲಿಸಿ,ಮಿತ್ರರನ್ನು ಭೇಟಿಯಾಗಿ ಫೆಬ್ರವರಿ 3ರಂದು ಮಸ್ಸೂರಿಗೆ ವಾಪಸಾದರು. ಮಕ್ಕಳ ಮಧ್ಯೆ ಇರುವುದರಿಂದ ತಂದೆಗೆ ಈಗ ಅಪಾರ ಸಂತೋಷ.

ಮನೆಗೆ ಬಂದ ಮೇಲೆ ಓದು ಬರವಣಿಗೆಯ ಕೆಲಸ ನಿಯಮಬದ್ಧವಾಗಿ ಮತ್ತೆ ಆರಂಭವಾಯಿತು. 'ಸಂಸ್ಕೃತ ಕಾವ್ಯಧಾರಾ'ದ ಉಳಿದ ಭಾಗವನ್ನು ಬರೆದು ಪ್ರೆಸ್ಸಿಗೆ ಕಳಿಸ ಬೇಕಿತ್ತು. ಫೆಬ್ರವರಿಯಲ್ಲಿ ಮತ್ತೆ ಬರೆಯ ತೊಡಗಿದರು. 1947 ಅಗೋಸ್ತ್‌ನಿಂದ ಧಿಮೇರೀ ಜೀವನ ಯಾತ್ರಾ'ದ ಮುಂದಿನ ಭಾಗವನ್ನೂ ಬರೆಯಲಾರಂಭಿಸಿದರು.

ಮುಂದಿನ ತಿಂಗಳಿನಿಂದ ಪತ್ರಿಕೆಗಳಲ್ಲಿ ಸ್ಟಾಲಿನ್ ಕುರಿತು ತೀವ್ರ ವಿಮರ್ಶೆಯಾಗುವ ಸುದ್ದಿ ಬರತೊಡಗಿತು. ಇದನ್ನು ಕೇಳಿ ಇತರ ಅನೇಕ ಕಮ್ಯುನಿಸ್ಟರು ಕಳವಳಗೊಂಡರೆ ರಾಹುಲರು ಖುಶಿಪಟ್ಟರು. 'ಸೋವಿಯತ್ ನೆಲದಲ್ಲಿ ಸ್ಟಾಲಿನ್ ಆರಾಧನೆ ನಿಂತಿರುವುದೊಂದು ದೊಡ್ಡ ಕೆಲಸವಾಯಿತು' ಎಂದು ಬರೆದರು.

ಜೇತಾನ ಪೋಲಿಯೋ ಪೀಡಿತ ಕೈಯನ್ನು ತಜ್ಞರಿಗೆ ತೋರಿಸಲೇ ಬೇಕಿತ್ತು. ಹಾಗಾಗಿ ಏಪ್ರಿಲ್ ಆರಂಭದಲ್ಲಿ ಒಂದು ವಾರಕ್ಕಾಗಿ ಮತ್ತೆ ಸಪರಿವಾರ ದೆಹಲಿಗೆ ಹೊರಟರು. ಅಲ್ಲಿನ ಸಫ್ದರ್‌ಜಂಗ್ ಆಸ್ಪತ್ರೆಯಲ್ಲಿ ವೈದ್ಯರ ಸಲಹೆ ಪಡೆದರು. ಪಕ್ಷದ ಆಫೀಸಿಗೆ ಹೋಗಿ ಜೊತೆಗಾರರನ್ನು ಕಂಡರು. ಎಲ್ಲಾ ಕಡೆ ಸ್ಟಾಲಿನ್ ಕುರಿತ ಚರ್ಚೆಯೇ. 'ನಿರ್ಬಲತೆಯನ್ನು ಓಡಿಸಿ ಸಾಮ್ಯವಾದ ಇನ್ನಷ್ಟು ಬಲಿಷ್ಠವಾಗುವುದಲ್ಲದೆ ಇನ್ನಷ್ಟು ಪಸರಿಸುವುದು' ಎಂಬುದು ರಾಹುಲರ ಅಭಿಮತವಾಗಿತ್ತು.

ಎಲ್ಲ ಮಸ್ಸೂರಿಗೆ ವಾಪಸಾದರು. 1956ರ ಏಪ್ರಿಲ್ 9ರಂದು ಅವರ ಜನ್ಮ ದಿನ. ಅಂದಿಗೆ ಅವರಿಗೆ 63ವರ್ಷ. ಈ ಸಲ ಪಾರ್ಟಿ ಗೀರ್ಟಿ ಮಾಡದೆ ಮನೆಯಲ್ಲಿಯೇ ವಿಶೇಷದೂಟ – ಪಾನೀಯ ಮಾಡುವುದೆಂದಾಯಿತು. ಬೆಳಿಗ್ಗೆ ನಿತ್ಯ ನಿಯಮದಂತೆ ಮೂರು ಗಂಟೆ ಬರೆಹ ಟೈಪ್ ಮಾಡಿದರು.

ತನ್ನ 'ಜೀವನಯಾತ್ರಾ'ವನ್ನು ಅವರು ಬರೆದದ್ದು ಆ ದಿನದ ತನಕ ಮಾತ್ರ. ಇನ್ನು ಮುಂದಿನ ಏಳು ವರ್ಷಗಳ ಸ್ಥೂಲ ವಿವರಣೆಗಳನ್ನು ವಿಭಿನ್ನ ಮೂಲಗಳ ಆಧಾರದ ಮೇಲೆ ಕೊಡುತ್ತ ಹೋಗುತ್ತೇನೆ.

1956ರಲ್ಲಿ ರಾಹುಲಜೀ ಅನೇಕ ಕೃತಿಗಳನ್ನು ರಚಿಸಿದರು. ತನ್ನ ತಂದೆಯ ಗ್ರಾಮ ಕನೈಲಾಕ್ಕೆ ಸಂಬಂಧಿಸಿದ 'ಸೈಯದ ಬಾಬಾ' ಮತ್ತು 'ಬಡೀ ರಾನೀ' ಎಂಬ ಎರಡು ಐತಿಹಾಸಿಕ ಕಥೆಗಳನ್ನು

ಅವರು 1955ರಲ್ಲಿಯೇ ಬರೆದಿಟ್ಟಿದ್ದರು. ಫೆಬ್ರವರಿ 1957ರಲ್ಲಿ ಆಜಮಗಢದ ಪ್ರಾಚ್ಯ ಸಂಶೋಧನಾ ಪ್ರವಾಸ ಮಾಡಿದ ಸಮಯ ಕನ್ನೈಲಾಕ್ಕೂ ಹೋದರು. ಶೀಘ್ರವೇ 'ಕನ್ನೈಲಾ ಕೀ ಕಹಾನಿಯಾಂ' (ಒಟ್ಟು ಒಂಭತ್ತು ಕಥೆಗಳು) ಕೂಡ ಪ್ರಕಟವಾಯಿತು. 'ರೂಸ್ ಮೇಂ ಪಚ್ಚೀಸ್ ಮಾಸ್' (1944-47) ಕೃತಿಯನ್ನು 1951ರಲ್ಲಿ ಬರೆದಿದ್ದರು. ಅದೇ ಮುಂದೆ 'ಮೇರೀ ಜೀವನ ಯಾತ್ರಾ'ದ ಮೂರನೇ ಭಾಗವಾಯಿತು. 1947ರ ಆಗೋಸ್ತಿನಿಂದ 1956ರ ಏಪ್ರಿಲ್ 9ರ ವರೆಗಿನ ತಮ್ಮ 'ಜೀವನಯಾತ್ರಾ'ವನ್ನು ಅವರು 1956ರಲ್ಲಿಯೇ ಬರೆದು ಬಿಟ್ಟಿದ್ದರಷ್ಟೆ. ಆದರೆ ಅವು 'ಮೇರೀ ಜೀವನ ಯಾತ್ರಾ'ದ ನಾಲ್ಕು ಮತ್ತು ಐದನೇ ಖಂಡಗಳಾಗಿ, ಅವರ ನಿಧನದ ನಾಲ್ಕು ವರ್ಷಗಳ ನಂತರ 1967ನೇ ಇಸವಿಯಲ್ಲಿ ಪ್ರಕಟವಾದವು. ತನ್ನ 'ಭೈಯ್ಯಾ' ಸ್ವಾಮಿ ಹರಿಶರಣಾನಂದ ಅವರ ಜೀವನ ಚರಿತ್ರೆ 'ಘಲಮಕ್ಕಡ್ ಸ್ವಾಮಿ'ಯನ್ನು ಅವರು ಬರೆದದ್ದೂ 1956ರಲ್ಲಿಯೇ.

1956ರ ಆರಂಭದಲ್ಲಿ ಮಾಡಿದ ಪಾಟ್ನಾ, ಛಪರಾ, ಸೋನಪುರ, ಏಕಮಾ, ನಯಾಗಾಂವ್, ಪರಸಾ ಮುಂತಾದ ಕಡೆಗಳ ತಿರುಗಾಟ, ಭೇಟಿಯಾದ ಸ್ನೇಹಿತರು, ಪಕ್ಷದ ಒಡನಾಡಿಗಳು – ಈ ಎಲ್ಲದರಿಂದ ಅವರ ಹಳೆಯ ನೆನಪುಗಳು ಮತ್ತೆ ಹಸಿರಾಗಿದ್ದವು. ಮಸ್ಸೂರಿಗೆ ಹಿಂದಿರುಗಿದವರು 'ಅಸಹಯೋಗ ಕೇ ಮೇರೇ ಸಾಥೀ' – ಪುಸ್ತಕ ಬರೆದರು. ಹಿಡಿದ ಕೈಯಲ್ಲಿಯೇ ಅದೇ ವರ್ಷ 'ಜಿನ್‌ಕಾ ಮೈ ಕೃತಜ್ಞಂ ಹೂಂ' ಬರೆದರು. ಇದರಲ್ಲಿ ಶ್ರೀಲಂಕಾದ ನಾಯಕಪಾದ ಧರ್ಮಾನಂದ, ಭದಂತ ಆನಂದ ಕೌಸಲ್ಯಾಯನ, ಕಾಮ್ರೇಡ್ ಮಹಮೂದ್, ಡಾ। ಕಾಶೀಪ್ರಸಾದ ಜೈಸ್ವಾಲ್, ಆಚಾರ್ಯ ನರೇಂದ್ರದೇವ ಮುಂತಾದ ವಿಭೂತಿಗಳ ಪರಿಚಯ ಮತ್ತು ಅವರೊಂದಿಗೆ ರಾಹುಲರ ಸಂಬಂಧದ ಬಗ್ಗೆ ವಿವರಗಳಿವೆ.

ಇದೇ ವರ್ಷ ರಾಹುಲರು 'ಋಗ್ವೇದಿಕ ಆರ್ಯ' ಎಂಬ ಬಹು ಮುಖ್ಯ ಕೃತಿಯೊಂದನ್ನು ರಚಿಸಿದರು. ಇದರಲ್ಲಿ ಋಗ್ವೇದದ ಭೌಗೋಲಿಕ, ರಾಜನೈತಿಕ ಮತ್ತು ಸಾಂಸ್ಕೃತಿಕ ಅಧ್ಯಯನವಿದೆ. ಗ್ರಂಥದ ಮುಖ್ಯ ಭಾಗದಲ್ಲಿ ಹಿಂದೀ ಅನುವಾದದಲ್ಲಿ ಋಚಾಗಳನ್ನು ಉದ್ಧರಿಸಿ ಆರ್ಯ ಜನರು, ಋಗ್ವೇದಿಕ ಋಷಿ, ದಸ್ಯು, ಆದಿಮ ಆರ್ಯರಾಜ, ಋಗ್ವೇದಿಕ ಸಮಾಜದ ದೇವತೆ, ಉಣಿಸು–ಪಾನೀಯ, ಕ್ರೀಡೆ–ವಿನೋದ, ಭಾಷೆ–ಕಾವ್ಯ, ಆರ್ಯ ನಾರಿಯರು ಮುಂತಾದ ವಿಚಾರಗಳನ್ನು ವಿಶ್ಲೇಷಣಾತ್ಮಕವಾಗಿ ಪ್ರಸ್ತುತಪಡಿಸಿದ್ದಾರೆ. ಸಂಬಂಧಪಟ್ಟ ಮೂಲ ಋಕ್ಕುಗಳನ್ನು ಎಡಬದಿಯಲ್ಲಿ ಕೊಟ್ಟು ಬಲಬದಿಯಲ್ಲಿ ಅವುಗಳ ಅನುವಾದವನ್ನು ಕೊಟ್ಟಿದ್ದಾರೆ. ಈ ರೀತಿಯ ಗ್ರಂಥ ಹಿಂದಿಯಲ್ಲಿ ಇದೇ ಪ್ರಥಮ. ತಮ್ಮ ಈ ಆಳ ಅಧ್ಯಯನದ ಬಲದಿಂದಲೇ 1960ರಲ್ಲಿ 'ದಿವೋದಾಸ್' ಎಂಬ ಕಾದಂಬರಿಯನ್ನು ಬರೆದರು.

ಡಿಸೆಂಬರ್ 1955ರ ಮಾತು. ರಾಹುಲರು ಕಾಲಸೀಗೆ ಹೋಗಿ ಬಂದು, ಡೆಹರಾಡೂನಿನಲ್ಲಿ ಶುಕ್ಲಜೀ ಅವರಲ್ಲಿದ್ದರು. ಪಾರಸೀ ಚೆನ್ನಾಗಿ ಬಲ್ಲ ಅಲ್ಲಿನ ಒಬ್ಬ ವಕೀಲರು ತಮ್ಮ ಪತ್ನಿಯೊಂದಿಗೆ ಅವರನ್ನು ನೋಡಲು ಹೋದರು. ಪತ್ನಿ ಎಂ.ಎ.ಮುಗಿಸಿದ್ದಳು. ರಾಹುಲಜೀ ತನ್ನ ಪಿ.ಎಚ್.ಡಿ. ನಿರ್ದೇಶಕರಾಗಬೇಕೆಂದು ಅವಳ ಆಸೆ. ರಾಹುಲರು ಅವಳಿಗೆ ರಹೀಂ ಕುರಿತು ಸಂಶೋಧನೆ ನಡೆಸಲು ಹೇಳಿದರು. 'ರಹೀಂ ಬಗ್ಗೆ ಪಾರಸಿಯಲ್ಲಿ ಬೇಕಾದಷ್ಟು ಸಾಮಗ್ರಿಗಳಿವೆ. ನಿಮ್ಮ ಪತಿಯೂ ಸಹಾಯ ಮಾಡುತ್ತಾರೆ' – ಎಂದರು.

ಮತ್ತೆ ಅದೇ ತಿಂಗಳು ಅವರು ದೆಹಲಿಯಲ್ಲಿದ್ದಾಗ ಒಂದು ದಿನ ಅಬ್ದುಲ್ ರಹೀಂ ಖಾನ್‌ಖಾನಾನ ಸಮಾಧಿ ನೋಡಲು ಹೋದರು. ಜನವರಿಯಲ್ಲಿ (1956) ಬನಾರಸಿಗೆ ಹೋದಾಗ ಅಲ್ಲಿನ ವಿಶ್ವವಿದ್ಯಾಲಯದ ಕಲಾಭವನ ಸಂಗ್ರಹಾಲಯದಲ್ಲಿ ರಹೀಮನ ಒಂದು ಚಿತ್ರವನ್ನೂ ನೋಡಿದರು. ರಹೀಮನ ಸಮಾಧಿ ಮಂದಿರ ಮತ್ತು ಆ ಚಿತ್ರದರ್ಶನ ಅವನ ಒಂದು ಪುಟ್ಟ ಜೀವನ ಚರಿತ್ರೆ ಬರೆಯಲು ಅವರನ್ನು ಪ್ರೇರೇಪಿಸಿತು. ರಹೀಮನ ನಂತರ ಅಕ್ಬರನ ಇನ್ನುಳಿದ ರತ್ನಗಳ ಕುರಿತು ಬರೆಯಲು ಲೇಖನಿ ತವಕಿಸಿತು. ಅಕ್ಬರನ ಬಗ್ಗೆಯೇ ಹಿಂದಿಯಲ್ಲಿ ಒಂದು ಒಳ್ಳೆಯ ಪುಸ್ತಕ ಬರೆಯಬೇಕೆಂದು ಮತ್ತೆ ಯೋಚಿಸಿದರು. 1956ರ ವಿಹಾರೀ ಋತುವಿನಲ್ಲಿ 'ಅಕ್ಬರ್' (356 ಪುಟ) ಕೃತಿ ಸಿದ್ಧವಾಗಿ ಬಿಟ್ಟಿತು. ಅಕ್ಬರನ ಕುರಿತು ವಿನ್ಸೆಂಟ್ ಸ್ಮಿತ್ ಬರೆದ ಇಂಗ್ಲಿಷ್ ಗ್ರಂಥ, ಅಕ್ಬರನೊಂದಿಗೆ ನ್ಯಾಯತೀರ್ಮಾನ ಮಾಡುತ್ತಿದ್ದ ಶಮ್ಸುಲ್ ಉಲ್ಮಾ ಮೌಲಾನಾ ಮಹಮ್ಮದ್ ಹುಸೇನ್ 'ಅಜಾದ್'ನ ಪುಸ್ತಕ 'ದರಬಾರ್ ಅಕಬರೀ'ಯ ಹಿಂದೀ ಅನುವಾದ ಎಲ್ಲ ಲಭ್ಯವಿದ್ದವು. ಆದರೆ ಅಕ್ಬರನನ್ನು ವ್ಯಾಪಕವಾದ ಒಂದು ಹೊಸ ದೃಷ್ಟಿಕೋನದಿಂದ ಅರಿಯುವ ಅಗತ್ಯವಿದೆ ಎಂದು ರಾಹುಲರು ಮನಗಂಡರು. ಅವರ ಅಭಿಪ್ರಾಯದಲ್ಲಿ 'ಅಶೋಕನ ನಂತರ ನಮ್ಮ ದೇಶದಲ್ಲಿ ಕಾಣುವ ಇನ್ನೊಂದು ಮಹಾನ್ ಧ್ರುವತಾರೆ ಅಕ್ಬರನೇ'. ಅಕ್ಬರ ನಿಜವಾದ ಅರ್ಥದಲ್ಲಿ ದೇಶ ಭಕ್ತ. ತ್ನನ ರಾಷ್ಟ್ರದ ಪರಮ ನಾಯಕ. ಅಕ್ಬರನ ಮಾರ್ಗ ಇವತ್ತು ಹೆಚ್ಚಿನ ಮಟ್ಟಿಗೆ ನಮ್ಮ ಮಾರ್ಗವಾಗಿ ಬಿಟ್ಟಿದೆ. ಅಕ್ಬರ ಹದಿನಾರನೇ ಶತಮಾನದ್ದಲ್ಲ, ಬದಲು ಇಪ್ಪತ್ತನೇ ಶತಮಾನದ ನಮ್ಮ ದೇಶದ ಸಾಂಸ್ಕೃತಿಕ ಪೈಗಂಬರ'.

ರಾಹುಲರ ದೃಷ್ಟಿಯಲ್ಲಿ ಅಕ್ಬರನ ಪಾತ್ರ ಎಲ್ಲಿ ಮಹತ್ವದ್ದೆಂದರೆ ಆತ ಎರಡು ಸಂಸ್ಕೃತಿಗಳ ಸಂಘರ್ಷದ ಸಿಕ್ಕುಗಳನ್ನು ಯಾವುದೇ ಅನ್ಯ ಅಡ್ಡ ಉದ್ದೇಶಗಳಿಲ್ಲದೆ ಬಿಡಿಸಿದ ಸಾಮರ್ಥ್ಯದಲ್ಲಿ. ಅಕ್ಬರನು ಸಂಸ್ಕೃತಿಗಳ ಮಹಾನ್ ಸಮನ್ವಯದ ಪ್ರತಿಜ್ಞೆ ತೊಟ್ಟಿದ್ದ. 'ಅಕ್ಬರ್' ಕೃತಿಯ ಪರಿಶಿಷ್ಟದಲ್ಲಿ 'ಸಂಸ್ಕೃತಿಗಳ ಸಮನ್ವಯ'ದಲ್ಲಿ ಈ ಎಲ್ಲಾ ವಿಚಾರಗಳನ್ನು ಭಾಷೆ, ಸಾಹಿತ್ಯ, ಧರ್ಮ ಮುಂತಾದ ಎಲ್ಲ ಮಗ್ಗುಲುಗಳಿಂದಲೂ ವಿವೇಚಿಸುತ್ತ ಒಂದು ಉದಾಹರಣೆಯ ರೂಪದಲ್ಲಿ ಅವರು ತಮ್ಮನ್ನೇ ತೆರೆದಿಟ್ಟಿದ್ದಾರೆ.

'ಸಂಸ್ಕೃತಿ ಮತ್ತು ಧರ್ಮ ಒಂದೇ ಅಲ್ಲ. ಇದರ ಉದಾಹರಣೆ ನಾನೇ. ಬುದ್ಧನ ಬಗ್ಗೆ ಅತೀವ ಗೌರವವಿಟ್ಟುಕೊಂಡೂ ಆತನ ದರ್ಶನವನ್ನು ಬಹುಮೇರೆಗೆ ಒಪ್ಪಿಕೊಂಡೂ ನಾನು ನನ್ನನ್ನು ಬೌದ್ಧ ಧರ್ಮದ ಅನುಯಾಯಿ ಎಂದು ಕರೆದುಕೊಳ್ಳಲಾರೆ. ಅನುಯಾಯಿ ಆಗಿದ್ದರೂ ಸಹ ಭಾರತೀಯ ಸಂಸ್ಕೃತಿಯನ್ನು ನನ್ನ ಪ್ರೀತಿಯ ಸಂಸ್ಕೃತಿಯನ್ನಾಗಿ ತಿಳಿಯುತ್ತಿದ್ದೆ. ಪೂರ್ಣ ನಾಸ್ತಿಕನಾಗಿಯೂ ಭಾರತೀಯ ಸಂಸ್ಕೃತಿಯ ಕುರಿತು ನನ್ನಲ್ಲಿ ಅಷ್ಟೇ ಆದರ ಹಾಗೂ ಅವಿನಾ ಸಂಬಂಧವಿದೆ. ಆದುದರಿಂದ ನಾನು ನನ್ನನ್ನು ಆ ಸಂಸ್ಕೃತಿಯ ಉತ್ತರಾಧಿಕಾರಿ ಎಂದು ಬಾಧ್ಯತೆಯಿಂದ ತಿಳಿಯುತ್ತೇನೆ. ಈ ಹಕ್ಕಿನಿಂದ ನನ್ನನ್ನು ವಂಚಿತನಾಗಿಸುವ ಅಥವಾ ಉಗ್ರ ಸ್ವತಂತ್ರ ವಿಚಾರದೊಂದಿಗಿನ ನನ್ನ ಸಂಬಂಧವನ್ನು ಬೇರ್ಪಡಿಸುವ ಶಕ್ತಿ ಯಾರಿಗೂ ಇಲ್ಲ. ಸಾಹಿತ್ಯದಲ್ಲಿ ಅಭಿನ್ನರಾಗಿರುವ ಸೂಫೀಸಂತರು ಇವತ್ತು ಕಟ್ಟಾ ಹಿಂದೂಗಳಿಗೂ ಶಿರೋಧಾರ್ಯರು.'

1956ರಲ್ಲಿ ರಾಹುಲರು ಸಮೃದ್ಧರಾಗಿ ಬರೆದರು. ಅನೇಕ ಪ್ರವಾಸಗಳನ್ನು ಸಹ ಮಾಡಿದರು. ವರ್ಷಾರಂಭದಲ್ಲಿ ವರ್ಧಾದಿಂದ ಕಲ್ಕತ್ತೆಯವರೆಗೆ, ಛಪರಾ ಜಿಲ್ಲೆಗೆ, ಏಪ್ರಿಲ್‌ನಲ್ಲಿ ಕೊಂಚ ದಿನಗಳಿಗಾಗಿ ದೆಹಲಿಗೆ, ಡಿಸೆಂಬರ್‌ನಲ್ಲಿ ಒಬ್ಬರೇ ಕಾಠ್ಮಂಡೂವಿಗೂ ಹೋಗಿ ಬಂದರು.

ಇದೇ ವರ್ಷ ಬೌದ್ಧ ಧರ್ಮದ ದೃಷ್ಟಿಯಿಂದ ಭಾರತದಲ್ಲಿ ಒಂದು ವಿಶೇಷ ಘಟನೆ ನಡೆಯಿತು. ವೈಶಾಖ ಪೂರ್ಣಿಮೆಯಂದು ನಾಗಪುರದಲ್ಲಿ ಡಾ। ಭೀಮರಾವ್ ಅಂಬೇಡ್ಕರರ ನೇತೃತ್ವದಲ್ಲಿ ಅವರ ಲಕ್ಷಗಟ್ಟಲೆ ಅನುಯಾಯಿಗಳು ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಇನ್ನೊಂದು ಮುಖ್ಯ ಘಟನೆಯೆಂದರೆ ಕಾಠ್ಮಂಡೂವಿನಲ್ಲಿ ನಡೆದ ವಿಶ್ವ ಬೌದ್ಧ ಸಮ್ಮೇಳನ. ಆ ಸಮ್ಮೇಳನದಲ್ಲಿ ಡಾ। ಭೀಮರಾವ್ ಅಂಬೇಡ್ಕರರ ಉಪಸ್ಥಿತಿ ದೊಡ್ಡ ಆಕರ್ಷಣೆಯಾಗಿತ್ತು. ಸಮ್ಮೇಳನಕ್ಕೆ ರಾಹುಲಜೀ ಅವರು ವಿಶೇಷ ಆಹ್ವಾನಿತರಾಗಿದ್ದರು. ಕಾಠ್ಮಂಡೂವಂತೂ ರಾಹುಲರಿಗೆ ಸ್ವಂತ ಮನೆಯಂತೆಯೇ. ದೇಶ ವಿದೇಶಗಳ ಬೌದ್ಧ ವಿದ್ವಾಂಸರನ್ನೆಲ್ಲ ಭೇಟಿ ಮಾಡಿದಂತಾಗುವುದೆಂದು ಅವರು ಕಾಠ್ಮಂಡೂವಿಗೆ ಹೋದರು. ಅಲ್ಲಿಗೆ ಆಗ ಆನಂದಜೀ ಕೂಡ ಬಂದಿದ್ದರು. ನಿಜವಾಗಿಯೂ ಇದೊಂದು ಉಪಯುಕ್ತ ಪ್ರವಾಸವಾಯಿತು. ನೇಪಾಳದ ಎಲ್ಲ ಪರಿಚಿತರೊಡನೆ ಮತ್ತೆ ಭೆಟ್ಟಿ. ಅಲ್ಲಿ 'ಭಾರತದ ಮಾತ್ರವಲ್ಲ, ಶ್ರೀಲಂಕಾ ಮುಂತಾದ ಕಡೆಗಳಿಂದಲೂ ಪರಿಚಿತ ಭಿಕ್ಷುಗಳು ಗೃಹಸ್ಥರು ಸಿಕ್ಕಿದರು' ಚೀನೀ ಪ್ರತಿನಿಧಿ ಮಂಡಲದ ಅಧ್ಯಕ್ಷ ಗೇಶೇ ಶೇರಬ್, ಇಪ್ಪತ್ತೆರಡು ವರ್ಷಗಳ ನಂತರ, ಅತೀವ ಪ್ರೀತಿಯಿಂದ ಭೇಟಿಯಾದರು. ಇದೇ ವರ್ಷ ಬೌದ್ಧ ಧರ್ಮದ ದೃಷ್ಟಿಯಿಂದ ಭಾರತದಲ್ಲೊ ಒಂದು ವಿಶೇಷ ಘಟನೆ ನಡೆಯಿತು. ವೈಶಾಖ ಪೂರ್ಣಿಮೆಯಂದು ನಾಗಪುರದಲ್ಲಿ ಡಾ।ಭೀಮರಾವ್ ಅಂಬೇಡ್ಕರರ ನೇತೃತ್ವದಲ್ಲಿ ಅವರ ಲಕ್ಷಗಟ್ಟಲೆ ಅನುಯಾಯಿಗಳು ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಇನ್ನೊಂದು ಮುಖ್ಯ ಘಟನೆಯೆಂದರೆ ಕಾಠ್ಮಂಡೂವಿನ್ಲಿ ನಡೆದ ವಿಶ್ವ ಬೌದ್ಧ ಸಮ್ಮೇಳನ. ಆ ಸಮ್ಮೇಳನದಲ್ಲಿ ಡಾ।ಭೀಮರಾವ್ ಅಂಬೇಡ್ಕರರ ಉಪಸ್ಥಿತಿ ದೊಡ್ಡ ಆಕರ್ಷಣೆಯಾಗಿತ್ತು. ಸಮ್ಮೇಳನಕ್ಕೆ ರಾಹುಲಜೀ ಅವರು ವಿಶೇಷ ಆಗ್ವಾನಿತರಾಗಿದ್ದರು. ಕಾಠ್ಮಂಡೂವಂತೂ ರಾಹುಲರಿಗೆ ಸ್ವಂತ ಮನೆಯಂತೆಯೇ. ದೇಶವಿದೇಶಗಳ ಬೌದ್ಧ ವಿದ್ವಾಂಸರನ್ನೆಲ್ಲ ಭೇಟಿ ಮಾಡಿದಂತಾಗುವುದೆಂದು ಅವರು ಕಾಠ್ಮಂಡೂವಿಗೆ ಹೋದರು. ಅಲ್ಲಿಗೆ ಆಗ ಆನಂದಜೀ ಕೂಡ ಬಂದಿದ್ದರು. ನಿಜವಾಗಿಯೂ ಇದೊಂದು ಉಪಯುಕ್ತ ಪ್ರವಾಸವಾಯಿತು. ನೇಪಾಳದ ಎಲ್ಲ ಪರಿಚಿತರೊಡನೆ ಮತ್ತೆ ಭೆಟ್ಟಿ. ಅಲ್ಲಿ "ಭಾರತದ ಮಾತ್ರವಲ್ಲ, ಶ್ರೀಲಂಕಾ ಮುಂತಾದ ಕಡೆಗಳಿಂದಲೂ ಪರಿಚಿತ ಭಿಕ್ಷುಗಳು ಗೃಹಸ್ಥರು ಸಿಕ್ಕಿದರು" ಚೀನೀ ಪ್ರತಿನಿಧಿ ಮಂಡಲದ ಅಧ್ಯಕ್ಷ ಗೇಶೇ ಶೇರಬ್, ಇಪ್ಪತ್ತೆರಡು ವರ್ಷಗಳ ನಂತರ, ಅತೇವ ಪ್ರೀತಿಯಿಂದ ಭೇಟಿಯಾದರು. 1930ನೇ ಇಸವಿಯಲ್ಲಿ ಮೊದಲ ಟಿಬೇಟ್ ಪ್ರವಾಸದಲ್ಲಿ ಲಾಸಾದ ಸಮೀಪದಲ್ಲಿನ ಡೇ-ಪುಙ್‌ಮಹಾವಿಹಾರದಲ್ಲಿ ಅವರನ್ನು ಪ್ರಥಮ ಸಲ ರಾಹುಲರು ಸಂಧಿಸಿದ್ದರಷ್ಟೆ? ಎರಡನೇ ಸಲದ (1934) ಪ್ರವಾದಲ್ಲಿ ಕುಂದೇ-ಲಿಙ್ ವಿಹಾರದಲ್ಲಿ ಸಿಕ್ಕಿದ್ದರು.ಗೇಶೇ ಶೇರಬ್ ಮಂಗೋಲ ಭಿಕ್ಷು. ಭಾರತ ಪ್ರವಾಸವನ್ನೂ ಮಾಡಿದವರು. ಆ ಸಮಯದಲ್ಲಿಯೇ ರಾಹುಲರು ಅವರ ಕುರಿತು 'ಅವರಂತಹ ಪಂಡಿತರು ಇಡೀ ಟಿಬೇಟಿನಲ್ಲಿ ಮೂರು ನಾಲ್ಕು ಮಂದಿ ಸಿಕ್ಕಿಯಾರು. ಭೋಟ್-ಶಾಸ್ತ್ರದ ವಿದ್ಯಾ ಸಾಗರ. ಚಾಂದ್ರ-ವ್ಯಾಕರಣ ಕೂಡ ಅವರಿಗೆ ಬಾಯಿಪಾಠ' ಎಂದು ಬರೆದಿದ್ದಾರೆ. ಈಗ ಕಾಠ್ಮಂಡೂವಿನ್ಲಿ ಮತ್ತೆ ಅವರ ಭೆಟ್ಟಿ. ಚೀನಾದ ಬೌದ್ಧ ಸಂಘದ ಉಪಪ್ರಧಾನ ಶ್ರೀ ಚಾಊ-ಪೂ-ಛೂ ಕೂಡ ಅಲ್ಲಿದ್ದರು. ಮೂವರೂ ಮೂರು ಗಂಟೆಗಳ ಕಾಲ ಮಾತುಕತೆಯಾಡುತ್ತ

ಕುಳಿತರು. ಆಗಲೇ ರಾಹುಲರ ಮನದಲ್ಲಿ 1958ರ ಚೀನೀ ಪ್ರವಾಸ ಯೋಜನೆಯ ಬೀಜ ಅಂಕುರಿಸಿತು.

ಕಾಠ್ಮಂಡೂ ಸಮ್ಮೇಳನದಿಂದ ಲುಂಬಿನಿಗೆ. ಅಲ್ಲಿಂದ ಕುಶೀನಗರಕ್ಕೆ. ಆನಂದಜೀ ಕೂಡ ಜೊತೆಗಿದ್ದರು. ರಾಹುಲರು ಬನಾರಸ್ ಮಾರ್ಗವಾಗಿ ಮಸ್ಸೂರಿಗೆ ಹಿಂದಿರುಗಬೇಕಿತ್ತು. ಆಗಲೇ ಹೇಳಿದಂತೆ ಹಿಂದೀ ವಿಶ್ವಕೋಶದ ಪ್ರಧಾನ ಸಂಪಾದಕರಾಗಲು 1955ರ ಫೆಬ್ರವರಿಯಲ್ಲಿಯೇ ಅವರಿಗೆ ಒತ್ತಾಯಪಡಿಸಿದ್ದರಷ್ಟೆ? ಆದರೆ ಆಗ್ರಹ ಪಡಿಸುವ ಮಾತು ಬೇರೆ, ಕ್ರಮಪ್ರಕಾರವಾಗಿ ನೇಮಕಗೊಳ್ಳುವ ಮಾತೇ ಬೇರೆ. ಹಿಂದೀ ಜಗತ್ತಿನಲ್ಲಿ ರಾಗುಲರು ಹಿಂದೀ ವಿಶ್ವಕೋಶದ ಪ್ರಧಾನ ಸಂಪಾದಕರ ಜವಾಬ್ದಾರಿ ಹೊರಲಿದ್ದಾರೆ ಎಂಬ ಸುದ್ದಿ ಹಬ್ಬಿತ್ತು. ರಾಹುಲರು ಕೂಡ ಇದಕ್ಕಾಗಿ ಸಿದ್ಧತೆ ನಡೆಸುತ್ತಲೇ ಇದ್ದರು. ಆದರೂ ಅವರು ಅಂತಿಮ ನಿರ್ಧಾರ ಕೈಗೊಳ್ಳುವ ಸ್ಥಿತಿಯಲ್ಲೂ ಇರಲಿಲ್ಲ.

ಕಾಠ್ಮಂಡೂ ಪ್ರವಾಸದಿಂದ ಪ್ರಯಾಗಕ್ಕೆ ಮರಳಿ 1956ರ ನವೆಂಬರ್ 25ರಂದು ಪತ್ನಿಗೆ 'ನಾನು ಬನಾರಸ್‌ನ ಕೆಲಸ(ಹಿಂದೀ ವಿಸ್ವಕೋಶದ ಸಂಪಾದನ ಕಾರ್ಯ)ವನ್ನು ಉಪೇಕ್ಷೆ ಮಾಡುವುದಿಲ್ಲ. ಭಗವತ ಶರಣಜೀ ಅವರ (ಡಾ।ಭಗವತ ಶರಣ ಉಪಾಧ್ಯಾಯ) ನೇಮಕವಾಗಿದೆ. ಸ್ಥಾಯಿಯಾಗಿ ಇದ್ದು ಕೆಲಸ ಮಾಡುವ ಬಗ್ಗೆ ನನ್ನನ್ನು ಕೇಳಿಕೊಂಡಿದ್ದರು. ನಾನು ಹಾಗೇನೇ ಪತ್ರ ಬರೆದು ಬನಾರಸ್ ಸ್ಟೇಶನ್ನಿಗೆ ಬಂದಿದ್ದ ವಿನೋದಜೀ (ವೈಜನಾಥ ಸಿಂಹ 'ವಿನೋದ')ಯವರಿಗೆ ಕೊಟ್ಟು ಬಿಟ್ಟಿದ್ದೇನೆ. ದಶಂಬರದ ಅಂತ್ಯದಲ್ಲಿ ನಿರ್ಣಯವಾಗುತ್ತದೆ. ಅಷ್ಟರೊಳಗೆ ಭಗವತ ಶರಣರು ಕೆಲಸ ಪ್ರಾರಂಭಿಸಿ ಬಿಡುತ್ತಾರೆ' ಎಂದು ಬರೆದಿದ್ದಾರೆ.

1955ರ ಫೆಬ್ರವರಿಯಲ್ಲಿ ರಾಹುಲರೆದುರು ಪ್ರಸ್ತಾಪ ತಂದು 1956ರ ನವೆಂಬರಿನವರೆಗೂ ಅಂತಿಮ ನಿರ್ಣಾಯಕ್ಕೆ ಬಾರದಿರುವುದು ಏನು ವಿಚಿತ್ರ: ಈ ದಶಂಬರದ ಅಂತ್ಯದಲ್ಲಿ ನಿರ್ಣಯವಾಗುತ್ತದೆ ಎಂದು ಹೇಳಲಾಗಿತ್ತು, ಆದರೆ ಆಗಲಿಲ್ಲ.

ವಾಸ್ತವವಾಗಿ ಡಾ।ಭಗವತ ಶರಣರ ನೇಮಕದೊಂದಿಗೇ ನಿರ್ಧಾರ ಆಗಿಬಿಟ್ಟಿತ್ತು. ವಿಶ್ವಕೋಶಕ್ಕೆ ಭಗವತ ಸಹಾಯ ಅವಶ್ಯಕವೆಂದು ರಾಹುಲರೂ ತಿಳಿದಿದ್ದರೆಂದು ಹಿಂದೆಯೇ ಹೋಳಿದೆ. ಆದರೆ ಇಲ್ಲಿ ಆದದ್ದು ಅದರ ತಿರುಗ ಮುರುಗ. ಮೊದಲು ಭಗವತ ಶರಣರ ನೇಮಕವಾಗಿ ಅವರು ಕೆಲಸ ಅರಂಭಿಸಿಯೂ ಬಿಟ್ಟಿದ್ದರು. ರಾಹುಲರನ್ನು ಮಾತ್ರ ಮುಂದೆಯೂ ಸುಮಾರು ಒಂದು ವರ್ಷದ ವರೆಗೆ ತೂಗುಯ್ಯಾಲೆಯಲ್ಲಿಟ್ಟದ್ದು ಅಕ್ಷಮ್ಯ.

ಕೊನೆಗೂ ರಾಹುಲರನ್ನು ಹಿಂದೀ ವಿಶ್ವಕೋಶದ ಪ್ರಧಾನ ಸಂಪಾದಕರನ್ನಾಗಿ ಮಾಡಲಿಲ್ಲವೇಕೆ? ಅವರು ಕಮ್ಯುನಿಸ್ಟ್ ಆಗಿರುವುದೇ ಅಡ್ಡಿಯಾಯಿತು ಎನ್ನುತ್ತಾರೆ. ಆನಂದಜೀ ಕೂಡ ಬರೆದಿದ್ದಾರೆ "ರಾಹುಲಜೀ ತಾವು 'ಕಮ್ಯುನಿಸ್ಟ್' ಆಗಿರುವುದರ ಬೆಲೆ ತೆರಬೇಕಾಗಿ ಬಂತು"

ಆದರೆ ಇದು ಸಂಪೂರ್ಣ ನಿಜವಲ್ಲ. ಡಾ।ಭಗವತ ಶರಣರೂ ಆಗಾಗ ತಮ್ಮನ್ನು ಕಮ್ಯುನಿಸ್ಟ್ ಪಾಳೆಯದವನೆಂದೇ ಹೇಳಿಕೊಳ್ಳುತ್ತಿದ್ದರು. ಕಮ್ಯುನಿಸ್ಟ್ ಪಾರ್ಟಿಯ ಪ್ರಕಾಶನ ಸಂಸ್ಥೆ ಅವರ ಅನೇಕ ಗ್ರಂಥಗಳನ್ನು ಪುನರ್ಮುದ್ರಣ ಮಾಡಿದೆ. ನಿಜವಾಗಿ ರಾಹುಲರಿಗೆ ಹಿಂದಿಯ ತಮ್ಮ ಜನರೇ ತಮ್ಮ ವಿರುದ್ಧ ರಚಿಸಿದ ಷಡ್ಯಂತ್ರದಿಂದಾದಷ್ಟು ವ್ಯಥೆಯಾಯಿತು. ತಾನು ಕಮ್ಯುನಿಸ್ಟ್ ಆಗಿರುವುದಕ್ಕೆ ಬೆಲೆ ತೆರಬೇಕಾದಲ್ಲಿ ಆಗುತ್ತಿರಲಿಲ್ಲ.

ಏಪ್ರಿಲ್ 1956ರ ನಂತರದ ತನ್ನ 'ಜೀವನ ಯಾತ್ರಾ' ಬರೆದಿದ್ದರೆ ಖಂಡಿತ ಆ ಷಡ್ಯಂತ್ರವನ್ನು ಬಿಡಿಸಿ ತೋರಿಸುತ್ತಿದ್ದರು. ಆದರೆ ಈಗ ವಸ್ತುಸ್ಥಿತಿ ತಿಳಿಯಲು ಅವರ ಪತ್ನಿಯ ಮಾತುಗಳನ್ನು ಆಧಾರವಾಗಿಟ್ಟುಕೊಳ್ಳಬೇಕಾಗಿದೆ. "ರಾಹುಲಜೀ ವಿರುದ್ಧ ರಾಜನೈತಿಕ ಪಿತೂರಿ ನಡೆಸಲಾಯಿತು. ವಿಶ್ವಕೋಶದ ಸಂಪಾದಕರಾಗಲು ಆಸೆಪಟ್ಟ ವಿದ್ವಾಂಸರೇ ಈ ಪಿತೂರಿ ನಡೆಸಿದರೆಂದು ಬಹಳ ದಿನಗಳ ಬಳಿಕ ರಾಹುಲಜೀಗೆ ತಿಳಿಯಿತು. ಈ ಅಭಿಯಾನದಲ್ಲಿ ಅವರು ವಿಜಯಯಾದರು. ಸಂಪಾದಕ ಪಟ್ಟದಲ್ಲಿ ಶೋಭಿಸಿದರು. ಆದರೆ ಅವರ ಕೈ ಕೆಳಗೆ ಕೆಲಸ ಮಾಡುವ ವಿದ್ವಾಂಸರ ಅಸಮಾಧಾನದ ಕಾರಣ ಅವರು ಬಹುಶಃ ಎರಡು ವರ್ಷಗಳ ಬಳಿಕ ಅಧ್ಯಕ್ಷ ಪದವಿಯನ್ನು ಬಿಡಬೇಕಾಗಿ ಬಂತು".

ರಾಹುಲರು ಪ್ರಯಾಗದಲ್ಲಿ ಎರಡು ಮೂರು ದಿನ ಉಳಿದು ನವೆಂಬರ್ ಅಂತ್ಯದಲ್ಲಿ ಮಸ್ಸೂರಿಗೆ ಹಿಂದಿರುಗಿದರು. ದಶಂಬರ ಅಂತ್ಯದಲ್ಲಿ ಸಂಪಾದಕರ ನಿರ್ಣಯವಾಗುವುದೆಂದು ಹೇಳಿರುವುದರಿಂದ ವರ್ಷಾಂತ್ಯದ ತನಕ ಅವರ ಮನಸ್ಥಿತಿ ಹೇಗಿದ್ದಿರಬಹುದು, ಸುಲಭವಾಗಿ ಊಹಿಸಬಹುದು.

# ಚೀನಾ ಪ್ರವಾಸ

1957ರಲ್ಲಿ ರಾಹುಲರಿಗೆ ಮಾನಸಿಕ ತಲ್ಲಣ ಸಾಕಷ್ಟು ಇತ್ತು. ಇದಕ್ಕೆ ಮುಖ್ಯ ಕಾರಣವೆಂದರೆ ಅದೇ, ಹಿಂದೀ ವಿಶ್ವಕೋಶದ ಪ್ರಧಾನ ಸಂಪಾದಕ ಹುದ್ದೆಯ ವಿಷಯ. ಡಿಸೆಂಬರ್ ಅಂತ್ಯದವರೆಗೆ ಯಾವ ನಿರ್ಣಯಕ್ಕೂ ಬಾರದೆ ಅವರು ಮುಂದೆ ಅನೇಕ ತಿಂಗಳುಗಳವರೆಗೂ ನಿರ್ಣಯದ ನಿರೀಕ್ಷೆಯಲ್ಲಿಯೇ ಇದ್ದರು.

ಅವರ ಮುಂದೆ ಎರಡು ದಾರಿಗಳಿದ್ದುವು. ಹಿಂದೀ ವಿಶ್ವಕೋಶದ ಜವಾಬ್ದಾರಿ ನಿರ್ವಹಿಸುವುದು ಅಥವಾ ಚೀನಾಕ್ಕೆ ಹೋಗಿ ಅಲ್ಲಿ ಸಂಶೋಧನೆ ನಡೆಸುವುದು. ಎರಡೂ ಅವರಿಗೆ ಮುಖ್ಯವೇ. ಒಂದು ವೇಳೆ ಅಲ್ಲಿ ವಿಶ್ವಕೋಶದ ಕೆಲಸವನ್ನು ಅವರಿಗೆ ಒಪ್ಪಿಸಿದ್ದರೆ ವಿದೇಶಕ್ಕೆ ಹೋಗುವ ಪ್ರಶ್ನೆಯೇ ಬರುತ್ತಿರಲಿಲ್ಲ. 1957ರ ಅಕ್ಟೋಬರಿನಲ್ಲಿ ವಾರಾಣಾಸಿಗೆ ಹೋದ ಮೇಲೆಯೇ ತಮಗೆ ವಿಶ್ವಕೋಶದ ಕೆಲಸದಲ್ಲಿ ಸ್ಥಾನವಿಲ್ಲವೆಂದು ಅವರಿಗೆ ತಿಳಿದದ್ದು. ಅದೇ ತಿಂಗಳು ಚೀನಾ ಬೌದ್ಧ ಸಂಘದ ಉಪಾಧ್ಯಕ್ಷರಾದ ಶ್ರೀ ಚಾಊ-ಪೂ-ಛೂಗೆ ವಿಸ್ತಾರವಾದೊಂದು ಪತ್ರ ಬರೆದು ತಾನು ಟಿಬೆಟಿಗೆ ಸಂಬಂಧಿಸಿ ಅನ್ವೇಷಣೆ ನಡೆಸಲು ಚೀನಾಕ್ಕೆ ಬರಬೇಕೆಂದಿದ್ದೇನೆ ಎಂದು ಸೂಚಿಸಿದರು. ಅನೇಕ ಬಗೆಯಲ್ಲಿ ಮನಸ್ಸು ಹಿಂದೆಳೆಯುತ್ತಿದ್ದರೂ 1957ರಲ್ಲಿ, 1956ರಷ್ಟಲ್ಲವಾದರೂ, ಸಾಕಷ್ಟು ಕೆಲಸ ಮಾಡಿದರು. ಪ್ರವಾಸ ಮಾಡಿದರು. ಅವುಗಳಲ್ಲಿ ಪ್ರಮುಖವಾದದ್ದು ಆಜಮುಗಢದ ಪ್ರಾಚ್ಯ ಸಂಶೋಧನಾ ಪ್ರವಾಸ.

ಆಜಮುಗಢದ ಹೊಸ ಗಜೆಟಿಯರ್‌ಗಾಗಿ ರಚಿಸಲಾದ ಸಮಿತಿಯಲ್ಲಿ ರಾಹುಲಜೀಯವರ ಹೆಸರು ಇತ್ತು. ಜನವರಿ 1956ರಲ್ಲಿ ಅವರು ಪಾಟ್ನಾದಲ್ಲಿ ಇದ್ದಾಗಲೂ ಐದಾರು ದಿನಗಳಿಗಾಗಿ ಆಜಮುಗಢದ ಪ್ರಾಚ್ಯ ವೈಶಿಷ್ಟ್ಯಗಳುಳ್ಳ ಸ್ಥಳಗಳಿಗೆ ಸುತ್ತಾಡಿ ಬರುವ ಕಾರ್ಯಕ್ರಮ ಹಾಕಿಕೊಂಡಿದ್ದರು. ಆದರೆ ಆಗ ಹೋಗಲು ಸಾಧ್ಯವಾಗಿರಲಿಲ್ಲ. 'ಕನ್ಯೆಲಾ ಕೀ ಕಥಾ'ದ ಐತಿಹಾಸಿಕ ಕಥೆಗಳು ಒಂದೊಂದಾಗಿ ಸಿದ್ಧವಾಗುತ್ತಾ ಇದ್ದವು. 1957 ಫೆಬ್ರವರಿಯಲ್ಲಿ ಪುರಾತತ್ತ್ವ ಪ್ರವಾಸಕ್ಕಾಗಿ ಆಜಮುಗಢಕ್ಕೆ ಹೋದರು.

ಸುಮಾರು ಹತ್ತು ದಿನಗಳ ಈ ಪ್ರವಾಸದಲ್ಲಿ ರಾಹುಲಜೀ ರಾಣೀ ಕೀ ಸರಾಯ್, ತನ್ನ ಹುಟ್ಟಿದೂರು ಪಂದಹಾ ಮತ್ತು ತಂದೆಯ ಊರಾದ ಕನ್ಯೆಲಾಕ್ಕೂ ಹೋದರು. ಕನ್ಯೆಲಾದ ಡೀಹಬಾಬಾ ಸ್ಥಾನದಲ್ಲಿ ರಾಹುಲರಿಗೆ ಮಹಾಕಾಲನ ಭಗ್ನ ವಿಗ್ರಹದ ಶಿರ ಸಿಕ್ಕಿ, ಸಂರಕ್ಷಣೆಗಾಗಿ ಅಲ್ಲಿಂದ ಅದನ್ನೆತ್ತಿಕೊಂಡು ಬಂದರು. 'ವಜ್ರಯಾನದ ಈ ಮಹಾನ್ ದೇವತೆಯನ್ನು ಕನ್ಯೆಲಾದಲ್ಲಿ ಇವತ್ತಿಗೆ ಎಂಟುನೂರು ವರ್ಷಗಳ ಕೆಳಗೆ ಪರಮಪೂಜ್ಯ ಸ್ಥಾನದಲಿಟ್ಟು ಗೌರವಿಸುತ್ತಿದ್ದರು. ಆದರೆ ಇವತ್ತು ನಾನು ಬಿಟ್ಟರೆ ಅವನನ್ನು ಗುರುತಿಸುವವರು ಯಾರೂ ಇಲ್ಲ; ಏನು ಪರಿವರ್ತನೆ!'

ಕನ್ಯೆಲಾದಲ್ಲಿ ಸಂಬಂಧಿಕರು ಮತ್ತು ಅನೇಕ ಮಂದಿ ಪರಿಚಿತರೊಂದಿಗೆ ಭೇಟಿಯಾಯಿತು. 1943ರಲ್ಲಿ ಐವತ್ತು ವರ್ಷ ತುಂಬಿದ ಸಂದರ್ಭ ರಾಹುಲರು ಕನ್ಯೆಲಾಕ್ಕೆ ಹೋಗಿದ್ದಾಗ 'ಸೆರಗಿನಿಂದ

ಮರೆ ಮಾಡಿಕೊಂಡ ಒಂದು ಮೂರ್ತಿ' ಅವರ ಕಾಲಿಗೆ ಬಿದ್ದು ಅಳಲು ಆರಂಭ ಮಾಡಿತ್ತಷ್ಟೆ? ಆದರೆ ಆಗ ಅವರು ಅಲ್ಲಿಂದ ತಕ್ಷಣ ಎದ್ದು ನಿಂತು ಬಿಟ್ಟಿದ್ದರು. ಈ ಸಲದ ಮನಸ್ಥಿತಿ ಬೇರೆ ಇತ್ತು. 'ಕನ್ನೈಲಾ ಬಿಡುವ ಮುಂಚೆ ನನ್ನ ಮೊದಲ ಹೆಂಡತಿಯನ್ನು ನೋಡಲು ನಿರ್ಧರಿಸಿ ಬಿಟ್ಟಿದ್ದೆ. ಈಗ ಆಕೆ ಹಾಸಿಗೆ ಹಿಡಿದಿದ್ದಳು. ನೋಡಿದರೆ ಸಹಜವಾಗಿ ಕರುಣೆ ಉಕ್ಕಿ ಬರುತ್ತಿತ್ತು. ಈ ಮಹಿಳೆಯ ಅರ್ಧ ಶತಮಾನದ ಬದುಕು ನೀರಸ ಹಾಗೂ ದುರ್ಭರವಾಗಲು ಕಾರಣ ಕೊನೆಗೂ ನಾನೇ ಆಗಿದ್ದೆ. ನಾನು ಪ್ರಾಯಶ್ಚಿತ್ತ ಮಾಡಿಕೊಂಡರೂ ಅಕೆಗೇನಾದರೂ ಲಾಭವಿದೆಯೇ? ಒಮ್ಮೆ ನೋಡಿದೆ. ಆಕೆ ಕಂಬನಿ ತಡೆಯದಾದಳು. ನಾನು ಮನೆಯಿಂದ ಹೊರಗೆ ಬಂದು ಬಿಟ್ಟೆ'.

ರಾಹುಲರ 'ಕನ್ನೈಲಾ ಕೀ ಕಥಾ'ದ ಸಮರ್ಪಣೆ 'ಯಾರ ಇಡೀ ಜೀವನ ನನ್ನ ಮಹತ್ವಾಕಾಂಕ್ಷೆಗಳಿಗೆ ಬಲಿಯಾಯಿತೋ ಆ ನನ್ನ ಮೊದಲ ಪತ್ನಿಗೆ' ರಾಹುಲರು ತನ್ನ ಮೂವರು ಪತ್ನಿಯರಿಗೂ ಒಂದೊಂದು ಪುಸ್ತಕ ಸಮರ್ಪಿಸಿದ್ದಾರೆ. ಅವರು 'ಆಜಮಗಢಕೀ ಪುರಕಥಾ'ವನ್ನೂ ಬರೆದಿದ್ದರು. ಆದರೆ ಅದಿನ್ನೂ ಪ್ರಕಟವಾಗಿಲ್ಲ.

ಹಿಂದೀ ವಿಶ್ವಕೋಶವನ್ನು ಸಂಪಾದಿಸುವ ಅವಕಾಶ ಸಿಗದಿದ್ದರೇನಾಯಿತು, ಕಾಶೀ ನಾಗರೀ ಪ್ರಚಾರಿಣೀ ಸಭಾದಿಂದ ಪ್ರಕಾಶಿತವಾದ ಹಿಂದಿಯ ಒಂದು ಲೋಕ-ಸಾಹಿತ್ಯ ವಿಶ್ವಕೋಶವನ್ನು ಅವರು 1957ರಲ್ಲಿಯೇ ಬಹಳ ಸಮರ್ಥವಾಗಿ ಸಂಪಾದಿಸಿದ್ದರು. ಅದರು ಹೆಸರು 'ಹಿಂದೀ ಸಾಹಿತ್ಯ ಕಾ ಬೃಹದ್ ಇತಹಾಸ್: ಬಾಗ 16' ಇದರಲ್ಲಿ ಹಿಂದಿಯ ಲೋಕ ಸಾಹಿತ್ಯದ ವಿಸ್ತಾರವಾದ ವಿವರಣೆ ನೀಡಿದ್ದಾರೆ. ರಾಹುಲರಿಗೆ ಲೋಕ ಸಾಹಿತ್ಯವೆಂದರೆ ವಿಶೇಷ ಅಕ್ಕರೆ. ತಮ್ಮ 'ಗಢವಾಲ್', 'ಕುಮಾವೂಂ' 'ಹಿಮಾಚಲ ಪ್ರದೇಶ' 'ಆದಿ ಹಿಂದೀ ಕೀ ಕಹಾನಿಯಾಂ ಔರ್ ಗೀತ್' ಮುಂತಾದ ಅನೇಕ ಗ್ರಂಥಗಳಲ್ಲಿ ಲೋಕ ಗೀತೆಗಳನ್ನು ಹಾಗೂ ಲೋಕ ಕಥೆಗಳನ್ನು ಸಂಕಲಿಸಿ ಕೊಟ್ಟಿದ್ದಾರೆ. ಭೋಜಪುರಿಯಲ್ಲಿ ಎಂಟು ನಾಟಕಗಳನ್ನು ಬರೆದಿದ್ದಾರೆ. ಲೋಕ ಗೀತಕಾರರು ಹಾಗೂ ಲೋಕ ನಾಟಕಕಾರರು ಎಂದರೆ ರಾಹುಲರಿಗೆ ಬಹಳ ಗೌರವ. ಭೋಜಪುರಿಯ ಜನಪದ ಕವಿ ಬಿಸ್‌ರಾಮ್ ಅವರ ವಿರಹ ಗೀತೆಗಳು ಅವರಿಗೆ ಬಹಳ ಪ್ರಿಯವಾಗಿದ್ದುವು. ತನ್ನ ಒಂದು ಭೋಜಪುರಿ ಭಾಷಣದಲ್ಲಿ ಅವರು ಹೇಳಿಯೂ ಇದ್ದರು. 'ಬಿಸ್‌ರಾಮ್ ಕೆ ಕಚಿತಾಯಿ ಅಯಿಸನ್ ಓಯಿಸನ್ ಕಬಿತಾಯಿ ನಯಿಖೇ। ಈ ಕಹೇ ಮೇಂ ಹಮರಾ ಈಚಿಕೋ ಭರ್ ಸಂಕೋಚ್ ನಯಿಖೆ ಕಿ ಬಿಸರಾಮ್ ಅಯಿಸಸ್ ಕಬಿತಾಯಿ ಬಹುತ್ ಕಮ್ಮೇ ದೇಖೇ ಮೇ ಅವೇಲೇ' ಬಿಖಾರೀ ಠಾಕೂರ್ ಅವರ ದೊಡ್ಡ ಅಭಿಮಾನಿಯಾಗಿದ್ದರು ರಾಹುಲಜೀ. ಜನಪದ ಸಾಹಿತ್ಯದಲ್ಲಿ ಸಂಶೋಧನೆ ಕಾರ್ಯ ನಡೆಸಲು ತರುಣರಲ್ಲಿ ಉತ್ಸಾಹ ತುಂಬುತ್ತಿದ್ದರು.

ಹೀಗೆ ಹಿಂದಿಯ ಜನಪದ ಸಾಹಿತ್ಯದ ಬೃಹತ್ ಇತಿಹಾಸವನ್ನು ಪ್ರಸ್ತುತಪಡಿಸಲು ರಾಹಲರೇ ಅತ್ಯಂತ ಯೋಗ್ಯ ವ್ಯಕ್ತಿ. ಡಾ. ಕೃಷ್ಣ ದೇವ ಉಪಾಧ್ಯಾಯ ಅವರು ಗ್ರಂಥ ಸಂಪಾದನೆಯಲ್ಲಿ ಸಹಕರಿಸಿದರು. ಈ ಗ್ರಂಥಕ್ಕಾಗಿ ಡಾ. ಸತ್ಯೇಂದ್ರ, ಡಾ. ಶ್ಯಾಮ ಪರಮಾರ, ಶ್ರೀ ದೇವೇಂದ್ರ ಸತ್ಯಾರ್ಥಿ ಮುಂತಾದವರಿಂದ ಹಿಂದಿಯ ಸುಮಾರು ಹದಿನೆಂಟು ಆಡುಭಾಷೆಗಳ ಮೇಲೆ ವಿಸ್ತಾರವಾದ ಲೇಖನಗಳನ್ನೂ ಬರೆಯಿಸಿದರು ರಾಹುಲಜೀ. ಈ ಗ್ರಂಥದಲ್ಲಿ ಸುಮಾರು ಇನ್ನೂರು ಪುಟಗಳ ಮಹತ್ವದ ಪ್ರಸ್ತಾನವನೆ ಇದೆ. ರಾಹುಲರ ಜನಪದ ಸಾಹಿತ್ಯಕ್ಕೆ ಸಂಬಂಧಿಸಿದ ಕೆಲ ಲೇಖನಗಳು' ರಾಹುಲ ನಿಬಂಧಾವಲೀ: ಸಾಹಿತ್ಯ' (1970) ಎಂಬ ಸಂಕಲನದಲ್ಲಿವೆ.

57ರಲ್ಲಿಯೇ ರಾಹುಲರು ಬರೆದ ಮತ್ತೊಂದು ಪುಸ್ತಕ 'ರಾಮರಾಜ್ಯ ಔರ್ ಮಾರ್ಕ್ಸ್‌ವಾದ'. ಇದರಲ್ಲಿ ಸ್ವಾಮಿ ಕರಪಾತ್ರಿಯ ಪುಸ್ತಕ 'ಮಾರ್ಕ್ಸ್‌ವಾದ ಮತ್ತು ರಾಮರಾಜ್ಯ'ದ ಸಮೀಕ್ಷೆ ಇದೆ. ಪುಸ್ತಕ ಸಣ್ಣದು, ಆದರೆ ಧರ್ಮಾಂಧರ ಮೇಲೆ ಕಾಸಿ ಬರೆ ಹಾಕುತ್ತದೆ.

ರಾಹುಲರಿಗೆ ಈ ವರ್ಷದ ಅತ್ಯಂತ ಕಠಿಣ ಸಂಗತಿಯೆಂದರೆ – ವಿಶ್ವಕೋಶದ ಅನಿರ್ಣಯ ಸ್ಥಿತಿ. ಅವರು ಸಮಯಬದ್ಧವಾಗಿ ಕೆಲಸ ಮಾಡುವ ಅಭ್ಯಾಸದವರು ಒಮ್ಮೆ ನಿರ್ಣಯ ತೆಗೆದುಕೊಂಡ ಮೇಲೆ ನಿಶ್ಚಿತ ಅವಧಿಯೊಳಗೆ ಕೆಲಸ ಮುಗಿಸಿ ಬಿಡುವುದು ಅವರ ಜಾಯಮಾನ. ಆದರೆ ಈಗ ತೀರಾ ಉಭಯ ಸಂಕಟದಲ್ಲಿದ್ದರು. ವಿಶ್ವಕೋಶದ ವಿಚಾರದಲ್ಲಿ ಒಂದು ತೀರ್ಮಾನವಾಗದೆ ಚೀನಕ್ಕೆ ಹೋಗುವ ಬಗ್ಗೆ ಅಂತಿಮ ನಿರ್ಣಯ ತೆಗೆದುಕೊಳ್ಳಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ.

ಕುಟುಂಬ ಜೀವನದ ಮೇಲೆ ಈ ಎಲ್ಲದರ ಪ್ರಭಾವ ಬೀಳುವುದು ಸಹಜವಲ್ಲವೇ? ರಾಹುಲರಿಗೆ ಮಸ್ಸೂರಿಯಲ್ಲಿದ್ದು ಬೇಸರ ಬಂದಿತ್ತು. 'ಹರ್ನ್ ಕ್ಲಿಫ್'ನ್ನು ಅರ್ಧಕ್ಕಿಂತ ಕಡಿಮೆ ಬೆಲೆಗೆ ಮಾರಲು ಅವರು ತಯಾರಿದ್ದರು. ನಂತರ ಎಲ್ಲಿರುವುದು? ಬೇಸಗೆಯ ಎಂಟು ತಿಂಗಳು ಮಸ್ಸೂರಿಯಲ್ಲಿ ಬಾಡಿಗೆ ಮನೆಯಲ್ಲಿರುವುದು, ಚಳಿಗಾಲದ ನಾಲ್ಕು ತಿಂಗಳು ಡೆಹರಾಡೂನಿಗೆ ಹೋಗಿರುವುದು ಎಂದು ಮೊದಲು ಯೋಚಿಸಿದ್ದರು.

ಆದರೆ ಈಗ ಪರಿಸ್ಥಿತಿ ಬೇರೆಯಾಗಿತ್ತು. ವಿಶ್ವಕೋಶದ ಜವಾಬ್ದಾರಿ ಸ್ವೀಕರಿಸಿದರೆ ಚಳಿಗಾಲದಲ್ಲಿ ವಾರಣಾಸಿಯಲ್ಲಿದ್ದು ಬೇಸಗೆಯಲ್ಲಿ ಯಾವುದಾದರೂ ಪರ್ವತ ಪ್ರದೇಶದಲ್ಲಿ ದಿನಗಳೆಯ ಬೇಕಿತ್ತು. ಆದರೆ ಚೀನಕ್ಕೆ ಹೋದರೆ ಇದು ಸಾಧ್ಯವಿರಲಿಲ್ಲ. ಹೆಂಡತಿ ಮಕ್ಕಳು ತನ್ನೊಂದಿಗೆ ಚೀನಾಕ್ಕೆ ಬರಲಿ ಎಂದು ಅವರು ಬಯಸುತ್ತಿದ್ದರು. ಆದರೆ ಹೆಂಡತಿಗೆ ಅದು ಒಪ್ಪಿಗೆಯಿರಲಿಲ್ಲ. ಆಕೆ ಕಾಲೀಂಪೋಜನಲ್ಲಿಯೇ ಶಾಶ್ವತವಾಗಿ –ನೆಲೆಸಿಬಿಡುವುದೆಂದು ದೃಢ ಮಾಡಿಕೊಂಡಿದ್ದಳು. ತಾಯಿತಂದೆ ಇಬ್ಬರಿಗೂ ಮಕ್ಕಳ ಭವಿಷ್ಯದ ಬಗ್ಗೆ ಚಿಂತೆ. ಕಾಲಿಂಪೋಜನಲ್ಲಿ ತನಗೆ ಮತ್ತು ಮಕ್ಕಳಿಗೆ ಭದ್ರತೆ ಸಿಗುವುದೆಂದು ತಾಯಿಯ ಆಲೋಚನೆ. ಈಗ ಆಕೆ ಎಂ.ಎ. ಮುಗಿಸಿದ್ದಳು. ಕಾಲಿಂಪೋಜನಲ್ಲಿ ಅಧ್ಯಾಪನದ ಕೆಲಸ ದೊರತೀತೆಂದೂ ಯೋಚಿಸುತ್ತಿದ್ದಳು.

ನಾಲ್ಕು ಮತ್ತು ಎರಡೂವರೆ ವರ್ಷದ ತನ್ನ ಇಬ್ಬರು ಮಕ್ಕಳ ಭವಿಷ್ಯದ ಬಗ್ಗೆ ರಾಹುಲರಿಗೆ ತೀವ್ರ ಚಿಂತೆಯಾಗುತ್ತಿತ್ತು. ಅವರು ವಿದೇಶದಲ್ಲಿಯೂ ತಮ್ಮ ಜೊತೆಗೇ ಇರಲಿ ಎಂದು ಅವರ ಆಸೆ. ಆದುದರಿಂದ ಪತ್ನಿಯೂ ತನ್ನ ಜೊತೆ ಬರಲಿ, ಕಡೇ ಪಕ್ಷ ಒಮ್ಮೆ ಹೇಗಾದೀತೆಂದು ನೋಡಲಿ ಅಂತ ಇತ್ತು. ಆದರೆ ಆಕೆ ಇದಕ್ಕೂ ಸಿದ್ಧಳಿರಲಿಲ್ಲ.

ರಾಹುಲರು ತಮ್ಮ ಕೌಟುಂಬಿಕ ಜವಾಬ್ದಾರಿಯನ್ನು ಸಂಪೂರ್ಣವಾಗಿ ತಾವೇ ನಿರ್ವಹಿಸಲು ಬಯಸಿದರು. ಅಂತೆಯೇ ನಿಭಾಯಿಸುತ್ತಲೂ ಇದ್ದರು. ಆದರೆ ಅವರಿಗೆ ಇವೆಲ್ಲಕ್ಕಿಂತಲೂ ಮುಖ್ಯವಾದದ್ದು ಸಂಶೋಧನಾ ಕಾರ್ಯವಾಗಿತ್ತು. 1957ರ ನಡುವಿನಲ್ಲಿ ಮಕ್ಕಳೊಂದಿಗೆ ಪತ್ನಿ ಕಮಲಾ ಕೆಲದಿನಗಳಿಗಾಗಿ ಕಾಲಿಂಪೋಜಗೆ ಹೊರಟು ಹೋದಾಗ ರಾಹುಲರು ಅವಳಿಗೆ ಬರೆದಿದ್ದರು ಕೂಡ. 'ಟಿಬೇಟಿನ ಸಂಶೋಧನೆ ಮತ್ತು ಸಾಮ್ಯವಾದ ಸೇವೆ ನನ್ನ ಜೀವನದ ಅತ್ಯಂತ ದೊಡ್ಡ ಆದರ್ಶವೆಂಬುದನ್ನು ನೀನು ಮನಗಾಣಬೇಕು. ನಾನು ಇವುಗಳಿಗಾಗಿ ಪ್ರಾಣವನ್ನೇ ಪಣವಾಗಿಡಲು ಹಿಂದೆಮುಂದೆ ನೋಡಲಿಲ್ಲ. ಆದರಿಂದ ವಿಮುಖನಾಗುವ ಆಸೆಯೇ ಇಲ್ಲ. ಆದರೆ, ಅಂಥಹುದರಲ್ಲಿಯೂ ಮಕ್ಕಳನ್ನೂ ನಿನ್ನನ್ನೂ ಬಿಡಲೂ ನಾನು ಬಯಸುವುದಿಲ್ಲ....'

ಅದೇ ವರ್ಷ ರಾಹುಲರು ಮಕ್ಕಳನ್ನು ಕರೆತರಲು ಕಾಲಿಂಪೋಜಗೆ ಹೋಗಿದ್ದರು. ಹಿಂದಿರುಗುವಾಗ ವಾರಣಾಸಿಯಲ್ಲಿ ತಂಗಿ ಕಾಶೀ ನಾಗರೀ ಪ್ರಚಾರಿಣೀ ಸಭಾಕ್ಕೆ ಹೋದರು. ಆಗಲೇ ಅವರಿಗೆ ವಿಶ್ವಕೋಶದಲ್ಲಿ ತಮಗೆ ಸ್ಥಾನವಿಲ್ಲವೆಂದು ಸ್ಪಷ್ಟವಾಗಿ ಗೊತ್ತಾದದ್ದು. ಖಂಡಿತವಾಗಿಯೂ ಇದು ಅವರಿಗೆ ದೊಡ್ಡ ಆಘಾತದ ಸುದ್ದಿಯಾಗಿತ್ತು. ತಮ್ಮನ್ನು ಇಷ್ಟು ದೀರ್ಘ ಸಮಯದವರೆಗೆ ಡೋಲಾಯಮಾನ ಸ್ಥಿತಿಯಲ್ಲಿಟ್ಟು ಕೊನೆಯಲ್ಲಿ ತಮ್ಮ ವಿರುದ್ಧ ನಿರ್ಣಯ ತೆಗೆದುಕೊಂಡದ್ದು, ರಾಹುಲರಿಗೆ ತೀರಾ ಕೆಡುಕೆನಿಸಿತು.

ತಮ್ಮನ್ನು ತಾವೇ ಸಂಭಾಳಿಸಿಕೊಳ್ಳುವ ಶಕ್ತಿ ರಾಹುಲರಿಗಿತ್ತು. ಈಗ ಚೀನಾಕ್ಕೆ ಹೋಗಲು ಅವರಿಗೆ ದಾರಿ ತೆರೆದಿತ್ತು. ಚೀನಾದ ಬೌದ್ಧಸಂಘಕ್ಕೆ ತಾನು ಅಲ್ಲಿಗೆ ಬರಲು ಬಯಸುವ ಬಗ್ಗೆ ಕೆಲ ದಿನಗಳ ಹಿಂದೆ ಆಗಲೇ ಬರೆದಾಗಿತ್ತು. ಈಗ ಚೀನಾಕ್ಕೆ ಹೋಗಲು ದೃಢ ನಿಶ್ಚಯ ಮಾಡಿದರು. ಅಲ್ಲಿಂದ ಆಮಂತ್ರಣದ ನಿರೀಕ್ಷೆಯಲ್ಲಿದ್ದುಬಿಟ್ಟರು. ಸುಮಾರು ಎಂಟು ತಿಂಗಳು ಕಾದನಂತರ 1958ರ ಜೂನ್‌ನಲ್ಲಿ ಅವರಿಗೆ ಚೀನಾದಿಂದ ಆಮಂತ್ರಣ ಸಿಕ್ಕಿತು. ಬರವಣಿಗೆಯ ಕೆಲಸ ಸಾಗುತ್ತಲೇ ಇತ್ತು. ಆದರೆ ಮಾನಸಿಕವಾಗಿ ರಾಹುಲರು ಸಾಕಷ್ಟು ಕಂಗೆಟ್ಟಿದ್ದರು. ಕೌಟುಂಬಿಕ ಪರಿಸ್ಥಿತಿಯೂ ಇದಕ್ಕೆ ಸ್ವಲ್ಪಮಟ್ಟಿಗೆ ಕಾರಣವಾಗಿತ್ತು. ಚಳಿಗಾಲದಲ್ಲಿ, ಮಸ್ಸೂರಿಯಿಂದ ಹೊರಟು ಅನೇಕ ಸ್ಥಳಗಳಲ್ಲಿ ಪ್ರವಾಸ ಮಾಡಿದರು. ಫಬ್ರವರಿಯಲ್ಲಿ (1958) ಒಂದು ಭಾಷಣ ನೀಡಲು ಜಬಲ್‌ಪುರಕ್ಕೂ ಹೋದರು.

ಮಸ್ಸೂರಿಯ ಬಂಗಲೆ 'ಹರ್ನ್ ಕ್ಲಿಫ್'ನ್ನು ಮಾರಲಿಚ್ಛಿಸಿದರೂ ಖರೀದಿಸುವವರೇ ಇರಲಿಲ್ಲ. ಕೊನೆಗೆ 1958ರ ನಡುವಿನಲ್ಲಿ, ಹದಿನೇಳು ಸಾವಿರಕ್ಕೆ ಖರೀದಿಸಿದ ಆ ಬಂಗಲೆಯನ್ನು ಏಳು ಸಾವಿರ ರೂಪಾಯಿಗಳಷ್ಟು ಕಡಿಮೆ ಬೆಲೆಗೆ ಮಾರಿ ಬಿಟ್ಟರು. ರಾಹುಲ ಕುಟುಂಬ ಅಲ್ಲಿ ಎಂಟು ವರ್ಷ ಕಾಲ ವಾಸವಾಗಿತ್ತು. ಬಂಗಲೆ ಮಾರಿದ ಬಳಿಕ ರಾಹುಲರ ಕುಟುಂಬ ಮಸ್ಸೂರಿಯಲ್ಲಿಯೇ ಅಲ್ಲಿನ ಬಜಾರಿನಲ್ಲಿ ಒಂದು ಬಾಡಿಗೆ ಮನೆಗೆ ಸ್ಥಳಾಂತರಗೊಂಡಿತು. ಆ ದಿನಗಳ ಮಾತು, ರಾಹುಲರ 'ಮಧ್ಯ ಏಶಿಯ ಕಾ ಇತಿಹಾಸ್' (ಎರಡು ಭಾಗಗಳು) ಗ್ರಂಥಕ್ಕೆ ಸಾಹಿತ್ಯ ಎಕಾಡೆಮಿಯ ಪುರಸ್ಕಾರ ಘೋಷಣೆಯಾಯಿತು. ಮೊದಲನೆಯದಾಗಿ ಪುರಸ್ಕಾರವನ್ನು ಆ ಗ್ರಂಥದ ಬದಲು 'ದೋಹಾಕೋಶ'ಕ್ಕೆ ನೀಡಿದ್ದರೆ ಅವರು ಹೆಚ್ಚು ಸಂತೋಷಪಡುತ್ತಿದ್ದರು. ಸಂಶಯ ಕಿಂಚಿತ್ತೂ ಇಲ್ಲದೆ ಹೇಳುವ ಎರಡನೆಯ ಮಾತೆಂದರೆ ಸಾಹಿತ್ಯ ಎಕಾಡೆಮಿಯ ಈ ಪುರಸ್ಕಾರವನ್ನು ಸ್ವೀಕರಿಸುವ ಸಲುವಾಗಿ ದೆಹಲಿಗೆ ಹೋಗಲು ರಾಹುಲರಿಗೆ ಇಷ್ಟವಿರಲಿಲ್ಲ. ಯಾರ ಬಗ್ಗೆ ಅವರು ಅನೇಕ ಸಲ ಕಟುವಾಗಿ ಯೋಚಿಸಿದ್ದರೋ ಅವರ ಸಮ್ಮುಖದಲ್ಲಿಯೇ ಉಪಸ್ಥಿತರಾಗಿ ಪುರಸ್ಕಾರ ಪಡೆಯಲು ಅವರಿಗೆ ಮನಸ್ಸಿರಲಿಲ್ಲ. ಆದರೆ ಒಂದೆಡೆ ಸಾಹಿತ್ಯ ಎಕಾಡೆಮಿಯ ತತ್ಕಾಲೀನ ಸಚಿವ ಡಾ. ಪ್ರಭಾಕರ ಮಾಚವೆಯವರ ಬಲವಂತ, ಇನ್ನೊಂದೆಡೆ ಪತ್ನಿಯ ಆಗ್ರಹ. ಮಗಳು ಜಯಾ ಈ ಕುರಿತು ಬರೆದಿದ್ದಾಳೆ. 'ಕೆಲ ದಿವಸಗಳಿಂದ ಅಮ್ಮ ಮತ್ತು ಪಾಪಾನ ನಡುವೆ ಚರ್ಚೆ ನಡೆಯುತ್ತಲೇ ಇತ್ತು. ಅಮ್ಮ ಅವರಿಗೆ ದೆಹಲಿಗೆ ಹೋಗಲು ಹೇಳುತ್ತಿದ್ದಳು. ಪಾಪಾ ಒಪ್ಪುತ್ತಿರಲಿಲ್ಲ. ಆದರೆ ಕೊನೆಗೂ 'ಪಾಪಾ' ಒಪ್ಪಿಕೊಂಡರು.' ಪುರಸ್ಕಾರ ವಿತರಣಾ ಸಮಾರಂಭಕ್ಕಾಗಿ ದೆಹಲಿಗೆ ಹೋದರು. ಕೆಲ ದಿನಗಳ ನಂತರ ಜಯಾ ತನ್ನ ಗೆಳತಿಯರೊಂದಿಗೆ ಸಿನೆಮಾ ನೋಡಲು ಹೋಗಿದ್ದಾಗ ನ್ಯೂಸ್‌ರೀಲ್‌ನಲ್ಲಿ ಪ್ರಧಾನಮಂತ್ರಿಯ ಜೊತೆ ತನ್ನ ಪಾಪಾನನ್ನು ನೋಡಿದಳು. ಏದು

ವರ್ಷಕ್ಕಿಂತಲೂ ಸಣ್ಣ ಹುಡುಗಿಗೆ ಅದೊಂದು ಅವಿಸ್ಮರಣೀಯ ದೃಶ್ಯವಾಗಿಬಿಟ್ಟಿತು. ಮನೆಗೆ ಬಂದು, ಅವಳು ಅದನ್ನು ಪಾಪಾ ಮತ್ತು ಅಮ್ಮನಿಗೆ ಹೇಳಿದಳು. 'ಅಮ್ಮ, ವಿಶೇಷವಾಗಿ ಅದನ್ನು ನೋಡಲಿಕ್ಕಾಗಿಯೇ, ಸಿನೆಮಾಕ್ಕೆ ಹೋದಳು' ಆದರೆ ರಾಹುಲರಿಗೆ ಅದರಲ್ಲಿ ಏನೂ ಆಕರ್ಷಣೆ ಇರಲಿಲ್ಲ. ನೆಹರೂ ಜೊತೆ ಮಾತಾಡುವ ಕುಳಿತುಕೊಳ್ಳುವ ಅವಕಾಶ ಅವರಿಗೆ ಎಷ್ಟೋ ಸಲ ಸಿಕ್ಕಿತ್ತು.

1958ರಲ್ಲಿಯೇ ರಾಹುಲರು ಮತ್ತೊಮ್ಮೆ ಪಂದಹಾ – ಕನ್ಯೆಲಾಕ್ಕೆ ಪಯಣಿಸಿದರು. ಆದರೆ ಈ ಸಲ ಒಬ್ಬರೇ ಅಲ್ಲ. ಹೆಂಡತಿ ಮಕ್ಕಳ ಸಮೇತ. ಈ ಫೆಬ್ರವರಿಯಲ್ಲಿ ಆಜಮಗಢಕ್ಕೆ ಪ್ರವಾಸ ಹೋಗಿ ಬಂದಾಗಲೇ ಅವರು ತಮ್ಮ ಕುಟುಂಬಕ್ಕೆ ಪಂದಹಾ ಮತ್ತು ಕನ್ಯೆಲಾ ತೋರಿಸಬೇಕೆಂದು ಉತ್ಸುಕರಾಗಿದ್ದರು. ಆದರೆ ಆಗ ಕಮಲಾ ಬರಲು ಒಪ್ಪಿರಲಿಲ್ಲ. ಈ ಸಲದ ವಿಶೇಷ ಲಾಭವೆಂದರೆ ಜಯಾ, ಜೇತಾ ತಮ್ಮ ತಂದೆಯ ಹುಟ್ಟಿದೂರು ಮತ್ತು ತಂದೆಯ ತಂದೆಯ ಊರು ನೋಡಿದ್ದು, ಜೊತೆಗೆ ತಂದೆಯ ಮೊದಲ ಹೆಂಡತಿಯ ಆಶೀರ್ವಾದವನ್ನು ಪಡೆದದ್ದು.

ಆ ವರ್ಷದ ಬೇಸಗೆಯಲ್ಲಿ ರಾಹುಲರು ಕಾಶ್ಮೀರಕ್ಕೆ ಹೊರಟು ಹೋದರು. ಅಲ್ಲಿಯೇ ಅವರಿಗೆ ಚೀನಾದ ಬೌದ್ಧ ಸಂಘದ ಆಮಂತ್ರಣ ಸಿಕ್ಕಿ ಸಿದ್ಧತೆಗಾಗಿ ದೆಹಲಿಗೆ ಬಂದರು. ಬೇಸಗೆಯ ಬೇಗೆಯಲ್ಲಿ ಮತ್ತೆ ರೈಲಿನಲ್ಲಿ ಕಲ್ಕತ್ತಾಗೆ ಪ್ರಯಾಣ ಮಾಡಿದರು. ಪತ್ನಿ ಮತ್ತು ಇಬ್ಬರು ಪುಟ್ಟ ಮಕ್ಕಳನ್ನು ಬಿಟ್ಟು ಒಬ್ಬಂಟಿಯಾಗಿ ವಿದೇಶಕ್ಕೆ ಹೋಗುವುದು ಯಾರಿಗೇ ಆಗಲಿ ಸಂತೋಷವೆನಿಸದು. ರಾಹುಲರು ಕೆಲ ವಿಷಯಗಳಲ್ಲಿ ಅತ್ಯಂತ ಮೃದು ಸ್ವಭಾವದವರಾಗಿದ್ದರು. ಆದರೆ ತಮ್ಮ ನಿರ್ಧಾರ ಮತ್ತು ಸಂಕಲ್ಪಗಳ ಮಟ್ಟಿಗೆ ಅವರು ಅತ್ಯಂತ ಕಠೋರ ಮನಸ್ಕರಾಗಿದ್ದರು.

ದೇಶ ನೋಡುವ ಉದ್ದೇಶದಿಂದ ಅವರು ಚೀನಾಗೆ ಹೊರಟಿರಲಿಲ್ಲ. ವಾಸ್ತವವಾಗಿ ಅವರು ಹೋಗಲು ಬಯಸುತ್ತಿದ್ದದ್ದು ಟಿಬೇಟಿಗೆ. ಟಿಬೇಟಿಗೆ ಸಂಬಂಧಿಸಿದ ಸಂಶೋಧನೆ ಅವರ ಜೀವನದ ಮುಖ್ಯ ಗುರಿಯಾಗಿತ್ತು. ನಾಲ್ಕನೆಯ ದಶಕದಲ್ಲಿ ಅವರು ಟಿಬೇಟ್ ಪ್ರವಾಸ ಮಾಡಿದಾಗಿನಿಂದ ಪ್ರತಿ ವರ್ಷ ಬೇಸಗೆಯಲ್ಲಿ ಟಿಬೇಟಿಗೆ ಪ್ರವಾಸ ಹೋಗಿ, ಚಳಿಗಾಲದಲ್ಲಿ ಭಾರತದಲ್ಲಿದ್ದುಕೊಂಡು ಬರೆಯುವುದು ಎಂದು ಯೋಚಿಸುತ್ತಿದ್ದರು. ಆದರೆ ಅದಕ್ಕೆ ಅನುಕೂಲ ಒದಗಿ ಬರಲಿಲ್ಲ. ಹಾಗಾಗಿ ತಮ್ಮ ಶಕ್ತಿಯನ್ನು ಇತರ ಕಾರ್ಯಗಳಲ್ಲಿ ತೊಡಗಿಸಿಕೊಂಡರು.

ಆದರೆ ಈಗ ಚೀನದಲ್ಲಿ ಕಮ್ಯುನಿಸ್ಟ್ ಆಡಳಿತವಿತ್ತು. ಟಿಬೇಟ್ ಸಂಪೂರ್ಣವಾಗಿ ಚೀನದ ಆಧಿಪತ್ಯದಲ್ಲಿತ್ತು. ರಾಹುಲರಿಗೆ ಟಿಬೇಟಿಗೆ ಹೋಗಬೇಕೆಂಬ ಉತ್ಸುಕತೆ ಉಂಟಾಗಿರುವುದು ಸ್ವಾಭಾವಿಕವೇ. ಟಿಬೇಟೀ ಸಂಶೋಧನೆಯಲ್ಲಿ ಅವರ ನಿಲುವು ಎಲ್ಲ ನಿಟ್ಟಿನಿಂದಲೂ ವಿಶಿಷ್ಟವಾದದ್ದು. ಟಿಬೇಟಿನಲ್ಲಿ ಮರೆಯಾದ ಭಾರತೀಯ ಗ್ರಂಥಗಳಿಗೆ ಸಂಬಂಧಿಸಿದಂತೆ ಸಂಶೋಧನೆ ಕೈಗೊಳ್ಳಲು ಅವರೇ ಸರ್ವಯೋಗ್ಯ ವ್ಯಕ್ತಿಯೆಂದರೆ ಏನೂ ಅತಿಶಯೋಕ್ತಿಯಲ್ಲ. ಟಿಬೇಟಿನಲ್ಲಿ ಅವರು ಅನೇಕ ಕಡೆಗಳಿಂದ ಅಲ್ಲಿ ಪಂಡಿತರಿಗೂ ತಿಳಿದಿಲ್ಲದ ಭಾರತೀಯ ತಾಡೋಲೆಗಳನ್ನು ಹುಡುಕಿ ತೆಗೆದರು. ಟಿಬೇಟ್ ಪ್ರವಾಸದ ವಿವರಣೆಯಲ್ಲಿ – ಅಲ್ಲಿ ಸ್ತೂಪಗಳಲ್ಲಿ ಮತ್ತು ವಿಗ್ರಹಗಳಲ್ಲಿ ಇನ್ನೂ ಹಲವು ಭಾರತೀಯ ಗ್ರಂಥಗಳು ಅಡಗಿರುವ ಸಾಧ್ಯತೆ ಇದೆ, ಅವುಗಳನ್ನು ಹೊರಗೆಳೆಯುವ ಅನುಕೂಲ ಅವಕಾಶ ಮುಂದೆ ಸಿಕ್ಕೀತು ಎಂದು ಬಾರಿಬಾರಿಗೂ ಬರೆದಿದ್ದರು.

ಆ ಅನುಕೂಲ ಸಂದರ್ಭ ಈಗ ಒದಗಿ ಬಿಟ್ಟಿತ್ತು. ಟಿಬೇಟ್ ಮತ್ತು ಚೀನಾದ ಬೌದ್ಧ ಪಂಡಿತರು ಟಿಬೇಟ್ ಸಂಬಂಧ ಸಂಶೋಧನೆಯಲ್ಲಿ ರಾಹುಲರಿಗೆ ನೀಡುವ ಸಹಕಾರದ ಪ್ರಾಮುಖ್ಯತೆಯನ್ನು

ಚೆನ್ನಾಗಿ ತಿಳಿದಿದ್ದರು. ಆದರೆ ನಮ್ಮ ದೇಶದ ನಾಯಕರಿಗೆ ಅದರ ಅರಿವೇ ಇರಲಿಲ್ಲ. ಆ ಸಮಯದಲ್ಲಿ ಹೊಸ ಚೀನಾದ ಜೊತೆ ಭಾರತದ ಸಂಬಂಧ ಬಹಳ ಚೆನ್ನಾಗಿತ್ತು. ಟಿಬೇಟಿನಲ್ಲಿರುವ ಭಾರತೀಯ ಸಾಂಸ್ಕೃತಿಕ ನಿಧಿಗಳ ಪುನರುದ್ಧಾರ ಮಾಡಲು ನಮ್ಮ ಆಡಳಿತ ರಾಹುಲರಿಗೆ ಸಂತೋಷದಿಂದ ಅನುಕೂಲ ಮಾಡಿಕೊಡಬಹುದಿತ್ತು. ಆದರೆ ಅಷ್ಟೆಲ್ಲ ದೂರದರ್ಶಿತ್ವ ಯಾರಿಗಿತ್ತು? ಚೀನಕ್ಕೆ ಹೋಗಲು ಪಾಸ್‌ಪೋರ್ಟ್ ಪಡೆಯಲಿಕ್ಕೇ ಅವರಿಗೆ ಸಾಕುಬೇಕಾಯಿತು.

ಇಲ್ಲಿ ಮೊದಲೇ ಒಂದು ವಿಚಾರ ಸ್ಪಷ್ಟ ಮಾಡುವುದು ಅಗತ್ಯ. ರಾಹುಲರ ಚೀನಾ ಪ್ರವಾಸದ ಗುರಿ ಟಿಬೇಟ್‌ಗೆ ಹೋಗಲು ಪ್ರಯತ್ನಿಸುವುದೇ ಆಗಿದ್ದರೂ ಚೀನಾದ ಬೌದ್ಧ ಸಂಘ ಅವರಿಗೆ ನೀಡಿದ ಆಮಂತ್ರಣದಲ್ಲಿ ಈಗಲೇ ಟಿಬೇಟಿಗೆ ಹೋಗುವ ವ್ಯವಸ್ಥೆ ಮಾಡಲು ಆಗಲಿಕ್ಕಿಲ್ಲ ಎಂದು ನೇರ ಬರೆದಿತ್ತು. ಕಾರಣ ಸತ್ಯವಾಗಿಯೂ ಟಿಬೇಟ್‌ನಲ್ಲಿ ಆಗ ಇದ್ದ ಅಸ್ಥಿರತೆ. ಮುಂದೆ ಕೆಲ ಘಟನೆಗಳಿಂದ ಇದು ಸ್ಪಷ್ಟವದರೂ ಹೋದ ಮೇಲೆ ಬಹುಶಃ ವ್ಯವಸ್ಥೆ ಆದೀತು ಎಂಬ ಆಶಯದ ಮೇಲೆ ಅವರು ಚೀನಾಕ್ಕೆ ಹೋದರು.

ಕಲ್ಕತ್ತಾಧಿಂದ ವಿಮಾನ ಮೂಲಕ ಜೂನ್ 15(1958)ರಂದು ರಂಗೂನ್. ಅಲ್ಲಿ ಸತ್ಯನಾರಾಯಣ ಗೋಯಂಕಾ ಅವರ ಆತಿಥ್ಯದಲ್ಲಿ ಐದು ದಿನ. ರಾಹುಲರ ಐದಾರು ಪುಸ್ತಕಗಳು ಬರ್ಮಾ ಭಾಷೆಗೆ ಆಗಲೇ ಅನುವಾದಗೊಂಡಿದ್ದುವು. ಆದುದರಿಂದ ಅಲ್ಲಿನ ಅನೇಕ ಲೇಖಕ – ಓದುಗರಿಗೆ ಅವರು ಪರಿಚಿತರಾಗಿದ್ದರು. ಅಲ್ಲಿದ್ದ ಐದು ದಿನಗಳಲ್ಲಿ ಅನೇಕ ಬೌದ್ಧ ಕ್ಷೇತ್ರಗಳ ದರ್ಶನ, ಅನೇಕ ಸಭೆಗಳಲ್ಲಿ ಭಾಷಣ. ಗೋಯಂಕಾ ಅವರು ತಮ್ಮ ಟೇಪ್ ರೆಕಾರ್ಡರಿನಲ್ಲಿ ಆ ಎಲ್ಲ ಭಾಷಣಗಳನ್ನು ರೆಕಾರ್ಡು ಮಾಡಿಕೊಂಡರು.

ರಂಗೂನಿನಿಂದ ಚೀನೀ ವಿಮಾನದ ಮೂಲಕ ಚೀನಾ ನೆಲದಲ್ಲಿ ಮೊದಲು ಕುನ್‌ಮಿಂಜ ತಲುಪಿದರು. ಅಲ್ಲಿಂದ ಮುಂದೆ ಜುನ್ 22ರಂದು ಪೀಕಿಂಗ್ (ಬೀಜಿಂಗ್). ಅಲ್ಲಿ ಚೀನ ಬೌದ್ಧ ಸಂಘದ ಉಪಪ್ರಧಾನ ಚಾಊ-ಪೂ-ಛೂ, ದುಭಾಷಿ ಚೇಜ ಮಹಾಶಯ ಮತ್ತು ಇತರ ಅನೇಕ ಸ್ವಾಗತಕಾರರು ವಿಮಾನ ನಿಲ್ದಾಣಕ್ಕೆ ಬಂದಿದ್ದರು. ರಾಹುಲರನ್ನು ಪೀಕಿಂಗ್‌ನ ಒಂದು ಭವ್ಯ ಹೋಟೆಲಿನಲ್ಲಿ ಇಳಿಸಲಾಯಿತು. ಅವರ ನಾಲ್ಕೂವರೆ ತಿಂಗಳಿನ ಚೀನಾ ಪ್ರವಾಸ ಆರಂಭಗೊಂಡಿತು. ಜೂನ್ ಇಪ್ಪತ್ತೂರರಿಂದ ಜುಲೈ ಒಂದರವರೆಗೆ ರಾಹುಲರು ಪೀಕಿಂಗ್‌ನಲ್ಲಿಯೇ ಉಳಿದರು.

ಜೂನ್ 23ರಂದು ಅವರು ಪ್ರಥಮತಃ ಚೀನಾದ ಬೌದ್ಧ ಸಂಘ ಕಾರ್ಯಾಲಯಕ್ಕೆ ಹೋದರು. ಸಂಘದ ಅಧ್ಯಕ್ಷ ಮತ್ತು ರಾಹುಲರ ಹಳೆಯ ಸ್ನೇಹಿತ ಗೇಶೇ ಶೇರಬ್ ಸಿಗಲಿಲ್ಲ, ತನ್ನ ಹುಟ್ಟಿದೂರು ಅಮ್-ದೋ ಗೆ ಹೋಗಿದ್ದರು. ಅಂದೇ ಮಿಂಗ್ ಪ್ರಾಸಾದವನ್ನೂ ನೋಡಿ ಬಂದರು. ಮರುದಿನ ಬೌದ್ಧ ಸಂಸ್ಥಾನದಲ್ಲಿ ರಾಹುಲರ ಭಾಷಣವಾಯಿತು. ವಾಸ್ತವವಾಗಿ ಚೀನಾ ಬೌದ್ಧ ಸಂಘ ಅವರನ್ನು ಆರು ಭಾಷಣ ನೀಡಬೇಕೆಂದು ಕೋರಿ ವಿಶೇಷವಾಗಿ ಆಮಂತ್ರಿಸಿತ್ತು. ಆದರೆ ಆರೋಗ್ಯ ಕೆಟ್ಟದ್ದರಿಂದ ಮೂರೇ ಭಾಷಣ ನೀಡಲು ಸಾಧ್ಯವಾಯಿತು. ಧರ್ಮ ಕೀರ್ತಿಯ ಮಹಾನ್ ಗ್ರಂಥ 'ಪ್ರಮಾಣವಾರ್ತಿಕ' ಟಿಬೇಟೀ ಭಾಷೆಯಿಂದ ಚೀನೀ ಭಾಷೆಗೆ ಆಗಲೇ ಅರ್ಧ ಅನುವಾದವಾಗಿದೆ ಎಂದು ಬೌದ್ಧ ಸಂಸ್ಥಾನದಲ್ಲಿ ತಿಳಿದು ರಾಹುಲರು ಸಂತೋಷಗೊಂಡರು.

ಜುಲೈ ಒಂದರ ತನಕ ಪೀಕಿಂಗ್‌ನಲ್ಲಿ ಅನೇಕ ಸ್ಥಳ ದರ್ಶನ – ಲಾಮಾ ವಿಹಾರ, ಕ್ಷೀ-ಹಾಯಿಾ ಸರೋವರ, ಬಟ್ಟೆ ಕಾರ್ಖಾನೆ, ಗ್ರೀಷ್ಮ ಪ್ರಾಸಾದ, ಅನಾಥ ಬಾಲಗೃಹ, ರಾಷ್ಟ್ರೀಯ ಪುಸ್ತಕಾಲಯ

ಇತ್ಯಾದಿ. ಎಂಟು ನೂರು ವರ್ಷಗಳ ಹಿಂದಿನ ರಾಷ್ಟ್ರೀಯ ಪುಸ್ತಕಾಲಯದಲ್ಲಿ ಐವತ್ತು ಲಕ್ಷ ಪುಸ್ತಕಗಳಿವೆ. ಇವುಗಳಲ್ಲಿ ಎರಡು ಲಕ್ಷ ಹಸ್ತಲಿಖಿತ ಪುಸ್ತಕಗಳು. ತುಙ-ಹ್ವಾನ್ ಗುಹೆಯಲ್ಲಿ ಸಿಕ್ಕಿದ ಎಂಟು ಸಾವಿರ ಪುಸ್ತಕಗಳನ್ನು ಕುಂಡಲಿಗಳನ್ನು ಇಲ್ಲಿ ಇರಿಸಿದ್ದಾರೆ. ಜುಲೈ ಎರಡರಿಂದ ಹತ್ತರ ತನಕ ದುಭಾಷಿ ಚೈಙ ಜೊತೆ ಇಶಾನ್ಯ ಚೀನಾ (ಮಂಚೂರಿಯಾ) ಪ್ರವಾಸ. 1935ರಲ್ಲಿ ರಾಹುಲರು ಜಪಾನಿಗೆ ಹೋಗಿದ್ದಾಗ ಮುಂದೆ ಸೋವಿಯತ್ ರಷ್ಯಾಕ್ಕೆ ಹೋಗುವ ಮಾರ್ಗವಾಗಿ ಕೊರಿಯಾ ಮತ್ತು ಮಂಚೂರಿಯಾಗಳಲ್ಲಿ ಪಯಣಿಸಿದ್ದರು. ಆಗ ಬೌದ್ಧ ಭಿಕ್ಷುವಿನ ರೂಪದಲ್ಲಿದ್ದ ಅವರು ಸುಮಾರು ಒಂದು ತಿಂಗಳ ಕಾಲ ಮಂಚೂರಿಯಾದಲ್ಲಿ ಸುತ್ತಾಡಿದ್ದರು. ಆಗ ಮಂಚೂರಿಯಾ ಜಪಾನಿನ ಆಳ್ವಿಕೆಗೆ ಒಳಪಟ್ಟಿತ್ತು.

ಜೂನ್ ತಿಂಗಳಲ್ಲಿ ಪೀಕಿಂಗ್‌ನಲ್ಲಿ ಸಾಕಷ್ಟು ಸೆಕೆ ಇತ್ತು. ಆದರೆ ಮಂಚೂರಿಯಾ ಉತ್ತರದಲ್ಲಿರುವ ಕಾರಣ ಅಲ್ಲಿ ಅಷ್ಟು ಉಷ್ಣತೆ ಇರಲಿಲ್ಲ. ರಾಹುಲರು ಮುಕ್ದನ್, ಅನ್‌ಶಾನ್, ಫೂ-ಶುನ್ ಹಾಗೂ ಛಾಙ-ಪುನ್ ಮುಂತಾದಲ್ಲಿನ ದರ್ಶನೀಯ ಸ್ಥಳಗಳನ್ನು ವೀಕ್ಷಿಸಿದರು. ಯಂತ್ರ ಕಾರ್ಖಾನೆ, ವಿಹಾರ, ವಿಶ್ವವಿದ್ಯಾನಿಲಯಗಳನ್ನು ನೋಡಿದರು. ಜುಲೈ ಹನ್ನೊಂದರಂದು ಪೀಕಿಂಗ್‌ಗೆ ಮರಳಿದರು. ಎರಡು ದಿನಗಳ ಬಳಿಕ ಭಾರತೀಯ ದೂತಾವಾಸಕ್ಕೆ ಹೋದರು.

ಚೀನಾದ ನಾಲ್ಕು ಕಡೆಗಳ.ಲಲ್ಲಿ ಅಜಂತಾ-ಎಲ್ಲೋರಾ ತರಹದ ಗುಹಾ ವಿಹಾರಗಳಿವೆ. ಯುನ್-ಕಾಙ, ತುಂಳ.ಟಿ-ಹ್ವಾನ್, ಲುಂಙ.ಬಿ-ಮನ್ ಮತ್ತು ಛ್ಯುವಾನ್. ಪರ್ವತದ ಕೊರಕಲಿನಿಂದ ರಚಿತವಾದ ಗುಹಾ ವಿಹಾರಗಳಿವು. ರಾಹುಲರು ಇವುಗಳಲ್ಲಿ ಮೊದಲ ಮೂರು ವಿಹಾರಗಳನ್ನು ನೋಡಿದರು. ಯುನ್-ಕಾಙನ ಗುಹೆಗಳು ಪೀಕಿಂಗ್‌ನಿಂದ ಸುಮಾರು ಇನ್ನೂರು ಕಿಲೋಮೀಟರು ದೂರದಲ್ಲಿವೆ. ಅಲ್ಲಿ ಪರ್ವತದ ಒಂದು ಕಿಲೋಮೀಟರು ದೂರದವರೆಗೆ ಸುಮಾರು ಐನೂರನೇ ಇಸವಿಯ ಆಸುಪಾಸು ರಚನೆಗೊಂಡ ಎಂಭತ್ತೊಂಭತ್ತು ಪ್ರಮುಖ ಗುಹೆಗಳಿವೆ. ಇಲ್ಲಿರುವ ಬುದ್ಧನ ಮುರ್ತಿಗಳಲ್ಲಿ ಗಾಂಧಾರ, ಭಾರತ ಹಾಗೂ ಕೂಚಾತೂಫಿನ್ ಕಲೆಯ ಪ್ರಭಾವ ಕಾಣಬಹುದು. ಅತ್ಯಂತ ದೊ.ಕೊಡ್ಡ ಮೂರ್ತಿಯ ಎತ್ತರ ಹದಿನೇಳು ಮೀಟರ್ ಯುನ್-ಕಾಙನ ಗುಹೆಗಳನ್ನು ನೋಡಿ ಮರಳಿ ಪೀಕಿಂಗಿಗೆ. ಜುಲೈ 16ರಂದು ಬೌದ್ಧ ಸಂಸ್ಥಾನದಲ್ಲಿ ರಾಹುಲರ ಭಾಷಣವಾಯಿತು. ಒಬ್ಬ ಪಂಡಿತ ದುಭಾಷಿ ಅದನ್ನು ಚೀನೀ ಭಾಷೆಗೆ ಅನುವಾದಿಸಿ ಹೇಳಿದ. ಜುಲೈ 23ರಂದು ರಾಹುಲರು ತಾವ್ರೋ ಮಠವೊಂದನ್ನು ನೋಡಲು ಹೋದರು. ತಮ್ಮನ್ನು ಕೇವಲ ಬೌದ್ಧ ವಿಷಯಗಳಿಗೇ ಸೀಮಿತಗೊಳಿಸಿಕೊಳ್ಳಲು ಇಷ್ಟಪಡದ ಅವರು ಪೀಕಿಂಗ್‌ನ ಇಸ್ಲಾಮಿಕ್ ಸಂಸ್ಥಾನವನ್ನೂ ನೋಡಿದರು.

ತುಂಙ-ಹ್ವಾನ್ ಚೀನಾದ ಅಜಂತಾ. ತನ್ನ 'ಚೀನ ಮೇ ಕ್ಯಾ ದೇಖಾ ಹೈ' ಪುಸ್ತಕದಲ್ಲಿ 'ಭಾರತೀಯ ಸಂಸ್ಕೃತಿ ಮತ್ತು ಕಲೆಯ ವಿದ್ಯಾರ್ಥಿ ಅಜಂತಾನೋಡದೆ ಭಾರತದಿಂದ ಹಿಂದಿರುಗಿದರೆ ಅವನ ಪ್ರವಾಸ ಹೇಗೆ ಅಪೂರ್ಣವೆಂದು ಗಣಿಸಲ್ಪಡುತ್ತದೆಯೋ ಚೀನೀ ಸಂಸ್ಕೃತಿ ಮತ್ತು ಕಲಾ ವಿದ್ಯಾರ್ಥಿ ತುಂಙ-ಹ್ವಾನ್ ನೋಡದೇನೇ ವಾಪಾಸು ಬಂದರೂ ಹಾಗೆಯೇ. ನಾನೊಂದು ವೇಳೆ ತುಂಙ-ಹ್ವಾನ್ ನೋಡದೆ ಇದ್ದಿದ್ದರೆ ನನ್ನ ನಾಲ್ಕೂವರೆ ತಿಂಗಳ ಚೀನಾ ಪ್ರವಾಸ ಪೂರ್ಣವಾಯಿತೆಂದು ತಿಳಿಯುತ್ತಿರಲಿಲ್ಲ.' – ಎಂದು ಬರೆದಿದ್ದಾರೆ.

ಆದರೆ ಆರೋಗ್ಯ ಕೆಟ್ಟಿದ್ದರಿಂದ ತುಂಜ-ಹ್ವಾನ್‌ಗೆ ಹೋಗುವ ಕಾರ್ಯಕ್ರಮವನ್ನು ಕೆಲ ದಿನ ತಡೆಯಬೇಕಾಯಿತು. ರಕ್ತದೊತ್ತಡ ಚಿಕಿತ್ಸೆಗಾಗಿ ಜುಲೈ 24ರಂದು ಅವರನ್ನು ಪೀಕಿಂಗಿನ ಪ್ರಸಿದ್ಧ ಯೂನಿಯನ್ ಆಸ್ಪತ್ರೆಗೆ ಸೇರಿಸಿದರು. ಮರುದಿನ ಕಾರ್ಡಿಯೋಗ್ರಾಮ್‌ನಿಂದ ಹೃದಯ ಪರೀಕ್ಷೆ ಮಾಡಿದಾಗ ಒಂದು ಕಡೆ ಹುಣ್ಣಾಗಿರುವುದು ತಿಳಿದು ಬಂತು. ಅಂದರೆ ಹೃದಯಾಘಾತ ಚೆನ್ನಾಗಿಯೇ ಪರಿಣಾಮ ಮಾಡಿತ್ತು. ರಾಹುಲರಿಗೆ ವಿಶೇಷ ತೊಂದರೆಯೇನೂ ಆಗುತ್ತಿರಲಿಲ್ಲ. ಆದರೆ ಚೀನೀ ಅತಿಥೇಯರಿಗೆ ಸ್ವಾಭಾವಿಕವಾಗಿ ಚಿಂತೆಯಾಯಿತು. ಮರುದಿನದಿಂದಲೇ ಚಿಕಿತ್ಸೆ, ರಾಹುಲರಿಗೆ ವಿಶೇಷ ಚಿಕಿತ್ಸಾ ಸೇವೆ, ಆರಂಭವಾಯಿತು. ಆಗಸ್ಟ್ ಹದಿನೈದರವರೆಗೆ ಪೂರಾ ಇಪ್ಪತ್ತೆರಡು ದಿನ ಅವರು ಆಸ್ಪತ್ರೆಯಲ್ಲಿ ಇರಬೇಕಾಗಿ ಬಂತು. ಒಂದು ಹಲ್ಲು ಹುಳುಕಾಗಿತ್ತು. ಆರು ದಿನಗಳವರೆಗೆ ವಿಪರೀತ ಹಲ್ಲು ನೋವು ಅನುಭವಿಸಿದರು. ಅದರ ಚಿಕಿತ್ಸೆಯೂ ಆಯಿತು. ಕನ್ನಡಕ ಕೂಡ ಬದಲಿಸಬೇಕಾಯಿತು. ರಕ್ತದೊತ್ತಡದ ಚಿಕಿತ್ಸೆಗಾಗಿ ಸರ್ಪಗಂಧದ ಮಾತ್ರೆಗಳನ್ನು ಕೊಡಲಾರಂಭಿಸಿದರು. ಉಪ್ಪಿಲ್ಲದ ಊಟ. ರಾಹುಲರ ಅನಾರೋಗ್ಯದ ಸುದ್ದಿ ಅಲ್ಲಿಯ ಭಾರತೀಯ ಮಿತ್ರರಿಗೆ ತಿಳಿದು ಅನೇಕರು ಅವರನ್ನು ನೋಡಲು ಬಂದರು. ಪೀಕಿಂಗ್ ವಿಶ್ವವಿದ್ಯಾಲಯದ ಹಿಂದೀ ಅಧ್ಯಾಪಕ ಪುರುಷೋತ್ತಮ ಪ್ರಸಾದ (ತ್ರಿಪಾಠೀ) ಸಪತ್ನೀಕರಾಗಿ ಆಸ್ಪತ್ರೆಗೆ ಬಂದರು. ಈತ ಜಾತಿ ಪದ್ಧತಿಯ ವಿರೋಧಿ. ತಮ್ಮ 'ತ್ರಿಪಾಠೀ' ಉಪನಾಮವನ್ನು ತ್ಯಜಿಸಿದ್ದರು. ಚೀನೀ ಭಾಷೆಯ ಅಧ್ಯಯನಕ್ಕಾಗಿ ಅಲ್ಲಿದ್ದ ಕುಮಾರಿ ಲತಿಕಾ ಘೋಷ್ ಕೂಡಾ ನೋಡಲು ಬಂದರು. ಶ್ರೀಲಂಕಾದ ರಾಯಭಾರಿ ಶ್ರೀ ಗೋಪಲ್ಲವ ಅವರೂ ಆಸ್ಪತ್ರೆಗೆ ಬಂದು ರಾಹುಲರನ್ನು ನೋಡಿ ಹೋದರು. ಭಾರತೀಯ ದೂತಾವಾಸದ ಪ್ರಥಮ ಸಚಿವರೂ ಸಹ ನೋಡಿ ಹೋದರು. ರಾಹುಲರಿಗೆ ಜ್ವರ ಅಥವಾ ಇನ್ನಾವುದೇ ಕಾಯಿಲೆ ಇರಲಿಲ್ಲ. ಆದರೆ ಬಹಳ ನಿಶ್ಶಕ್ತಿ ಅನಿಸುತ್ತಿತ್ತು.

ಆಗೋಸ್ತು 16ರಂದು ಹೋಟೆಲ್‌ಗೆ ವಾಪಸಾದರು ರಾಹುಲಜೀ. ಇನ್ನು ಇಪ್ಪತ್ತೆರಡು ದಿನಗಳ ನಂತರ ಮತ್ತೆ ಆಸ್ಪತ್ರೆಗೆ ಹೋಗಬೇಕಿತ್ತು. ಹಾಗಾಗಿ ಅಲ್ಲಿಯವರೆಗೆ ಪೀಕಿಂಗ್‌ನಿಂದ ಹೊರಗೆ ಹೊರಡುವಂತಿರಲಿಲ್ಲ. ಭಾರೀ ನಿಶ್ಶಕ್ತಿ ಬೇರೆ. ಹೋಟೆಲಿನಲ್ಲಿ ಏಕಾಕಿ ಅನಿಸುತ್ತಿತ್ತು. ಪ್ರಸಾದ ದಂಪತಿಗಳು ಮತ್ತಿತರ ಮಿತ್ರರು ಆಗಾಗ ಬಂದು ಹೋಗುತ್ತಿದ್ದರು.

ಆಸ್ಪತ್ರೆಯಲ್ಲಿ ಓದಲು ಅಡ್ಡಿ ಇರಲಿಲ್ಲ. ರಾಹುಲರ ಬಳಿ ಚೀನಾಕ್ಕೆ ಸಂಬಂಧಿಸಿದ ಅನೇಕ ಪುಸ್ತಕಗಳಿದ್ದುವು. ಅದರಲ್ಲೊಂದು 'ವೇಶ್ಯಾ ಕಾ ಶೃಂಗಾರ ದಾನ್' – ಇದು ಚೀನಾದ ಇಪ್ಪತ್ತು ಪ್ರಾಚೀನ ಕಥೆಗಳ ಸಂಗ್ರಹ. ಸಾವಿರ ವರ್ಷಗಳ ಹಿಂದಿನ ಯಥಾರ್ಥ ಕಥೆಗಳು ರಾಹುಲರಿಗೆ ಬಹಳ ಇಷ್ಟವಾದವು. ಅವುಗಳಲ್ಲಿ ಹತ್ತು ಕಥೆಗಳನ್ನು ಹಿಂದಿಗೆ ಅನುವಾದಿಸುವ ಬಗ್ಗೆ ಯೋಚಿಸಿದರು. ಆದರೆ ಆ ಕಾರ್ಯ ಸಾಧ್ಯವಾಗಲಿಲ್ಲ. ಮುಂದೆ ಅವರು 'ವೇಶ್ಯಾ' ಎಂಬ ಹೆಸರಿನಲ್ಲಿ ಮೌಲಿಕ ಕಥೆಯನ್ನೇನೋ ಬರೆದರು. ಆದರೆ ಬಹುಶಃ ಪ್ರಕಟ ಮಾಡುವ ಉದ್ದೇಶದಿಂದಲ್ಲ. ಹೋಟೆಲು ರೂಮಿನಲ್ಲಿ ಹೆಚ್ಚು ದಿನ ಬಂದಿಯಾಗಿರವುದು ರಾಹುಲರಿಗೆ ಸಾಧ್ಯವಿರಲಿಲ್ಲ. ನಿತ್ರಾಣ ಸ್ಥಿತಿಯಲ್ಲಿಯೇ ಅವರು ಒಂದು ದಿನ ಪ್ರಸಾದಜೀ ಮನೆಗೆ ಹೋದರು. ಅಲ್ಲಿ ಅವರು ಭಾರತೀಯ ಮಿತ್ರರನ್ನು ಭೇಟಿಯಾದರು.

ಅಸ್ವಾಸ್ಥ್ಯದಿಂದಾಗಿ ಟಿಬೇಟಿಗೆ ಹೋಗುವುದಂತೂ ಈಗ ಸಾಧ್ಯವಿರಲಿಲ್ಲ. ಆದರೆ ಭಾರತಕ್ಕೆ ಹಿಂದಿರುಗುವ ಮೊದಲು ತುಂಜ-ಹ್ವಾನ್ ನೋಡಲೇ ಬೇಕೆಂದಿದ್ದರು. ಸಾಕಷ್ಟು ದೂರದ ಹಾಗೂ

ಪ್ರಯಾಸದ ಯಾತ್ರೆಯಾಗಿದ್ದ ಕಾರಣ ಆತಿಥೇಯರು ಅವರನ್ನು ಅಲ್ಲಿಗೆ ಕಳಿಸಲು ಹಿಂಜರಿಯುತ್ತಿದ್ದರು. ಆದರೆ ರಾಹುಲಜೀ ಚಾಲೂ-ಫೂ-ಘೂ ಅವರಿಗೆ 'ಬೇಗನೇ ಭಾರತಕ್ಕೆ ಹಿಂದಿರುಗಬೇಕೆಂದಿದ್ದೇನೆ. ವ್ಯವಸ್ಥೆ ಸಾಧ್ಯವಾದರೆ ತುಜ-ಹ್ವಾನ್ ನೋಡಬೇಕೆಂದಿದೆ' ಎಂದು ಬಲವಾಗಿಯೇ ಹೇಳಿದಾಗ ಅವರು ಬೇಗ ವ್ಯವಸ್ಥೆ ಮಾಡಿದರು. ರಾಹುಲರ ಪತ್ನಿ ಮತ್ತು ಮಕ್ಕಳನ್ನು ಚೀನಾಕ್ಕೆ ಕರೆಸಿಕೊಳ್ಳುವ ಏರ್ಪಾಟು ಆಗ ತೊಡಗಿತು. ಆದಕ್ಕನುಸಾರವಾಗಿ ರಾಹುಲರ ಕಾರ್ಯಕ್ರಮದಲ್ಲಿ ಕೊಂಚ ಬದಲಾವಣೆ ಯಾಯಿತು.

1958 ಸೆಪ್ಟೆಂಬರ್ 9ರಂದು ಆಸ್ಪತ್ರೆ. ಅನಂತರ ಸೆಪ್ಟೆಂಬರ್ 16ರಂದು ತುಜ-ಹ್ವಾನ್ ಪ್ರವಾಸ. ಇದಕ್ಕೂ ಮೊದಲು ರಾಹುಲರು ಪೀಕಿಂಗ್‌ನ ಅನೇಕ ದರ್ಶನೀಯ ಸ್ಥಳಗಳನ್ನು ನೋಡಿದರು. ಮಿಂಗ್ ಸಮಾಧಿ, ಶ್ಮಶಾನ, ತುಜಜ್ಞಾ, ರಾಜಕೀಯ ಫಾರ್ಮ್, ಕೆಥೋಲಿಕ್ ಚರ್ಚ್, ಜನ -ದೈನಿಕದ ಕಾರ್ಯಾಲಯ, ಶಿಕ್ಷಣ ಮಂತ್ರಾಲಯ, ಮೆಡಿಕಲ್ ಕಾಲೇಜು, ಹ್ವೈಫಜ್ ಸಹಕಾರೀ ಫಾರ್ಮ್, ಜೈಲು, ಕೋರ್ಟು, ಪೀಕಿಂಗಿನ ಮೂಲವ್ಯವಸ್ಥೆ, ಜಾತೀಯ ಸಂಗೀತ ಸಂಶೋಧನ ಸಂಸ್ಥಾನ, ಪ್ರೈಮರೀ ಸ್ಕೂಲ್ ಇತ್ಯಾದಿ. ನವ ಚೀನಾದ ಎಲ್ಲ ರೂಪಗಳನ್ನು ನೋಡಲು ರಾಹುಲರು ಬಯಸಿದ್ದರೆಂಬುದು ಈ ಪಟ್ಟಿಯಿಂದ ತಿಳಿಯುತ್ತದೆ. ಅಲ್ಪಸಂಖ್ಯಾತ ಪ್ರಕಾಶನ ಗೃಹದ ಟಿಬೇಟ್ ವಿಭಾಗಕ್ಕೆ ಹೋದರೆ ಅಲ್ಲಿ ಅನೇಕ ಟಿಬೇಟಿ ಪಂಡಿತರು ಸಿಕ್ಕಿದರು. ಅವರಿಗೆಲ್ಲ ಭಾರತೀಯ ಪಂಡಿತ ರಾಹುಲರ ಹೆಸರು ಚೆನ್ನಾಗಿಯೇ ಪರಿಚಿತವಿತ್ತು. ಸೆಪ್ಟೆಂಬರ್ 9ರಂದು ಅವರು ಮತ್ತೆ ಆಸ್ಪತ್ರೆಗೆ ಸೇರಿದರು. ಅಲ್ಲಿ ಅವರು ಸೆಪ್ಟೆಂಬರ್ 15ರವರೆಗೆ ಇದ್ದರು. 'ಕಾಹಿಲೆ ದೇಹವನ್ನು ದುರ್ಬಲಗೊಳಿಸುತ್ತದೆ. ಬಲಹೀನ ಶರೀರ, ಮನಸ್ಸನ್ನು ದುರ್ಬಲಗೊಳಿಸುತ್ತದೆ'. ಆಸ್ಪತ್ರೆಯಲ್ಲಿ ಮಲಗಿಕೊಂಡೇ ಇರುವಾಗ ಮೇಲಿಂದ ಮೇಲೆ ಮಕ್ಕಳ ನೆನಪು ಬರುವುದು ಸ್ವಾಭಾವಿಕ. '66ರ ವಯಸ್ಸಿನಲ್ಲಿ ಹೃದಯದ ಕಾಹಿಲೆ ಸಾಧಾರಣ ಮಾತೇನಲ್ಲ. ನಾನು ನನ್ನ ಮಿತ್ರ ಮಹಮೂದ್ ಜಫರ್‌ನನ್ನು ನೋಡಿದ್ದೇನೆ. ಬಾರಿ ಬಾರಿಗೂ ಮಕ್ಕಳ ಮಕ್ಕಳ ಭವಿಷ್ಯದ ಚಿಂತೆ ಕಾಡುತ್ತಿತ್ತು. ಆದಕ್ಕಾಗಿಯೇ ಕಮಲಾಳನ್ನು ಓದಿಸಿದ್ದೆ'. ಸೆಪ್ಟೆಂಬರ್ 13ರಂದು ಮಸ್ಸೂರಿಯಿಂದ ಕಮಲಾಳ ತಂತಿ ಬಂತು. 'ಪಾಸ್‌ಪೋರ್ಟ್ ಸಿಕ್ಕಿದ ತಕ್ಷಣ ಬರುತ್ತೇನೆ'. ಪಾಸ್‌ಪೋರ್ಟಿಗಾಗಿ ಬಿರುಸಿನಿಂದ ವ್ಯವಸ್ಥೆಯಾಗುತ್ತಿತ್ತು.

ಆಸ್ಪತ್ರೆಯಿಂದ ಹೊರಬಂದ ರಾಹುಲಜೀ ಸೆಪ್ಟೆಂಬರ್ 16ರಂದು ತುಜ-ಹ್ವಾನ್‌ಗೆ ಪ್ರವಾಸ ಹೊರಟರು. ದುಭಾಷಿಯಾಗಿ ಜೊತೆಯಲ್ಲಿ ಚಾಲೂ ಮಹಾಶಯ ಇದ್ದರು. ರೈಲಿನಲ್ಲಿ ಮೊದಲು ಸಿಆನ್‌ಗೆ ಹೋಗಿ, ಈ ಹಳೆಯ ರಾಜಧಾನಿ ನಗರದಲ್ಲಿ ಅನೇಕ ಪ್ರಾಚ್ಯ ಸಂಬಂಧ ವಸ್ತುಗಳನ್ನು ನೋಡಿ ಅಲ್ಲಿಂದ ಇಪ್ಪತ್ತು ಕಿಲೋ ಮೀಟರು ದೂರದ ಶಿನ್‌ಕಾವ್ಯೂ - ರಸ ವಿಹಾರವನ್ನು ನೋಡಲು ಹೋದರು. ಇಲ್ಲಿ ಭಾರತದಲ್ಲಿ ದೀರ್ಘ ಕಾಲ ಪ್ರವಾಸ ಮಾಡಿದ್ದ ಹ್ಯುವೆನ್‌ತ್ಸಾಂಗ್‌ನ ಮನೆಯಿತ್ತು. ರಾಹುಲರು 665ನೇ ಇಸವಿಯಲ್ಲಿ ಹ್ಯುವೆನ್‌ತ್ಸಾಂಗ್ ನಿಧನ ಹೊಂದಿದ ನಾಯಂಥಾ (ನಾಲಂದಾ) ವಿಹಾರವನ್ನು ನೋಡಿದರು.

ಸೀನನಿಂದ ರೈಲಿನಲ್ಲಿ ಲನ್‌ಜಾವ್ಯೂ. ನಗರ ದರ್ಶನದ ಬಳಿಕ ಅಲ್ಲಿಂದ ಹೊರಟು ಸೆಪ್ಟೆಂಬರ್ 20ರಂದು ವಿಮಾನ ಮೂಲಕ ಚ್ಯು-ಥಾಂಗ್ ನಿಲ್ದಾಣದಲ್ಲಿಳಿದು ಮಹಾಗೋಡೆಯ ಕೊನೆಯ ತುದಿ ಹಾಗೂ ಹಳ್ಳಿಗಾಡುಗಳನ್ನು ನೋಡುತ್ತ ಜೀಪಿನಲ್ಲಿ ತುಜ-ಹ್ವಾನ್ ಗುಹೆಗಳನ್ನು ತಲುಪಿದರು. ಧೂಳೀಮಯ

ರಸ್ತೆ, ಪ್ರಯಾಣ, ಸಾಕಷ್ಟು ಪ್ರಯಾಸಕರವೂ ಆಗಿತ್ತು. ಸೆಪ್ಟೆಂಬರ್ 21 ಮತ್ತು 22ರಂದು ಅವರು ತುಣ-ಹ್ವಾನ್‌ನ ಸಮೀಪದ ಒಂದು ವಸತಿಗೃಹದಲ್ಲಿ ಉಳಿದುಕೊಂಡರು.

'ಚೀನ ಮೇಂ ಕ್ಯಾ ದೇಖಾ' ಎಂಬ ತನ್ನ ಪುಸ್ತಕದಲ್ಲಿ ರಾಹುಲಜೀ ತುಣ-ಹ್ವಾನ್‌ನ ಇತಿಹಾಸ ಮತ್ತು ಅಲ್ಲಿನ ಕಲಾ ಸಂಪತ್ತಿನ ಬಗ್ಗೆ ಬಹಳ ಹೇಳಿದ್ದಾರೆ.ಇಲ್ಲಿನ ಗುಹೆಗಳು ಮತ್ತು ಕಲಾಕೃತಿಗಳ ನಿರ್ಮಾಣ ಕ್ರಿ.ಶ. 4-5ನೇ ಶತಮಾನಗಳಿಂದ ಹಿಡಿದು ಹದಿನಾಲ್ಕನೇ ಶತಮಾನದ ತನಕ ಆಗುತ್ತಲೇ ಇತ್ತು. ಮರಳು ಮುಸುಕಿಕೊಂಡೇ ಇರುವ ಕಾರಣ ಇಲ್ಲಿನ ಅನೇಕ ಗುಹೆಗಳ ಕಲಾಕೃತಿಗಳು ನಷ್ಟವಾಗದೆ ಉಳಿದುಕೊಂಡವು. ಆದರೆ ಕಮ್ಯುನಿಸ್ಟ್ ಆಡಳಿತ ಸ್ಥಾಪನೆಯಾಗುವ ಮೊದಲೇ ಚೀನಾದ ಈ ಅಜಂತಾವನ್ನು ಧರ್ಮಾಂಧರು ಮಾತ್ರವಲ್ಲ ವಿದ್ಯಾಂಧರು ಕೂಡ ಸಾಕಷ್ಟು ಹಾಳುಗೆಡವಿದರು. ಮೊದಲು ಧರ್ಮಾಂಧ ತುರ್ಕೀಯರಿಂದ ಇದಕ್ಕೆ ಅಪಾಯ ತಗಲಿತು. ಮತ್ತೆ ಆಧುನಿಕ ಕಾಲದಲ್ಲಿ ವಿದ್ಯಾಂಧರ ಲೂಟಿ ಆರಂಭವಾಯಿತು. ಇಲ್ಲಿ ವಾಸಿಸುವ ಒಬ್ಬ ಭಿಕ್ಷು ಒಂದು ಮುಚ್ಚಿದ ಕೋಣೆಯೊಳಗೆ ನೂರಾರು ತಾಡೋಲೆಗಳನ್ನು; ಕಾಗದದ ಮೇಲೆ ಬರೆದ ಗ್ರಂಥಗಳನ್ನು ಚಿತ್ರಗಳನ್ನು ಹುಡುಕಿದ್ದ. 'ಓರೆಲ್ ಸ್ಟಾಯಿನ್‌ಗೆ ಸುದ್ದಿ ಸಿಕ್ಕಿದ್ದೇ ಆತ ತುಂಜ ಹ್ವಾನ್‌ಗೆ ಹೋಗಿ ಅನೇಕ ಸಾಮಗ್ರಿಗಳನ್ನು ದೋಚಿಕೊಂಡು ಹೋದ. ನಂತರ ಫ್ರೆಂಚ್ ವಿದ್ವಾಂಸ ಪೆಲಿಯೋ ಬಂದ. ಅವನೂ ಹರಿವ ಗಂಗೆಯಲ್ಲಿ ಕೈ ತೊಳೆದ. ಸ್ಟಾಲಿನ್ ಎಷ್ಟೋ ಭಿತ್ತಿ ಚಿತ್ರಗಳನ್ನು ಕಿತ್ತುಕೊಂಡು ಹೋದ. ಒಂದು ದೊಡ್ಡ ಮೂರ್ತಿಯ ವಿಗ್ರಹವನ್ನು ಎತ್ತಿಕೊಂಡು ಹೋಗಲು ನೋಡಿ, ಸಾಧ್ಯವಾಗದೆ, ಮೂರ್ತಿಯ ತಲೆ ಕಡಿದು ಅದನ್ನು ತೆಗೆದುಕೊಂಡು ಹೋದ' ಎಂದು ರಾಹುಲರು ಬರೆದಿದ್ದಾರೆ.

ತುಣ-ಹ್ವಾನಿನ ಸಂಚಾಲಕ ಶಾಂಗ್ ಮಹಾಶಯ ಸ್ವಯಂ ಒಬ್ಬ ಕಲಾವಿದ ಹಾಗೂ ವಿದ್ವಾಂಸ, ವಿವರವಾದ, ಮಾಹಿತಿ ನೀಡಿದ. ಈತ ತುಣ-ಹ್ವಾನ್‌ನ ಸೇವೆಗೇ ತನ್ನ ಇಡೀ ಬದುಕನ್ನು ಬೆಸೆದುಕೊಂಡಾತ, ಬೇಕಷ್ಟು ಕಷ್ಟ ಸಹಿಸಿದ, ಅಷ್ಟೇ ತ್ಯಾಗ ಮಾಡಿದ. ರಾಹುಲರು ಅವನ ಆದರ್ಶ ಬದುಕಿನ ದೊಡ್ಡದೊಂದು ಮಾರ್ಮಿಕ ಚಿತ್ರಣವನ್ನು ನೀಡಿದ್ದಾರೆ.

ಹಿಂದಿರುಗುವ ದಾರಿಯಲ್ಲಿ ಸಿಅನ್ ಮತ್ತು ಲೋಯಾಜನ ದರ್ಶನೀಯ ಸ್ಥಳಗಳನ್ನು, ಲೋಯಾಜನಿಂದ ಹದಿಮೂರು ಕಿಲೋಮೀಟರ್ ದೂರದ ಲೋಜ-ಮೆನ್ ಎಂಬಲ್ಲಿನ ಗುಹೆಗಳನ್ನು ನೋಡಿ ಸೆಪ್ಟೆಂಬರ್ 30ರಂದು ಪೀಕಿಂಗ್‌ಗೆ ವಾಪಾಸಾದರು.

ಅಕ್ಟೋಬರ್ 10ರಂದು ಜಯಾ, ಜೇತಾ, ಮತ್ತು ಅವರ ತಾಯಿ ವಿಮಾನದಲ್ಲಿ ಪೀಕಿಂಗ್ ತಲುಪಿದರು. ಮುಂದಿನ ಒಂಭತ್ತು ದಿನಗಳಲ್ಲಿ ರಾಹುಲ ಕುಟುಂಬ ಪೀಕಿಂಗ್‌ನ ವಿವಿಧ ಸ್ಥಳಗಳನ್ನು ನೋಡಿತು. ಪೀಕಿಂಗ್ ಬಿಡುವ ಮೊದಲು ಚೀನಾ ಬೌದ್ಧ ಸಂಘದ ಅಧ್ಯಕ್ಷ ಗೇಶೇ ಶೇರಬ್‌ರೊಂದಿಗೆ ರಾಹುಲರ ಭೆಟ್ಟಿಯೂ ಆಯಿತು. ಹಳೆಯ ಮಿತ್ರರಿಬ್ಬರೂ ಈ ಭೇಟಿಯಿಂದ ಅತ್ಯಂತ ಖುಶಿ ಪಟ್ಟರು.

ಅಕ್ಟೋಬರ್ 19ರಂದು ರಾಹುಲ ಪರಿವಾರ ರೈಲು ಮೂಲಕ ನಾನ್ಕಿಂಗ್‌ಗೆ. ಶ್ರೀ ಚಾಊ-ಫೂ-ಛೂ ಮತ್ತು ಅನೇಕ ಭಾರತೀಯ ಮಿತ್ರರು ಬೀಳ್ಕೊಡಲು ಸ್ಟೇಶನ್ನಿಗೆ ಬಂದಿದ್ದರು. ಮುಂದೆ ಸುಮಾರು ಹದಿನೈದು ದಿನಗಳ ಕಾಲ ನ್ಯಾನ್ಕಿಂಗ್, ಶಾಂಘೈ, ಕ್ವಾಂಚಾವು ಮುಂತಾದ ನಗರಗಳ ಪ್ರವಾಸ ಮಾಡಿ, ಕುನ್‌ಮಿಜನಲ್ಲಿ ವಿಮಾನವೇರಿ ರಂಗೂನ್. ಅಲ್ಲಿ ಕೇವಲ ಮೂರು ಗಂಟೆಕಾಲ ಇದ್ದು ವಿಮಾನದಲ್ಲೇ ನವೆಂಬರ್ 9ರಂದು (1958) ಕಲ್ಕತ್ತಾಗೆ ಪ್ರಯಾಣ ಮಾಡಿದರು.

ಕಲ್ಕತ್ತಾದಲ್ಲಿ ಈ ಬಾರಿ ಔಷಧ ತಯಾರಕರಾದ ಡಾಬರ್ ಕಂಪೆನಿಯ ಮಾಲಿಕ ಅಶೋಕ್ ಕುಮಾರ್ ಬರ್ಮನ್ ಅವರಲ್ಲಿ ತಂಗಿದರು. ಮರುದಿನ ರಾಹುಲರಿಗೆ ಜ್ವರ. ಅದು ಟೈಫಾಯ್ಡ್ ಆಗಿತ್ತು. ಚೇತರಿಸಿಕೊಂಡ ಬಳಿಕ ನವೆಂಬರ್ 28ರಂದು ಡೆಹರಾಡೂನ್ ಎಕ್ಸ್‌ಪ್ರೆಸ್ಸಿನಲ್ಲಿ ಕುಳಿತು ಎರಡು ದಿನದ ಮೇಲೆ ಡೆಹರಾಡೂನ್ ತಲುಪಿಕೊಂಡರು. ಚಳಿಗಾಲ ಆರಂಭವಾಗಿತ್ತು. ಆದುದರಿಂದ ಮುಂದಿನ ಕೆಲದಿನಗಳವರೆಗೆ ಅವರು ಅಲ್ಲಿಯೇ ಇರಬೇಕಿತ್ತು.

ಹಿಂದೆಯೇ ಹೇಳಿದಂತೆ ಈ ನಾಲ್ಕೂವರೆ ತಿಂಗಳ ಚೀನಾ ಪ್ರವಾಸದ ವಿವರಣೆಯನ್ನು ರಾಹುಲರು 'ಚೀನಾ ಮೇಂ ಕ್ಯಾ ದೇಖಾ' ಕೃತಿಯಲ್ಲಿ ನೀಡಿದ್ದಾರೆ. ಅಲ್ಲಿ ತಾವು ನೋಡಿದ ಆರು ಕಮ್ಯೂನ್‌ಗಳ ಕುರಿತು 'ಜೀನ ಕೇ ಕಮ್ಯೂನ್' ಎಂಬ ಪುಸ್ತಿಕೆ ಬರೆದಿದ್ದಾರೆ. ಇನ್ನೂ ಒಂದು ಪುಸ್ತಕ 'ನವೀನ ಚೀನ' ಬರೆಯುವ ಆಸೆ ಅವರಿಗಿತ್ತು. ಆದರೆ ಸಂದರ್ಭ ಸಿಗಲಿಲ್ಲ.

ಟಿಬೇಟಿಗೆ ಹೋಗಲು ಸಾಧ್ಯವಾಗದಿದ್ದರೇನಾಯಿತು? ರಾಹುಲರ ಚೀನಾ ಪ್ರವಾಸ ಸಾರ್ಥಕವೇ ಆಗಿದೆ. ತುಜ-ಹ್ವಾನ್ ನೋಡಿ ಅವರಿಗಾದ ಸಂತೋಷವಂತೂ ಬಲು ದೊಡ್ಡದು.

# ಶ್ರೀ ಲಂಕೆಯಲ್ಲಿ ದರ್ಶನ ಮಹಾಚಾರ್ಯ

ಹೊಸ ವರ್ಷ 1959 ಹೊಸ ಸಮಸ್ಯೆಗಳ ವರ್ಷವಾಗಿತ್ತು. ಚೀನಕ್ಕೆ ತೆರಳುವ ಮುನ್ನ ಮಸ್ಸೂರಿಯಲ್ಲಿನ ತನ್ನ ಮನೆ ಮಾರಿ ಬಿಟ್ಟಿದ್ದರು. ಅಲ್ಲಿಯೇ ಬಾಡಿಗೆ ಮನೆಯಲ್ಲಿ ಇರತೊಡಗಿದ್ದರು. ಚೀನದಿಂದ ಮರಳಿದ ಬಳಿಕ ಕೆಲ ತಿಂಗಳವರೆಗೆ ಡೆಹರಾಡೂನಿನಲ್ಲಿ ವಾಸಿಸತೊಡಗಿದರು. ರಾಹುಲರ ಪತ್ನಿಗೆ, ಭವಿಷ್ಯದ ದೃಷ್ಟಿಯಿಂದಲೂ, ಡೆಹರಾಡೂನಿನ ನಿವಾಸ ತುಂಬ ಸ್ಮರಣೀಯವಾಯಿತು. ರಾಹುಲರು 'ಕಮಲಾಳ ಪಿ.ಎಚ್.ಡಿ.ಥೀಸಿಸನ್ನು ಈ ವರ್ಷ ಖಂಡಿತ ಸಿದ್ಧ ಮಾಡಿಸಿ ಕಳಿಸಬೇಕು' ಎಂದು ಚೀನಾದಿಂದ ಹೊರಟಾಗಲೇ ನಿಶ್ಚಯಿಸಿಕೊಂಡು ಬಂದಿದ್ದರು.

ಮಕ್ಕಳ ಭವಿಷ್ಯದ್ದೇ ಅವರಿಗೆ ಎಲ್ಲಕ್ಕಿಂತ ದೊಡ್ಡ ಚಿಂತೆಯಾಗಿತ್ತು. ಮಕ್ಕಳ ಓದಿನ ದೃಷ್ಟಿಯಿಂದಲೂ ಸ್ಥಿರವಾದ ಸ್ವಂತ ನೆಲೆಯೊಂದರ ಅಗತ್ಯವಿತ್ತು. ಚೀನಾ ಪ್ರವಾಸದ ನಂತರ ಈಗ ಪತ್ನಿಯ ಮಾತನ್ನು ಒಪ್ಪಿಕೊಳ್ಳುವುದು ಬಿಟ್ಟರೆ ಬೇರೆ ಉಪಾಯ ಇರಲಿಲ್ಲ. ಚೀನಾದ ಆಸ್ಪತ್ರೆಯ ವಾರ್ಡಿನಲ್ಲಿ ಮಲಗಿಕೊಂಡಿದ್ದಾಗ ಅವರೊಮ್ಮೆ 'ಅವಳಿಗೆ ಎಲ್ಲಕ್ಕಿಂತ ಅನುಕೂಲ ಸ್ಥಳ ಡಾರ್ಜಲಿಂಗ್' ಎಂದೂ ಅಂದುಕೊಂಡಿದ್ದರು. ಆದ್ದರಿಂದ ಡಾರ್ಜಲಿಂಗ್ ಕುರಿತೇ ಚಿಂತೆ ಹರಿಸಿದರು. ಆದರೆ ಕೇವಲ ಹೆಂಡತಿ ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ಅವರು ಯೋಚಿಸುತ್ತಿದ್ದರೇ ಹೊರತು ತಮ್ಮನ್ನೇ ದೃಷ್ಟಿಯಲ್ಲಿಟ್ಟುಕೊಂಡಲ್ಲ.

ಅವರಿಗೆ ಅರವತ್ತಾರು ವರ್ಷ ವಯಸ್ಸಾಗಿತ್ತು, ಹೃದಯರೋಗಿಯಾಗಿದ್ದರು, ಡಯಾಬಿಟಿಸ್ ದಿನೇ ದಿನೇ ಅವರನ್ನು ನಿತ್ರಾಣಗೊಳಿಸಿತ್ತು. ಆದರೂ ಅವರಿಗೆ ಕೆಲಸ ಮಾಡುವುದು ಅನಿವಾರ್ಯವಾಗಿತ್ತು. ಡೆಹರಾಡೂನ್‌ನಲ್ಲಿಯೇ ಅವರು 'ಚೀನ ಕೇ ಕಮ್ಯೂನ್' ಮತ್ತು 'ಚೀನ ಮೇಂ ಕ್ಯಾ ದೇಖಾ' ಪುಸ್ತಕಗಳನ್ನು ಬರೆದಿದ್ದರು. ಆದರೆ ಈ ಪುಸ್ತಕಗಳಿಂದ ಅವರಿಗೆ ಆರ್ಥಿಕ ಲಾಭವೇನೂ ಆಗಿರಲಿಕ್ಕಿಲ್ಲ. ಇವುಗಳನ್ನು ಕಮ್ಯೂನಿಸ್ಟ್ ಪಾರ್ಟಿಯ ಪ್ರಕಾಶನ ಸಂಸ್ಥೆ ಮುದ್ರಿಸಿತ್ತು. ಕೌಟುಂಬಿಕ ಜವಾಬ್ದಾರಿ ನಿಭಾಯಿಸಲು ಈಗ ಒಂದು ಸ್ಥಾಯಿ ಆದಾಯದ ಮೂಲ ಹುಡುಕಿಕೊಳ್ಳುವುದು ರಾಹುಲರಿಗೆ ಅತ್ಯವಶ್ಯವಾಗಿತ್ತು. ಅವರು ಭಯಂಕರ ಸ್ವಾಭಿಮಾನಿ ಬೇರೆ. ಯಾರದೇ ಅನುಕಂಪ ಆಶ್ರಯದಲ್ಲಿ ಇರಲು ಬಯಸುವವರಲ್ಲ. ಆಗಾಗ ಅವರಿಗೆ 'ರಹಿಮನ ವೇ ನರ ಮರಿ ಚುಕೇ ಜೇ ಕಹುಂ ಮಾಂಗನ ಜಾಹಿಂ' ಎಂಬ ಸಾಲು ನೆನಪಾಗುತ್ತಿತ್ತು.

ಪಾರಿಭಾಷಿಕ ಶಬ್ದಾವಲಿಯ ಮತ್ತು ಸಮಿತಿಯ ಸಾಹಿತ್ಯ ನಿರ್ಮಾಣ ಕಾರ್ಯವನ್ನು ಅವರು ವೇತನ ತೆಗೆದುಕೊಳ್ಳದೇನೇ ಮಾಡಿದ್ದರು. ಹಿಂದೀ ವಿಶ್ವಕೋಶ ಸಂಪಾದನ ಕಾರ್ಯಕ್ಕೆ ವೇತನವಿತ್ತು. ಹಾಗಾಗಿ ಸುರುವಿನಿಂದಲೇ ಆ ಕೆಲಸದ ಜವಾಬ್ದಾರಿ ವಹಿಸಲು ಅವರು ಹಿಂಜರಿಯುತ್ತ ಇದ್ದರು. ತಮ್ಮ ಇಡೀ ಜೀವಮಾನದಲ್ಲಿ 'ನೌಕರಿ' ಎಂಬ ಹೆಸರಿನಲ್ಲಿ ಅವರು ಮಾಡಿದ ಕೆಲಸ ಒಂದೇ –

ಲೆನಿನ್‌ಗ್ರಾಡ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕಾರಾಗಿದ್ದದ್ದು. ಅಂತಹ ಕೆಲಸ ಸಿಕ್ಕಿದ್ದರೆ ಭಾರತದಲ್ಲಿಯೂ ಮಾಡುತ್ತಿದ್ದರೇನೋ. ಸರಕಾರ ಮತ್ತು ಸರಕಾರದ ಮುಂಚೂಣಿಯಲ್ಲಿರುವವರ ಬಗ್ಗೆ ನಿರಂತರ ಕಟುವಾಗಿ ಚಿಂತಿಸುವ ಒಬ್ಬ ಸಾಮ್ಯವಾದಿಗೆ ಯಾವುದೇ ಗೌರವಾನ್ವಿತ ಪದ ಸ್ವದೇಶದಲ್ಲಿ ಸಿಕ್ಕೀತು ಎಂಬ ಅಪೇಕ್ಷೆಯನ್ನು ಕೂಡ ಅವರು ಇರಿಸಿಕೊಂಡಿರಲಿಲ್ಲ.

ರಾಹುಲರು ಹಿಂದಿಗಾಗಿ ಪ್ರಾಣವನ್ನು ಪಣವಾಗಿಟ್ಟು ತನ್ನನ್ನು ಸಮರ್ಪಿಸಿ ಕೊಂಡಿದ್ದರೆನ್ನುವುದು ನಿಜವಾದರೂ ಅವರನ್ನು ಕೇವಲ 'ಹಿಂದೀವಾಲಾ' ಎಂದು ತಿಳಿಯುವುದು ತಪ್ಪಾದೀತು. ಅವರ ಅನೇಕ ಪುಸ್ತಕಗಳು ದೇಶದ ಪ್ರಮುಖ ಭಾಷೆಗಳಿಗೆ ಅನುವಾದಗೊಂಡಿದ್ದವು. ಇಷ್ಟಕ್ಕೂ ಅವರ ವ್ಯಕ್ತಿತ್ವವನ್ನು ಕೇವಲ ಭಾರತಕ್ಕೆ ಸೀಮಿತಗೊಳಿಸುವದೂ ಉಚಿತವಾಗದು. ತನ್ನ ಕೃತಿತ್ವದಿಂದಾಗಿ ಅವರು ಸಮಗ್ರ ಏಶಿಯಾದವರಾಗಿದ್ದರು. ಭಾರತದಲ್ಲಿ ಸಿಗುವುದಕ್ಕಿಂತಲೂ ಹೆಚ್ಚಿಗೆ ಗೌರವ ಅವರಿಗೆ ನೆರೆ ರಾಷ್ಟ್ರಗಳಲ್ಲಿ ಸಿಗುತ್ತಿತ್ತು. ರಾಣಾಶಾಹಿಯನ್ನು ಟೀಕಿಸುವವರಾಗಿಯೂ, ನೇಪಾಳ ಅವರಿಗೆ ಸ್ವಂತ ಮನೆಯಂತಿತ್ತು. ಮೊದಲೂ, ನಂತರ ಹೊಸ ಸರಕಾರ ಬಂದ ಮೇಲೆಯೂ ಅವರು ಟಿಬೇಟಿನ ನಿರಂಕುಶ ಸಾಮಂತ ವ್ಯವಸ್ಥೆಯನ್ನು ಮತ್ತು ದಲಾಯಿಲಾಮಾರವರನ್ನು ಅವರು ಬೆಂಬಲಿಸುತ್ತಿರಲಿಲ್ಲವಾದರೂ ಅಲ್ಲಿನ ಪಂಡಿತರು ಅವರ ಬಗ್ಗೆ ಅತೀವ ಗೌರವವಿರಿಸಿಕೊಂಡಿದ್ದರು. ಬರ್ಮಾದಲ್ಲಿಯೂ ರಾಹುಲರ ಅನೇಕ ಅಭಿಮಾನಿಗಳು ಇದ್ದರು. ಶ್ರೀಲಂಕಾದಲ್ಲಂತೂ ಇದು ಅದ್ಭುತವಾಗಿತ್ತು. ಬೌದ್ಧ ಭಿಕ್ಷುವಿನ ವೇಷ ತ್ಯಜಿಸಿ ರಾಹುಲರು ಗೃಹಸ್ಥರಾದಾಗ ಆ ಕಾಲದ ರಾಜಕೀಯ ವಿರೋಧಿಗಳು ಅವರನ್ನು 'ಪತಿತ'ನೆಂದು ಕರೆದು ಹೆಸರು ಕೆಡಿಸಲು ಯತ್ನಿಸಿದ್ದರು. ಆದರೆ ಅವರು ಬೌದ್ಧ ಭಿಕ್ಷುವಾಗಿ ದೀಕ್ಷೆ ಪಡೆದ ಶ್ರೀಲಂಕಾದ ವಿದ್ಯಾಲಂಕಾರ ವಿಹಾರದಲ್ಲಿನ ಗುರುಬಂಧುಗಳು ಅವರ ವಸ್ತ್ರತ್ಯಾಗದ ಬಗ್ಗೆ ಎಳ್ಳಷ್ಟೂ ಬೇಸರಪಟ್ಟುಕೊಳ್ಳಲಿಲ್ಲ. ಅವರ ಮಟ್ಟಿಗೆ ಮಹತ್ವದ್ದೆಂದರೆ ರಾಹುಲರ ಅಗಾಧ ಪಾಂಡಿತ್ಯ, ಬೌದ್ಧ ಸಂಸ್ಕೃತಿಯ ಅನ್ವೇಷಣೆಯಲ್ಲಿ ಅವರು ಮಾಡಿದ ಪ್ರಮುಖ ಕೆಲಸಗಳು. ಶ್ರೀಲಂಕೆಯ ಬೌದ್ಧ ಸಮಾಜ ಮತ್ತು ಅಲ್ಲಿನ ಸರಕಾರ ರಾಹುಲರಿಗೆ ಸಾಧ್ಯವಿರುವ ಎಲ್ಲಾ ಸೌಲಭ್ಯಗಳನ್ನು ನೀಡಲು ಸಿದ್ಧವಿತ್ತು. ಚೀನಾದಲ್ಲಿ ರಾಹುಲರು ಅಸ್ವಸ್ಥರಾಗಿದ್ದಾಗ ಶ್ರೀಲಂಕಾದ ರಾಯಭಾರಿ, ಅವರನ್ನು ನೋಡಲು ಅನೇಕ ಸಲ ಬಂದಿದ್ದರು. ಆದರೆ ಭಾರತದ ರಾಯಭಾರಿ ರಾಹುಲರ ಅನಾರೋಗ್ಯವನ್ನು ವಿಚಾರಿಸಲು ಹೋಗಿದ್ದರೆಂಬುದರ ಬಗ್ಗೆ ಯಾವ ಮಾಹಿತಿಯೂ ಇಲ್ಲ.

ಹೀಗಾಗಿ ಶ್ರೀಲಂಕಾದ ವಿದ್ಯಾಲಂಕಾರ ವಿಶ್ವಿವಿದ್ಯಾಲಯದಲ್ಲಿ ದರ್ಶನ ಶಾಸ್ತ್ರದ ಮಹಾಚಾರ್ಯ ಪದವಿಗೆ ನೇಮಕಗೊಂಡಾಗ ರಾಹುಲರು ಅದನ್ನು ಸ್ವೀಕರಿಸಿಬಿಟ್ಟರು. 1927-28ರಲ್ಲಿ ಶ್ರೀಲಂಕಾದ ಯಾವ ವಿದ್ಯಾಲಂಕಾರ ವಿಹಾರದಲ್ಲಿ ರಾಹುಲಜಿಯವರು ಅಧ್ಯಾಪನ ಮಾಡಿದ್ದರೋ ಅದೇ ಈಗ ವಿಶ್ವವಿದ್ಯಾಲಯ ಆಗಿತ್ತು. ವಿಶ್ವವಿದ್ಯಾಲಾಯಕ್ಕೆ ಯೋಗ್ಯ ಪ್ರಾಧ್ಯಾಪಕರ ಅವಶ್ಯಕತೆಯಿತ್ತು. ವಿಹಾರದ ಹಿಂದಿನ ಮೂವರು ಭಾರತೀಯ ಶಿಷ್ಯರನ್ನು ಪ್ರಾಧ್ಯಾಪಕರನ್ನಾಗಿ ನೇಮಕ ಮಾಡಲಾಯಿತು. ರಾಹುಲಜೀ ದರ್ಶನಶಾಸ್ತ್ರಕ್ಕೆ, ಆನಂದ್‌ಜಿ ಹಿಂದೀ ಮತ್ತು ಶಾಂತಿಭಿಕ್ಷು ಶಾಸ್ತ್ರಿ ಸಂಸ್ಕೃತ ಪ್ರಾಧ್ಯಾಪಕರಾಗಿ ನೇಮಿಸಲ್ಪಟ್ಟರು. ರಾಹುಲರಿಗೆ ಸಾಕಷ್ಟು ಮುಂಚಿತವಾಗಿ ಆಹ್ವಾನ ಸಿಕ್ಕಿತ್ತು. ಆದರೆ ಅವರು ವಿಶ್ವವಿದ್ಯಾಲಯ ಆರಂಭವಾದ ಮೂರು ತಿಂಗಳ ಬಳಿಕ 1959ರ ಸೆಪ್ಟೆಂಬರ್‌ನಲ್ಲಿ ಶ್ರೀಲಂಕಾಕ್ಕೆ ಬಂದರು.

ಶ್ರೀಲಂಕಾದದಲ್ಲಿ ಬೌದ್ಧ ಶಿಕ್ಷಣದ ಎರಡು ಕೇಂದ್ರಗಳಿದ್ದವು. ವಿದ್ಯೋದಯ ವಿಹಾರ ಮತ್ತು ವಿದ್ಯಾಲಂಕಾರ ವಿಹಾರ. 1959ರಲ್ಲಿ ಈ ಎರಡೂ ಮಹಾವಿಹಾರಗಳನ್ನು ಸರ್ಕಾರಿ ವಿಶ್ವವಿದ್ಯಾಲಯಗಳನ್ನಾಗಿ ಮಾಡಲಾಯಿತು. 1959ರ ಜೂನ್‌ನಲ್ಲಿ ಭಾರತದ ರಾಷ್ಟ್ರಪತಿ ಬಾಬೂ ರಾಜೇಂದ್ರ ಪ್ರಸಾದರು ವಿದ್ಯಾಲಂಕಾರ ವಿಶ್ವವಿದ್ಯಾಲಯದ ಉದ್ಘಾಟನೆ ಮಾಡಿದರು. ಜೂನ್‌ನಲ್ಲಿಯೇ ವಿಶ್ವವಿದ್ಯಾಲಯ ಆರಂಭವಾಗಿತ್ತು. ಆನಂದಜೀ ಮೊದಲೇ ಅಲ್ಲಿಗೆ ಹೋಗಿದ್ದರು. ಶಾಂತಿಭಿಕ್ಷು ಒಂದು ತಿಂಗಳ ಬಳಿಕ 59ರ ಅಕ್ಟೋಬರ್‌ನಲ್ಲಿ ಸಪರಿವಾರ ಅಲ್ಲಿ ತಲುಪಿಕೊಂಡರು.

ಕುಟುಂಬವನ್ನು ತಮ್ಮೊಡನೆ ಕರೆದೊಯ್ಯಲು ರಾಹುಲರು ಅಪೇಕ್ಷಿಸಿದರೂ ಕೂಡಾ ಅದು ಸಾಧ್ಯವಾಗಲಿಲ್ಲ. ಶಾಂತಿಭಿಕ್ಷು ಕುಟುಂಬವನ್ನು ಜೊತೆಗಿರಿಸಿಕೊಳ್ಳಬಲ್ಲರಾದರೆ, ರಾಹುಲರಿಗೂ ಅದು ಏನೂ ಕಷ್ಟವಾಗುತ್ತಿರಲಿಲ್ಲ. ಅಲ್ಲಿ ಮಸ್ಸೂರಿ, ಡಾರ್ಜಿಲಿಂಗ್‌ನಲ್ಲಿದ್ದಂತಹ ಚಳಿ ಇರಲಿಲ್ಲ. ಅಲಹಾಬಾದ್, ವಾರಣಾಸಿಯಲ್ಲಿರುವಂಥ ಸೆಕೆಯೂ ಇಲ್ಲ. ಹಸಿರು ತುಂಬಿದ ದೇಶ. ಅಲ್ಲಿನ ಕಡಲ ಗಾಳಿ ಸಹಿಸಲಾರದ್ದು ಎನ್ನುವಂತಿಲ್ಲ. ಕುಟುಂಬ ಜೊತೆಗಿದ್ದರೆ ಅವರಿಗೆ ಒಳ್ಳೆಯ ಒಂದು ಮನೆಯ ವ್ಯವಸ್ಥೆಯೂ ಆಗುತ್ತಿತ್ತು. ಮಕ್ಕಳು ಜೊತೆಗಿದ್ದಿದ್ದರೆ ರಾಹುಲರು ಎಷ್ಟೋ ಸಂತೋಷ ಮತ್ತು ನೆಮ್ಮದಿಯಿಂದ ಇರುತ್ತಿದ್ದರು. ಅವರ ಅನುಕೂಲಕ್ಕೆ ತಕ್ಕಂತೆ ಮನೆಯೂಟ ಸಿಗುತ್ತಿತ್ತು. ಮಕ್ಕಳಿಗಾಗಿ ಸ್ವಲ್ಪಸಮಯ ಬಿಡುವು ಮಾಡಿಕೊಳ್ಳುತ್ತಿದ್ದರು. ಅಸಹಾಯಕತೆಯಿಂದ ಸದಾ ಬಿಡುವಿಲ್ಲದೆ ದುಡಿಯುತ್ತಲೇ ಇರುವ ಪ್ರಮೇಯ ಬರುತ್ತಿರಲಿಲ್ಲ. ಅಲ್ಲಿಯೇ ಮಕ್ಕಳ ಓದಿನ ವ್ಯವಸ್ಥೆಯೂ ಆಗುತ್ತಿತ್ತು. ಮಕ್ಕಳು ತಂದೆಯ ಒಟ್ಟಿಗೆ ಇದ್ದಿದ್ದರೆ ಹಿಂದಿ ಮತ್ತು ಸಂಸ್ಕೃತದ ಕಡೆಗೆ ಹೆಚ್ಚು ಆಸಕ್ತಿ ಉಂಟಾಗುತ್ತಿತ್ತು. ತಮ್ಮ ತಂದೆಯ ಲೇಖನ ಶಕ್ತಿಯನ್ನು ಇನ್ನಷ್ಟು ಚೆನ್ನಾಗಿ ಗ್ರಹಿಸುತ್ತಿದ್ದರು. 'ಸಂಸ್ಕೃತ ಕಾವ್ಯಧಾರಾ'ದ ಸಮರ್ಪಣೆ: 'ಎಂದಾದರೂ ತಂದೆಯ ಈ ಕೃತಿ ಓದಲಿರುವ ಜಯಾ ಮತ್ತು ಜೇತಾ ಅವರಿಗೆ'.

ಆದರೆ ಈಗ ಕುಟುಂಬದ ವಿಷಯದಲ್ಲಿ ಅವರು ವಿವಶರಾಗಿದ್ದರು. ಮಸ್ಸೂರಿಯ ಮನೆಯನ್ನು ಅವರು ತಮ್ಮ ಹೆಸರರಿನಲ್ಲೇ ಖರೀದಿಸಿ ಬಳಿಕ ಹೆಂಡತಿಯ ಹೆಸರಿಗೆ ಮಾಡಿದ್ದರು. ಹೊಸ ಮನೆಯನ್ನು ಹೆಂಡತಿಯ ಇಷ್ಟಕ್ಕನುಸಾರವಾಗಿಯೇ ಖರೀದಿಸುವುದೆಂತಲೂ ತೀರ್ಮಾನಿಸಿಕೊಂಡಿದ್ದರು. ಪತಿಯ ಜೊತೆ ಶ್ರೀಲಂಕೆಗೆ ಹೋಗುವುದಿಲ್ಲವಾದ್ದರಿಂದ ಕಮಲಾ ಡಾರ್ಜಿಲಿಂಗ್‌ನಲ್ಲಿ ಮನೆ ಖರೀದಿ ವಿಚಾರದಲ್ಲಿ ಮುಳುಗಿದ್ದಳು ಮತ್ತು ರಾಹುಲರು ಶ್ರೀಲಂಕಾಕ್ಕೆ ಹೊರಡುವ ತಯಾರಿಯಲ್ಲಿ ಮಗ್ನರಾದರು.

ಮೊದಲ ಸಲ 1927ರಲ್ಲಿ ರಾಹುಲರು, ಆಗಿನ ಸ್ವಾಮಿ ರಾಮೋದಾರ ಸಾಧುಗಳು, ವಿದ್ಯಾಲಂಕಾರ ಮಹಾ ವಿದ್ಯಾಲಯಕ್ಕೆ ಬಂದು ಹತ್ತೊಂಭತ್ತು ತಿಂಗಳ ಕಾಲ ಇದ್ದು ಅಧ್ಯಯನ ಅಧ್ಯಾಪನ ಮಾಡಿದ್ದರು. ಅವರ ಸಾಹಿತ್ಯಿಕ ಬದುಕು ಆರಂಭವಾದದ್ದೂ ಆ ಸಮಯದಲ್ಲಿಯೇ. ಆಗ ವಿದ್ಯಾಲಂಕಾರ ವಿಹಾರ ರಾಮೋದಾರ ಸಾಧುಗಳಿಗೆ 'ತ್ರಿಪೀಟಿಕಾಚಾರ್ಯ' ಎಂಬ ಉಪಾಧಿ ಪ್ರದಾನ ಮಾಡಿತ್ತು. ಟಿಬೇಟಿಗೆ ಮೊದಲ ಸಲ ಪ್ರವಾಸ ಹೋಗಿ (1929-30) ಬಂದ ರಾಹುಲರು ವಿದ್ಯಾಲಂಕಾರ ವಿಹಾರಕ್ಕೆ ತೆರಳಿ ಬೌದ್ಧ ಭಿಕ್ಷು – ಭಿಕ್ಷು ರಾಹುಲ ಸಾಂಕೃತ್ಯಾಯನ – ಆಗಿದ್ದರು. ಇಂಗ್ಲೆಂಡ್ ಮತ್ತು ಯುರೋಪಿಗೆ ಪ್ರವಾಸ ಹೋಗಿ ಬಂದ ಬಳಿಕ (1932) 1933ರಲ್ಲಿ ಸುಮಾರು ಹದಿನೈದು ದಿನ ಅವರು ಇಲ್ಲಿ ಬಂದು ಇದ್ದರು.

ಈಗ 1959ರ ಸೆಪ್ಟೆಂಬರ್‌ನಲ್ಲಿ ಪೂರ್ತಿ 26 ವರ್ಷ 8 ತಿಂಗಳ ಬಳಿಕ ರಾಹುಲರು ಮತ್ತೆ ವಿದ್ಯಾಲಂಕಾರ ವಿಹಾರಕ್ಕೆ ಬಂದಿದ್ದರು. ಈ ಬಾರಿ ಸಾಕಷ್ಟು ಬದಲಾವಣೆಯಾಗಿತ್ತು. ಶ್ರೀಲಂಕಾ ಈಗ ಸ್ವತಂತ್ರ ದೇಶ, ವಿಹಾರ ಈಗ ವಿಶ್ವವಿದ್ಯಾಲಯ. ವಿಶ್ವವಿದ್ಯಾಲಯದ ಕಟ್ಟಡಗಳು ಕೊಂಚ ದೂರದಲ್ಲಿದ್ದುವು. ಆದರೆ ವಿಹಾರದ ಪರಿಸರದಲ್ಲಿಯೂ ಕೆಲ ಹೊಸ ಕಟ್ಟಡಗಳು ತಲೆ ಎತ್ತಿದ್ದುವು. ಗುರುವರ ಮಹಾಸ್ಥವಿರ ಧರ್ಮಾನಂದಜೀ ಈ ಲೋಕ ತ್ಯಜಿಸಿದ್ದರು. ಆದರೆ ರಾಹುಲರ ಅನೇಕ ಗುರುಬಂಧುಗಳಿದ್ದರು. ತುಂಬ ಪ್ರೀತಿ ಆದರ ತೋರುವ ಹಳೆಯ ವಿದ್ಯಾರ್ಥಿಗಳಿದ್ದರು. ವಿಹಾರಾಧ್ಯಕ್ಷರೂ ವಾಸಿಸುವ ವಿಹಾರದ ಮುಖ್ಯ ಭವನದಲ್ಲಿ ರಾಹುಲರ ವಾಸದ ವ್ಯವಸ್ಥೆಯಾಯಿತು. ಆನಂದಜೀ ಅವರಿಗೆ ಕೂಡಾ ಅಲ್ಲಿಯೇ ವ್ಯವಸ್ಥೆಯಾಗಿತ್ತು.

ರಾಹುಲರು ವಿದ್ಯಾಲಂಕಾರ ವಿಶ್ವವಿದ್ಯಾಲಯದ ದರ್ಶನ ವಿಭಾಗದ ಡೀನ್ ಮತ್ತು ಪ್ರೊಫೆಸರ್ ಆಗಿ ನೇಮಕಗೊಂಡಿದ್ದರು. ಸಿಂಹಳೀ ಭಾಷೆಯನ್ನು ಸ್ವಲ್ಪ ಸ್ವಲ್ಪ ಗ್ರಹಿಸುತ್ತಿದ್ದರಾದರೂ ಮಾತಾಡಲು ಅಭ್ಯಾಸ ಮಾಡಿರಲಿಲ್ಲ. ವಿಶ್ವವಿದ್ಯಾಲಯದಲ್ಲಿ ಶಿಕ್ಷಣದ ಮಾಧ್ಯಮ ಸಿಂಹಳೀ ಭಾಷೆಯಾಗಿತ್ತು. ಹಾಗಾಗಿ ರಾಹುಲಜೀ ಅವರ ಉಪನ್ಯಾಸಗಳನ್ನು ಸಿಂಹಳೀಯಲ್ಲಿ ತಿಳಿಸಿಕೊಡುವ ಏರ್ಪಾಟು ಆಯಿತು. ರಾಹುಲರು ದರ್ಶನ ಮತ್ತು ನ್ಯಾಯ ಶಾಸ್ತ್ರ ವಿಷಯಕ್ಕೆ ಉಪನ್ಯಾಸಗಳನ್ನು ಸಂಸ್ಕೃತದಲ್ಲಿ ಮಾಡುತ್ತಿದ್ದರು. ಸಿಂಹಳೀ ವಿಭಾಗದ ಮಹಾಚಾರ್ಯ ಮಹಾಸ್ಥವಿರ ಪ್ರಜ್ಞಾ ಕೀರ್ತಿಯವರು ಅವರ ಅನುವಾದಕರಾಗಿ ಕುಳಿತು ಕೊಳ್ಳುತ್ತಿದ್ದರು. ರಾಹುಲರು ಸಂಸ್ಕೃತದಲ್ಲಿ ಹೇಳುತ್ತಿದ್ದಂತೆ ಅವರು ಅದನ್ನು ಸಿಂಹಳೀಗೆ ಪರಿವರ್ತಿಸಿ ವಿದ್ಯಾರ್ಥಿಗಳಿಗೆ ತಿಳಿಸಿಕೊಡುತ್ತಾ ಹೋಗುತ್ತಿದ್ದರು. ಮಹಾಸ್ಥವಿರ ಪ್ರಜ್ಞಾಕೀರ್ತಿ 1928-29ರಲ್ಲಿ ರಾಹುಲರ ಶಿಷ್ಯರಾಗಿದ್ದವರು. ಪ್ರಜ್ಞಾಕೀರ್ತಿ ಸಿಂಹಳೀಯಲ್ಲಿ ಮಾಡಿಕೊಂಡ ರಾಹುಲರ ನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದ ಉಪನ್ಯಾಸಗಳ ಟಿಪ್ಪಣಿಗಳು ನಂತರ ಪುಸ್ತಕ ರೂಪದಲ್ಲಿ ಪ್ರಕಟವಾದವು.

ರಾಹುಲಜೀ ಅವರ ಆ ದಿನಗಳ ಜೀವನ ರೀತಿಯ ಕುರಿತು ಆನಂದಜೀ ಹೇಳುತ್ತಾರೆ: 'ಇಲ್ಲಿರುವಾಗ ರಾಹುಲರ ಬರವಣಿಗೆ ಕೆಲಸ ಚೆನ್ನಾಗಿ ಸಾಗುತ್ತಿತ್ತು. ಅವರು ತನ್ನ ವ್ಯಾಖ್ಯಾನಕ್ಕೆ ತಯಾರಿ ಮಾಡಿಕೊಳ್ಳುವುದನ್ನು ಯಾರೂ ಕಂಡಿಲ್ಲ. ಪುಸ್ತಕ ಬರೆಯುತ್ತ ಕುಳಿತಿರುತ್ತಿದ್ದರು. ವಿಶ್ವವಿದ್ಯಾಲಯದ ಗಂಟೆ ಹೊಡೆದೊಡನೆ ಎದ್ದು ಪಾಠ ಮಾಡಲು ಹೋಗುತ್ತಿದ್ದರು. ಮರಳಿ ಬಂದವರೇ ಮತ್ತೆ ಲೇಖನಿ ಕೈಗೆತ್ತಿಕೊಳ್ಳುತ್ತಿದ್ದರು.'

ಡಾ। ಶಾಂತಿ ಭಿಕ್ಷು ಶಾಸ್ತ್ರೀ ಹೀಗೆ ಬರೆದಿದ್ದಾರೆ. ಆ ವಯಸ್ಸಿನಲ್ಲಿಯೂ (67 ವರ್ಷ) ರಾಹುಲರ ಕಾರ್ಯಕ್ಷಮತೆ ಕಂಡು ನಮಗೆ ಆಶ್ಚರ್ಯವಾಗುತ್ತಿತ್ತು. ಅವರು ರಿಜಿಸ್ಟ್ರಾರೊಂದಿಗೆ ಪರಿವೇಣದ ನಿರೀಕ್ಷಣೆಗೆ ಹೊರಡುತ್ತಿದ್ದರು. ಭಿಕ್ಷು ಶ್ರೀ ಪ್ರಜ್ಞಾಕೀರ್ತಿಯವರನ್ನು ದುಭಾಷಿಯಾಗಿಟ್ಟುಕೊಂಡು ದಾರ್ಶನಿಕ ವಿಚಾರಗಳ ಮೇಲೆ ಭಾಷಣ ನೀಡುತ್ತಿದ್ದರು, ಸಾಮಾಜಿಕ ಉತ್ಸವಗಳಲ್ಲಿ ಭಾಗವಹಿಸುತ್ತಿದ್ದರು, ಪುಸ್ತಕ ಬರವಣಿಗೆಯಲ್ಲಿಯೂ ವ್ಯಸ್ತವಾಗಿರುತ್ತಿದ್ದರು. ರಾತ್ರಿ ಎರಡು ಗಂಟೆಗೆ ಮೊದಲು ಮಲಗುತ್ತಿರಲಿಲ್ಲ. ತಾವಿರುವ ಎರಡೂ ಕೋಣೆಗಳನ್ನು ಕತ್ತಲೆ ಕೋಣೆಗಳಂತೆ ಮಾಡಿಟ್ಟುಕೊಂಡಿದ್ದರು. ರಾತ್ರಿ ಸೊಳ್ಳೆ ಕೀಟಗೀಟ ಒಳಗೆ ಬಾರದಿರಲಿ ಎಂದು ಕಿಟಕಿಗಳನ್ನು ಗಾಜಿನಿಂದ ಮುಚ್ಚಿಸಿದ್ದರು. ಸಂಜೆಯಾಗುತ್ತಲೇ ಅವರ ಸೇವಕ ಗಾಜಿನ ಕಿಟಕಿಗಳನ್ನು ಬಂದು ಮಾಡುತ್ತಿದ್ದ.

ರಾಹುಲರಿಗೀಗ ನಿಯಮಿತವಾಗಿ ಒಳ್ಳೆಯ ವೇತನ ಸಿಗುತ್ತಿತ್ತು. ಪ್ರತಿ ತಿಂಗಳು ಒಂದು ನಿಶ್ಚಿತ ಮೊತ್ತ ಡಾರ್ಜಿಲಿಂಗ್‌ನಲ್ಲಿರುವ ಪತ್ನಿಗೆ ತಲುಪುತ್ತಿತ್ತು – ಎಂದ ಮೇಲೆ ಡಯಾಬಿಟಿಸ್ ಮತ್ತು ಹೃದ್ರೋಗ ಇದ್ದೂ ಅವರು ಅತಿಯಾಗಿ ದುಡಿಯುತ್ತಿದ್ದರೇಕೆ?

ಮೊದಲು ಹೇಳಬೇಕಾದ್ದೆಂದರೆ ಓದು-ಬರಹದಲ್ಲಿಯೇ ಪೂರ್ಣವಾಗಿ ತಲ್ಲೀನರಾಗುವುದು ಅವರಿಗೆ ಅಭ್ಯಾಸವಾಗಿ ಬಿಟ್ಟಿತ್ತು. ಇನ್ನೊಂದೆಂದರೆ ಆರೋಗ್ಯ ವಿಚಾರದಲ್ಲಿ ಅವರಿಗಿದ್ದ ಭಾರೀ ಆಲಕ್ಷ್ಯ, ಸಂಪೂರ್ಣ ದಾರ್ಶನಿಕತೆ. 1961 ಏಪ್ರಿಲ್‌ನಲ್ಲಿ ಅವರು ಡಾರ್ಜಿಲಿಂಗ್‌ನಿಂದ ಆನಂದಜೀಗೆ ಬರೆದ ಪತ್ರದಲ್ಲಿ ಹೀಗಿದೆ: 'ಮೂತ್ರಕೋಶದ ಅಪಾಯ ಸ್ಥಿತಿಯ ಬಗ್ಗೆ ಡಾಕ್ಟರು ಹೇಳುತ್ತಾರೆ. ಆದರೆ ಜೀವನವೇ ಒಂದು ದೊಡ್ಡ ಅಪಾಯ'

ಮೂರನೆಯದಾಗಿ 'ತಿಬ್ಬತೀ – ಹಿಂದೀ ಕೋಶ' ಮತ್ತು 'ಪಾಲಿ ಕಾವ್ಯಧಾರಾ'ದಂತಹ ಮುಂಚೆಯೇ ಯೋಜಿಸಿಕೊಂಡ ಕೆಲ ಪುಸ್ತಕಗಳನ್ನು ತಮ್ಮ ಜೀವಿತ ಕಾಲದಲ್ಲಿ ಮುಗಿಸಿಬಿಡಬೇಕೆಂದು ಅವರು ಬಯಸಿದ್ದರು. 'ತಿಬ್ಬತೀ – ಹಿಂದೀ ಕೋಶ'ಕ್ಕಾಗಿ ಅವರು ಚೀನಾ ಯಾತ್ರೆಯಿಂದಲೇ ಬೇಕಷ್ಟು ಹೊಸ ಸಾಮಗ್ರಿಗಳನ್ನು ತಂದಿದ್ದರು. 'ಸಂಸ್ಕೃತ ಕಾವ್ಯಧಾರಾ ಬರೆದ ನಂತರ ನವೆಂಬರ್ ?ಜಕಕರಲ್ಲಿ 'ಪಾಲಿ ಕಾವ್ಯಧಾರಾ' ಬರೆಯಲು ನಿರ್ಧರಿಸಿ ಈ ಗ್ರಂಥದ ಒಂದು ವಿಸ್ತಾರವಾದ ವಿಷಯ ಸೂಚಿಯನ್ನು ಕೂಡಾ ಸಿದ್ಧಪಡಿಸಿಕೊಂಡಿದ್ದರು. ಇದಕ್ಕಾಗಿ ಅನೆಂದಜೀಯವರ ಸಲಹೆ ಪಡೆದಿದ್ದರು. ಅದೇ ರೀತಿ 'ದಿವ್ಯೋ ದಾಸ್' ಕಾದಂಬರಿಗಾಗಿ ಅವರ 'ನೋಟ್' ಮೊದಲಿಂದ ಸಿದ್ಧವಿತ್ತು.

ಶ್ರೀಲಂಕಾದಲ್ಲಿ ನಿಜವಾಗಿಯೂ ಸಮೃದ್ಧವಾಗಿ ಬರೆದರು ರಾಹುಲಜೀ. 'ತಿಬ್ಬತೀ – ಹಿಂದೀ ಕೋಶ್'ವನ್ನು ಬಹಳ ಪರಿಶ್ರಮಿಸಿ ತಯಾರು ಮಾಡಿದ್ದರೂ ಅವರ ಜೀವಿತ ಕಾಲದಲ್ಲಿ ಅದರ ಮುದ್ರಣ ಸಾಧ್ಯವಾಗಲಿಲ್ಲ. ಸಾಹಿತ್ಯ ಎಕಾಡೆಮಿಯ ಮುಖಾಂತರ 1972ರಲ್ಲಿ ಈ ಕೋಶದ ಪ್ರಥಮ ಭಾಗ ಪ್ರಕಟವಾಯಿತು. ದ್ವಿತೀಯ ಭಾಗ ಈಗಲೂ ಹಾಗೆಯೇ ಇದೆ. ಮೊದಲ ಭಾಗದ ಪೀಠಿಕೆಯಲ್ಲಿ ರಾಹುಲರು 'ತಿಬ್ಬತೀ – ಹಿಂದೀ ಕೋಶ'ದ ಅಗತ್ಯ ಬಹಳವಿತ್ತು. ಟಿಬೇಟ್ ನಮ್ಮ ನೆರೆ ದೇಶ. ಸಾವಿರದ ಮುನ್ನೂರು ವರ್ಷಗಳಿಂದ ಅದರೊಡನೆ ನಮಗೆ ನಿಕಟ ಸಂಬಂಧವಿದೆ. ನಮ್ಮ ಐದು ಸಾವಿರ ಗ್ರಂಥಗಳನ್ನು ಅನುವಾದ ಮಾಡಿ ಟಿಬೇಟ್ ಸುರಕ್ಷಿತವಾಗಿ ಇಟ್ಟಿದೆ. ಇವುಗಳಲ್ಲಿ ಅನೇಕವು ತಮ್ಮ ಮೂಲ ಸಂಸ್ಕೃತ ಅಥವಾ ಅಪಭ್ರಂಶಗಳಲ್ಲಿ ಸಿಗುತ್ತಿಲ್ಲ. ನಮ್ಮ ಸಾಂಸ್ಕೃತಿಕ ಇತಿಹಾಸಕ್ಕೆ ಇವು ಅಗತ್ಯ ಬೇಕಾದಂಥವು. ಇವುಗಳಲ್ಲಿ ಕೆಲವನ್ನು ಸಂಸ್ಕೃತಕ್ಕೆ ಅಥವಾ ಹಿಂದಿಗೆ ಅನುವಾದಿಸಬೇಕಾದೀತು. ಆ ಕೆಲಸಕ್ಕೆ ಈ ಕೋಶವೂ ಸಹಾಯಕವಾಗುವುದು, ಯಾಕೆಂದರೆ ಇಲ್ಲಿ ತತ್ಸಮ ಶಬ್ದಗಳ ಪ್ರಯೋಗವೂ ಇದೆ' ಎಂದು ಬರೆದಿದ್ದಾರೆ. ಆದರೆ ಇದರ ದ್ವಿತೀಯ ಭಾಗ ಯಾವಾಗ ಪ್ರಕಟವಾದೀತು?

'ಪಾಲಿ ಕಾವ್ಯಧಾರಾ'ಕ್ಕಾಗಿ ವಿದ್ಯಾಲಂಕಾರದಲ್ಲಿ ಸ್ರೋತ-ಗ್ರಂಥ ಸಹಜವಾಗಿ ಲಭ್ಯವಿತ್ತು. ಆದುದರಿಂದ ರಾಹುಲರು ಅದನ್ನು ಅಲ್ಲಿ ಬರೆದುಬಿಡುವದೇ ಸರಿ ಎಂದುಕೊಂಡರು. ಆರಂಭಿಸಿದ ಕೈಯಲ್ಲೇ ವ್ಯಾಪಕ ದೃಷ್ಟಿಯಿಂದ 'ಪಾಲಿ ಸಾಹಿತ್ಯ ಕಾ ಇತಿಹಾಸ್' ಅನ್ನೂ ಬರೆದು ಬಿಟ್ಟರು. ಇದು ಉತ್ತರ ಪ್ರದೇಶದ ಹಿಂದೀ ಸಮಿತಿಯಿಂದ ರಾಹುಲರ ನಿಧನದ ಕೊಂಚ ಸಮಯದ ನಂತರ ಪ್ರಕಟವಾಯಿತು.

'ಪಾಲಿ ಕಾವ್ಯಧಾರಾ'ವನ್ನು ಸಾಹಿತ್ಯ ಅಕಾಡೆಮಿ ಪ್ರಕಟಣೆಗೆ ಪಡೆದುಕೊಂಡಿತ್ತು. ಆದರೆ ಕೊನೆಗೂ ಅಲ್ಲಿಂದ ಪ್ರಕಟವಾಗಲಿಲ್ಲ, ಇದುವರೆಗೂ ಅಪ್ರಕಟಿತವಾಗಿಯೇ ಇದೆ.

ಶ್ರೀಲಂಕಾದಲ್ಲಿದ್ದಾಗ ರಾಹುಲರು 'ಸಿಂಹಲ ಕೇ ವೀರ ಪುರುಷ' ಎಂಬ ಒಂದು ಪುಸ್ತಕವನ್ನು ಬರೆದರು.

ಚಳಿಗಾಲದ ರಜೆಯಲ್ಲಿ ಜಯ, ಜೇತಾ ಮತ್ತು ಪತ್ನಿ ಕಮಲಾ ಎರಡು ಬಾರಿ ಶ್ರೀಲಂಕೆಗೆ ಬಂದರೆ ರಾಹುಲರೂ ವಿಶ್ವವಿದ್ಯಾಲಯದ 1960ರ ಬೇಸಗೆ ರಜೆಯಲ್ಲಿ ಕೆಲತಿಂಗಳು ಡಾರ್ಜಿಲಿಂಗ್‌ಗೆ ಹೋಗಿ ಉಳಿದುಕೊಂಡರು. ಡಾರ್ಜಿಲಿಂಗ್‌ನಲ್ಲಿ ಇದ್ದ ಕಾಲದಲ್ಲಿ ಸಂಚಾರಿ ಜಯವರ್ಧನರೊಂದಿಗೆ ಭೇಟಿಯಾಯಿತು. ಅವರ ಜೀವನ ಚರಿತ್ರೆಯ ಟಿಪ್ಪಣಿ ಮಾಡಿಕೊಂಡು 'ಘುಮಕ್ಕಡ್ ಜಯವರ್ಧನ್' ಎಂಬ ಪುಸ್ತಕ ಬರೆದುಹಾಕಿದರು.

ಡಾರ್ಜಿಲಿಂಗ್‌ನ 'ರಾಹುಲ ನಿವಾಸ'ದ ಸಮೀಪದಲ್ಲಿಯೇ ಕ್ಯಾಪ್ಟನ್‌ಲಾಲ್‌ರ ಮನೆಯಿತ್ತು. ಹೆಚ್ಚಾಗಿ ರಾಹುಲರನ್ನು ಭೇಟಿಯಾಗುತ್ತಿದ್ದ ಅವರ ಜೀವನ ಕಥೆ ಸ್ವಾರಸ್ಯವಾಗಿ ಕಂಡು 'ಕಪ್ತಾನ್ ಲಾಲ್' ಪುಸ್ತಕವನ್ನು ಬರೆದರು. ಇದೇ ಬಹುಶಃ ಕಟ್ಟ ಕಡೆಯ ಪುಸ್ತಕ.

ರಾಹುಲಜೀ ಶ್ರೀಲಂಕೆಯಿಂದ ಪ್ರಾಯಃ ಪ್ರತಿದಿನವೂ ಎಂಬಂತೆ ಜಯಾ-ಜೇತರಿಗೆ ಪತ್ರ ಬರೆಯುತ್ತಿದ್ದರು. ಅದರಲ್ಲಿ ಮಾನವ ವಿಕಾಸದ ಕಥೆ ಇರುತ್ತಿತ್ತು. ಆ ಪತ್ರಗಳು ಮಾನವ ಕುಲ ವಿಕಾಸದ ವಿಚಾರದಲ್ಲಿ ರೋಚಕ ಕಥೆಗಳಾದುವು. ಬಳಿಕ 'ಮಾನವ ಕೀ ಕಹಾನೀ' ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಹೊರಬಂದಿತು.

1960ರ ಉತ್ತರಾರ್ಧದಿಂದ ರಾಹುಲರ ಸ್ಮೃತಿ ಕ್ಷೀಣಿಸ ತೊಡಗಿತು ಎಂದು ಕಾಣುತ್ತದೆ. ಆ ವರ್ಷ ಬೇಸಗೆ ರಜೆಯಲ್ಲಿ ಡಾರ್ಜಿಲಿಂಗ್‌ಗೆ ಹೋದ ಮೇಲೆ ಆನಂದಜೀಗೆ 'ಸ್ಮೃತಿ ಕೊಂಚ ಸುಧಾರಿಸಿದೆ' ಎಂದು ಪತ್ರ ಬರೆದಿದ್ದಾರೆ. ಮತ್ತೆ ಅದೇ ನವೆಂಬರ ಎರಡರಂದು ವಿದ್ಯಾಲಂಕಾರದಿಂದ, ಅಲಹಾಬಾದಿನಲ್ಲಿದ್ದ ಆನಂದಜೀಗೆ ಬರೆದ ಪತ್ರದಲ್ಲಿ 'ನನ್ನ ಆರೋಗ್ಯ ಚೆನ್ನಾಗಿದೆ. ಸ್ಮರಣ ಶಕ್ತಿ ತುಸು ಸುಧಾರಿಸಿದೆ. ಕ್ಲಾಸಿಗೆ ಹೋಗಿ ಪಾಠ ಮಾಡಬಲ್ಲೆ' ಎಂದು ಬರೆದಿದ್ದಾರೆ. ಸ್ಮೃತಿ ಕ್ಷೀಣಿಸುತ್ತಾ ಇರುವ ಬಗ್ಗೆ ಮುಂದಿನ ಪತ್ರಗಳಲ್ಲಿ ದೂರಿಕೊಂಡಿದ್ದಾರೆ. ಸ್ಮೃತಿ ಲೋಪದ ಕೊನೆಯ ಆಘಾತದ ಪೀಠಿಕೆ ಹೀಗೆ ಮೊದಲಿಂದ ಸಿದ್ಧವಾಗುತ್ತ ಇತ್ತು.

1961ರ ಶಿಶಿರದಲ್ಲಿ ಜಯಾ, ಜೇತಾ ಮತ್ತು ಕಮಲಾ ಶ್ರೀಲಂಕೆಯಲ್ಲಿದ್ದರು. ಅವರೆಲ್ಲ ತನ್ನ ಜೊತೆಯಲ್ಲಿ ಶ್ರೀಲಂಕೆಯಲ್ಲೇ ಇರಲಿ ಎಂದು ರಾಹುಲರು ಬಯಸುತ್ತಿದ್ದರು. ಆದರೆ ಕಮಲಾ ಸ್ಪಷ್ಟವಾಗಿ ನಿರಾಕರಿಸಿದರು. ಫೆಬ್ರವರಿಯಲ್ಲಿ ಮಕ್ಕಳು ಭಾರತಕ್ಕೆ ಹಿಂದಿರುಗಿದರು. ರಾಹುಲರು ಮತ್ತೆ ಬಿರುಸಿನಿಂದ ತಮ್ಮ ಕೆಲಸ ಆರಂಭಿಸಿದರು. ಆದರೆ ಆರೋಗ್ಯ ಸಾಕಷ್ಟು ಕೆಟ್ಟಿತ್ತು. ದೇಹ ಮಾತ್ರವಲ್ಲ ನೆನಪಿನ ಶಕ್ತಿಯೂ ಸಹಕರಿಸುತ್ತಿರಲಿಲ್ಲ. ಜಯಾ-ಜೇತಾರ ಬಳಿಗೆ ಹೋಗುವುದೇ ಉಚಿತವೆನಿಸಿತು. ಹೇಗೋ ಅಂತೂ ಕಲ್ಕತ್ತಾ ಮುಟ್ಟಿದರು. ಅಲ್ಲಿ 'ಡಾಬರ್ ಹೌಸ್'ನಲ್ಲಿ ತಂಗಿದರು. ವೈದ್ಯ ತಪಾಸಣೆ ನಡೆಯಿತು. ಮಾರ್ಚ್ 31ರಂದು ಡಾರ್ಜಿಲಿಂಗ್ ತಲುಪಿದರು.

ಜುಲೈ ಆರಂಭದ ವರೆಗೆ, ಪೂರ್ತಿ ಮೂರು ತಿಂಗಳು ರಾಹುಲರು ಡಾರ್ಜಿಲಿಂಗ್‌ನಲ್ಲಿಯೇ ಇದ್ದರು. ಆ ಅವಧಿಯಲ್ಲಿ ಪ್ರತಿ ಮೂರು - ನಾಲ್ಕು ದಿನಗಳಿಗೊಮ್ಮೆ ಸ್ವಹಸ್ತದಿಂದಲೇ ಆನಂದಜೀಯವರಿಗೆ ಪತ್ರ ಬರೆಯುತ್ತಿದ್ದರು.

ಹಿಂದೀ ಸಾಹಿತ್ಯ ಸಮ್ಮೇಳನ (ಪ್ರಯಾಗ) ಯಾವುದಾದರೂ (ಬಹುಶಃ ಧರ್ಮ) ವಿಶ್ವಕೋಶ ನಿರ್ಮಾಣದ ಕಾರ್ಯವನ್ನು, ಸರಕಾರದ ಅನುದಾನದಿಂದ ಆರಂಭಿಸ ಹೊರಟಿತ್ತು. ಅದರ ಜವಾಬ್ದಾರಿಯನ್ನು ರಾಹುಲರಿಗೆ ಒಪ್ಪಿಸುವ ಮಾತುಕತೆ ನಡೆಯುತ್ತಿತ್ತು. ರಾಹುಲರು ಅದಕ್ಕಾಗಿ ತನ್ನನ್ನು ತಯಾರಿಗೊಳಿಸಿಕೊಂಡಿದ್ದರು ಕೂಡಾ. ಡಾರ್ಜಿಲಿಂಗ್ ತಲುಪಿದ ಮೇಲೆ ಈ ಹೊಸ ಜವಾಬ್ದಾರಿಯನ್ನು ಒಪ್ಪಿಕೊಳ್ಳುವ ಬಗ್ಗೆ ಚಿಂತಿಸುತ್ತಲೇ ಇದ್ದರು. ಆದರೆ ಸುಮಾರು ಒಂದು ತಿಂಗಳ ಬಳಿಕ 'ಸಮ್ಮೇಳನದ ಯೋಜನೆ ಕನಸಿನ ತಿನಿಸಾಯಿತು. ಸರಕಾರ ಅನುದಾನವನ್ನು ಈ ತನಕ ಕೊಟ್ಟೂ ಇಲ್ಲ, ಕೊಡುವ ಆಸೆಯೂ ಇಲ್ಲ' ಎಂಬುದು ಅವರಿಗೆ ಸ್ಪಷ್ಟವಾಯಿತು.

ರಾಹುಲರು ಏಪ್ರಿಲ್ 7ರಂದು 'ಮೂತ್ರಕೋಶದ ಅಪಾಯದ ಸ್ಥಿತಿ ಕುರಿತು ಡಾಕ್ಟರು ಹೇಳುತ್ತಾರೆ. ಆದರೆ ಜೀವನವೇ ಒಂದು ಅಪಾಯ' ಎಂದು ಬರೆದ ಪತ್ರದಲ್ಲಿಯೇ ರಾಷ್ಟ್ರಪತಿಗಳ ಕಡೆಯಿಂದ ತಮ್ಮ ದೇಹಸ್ಥಿತಿ ಬಗ್ಗೆ ವಿಚಾರಿಸಿಕೊಂಡುಬಂದಿದ್ದರೆಂದೂ ತಿಳಿಸಿದ್ದಾರೆ. ಏಪ್ರಿಲ್ 14ರಂದು ಆನಂದಜೀ ಅವರಿಗೆ ಬರೆದ ಪತ್ರದಲ್ಲಿ 'ಇಲ್ಲಿ ನಿನ್ನೆ ಒಬ್ಬ ಪ್ರಸಿದ್ಧ ಇಂಗ್ಲಿಷ್ ಮಹಿಳಾ ವೈದ್ಯೆ ಬಂದು ನೋಡಿದಳು. ಹೈ ಬ್ಲಡ್ ಪ್ರೆಶರ್ ಇದೆ. ಕಿಡ್ನಿ ಕೂಡ ಕೆಟ್ಟಿದೆ. ಸಕ್ಕರೆ ನಿಯಂತ್ರಿಸಬೇಕು. ನಾಳೆ ಅವಳ ಆಸ್ಪತ್ರೆಗೆ ಹೋಗಲಿದ್ದೇನೆ.' ಎಂದಿದೆ.

ಡಾ। ಮಿಸೆಸ್ ಪೆಟರ್ಸನ್‌ರ ನರ್ಸಿಂಗ್ ಹೋಂನಲ್ಲಿ ಎಂಟು ದಿನಗಳಿದ್ದು ಹಿಂದುರುಗಿ ಮೇಲೆ ಬರೆದ ಪತ್ರ ಸಾಕಷ್ಟು ನಿರಾಶಾದಾಯಕವಾಗಿದ್ದರೆ ಆಶ್ಚರ್ಯದ ಮಾತೆಲ್ಲಿ? ಅನೇಕ ಪರೀಕ್ಷೆಗಳಾದುವು. ಔಷಧಿಗಳ ಪಟ್ಟಿ, ಕಾಲಾನುಸರ ಊಟಿಸಿನ ಪಟ್ಟಿ. ರಾಹುಲರು ತಾನು ಹೇಳಿದರಿತೆ ನಡೆದುಕೊಂಡಲ್ಲಿ ಅವರು ಇನ್ನೂ ಇಪ್ಪತ್ತು ವರ್ಷ ಬದುಕುವುದು ಗ್ಯಾರಂಟಿ ಎಂದು ಡಾ। ಪೆಟರ್ಸನ್. ರಾಹುಲರಮಟ್ಟಿಗೆ ಈ ಗ್ಯಾರಂಟಿಗೆ ಯಾವ ಅರ್ಥವೂ ಇರಲಿಲ್ಲ. ಅವರು ಅದೇ ಪತ್ರದಲ್ಲಿ ಮುಂದೆ ಬರೆಯುತ್ತಾರೆ 'ಇಲ್ಲಾದರೆ ಕೇವಲ... ವಿಶ್ವಕೋಶದ ಕೆಲಸವಿತ್ತು. ಆಗಲಿಲ್ಲವೆಂದರೆ ಸಿಂಹಳದಲ್ಲಿಯೇ ಭಸ್ಮಾಂತವಾಗಲಿ. ಕಮಲಾ ಬಾರದಿದ್ದಲ್ಲಿ, ಇಂಜೆಕ್ಷನ್ ಹಾಗೂ ಮಸಾಲೆ ರಹಿತ ಊಟ ಬೇಯಿಸಿ ಹಾಕಲು ಯಾರಾದರೂ ನಡುವಯಸ್ಸಿನವರು ಸಿಕ್ಕಿದರೆ ನಾನು ಅಲ್ಲಿಗೆ ಬರುತ್ತೇನೆ.' ಮುಂದಿನ ಪತ್ರದಲ್ಲಿ 'ಮಕ್ಕಳ ಭವಿಷ್ಯ ಮತ್ತು ಚಿಕಿತ್ಸೆಯದೇ ಹೆಚ್ಚಿನ ಚಿಂತೆ....' ವಿದ್ಯಾಲಂಕಾರದಲ್ಲಿ ಬಿಟ್ಟು ಬಂದ ಪುಸ್ತಕಗಳು, ಪಾಂಡು ಲಿಪಿ, ಪ್ರತಿಗಳು ಮತ್ತು ಅನ್ಯ ಸಾಮಗ್ರಿಗಳದೂ ಚಿಂತೆಯಾಗಿತ್ತು. ಅವುಗಳ ಬಗ್ಗೆ ಆನಂದಜೀಯವರಿಗೆ ಪದೇ ಪದೇ ಬರೆಯುತ್ತಿದ್ದರು. ಮಹತ್ವಪೂರ್ಣವೆನಿಸಿದ ವಸ್ತುಗಳನ್ನು ಡಾರ್ಜಿಲಿಂಗಿಗೆ ಕಳಿಸಲು ಹೇಳುತ್ತ ಇದ್ದರು.

ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಮಕ್ಕಳ ಭವಿಷ್ಯದ ಚಿಂತೆಯೇ ಅವರನ್ನು ಕಾಡುತ್ತಿತ್ತು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ತಮ್ಮ ನಿಧನದ ನಂತರ ಪ್ರಯಾಗದಲ್ಲಿರುವ ಅವರ ಪ್ರಮುಖ ಪ್ರಕಾಶಕರು ಮಕ್ಕಳಿಗೆ ಒಂದು ದಮಡಿಯನ್ನೂ ಕೊಡುವುದಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಆದುದರಿಂದ ಅವರು ಯಾವುದಾದರೊಂದು ಶಾಶ್ವತ ವ್ಯವಸ್ಥೆಗಾಗಿ ಯೋಚಿಸುತ್ತಿದ್ದರು. ವಿದ್ಯಾಲಂಕಾರದಲ್ಲಿ ಪ್ರಾಧ್ಯಾಪನದಿಂದ ಅವರ ಬಳಿ ಕೆಲ ಸಾವಿರ ರೂಪಾಯಿ ಒಟ್ಟಾಗಿತ್ತು. ಡಾರ್ಜಿಲಿಂಗ್‌ನಲ್ಲಿ ವಿಪರೀತ ಜಾಸ್ತಿ ಬೆಲೆಗೆ, ಒಂದು ಮನೆ ಮಾರಾಟಕ್ಕಿತ್ತು. ಬಾಕಿ ಹಣವನ್ನು ಮೂರು ವರ್ಷಗಳಲ್ಲಿ ಮೂರು ಕಂತುಗಳಲ್ಲಿ ತೀರಿಸುವ ವ್ಯವಸ್ಥೆ ಮಾಡಿ ಕೊಳ್ಳುವುದು ಅಥವಾ ಸಾಲ ತೆಗೆಯುವುದು, ಮನೆ ಖರೀದಿಸಿ,

ಅದನ್ನು ಬಾಡಿಗೆಯಲ್ಲಿ ತುಂಬಿಸುವುದು. 'ಜಯಾ-ಜೇತಾರ ಭವಿಷ್ಯದ ಬಗ್ಗೆ ನಿಶ್ಚಿಂತೆಯಾಗುವುದು... ಎಂದೆಲ್ಲ ಯೋಚಿಸಿದರು.

1961ನೇ ಇಸವಿ ಜುಲೈ ಎರಡನೇ ವಾರದಲ್ಲಿ ಒಬ್ಬರೇ ಶ್ರೀಲಂಕಾಕ್ಕೆ ಹೋದರು. ಅಲ್ಲಿ ಒಂದು ತಿಂಗಳು ಮಾತ್ರ ಇರಲು ಸಾಧ್ಯವಾಯಿತು. ಆ ದಿನಗಳ ಬಗ್ಗೆ ಆನಂದಜೀ ಬರೆಯುತ್ತಾರೆ. ಆ ದಿನಗಳ ಬಗ್ಗೆ ಆನಂದಜೀ ಬರೆಯುತ್ತಾರೆ 'ಅವರಿಗೆ ಪಾಠ ಮಾಡಲು ಆಗುತ್ತಲೂ ಇರಲಿಲ್ಲ, ಪಾಠ ಮಾಡಲು ಅವರಿಗೆ ಯಾರೂ ಹೇಳಲೂ ಇಲ್ಲ. ಅವರ ಊಟ ತಿಂಡಿಗಳ ಅನುಕೂಲ ಅನಾನುಕೂಲತೆಗಳನ್ನು ಗಮನಿಸಲು ಅವರ ಒಬ್ಬ ಪರಮಮಿತ್ರರಾದ ಶ್ರೀ ಎಂ.ಕೆ ಕಪಾಡಿಯಾ ಅವರ ಮನೆಯಲ್ಲಿಯೇ ಅವರನ್ನು ಇರಿಸಿದರು. 1961ರ ಅಗಸ್ಟ್‌ನಲ್ಲಿ ಅವರು ಶ್ರೀಲಂಕೆಯಿಂದ ಹೊರಟರು ಇನ್ನೆಂದೂ ಮರಳಿ ಬಾರದಂತೆ. ನಾನು ಕಲ್ಕತ್ತೆಯವರೆಗೆ ಜೊತೆ ಹೋದೆ. ಅಲ್ಲಿಂದ ಅವರು ಒಬ್ಬರೇ ವಿಮಾನದಲ್ಲಿ ಬಾಗ್ ಡೋಗ್ರಾ (ಡಾರ್ಜಿಲಿಂಗ್)ಕ್ಕೆ ಹೊರಟು ಹೋದರು.'

ರಾಹುಲರು ತಮ್ಮ ಮಕ್ಕಳ ಬಳಿ ಹೋಗಿ ಸೇರಿಕೊಂಡರು. ಆದರೆ ಡಾರ್ಜಿಲಿಂಗ್‌ನಲ್ಲಿರಲು ಅವರಿಗಿಷ್ಟವಿರಲಿಲ್ಲ, ಕಾರಣ ಏನೇ ಇರಲಿ. ಡಾರ್ಜಿಲಿಂಗ್ ತಲುಪಿದ ಕೆಲ ದಿನಗಳ ಬಳಿಕ ಆನಂದಜೀಗೆ ಪ್ರಯಾಗ ವಿಳಾಸಕ್ಕೆ ಬರೆದಿದ್ದಾರೆ. 'ಅನಿಶ್ಚಿತ ಸ್ಥಿತಿಯಲ್ಲಿ ಮನಸ್ಸು ಚಿಂತಾಗ್ರಸ್ಥವಾಗಿದೆ. ಲಂಕೆಗೆ ಹೋಗಬೇಕೆನಿಸುತ್ತಿದೆ' ಸೆಪ್ಟೆಂಬರ್ 23 ರಂದು ಬರೆದದ್ದು: ಇಲ್ಲಿಗೆ ಬಂದು 23 ದಿನಗಳಾದರೂ ಆರು ತಿಂಗಳಾದಂತೆ ಕಾಣುತ್ತಿದೆ. ಈ ದಿನಗಳನ್ನೆಲ್ಲಾ ಬಹಳ ಚಿಂತೆಯಲ್ಲಿ ಕಳೆಯುತ್ತಿದ್ದೇನೆ. ಇಬ್ಬರು ಮಕ್ಕಳ ಭವಿಷ್ಯವಿದೆ. ಸಮ್ಮೇಳನದ ವಿಶ್ವಕೋಶದ ಕಾರ್ಯ ಇನ್ನೂ ಅನಿಶ್ಚಿತವಾಗಿದೆ. ಡಾ| ಉದಯನಾರಾಯಣ ತಿವಾರಿಯವರನ್ನು ಕೇಳಿ. ನಿಶ್ಚಯವಾಗಿಲ್ಲವಾದರೆ ನಿಮ್ಮೊಡನೆಯೇ ಶ್ರೀಲಂಕೆಗೆ ಬಂದು ಬಿಡುವೆ. ಕಡೇ ಪಕ್ಷ ಜೀವನವಿಡೀ ಮಕ್ಕಳಿಗಾಗಿ ತಿಂಗಳಿಗೆ 750 ರುಪಾಯಿ ಕಳಿಸುತ್ತಾ ಇರುತ್ತೇನೆ, ಮತ್ತೆ ಚಿಂತೆ ಇರುವುದಿಲ್ಲ. 'ಮುಂದೆ ಗಯಿೊ ಜಬ್ ಅಖಂಡಿಯಾಂ ತಬ್ ಸೋಜ್ ಸಬ್ ಆನಂದ್ ಹೈ' ಕಮಲಾ, ಲಂಕೆಗೆ ಹೋಗದೆ, ತನ್ನ ಹಟ ಸಾಧಿಸಿಕೊಂಡಿರಲಿ. ಆದರೆ ನಾನಂತೂ ಕಡೆತನಕ ಅಲ್ಲಿರಲು ಹೊರಟು ಬರುತ್ತೇನೆ. ಪ್ರಯಾಗಕ್ಕಾಗಲೀ ಲಂಕೆಗಾಗಲೀ ಹೋಗಿಬಿಡುವುದೇ ನನ್ನ ಚಿಂತೆಗೆ ಮದ್ದು. ಆರೋಗ್ಯ ಹಾಗೆಯೇ ಇದೆ. ನೀವು ಇಲ್ಲಿಗೆ ಬಂದರೆ ನನ್ನ ಜೊತೆಗೇ ಹೊರಡುವ ಪ್ರೋಗ್ರಾಂ ಹಾಕಿ ಕೊಳ್ಳಿ' – ಆನಂದಜೀ ಆಗ ರಜೆಗೆಂದು ಭಾರತಕ್ಕೆ ಬಂದಿದ್ದರು.

ಮತ್ತೆ ನವೆಂಬರ್ 11ರ ಅಂದರೆ ಸ್ಮೃತಿ ಲೋಪಕ್ಕೆ ಸರಿಯಾಗಿ ಒಂದು ತಿಂಗಳ ಹಿಂದೆ ಕೈಯಲ್ಲೇ ಬರೆದ ಪತ್ರ 'ಪ್ರಿಯ ಆನಂದಜೀ, ನಾನು ಅಲ್ಲಿನ ರಿಜಿಸ್ಟ್ರಾರ್‌ಗೆ 1962 ಏಪ್ರಿಲ್ ವರೆಗೆ ರಜೆಗೆ ಬರೆದು ಹಾಕಿದ್ದೇನೆ. ಫೆಬ್ರವರಿವರೆಗೆ ಕಾದು, ಪ್ರಯಾಗದ ಆಸೆ ಬಿಟ್ಟು, ಲಂಕೆಗೆ ಶಾಶ್ವತವಾಗಿ ಬಂದು ಬಿಡುತ್ತೇನೆ. ಮಕ್ಕಳು ಆಗಾಗ ಅಲ್ಲಿಗೇ ನೋಡಲು ಬರುತ್ತಾರೆ. ನಾನು ಜೀವಮಾನವಿಡೀ ಅಲ್ಲಿಯೇ ಇದ್ದು ಬಿಡುತ್ತೇನೆ. ಇಲ್ಲಿನ ಡಾಕ್ಟರರೂ ನಾನೂ ಇನ್ನೂ ಇಪ್ಪತ್ತು ವರ್ಷ ಬದುಕುವೆನೆಂಬ ಮಾತಾಡಿದ್ದಾರೆ. ನನಗೆ ಹರ್ಷ-ಶೋಕ ಎರಡೂ ಇಲ್ಲ. ಮಕ್ಕಳಿಗೆ ವರ್ಷಕ್ಕೆ ನಾನು ಒಂಭತ್ತು ಸಾವಿರ ಕಳಿಸಲು ಆಗಬೇಕೆಂದು ಬಯಸುತ್ತಿದ್ದೇನೆ.'

ಆನಂದಜೀಗೆ ಅವರು ಸ್ವಹಸ್ತದಿಂದಲೇ ಪತ್ರ ಬರೆಯುತ್ತಿದ್ದರು. ಈಚೆಗೆ ಅವರ ಅಕ್ಷರ ಓದಲು ಕಷ್ಟವಾಗುವಷ್ಟು ಕೆಟ್ಟಿತ್ತು. ಆದ್ದರಿಂದ ಆನಂದಜೀ ರಾಹುಲರಿಗೆ ಬರೆದೂ ಇದ್ದರು. 'ಆಗದಿದ್ದರೆ

ಕಾಗದವನ್ನು ಟೈಪ್ ಮಾಡಿಸಿಯೆ ಕಳಿಸಿ' ಅದಕ್ಕೆ ರಾಹುಲರ ಉತ್ತರ: 'ಎಲ್ಲಿಯವರೆಗೆ ನೀವು ನನ್ನ ಕಾಗದ ಓದುತ್ತ ಇರುತ್ತೀರೋ ಸ್ವಹಸ್ತದಿಂದಲೇ ಬರೆಯುತ್ತ ಇರುತ್ತೇನೆ.'

ರಾಹುಲರು ಡಾರ್ಜಿಲಿಂಗ್‌ನಿಂದ 1961ರ ನವೆಂಬರ್ 18 ರಂದು ಆನಂದಜೀಯವರಿಗೆ ಬರೆದ ಕೊನೆಯ ಪತ್ರ ನನ್ನ ಬಳಿ ಇದೆ. ಅದು ಅವರ ಹಸ್ತಾಕ್ಷರದಲ್ಲಿ ಇಲ್ಲ. ಟೈಪ್ ಆಗಿದೆ. 'ಪ್ರಿಯ ಆನಂದಜೀ, ನಿಮ್ಮ ಪತ್ರ ತಲುಪಿತು. ನನಗಿನ್ನೂ ಏನೂ ನಿಶ್ಚಯಿಸಿಕೊಳ್ಳಲು ಆಗಿಲ್ಲ. ಸ್ಮರಣ ಶಕ್ತಿ ಕುಂದುತ್ತಿದೆ. ಸಮಯ ಬಂತು ಅಂತ ಕಾಣುತ್ತದೆ..ಮತ್ತಿನ್ನೇನು ಹೇಳಲಿ....'

# ಸ್ಮೃತಿ ಲೋಪ

ರಾಹುಲಜೀ ಮಲಗುವ ಮುಂಚೆ ನಿಯಮಿತವಾಗಿ ಡೈರಿ ಬರೆಯುತ್ತಿದ್ದರು. 1927ರಿಂದಲೂ ಅವರು ತಪ್ಪದೆ ಡೈರಿ ಬರೆದಿದ್ದಾರೆಂದು ಆನಂದಜೀ ಹೇಳುತ್ತಾರೆ. ಡೈರಿ ಬರೆಯಲು ಸುರು ಮಾಡಿದ್ದು 1922ರಿಂದಲೇ ಎಂದು ತಿಳಿದು ಬಂದಿದೆ. ಆದರೆ ಅವರ ಎಲ್ಲ ಡೈರಿಗಳೂ ಇವತ್ತು 'ರಾಹುಲ ಸಂಗ್ರಹಾಲಯ'ದಲ್ಲಿ ಸಿಗುವುದಿಲ್ಲ. ಕೆಲ ವರ್ಷದ ಡೈರಿಗಳು ಉದಯನಾರಾಯಣ ತಿವಾರಿಯವರ ಬಳಿ ಉಳಿದಿವೆ.

ರಾಹುಲರಿಗೆ ಅತ್ಯಂತ ಆತ್ಮೀಯ ಸಂಬಂಧವಿದ್ದ, ಅವರು ಮನಸ್ಸು ಬಿಚ್ಚಿ ಮಾತಾಡುತ್ತಿದ್ದ, ಕೆಲವೇ ಕೆಲವು ಮಂದಿಯಲ್ಲಿ ಒಬ್ಬರು ಪಂಡಿತ ಉದಯನಾರಾಯಣ ತಿವಾರಿ. ತಿವಾರಿಯವರು ಕೂಡ ಬರೆದಿದ್ದಾರೆ 'ಅವರ ಗುಣದೋಷಗಳನ್ನು ನಾನು ಹತ್ತಿರದಿಂದ ನೋಡಿದ್ದೆ. ಆದರೆ ಅವರು ಸದೈವ ನನ್ನ ಶ್ರದ್ಧೆಗೆ ಯೋಗ್ಯರಾಗಿಯೇ ಉಳಿದರು. ಎಲ್ಲಿಯೇ ಇರುತ್ತಿದ್ದರೂ, ನನಗೆ ಬರೆಯುತ್ತಲೇ ಇರುತ್ತಿದ್ದರು. ಭಾಗ್ಯವಶಾತ್ ಆ ಪತ್ರಗಳು ಇವತ್ತು ನನ್ನ ಬಳಿ ಸುರಕ್ಷಿತವಿವೆ.'

ಆದರೆ ನನಗೆ ಇತ್ತೀಚೆಗೆ ತಿಳಿದು ಬಂದಿರುವ ಪ್ರಕಾರ ಆ ಎಲ್ಲ ಮಹತ್ವಪೂರ್ಣ ಪತ್ರಗಳು ಇವತ್ತು ಸುರಕ್ಷಿತವಾಗಿ ಇಲ್ಲ. ರಾಹುಲರು ವಿಭಿನ್ನ ವ್ಯಕ್ತಿಗಳಿಗೆ ಬರೆದ ಸಾವಿರಾರು ಪತ್ರಗಳನ್ನು ರಕ್ಷಿಸಿಡುವ ವ್ಯವಸ್ಥೆ ಅಗತ್ಯವಾಗಿ ಆಗಬೇಕು. ಸ್ವತಃ ಅವರಿಗೇ ಪತ್ರಗಳ ಪ್ರಾಮುಖ್ಯತೆಯ ಅರಿವಿತ್ತು. ತನ್ನ ಬಿಡುವಿಲ್ಲದ ಹಾಗೂ ಅಲೆಮಾರಿ ಜೀವನದಲ್ಲಿಯೂ ಅವರು ಮಿತ್ರರ ಮಹತ್ವಪುರ್ಣ ಪತ್ರಗಳನ್ನು ಅಂತಿಮ ಕ್ಷಣದವರೆಗೆ ತಮ್ಮ ಬಳಿ ಸುರಕ್ಷಿತವಾಗಿ ಇಟ್ಟುಕೊಂಡಿದ್ದರು.

1961ರ ನವೆಂಬರ್ 18ರಂದು ಆನಂದಜೀ ಅವರಿಗೆ ಬರೆದ ಕೊನೆಯ ಪತ್ರದಿಂದ ತಮ್ಮ ಸ್ಮರಣ ಶಕ್ತಿ ಕೈಕೊಡುತ್ತಿರುವ ಬಗ್ಗೆ ಅವರಿಗೆ ಸುಳಿವು ಸಿಕ್ಕಿದೆ ಎಂಬುದು ತಿಳಿಯುತ್ತದೆ. ಆದರೂ ಅವರು ಸಕುಟುಂಬ ಕಲ್ಕತ್ತೆಗೆ ಹೋಗುವ ಕಾರ್ಯಕ್ರಮ ಹಾಕಿಕೊಂಡರು. ಅಲ್ಲಿ ಪಂಡಿತ ಕಿಶೋರೀದಾಸ ವಾಜಪೇಯಿ ಅವರ ಸಮ್ಮಾನಾರ್ಥ ಒಂದು ಸಮಾರಂಭವಿತ್ತು. ಆನಂದಜೀ ಬರೆಯುತ್ತಾರೆ. '1961ರ ಡಿಸೆಂಬರ್ 8,ರಂದು ಅವರು ಡಾರ್ಜಿಲಿಂಗ್‌ನಿಂದ ಕಲ್ಕತ್ತೆಗೆ ಹೊರಟಾಗ ತಮ್ಮ ಡೈರಿಯಲ್ಲಿ ಕೊನೆಯ ಪುಟ ಬರೆದರು. 'ಇವತ್ತು ಬೆಳಿಗ್ಗೆ ಐದು ಗಂಟೆಗೆ ಮನೆಯಿಂದ ಹೊರಡುತ್ತಿದ್ದೇವೆ. ಮಧ್ಯಾಹ್ನದ ಹೊತ್ತಿಗೆ ವಿಮಾನ ನಿಲ್ದಾಣದಲ್ಲಿ. ಡೈರಿ ಬರೆಯುವುದನ್ನು ಬಿಡುತ್ತಿದ್ದೇನೆ'.

ಆದರೂ 1962ರ ಡೈರಿ ಕೊಂಡು ಕೊಂಡರು. ಅದರಲ್ಲಿ 61ರ ಡಿಸೆಂಬರ್ 10ರಂದು ಹಸ್ತಾಕ್ಷರ ಬರೆದರು. ಮರುದಿನ ಡಿಸೆಂಬರ್ 11, ರಾಹುಲರಿಗೆ ಕಲ್ಕತ್ತಾದಲ್ಲಿಯೇ ಸ್ಮೃತಿ ಲೋಪದ ಆಘಾತ. ಘಟನೆಯ ಸಾಕ್ಷಿ ಮಗಳು ಜಯಾ ಹೇಳುತ್ತಾಳೆ, ' ಇದೇ ಗೋಷ್ಠಿಯ ದಿನಗಳ ಮಾತು. ಒಂದು ದಿನ, ಪಾಪಾನ ಸ್ನೇಹಿತರು ಅವರ ಸುತ್ತಲೂ ಕುಳಿತಿದ್ದರು. ರಾತ್ರಿ ಬಹಳ ಹೊತ್ತಿನ ಮೇಲೆ ಎಲ್ಲ ಹೊರಟು

ಹೋದರು. ಮರುದಿನ ಬೆಳಗ್ಗೆ ನಾವು ಕಣ್ತೆರೆದಾಗ ಅಮ್ಮ ಜೋರು ಜೋರಾಗಿ ಪಾಪಾನೊಂದಿಗೆ ಮಾತಾಡುತ್ತಿದ್ದಾಳೆ. ಅವರನ್ನು ಹಿಡಿದು ಕೊಂಡು ಬಚ್ಚಲಿಗೆ ಕರೆದೊಯ್ಯುತ್ತಿದ್ದಾಳೆ, ಮತ್ತು ಪಾಪಾನಿಗೆ ಏನೂ ಅರ್ಥ ಮಾಡಿಕೊಳ್ಳಲು ಆಗುತ್ತಿಲ್ಲ.'

ಇನ್ನು ರಾಹುಲರ ಶೇಷ ಜೀವನ 'ಸ್ಮೃತಿ ಲೋಪ'ದ ಕರುಣ ಕಥೆ ಮಾತ್ರ. ಅವರನ್ನು ಕಲ್ಕತ್ತಾದ ಒಂದು ಆಸ್ಪತ್ರೆಗೆ ಸೇರಿಸಿದರು. ಅಲ್ಲಿ ಅನೇಕ ತಿಂಗಳು ಚಿಕಿತ್ಸೆ ನಡೆಯಿತು. ಅತ್ಯುತ್ತಮ ಚಿಕಿತ್ಸೆಯ ವ್ಯವಸ್ಥೆಯಾದರೂ ಏನೂ ಪ್ರಯೋಜನವಾಗಲಿಲ್ಲ. ಜಯಾ–ಜೇತಾ ಅವರ ಶಾಲೆ ಪ್ರಾರಂಭವಾಗುವ ಸಮಯ ಬಂತಾಗಿ ಅವರು ಡಾರ್ಜಿಲಿಂಗಿಗೆ ಹೊರಟು ಹೋದರು. ಅವರ ತಾಯಿ ರಾಹುಲರ ಬಳಿಗೆ ವಾಪಸಾಗಿ ಅವರ ಜೊತೆಗೆ ಉಳಿದುಕೊಂಡಳು.

ಈಗ ಯಾರನ್ನು ಗುರುತು ಹಿಡಿಯಲು ಅವರಿಂದ ಆಗುತ್ತಿರಲಿಲ್ಲ. ಎಲ್ಲರಿಗೂ 'ಭೈಯಾ' ಎನ್ನುತ್ತಿದ್ದರು. ಪತ್ನಿಯನ್ನು ಸಹ ಹಾಗೆಯೇ ಕರೆಯುತ್ತಿದ್ದರು. ನೋಡಲು ಹೋದವರಿಗೆ ಚಹಾ ಕುಡಿಸಲು ಹೇಳುತ್ತಿದ್ದರು. ಆದರೆ ತಮ್ಮ ಹಳೆಯ ಮಿತ್ರರ ಹಾಗೂ ಪರಿಚಿತರ ಗುರುತನ್ನು ಸುಮಾರಾಗಿ ಹಿಡಿಯುತ್ತಿದ್ದರಂತೆ.

ಸ್ಮೃತಿಲೋಪದ ಆ ದಿನಗಳಲ್ಲಿಯೇ ಶ್ರೀಲಂಕೆಯ ವಿದ್ಯಾಲಂಕಾರ ವಿಶ್ವವಿದ್ಯಾಲಯ ಅವರಿಗೆ 'ಸಾಹಿತ್ಯ ಚಕ್ರವರ್ತಿ' (ಡಿ.ಲಿಟ್.) ಉಪಾಧಿ ಪ್ರದಾನ ಮಾಡಿತು. ಭಾರತ ಸರಕಾರ ಅವರನ್ನು 'ಪದ್ಮಭೂಷಣ' ಬಿರುದು ಕೊಟ್ಟು ಸಮ್ಮಾನಿಸಿತು. ಆದರೆ ಈ ಸಮ್ಮಾನ ಹಾಗೂ ಉಪಾಧಿಗಳಿಗೆ ರಾಹುಲರಲ್ಲಿ ಈಗ ಯಾವ ಅರ್ಥವೂ ಇರಲಿಲ್ಲ.

ಸೋವಿಯತ್ ರಷ್ಯಾದಲ್ಲಿ ಇದಕ್ಕಿಂತ ಉತ್ತಮ ಚಿಕಿತ್ಸೆ ದೊರೆಯಬಹುದೇನೋ ಎಂದು ಯೋಚಿಸಿ ಅವರನ್ನು ಮಾಸ್ಕೋಗೆ ಕರೆ ತಂದರು. ಪತ್ನಿಯೂ ಜೊತೆಗಿದ್ದರು. ಅಲ್ಲಿನ ಒಂದು ಆಸ್ಪತ್ರೆಯಲ್ಲಿ ಸುಮಾರು ಏಳುತಿಂಗಳವರೆಗೆ ಶುಶ್ರೂಷೆ ನಡೆಯಿತು. ಆದರೆ ಏನೇನೂ ಪ್ರಯೋಜನವಾಗಲಿಲ್ಲ. ಆನಂದಜೀ ಬರೆಯುತ್ತಾರೆ. 'ಪ್ರಪಂಚದಲ್ಲಿ ಎಲ್ಲ ರೋಗಗಳಿಗೆ ಔಷಧಿ ಇದೆ. ಎಲ್ಲ 'ರೋಗಿಗಳಿಗೆ' ಎಲ್ಲಿದೆ?

ರಾಹುಲರು ಮಾಸ್ಕೋ ಆಸ್ಪತ್ರೆಯಲ್ಲಿದ್ದಾಗ ಅವರ ರಷ್ಯನ್ ಪತ್ನಿ ಮತ್ತು ಪುತ್ರ ಇಗೋರ್ ಅವರನ್ನು ನೋಡಲು ಬಂದಿದ್ದರು.

ರಷ್ಯಾದಲ್ಲಿಯೂ ವಿಶೇಷ ಪರಿಣಾಮ ಸಿಗದೆ ಅವರು ಭಾರತಕ್ಕೆ ಹಿಂದಿರುಗಿ 1963ರ ಮಾರ್ಚ್ 23ರಂದು ಡಾರ್ಜಿಲಿಂಗಿಗೆ ಮರಳಿದರು. ಜಯಾ,'ದೂರದಿಂದ ನೋಡಿದರೆ ಅವರು ಹಿಂದಿನಂತೆ ಸಂಪೂರ್ಣ ಆರೋಗ್ಯವಂತರಾಗಿ ಕಾಣುತ್ತಿದ್ದರು. ಆದರೆ ಹತ್ತಿರ ಹೋದರೆ ಅವರ ಮಿದುಳಿನ ಸ್ಥಿತಿ ತಿಳಿದು ಬಿಡುತ್ತಿತ್ತು.' ಎನ್ನುತ್ತಾಳೆ.

1963ರ ಏಪ್ರಿಲ್ 9, ರಾಹುಲರ ಹುಟ್ಟಿದ ದಿನ. ಆ ದಿನಕ್ಕೆ ಅವರಿಗೆ ಪೂರ್ತಿ 70 ವರ್ಷ ತುಂಬಿತು. ಅಂದು ಅನೇಕರು ಶುಭಾಶಯ ಕೋರಲು ಬಂದರು. ಅದೇ ರಾತ್ರಿ ಅವರ ಆರೋಗ್ಯ ಇನ್ನೂ ಕೆಟ್ಟಿತು. ಮರುದಿನ ಆಸ್ಪತ್ರೆಗೆ ಕೊಂಡು ಹೋದರು. ಪ್ರಜ್ಞೆ ಇರಲಿಲ್ಲ. ನಡುವೆ ಕೊಂಚ ಹೊತ್ತು ಕಣ್ಣು ತೆರೆದರು. ಪತ್ನಿ ಪಕ್ಕದಲ್ಲಿಯೇ ಇದ್ದರು. ಅವರ ಹಳೆಯ ಪರಿಚಯದ ನೇವಾರ (ನೇಪಾಳೀಯರಲ್ಲಿ ಒಂದು ಪುರಾತನ ಜಾತಿ) ಭಿಕ್ಷು ಮಹಾನಾಮಜೀ ಕೂಡ ಅಲ್ಲಿ ಹಾಜರಿದ್ದರು. ಅವರ ಸಮ್ಮುಖದಲ್ಲಿಯೇ

1963ರ ಏಪ್ರಿಲ್ 14ರಂದು ಪ್ರಾತಃಕಾಲ ಮಹಾ ಪಂಡಿತ ರಾಹುಲ ಸಾಂಕೃತ್ಯಾಯನರು ಕೊನೆಯುಸಿರೆಳೆದರು.

ರಾಹುಲಜೀ ಅವರ ಸೋದರನಿಗೆ, ಅವರ ಹಳ್ಳಿಗೆ, ಸುದ್ದಿ ಕಳಿಸಲಾಯಿತು. ಅವರೆಲ್ಲರೂ ಬಂದರು. ಪಾರ್ಥಿವ ಶರೀರವನ್ನು ಕಾಶಿಗೆ ತೆಗೆದುಕೊಂಡು ಹೋಗಲು ಅವರು ಬಯಸಿದರು. ಆದರೆ ಅದು ಸಾಧ್ಯವಿರಲಿಲ್ಲ, ಉಚಿತವೂ ಆಗಿರಲಿಲ್ಲ. ಭಿಕ್ಷು ಮಹಾನಾಮಜೀ ಅವರ ಉಪಸ್ಥಿತಿಯಲ್ಲಿ ಬೌದ್ಧ ಪದ್ಧತಿಯಂತೆ ರಾಹುಲ ಸಾಂಕೃತ್ಯಾಯನರ ಅಂತಿಮ ಸಂಸ್ಕಾರ ನಡೆಯಿತು. ಡಾರ್ಜಿಲಿಂಗಿನ ಸ್ಮಶಾನದಲ್ಲಿ ದಹನ ಸಂಸ್ಕಾರವಾಯಿತು.

ಅವರ ದಹನ ಸಂಸ್ಕಾರವಾದ ಜಾಗದಲ್ಲಿಯೇ ನಂತರ ಅವರ ಸ್ಮೃತಿಗಾಗಿ ಒಂದು ಪುಟ್ಟ 'ರಾಹುಲ ಚೈತ್ಯ' ರಚಿಸಲ್ಪಟ್ಟಿತು.

# ಉಪಸಂಹಾರ

ಜನವರಿ 1935ರ ಮಾತು. ರಾಹುಲರು ತಮ್ಮ ದ್ವಿತೀಯ ಟಿಬೆಟ್ ಯಾತ್ರೆಯಿಂದ ಮರಳಿ ಪ್ರಯಾಗಕ್ಕೆ ಹೋಗಿ ಜಪಾನ್ ಪ್ರವಾಸದ ತಯಾರಿಯಲ್ಲಿದ್ದರು. ಒಂದು ದಿನ ಕಲ್ಕತ್ತೆಗೆ ತನ್ನ 'ಪ್ರಥಮ ಉಡ್ಡಯನ' (1907) ಕಾಲದ ಪರಿಚಯದ ಮಹಾದೇವ ಪ್ರಸಾದ ಸಿಕ್ಕಿದರು. 'ಈಗ ಅವರ ಮುಖದಲ್ಲಿ ವೃದ್ಧಾಪ್ಯದ ಕಳೆ ಇತ್ತು. ತಾರುಣ್ಯ ಅವರನ್ನು ಕೂಡ ಒಮ್ಮೆ ಕಲ್ಕತ್ತೆಗೆ ಜಿಗಿಯುವಂತೆ ಮಾಡಿತ್ತು, ಆದರೆ ಆಮೇಲೆ ಅವರು ಧೈರ್ಯಗೆಟ್ಟು ಕುಳಿತರು. 'ಉಪ್ಪು-ತೈಲ-ಸೌದೆ' ಯ ಚಿಂತೆ ಅವರ ಇಡೀ ಜೀವನವನ್ನು ಕಬಳಿಸಿತು. ನಾನು ನೆಗೆ ಜಿಗಿಯುತ್ತಲೇ ಇದ್ದೆ. ಈಗಲೂ ಹೊಸ ಉಡ್ಡಯನಕ್ಕೆ ಅಷ್ಟೇ ಉಮೇದಿದೆ. ನಾನು ಸಾಯುವುದೂ ನೆಗೆಯುತ್ತಲೇ' – ಎಂದು ರಾಹುಲರು ಬರೆದಿದ್ದರು.

ಆಗ ಅವರಿಗೆ 42 ವರ್ಷ. ಮಹಾದೇವ ಪ್ರಸಾದರು ಅವರಿಗಿಂತ ಒಂದೆರಡು ವರ್ಷ ದೊಡ್ಡವರಿದ್ದಿರಬಹುದು. ಆದರೂ ಇಬ್ಬರ ಜೀವನದಲ್ಲಿಯೂ ಎಷ್ಟು ದೊಡ್ಡ ಅಂತರ! ಕೆಲವೇ ದಿನಗಳ ಬಳಿಕ ರಾಹುಲರು ಕೊರಿಯಾ, ಮಂಚೂರಿಯಾ, ಸೋವಿಯತ್ ರಷ್ಯಾ ಮತ್ತು ಇರಾನ್ ಪ್ರವಾಸಕ್ಕಾಗಿ ಹೊರಡುತ್ತಾರೆ. ಯಥಾರ್ಥವಾಗಿಯೂ ನೆಗೆಯುತ್ತ ನೆಗೆಯುತ್ತ ಹೋಗುತ್ತಾರೆ, ಟಿಬೇಟಿಗೂ ಮತ್ತೆರಡು ಯಾತ್ರೆ ಮಾಡುತ್ತಾರೆ. ಪ್ರಾಣವನ್ನೇ ಅಪಾಯಕ್ಕೊಡ್ಡುತ್ತಾರೆ.

'ಉಪ್ಪು-ತೈಲ-ಸೌದೆ'ಯ ಚಿಂತೆಯಿಂದ ಮುಂದೆ ರಾಹುಲರೂ ತಪ್ಪಿಸಿ ಕೊಳ್ಳಲು ಆಗಲಿಲ್ಲ. 1944ರಲ್ಲಿ ಕೇವಲ ಪ್ರಾಧ್ಯಾಪನ ಮಾಡಲು ಅವರು ಲೆನಿನ್‌ಗ್ರಾಡಿಗೆ ಹೋದವರಲ್ಲ. ಆ ರಷ್ಯಾ ಯಾತ್ರೆಯ ಉದ್ದೇಶವೇ ಮಹಾಯುದ್ಧದ ಆ ಸಂಕಟದ ದಿನಗಳಲ್ಲಿ ಲೋಲಾ ಮತ್ತು ಮಗ ಇಗೋರ್‌ನ ಜೊತೆಯಲ್ಲಿರುವುದು. ಅವರೊಟ್ಟಿಗೆ ಕೆಲ ದಿನ ಇದ್ದ ಬಳಿಕ ಅವರು ಮಧ್ಯ ಏಶಿಯಾಕ್ಕೆ ಹೋಗಲು ಚಡಪಡಿಸುತ್ತಾ ಇದ್ದರು. ಅದು ಸಾಧ್ಯವಾಗದಾಗ ಲೆನಿನ್‌ಗ್ರಾಡಿನ ಸುಖ ಸೌಲಭ್ಯದ ಬದುಕು ತ್ಯಜಿಸಿ ಭಾರತಕ್ಕೆ ಹಿಂದಿರುಗಿ ಬಂದರು.

ಭಾರತದಲ್ಲಿ ಹೊಸ ಸಂಸಾರ ಜೀವನ ಆರಂಭಿಸಿದ ಮೇಲೆಯೂ ಅವರು ಯಾವಾಗೆಂದರೆ ಆವಾಗ ಸಂಚಾರ ನೆಗೆಯುವುದನ್ನು ಬಿಡಲಿಲ್ಲ. ಅರ್ವತ್ತೈದು ವರ್ಷ ವಯಸ್ಸಿನಲ್ಲೂ ಒಬ್ಬರೇ ಚೀನಾ ಯಾತ್ರೆ ಕೈಗೊಂಡಿದ್ದರು, ಟಿಬೇಟಿಗೆ ಹೋಗಿ ಸಂಶೋಧನೆ ಮಾಡುವ ಇರಾದೆಯಿಂದ. ಟಿಬೇಟಿಗೆ ಹೋಗಲು ಸಾಧ್ಯವಾಗಲಿಲ್ಲ. ಆದರೆ ಸ್ವಾಸ್ಥ್ಯ ಕೈಕೊಟ್ಟರೂ ತುಜ-ಹ್ವಾನ್ ವರೆಗೆ 'ನೆಗೆದೇ' ಬಂದರು.

ರಾಹುಲರ ಸ್ಮೃತಿ ಲೋಪವನ್ನು ಏನೆಂದು ತಿಳಿಯುವುದು? ಅದೂ ಒಂದು ದೀರ್ಘ ನೆಗೆತವೇ ಇರಬಹುದೇ? ಜಾಗೃತಾವಸ್ಥೆಯಿಂಧ ವಿಸ್ಮೃತಾವಸ್ಥೆಗೆ? ಸ್ಮೃತಿ ಲೋಪಕ್ಕೆ ಕಾರಣ ಏನೇ ಹೇಳುತ್ತ ಹೋದರೂ, ರಾಹುಲರಿಗೆ ಅಂತಿಮ ದಿನಗಳಲ್ಲಿ ತನ್ನ ಸ್ಮೃತಿ ಕ್ಷಯಿಸುತ್ತಿರುವುದು ಸ್ಪಷ್ಟವಾಗಿ ಅರಿವಾಗುತ್ತ ಇತ್ತು. ಆನಂದಜೀಗೆ ಬರೆದ ಪತ್ರಗಳಲ್ಲಿ ಈ ಬಗ್ಗೆ ಪ್ರಸ್ತಾಪ ಮಾಡುತ್ತಾರೆ.

ಡಯಾಬಿಟಿಸ್ ಪೇಶಂಟ್ ಆಗಿದ್ದರು, ಹೃದಯಾಘಾತವಾಗಿತ್ತು, ಅನಾರೋಗ್ಯದಲ್ಲಿಯೇ ಚೀನಾದಿಂದ ಹಿಂದಿರುಗಿದ್ದರು. ಆದರೆ ಶ್ರೀಲಂಕಾದ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡ ಬಳಿಕ ಆರ್ಥಿಕವಾಗಿ ಅಂತಹ ಚಿಂತೆಯೇನೂ ಇರಲಿಲ್ಲ. ಅಂದ ಮೇಲೆ ಅಲ್ಲಿ ತಮ್ಮ ಆರೋಗ್ಯವನ್ನು ಲೆಕ್ಕಿಸದೆ ಮಿತಿಮೀರಿ ದುಡಿದದ್ದಕ್ಕೆ ಏನು ಕಾರಣ?

ತಿಳಿಯುವುದೇನೂ ಕಷ್ಟವಲ್ಲ. ಮೊದಲ ಮಾತೆಂದರೆ ಅವರಿಗೆ ಎಂದೂ ಮೃತ್ಯು ಭಯವೇ ಇರಲಿಲ್ಲ. ಪುನರ್ಜನ್ಮದಲ್ಲಿ ವಿಶ್ವಾಸವೂ ಇರಲಿಲ್ಲ. ಆಗಾಗ ಹೇಳುತ್ತಲೂ ಇದ್ದರು, 'ನಾನು ಏನು ಮಾಡಬೇಕೋ ಅದನ್ನು ಈ ಜನ್ಮದಲ್ಲೇ ಮಾಡಬೇಕು' ಆದುದರಿಂದ ಏನೆಲ್ಲ ಪುಸ್ತಕಗಳನ್ನು ಬರೆಯಲು ವರ್ಷಗಳಿಂದ ಯೋಚಿಸಿಕೊಂಡಿದ್ದರೋ, ಅದಕ್ಕಾಗಿ ಆಕರಗಳನ್ನು ಸಂಗ್ರಹಿಸಿದ್ದರೋ ಅವುಗಳನ್ನು ಆದಷ್ಟೂ ಬೇಗ ಮುಗಿಸಿ ಬಿಡಬೇಕು ಎಂದು ಯೋಚಿಸುತ್ತಿದ್ದರು.

ತಮ್ಮ ಮೊದಲ ಟಿಬೆಟ್ ಯಾತ್ರೆಯ (1929-30) ವೇಳೆ ಲಾಸಾದಲ್ಲಿ ಅವರು 'ತಿಬ್ಬತೀ-ಸಂಸ್ಕೃತ ಅರ್ಥಕೋಶ'ಕ್ಕಾಗಿ ಹದಿನಾರು ಸಾವಿರ ಶಬ್ದಗಳನ್ನು ಸಿದ್ಧ ಮಾಡಿದ್ದರು. ಆ ಕೆಲಸ ಅರ್ಧಕ್ಕೇ ನಿಂತಿತ್ತು. ಅದನ್ನು ಪೂರ್ತಿಗೊಳಿಸಲಿಕ್ಕಾಗಿ ಚೀನಾ ಯಾತ್ರೆಯಲ್ಲಿ (1958) ಸಾಕಷ್ಟು ಹೊಸ ಸಾಮಾಗ್ರಿ ಸಂಗ್ರಹಿಸಿದ್ದರು. ಆದುದರಿಂದ ಶ್ರೀಲಂಕಾಕ್ಕೆ ಬರುತ್ತಲೇ 'ತಿಬ್ಬತೀ – ಹಿಂದೀ ಕೋಶ'ವನ್ನು ಪೂರ್ಣ ಮುಗಿಸಿಬಿಡಲು ತೀವ್ರವಾಗಿ ಅದರಲ್ಲಿ ಮುಳುಗಿಕೊಂಡರು.

'ಪಾಲಿ ಕಾವ್ಯಧಾರಾ' ರಚನೆಗೆ ಬಹಳ ಹಿಂದೆಯೇ ಅವರು ಸಂಕಲ್ಪ ಮಾಡಿದ್ದರು. ವಿದ್ಯಾಲಂಕಾರದಲ್ಲಿ ಪಾಲಿ ಸಾಹಿತ್ಯ ಸುಲಭವಾಗಿ ಲಭ್ಯವಿತ್ತು. ಅವರು 'ಪಾಲಿ ಕಾವ್ಯ ಧಾರಾ' ಬರೆದು ಮುಗಿಸಿದರು. ಇದರ ಸಿದ್ಧತೆಯ ಜೊತ ಜೊತೆಗೆ 'ಪಾಲಿ ಸಾಹಿತ್ಯ ಕಾ ಇತಿಹಾಸ' ಬರೆದರು. 'ಋಗ್ವೇದಿಕ ಆರ್ಯ' ಮುಗಿದಿತ್ತು. 'ದಿವೋದಾಸ' ಟಿಪ್ಪಣಿ ತಯಾರಿತ್ತು. ಶೀಘ್ರವೇ ಕಾದಂಬರಿಯನ್ನು ಬರೆದು ಹಾಕಿದರು.

ಅವರ ಜೀವನದಲ್ಲಿ ಆಲಸ್ಯವೆಂಬುದೇ ಇರಲಿಲ್ಲ. ಜೀವನ ಕೊನೆಯ ವರ್ಷಗಳಲ್ಲಿ (1959-61) ವಿದ್ಯಾಲಂಕಾರದಲ್ಲಿ ವಾಸಿಸುತ್ತಿರುವಾಗ ಅವರಿಗೆ ತಾನು ಅಲ್ಲಿಯೇ ಕಳೆದ ಆ ಹತ್ತೊಂಭತ್ತು ತಿಂಗಳು (1927-28), ಆಗ ಕಠೋರ ಪರಿಶ್ರಮದಿಂದ ವಿದ್ಯಾರ್ಜನೆ ಮಾಡಿದ್ದು, ತಮ್ಮ ಪ್ರತಿ ನಿಮಿಷದ ಲೆಕ್ಕ ಕೊಡುವಷ್ಟು ಸಮರ್ಥರಿದ್ದುದು, 1930ರಲ್ಲಿ ಅಲ್ಲಿಯೇ 'ಬುದ್ಧಚರ್ಯಾ'ದಂತಹ ಗ್ರಂಥವನ್ನು (ದೊಡ್ಡ ಆಕಾರದ 612 ಪುಟಗಳು) ಒಟ್ಟು 68 ದಿನಗಳಲ್ಲಿ ಬರೆದದ್ದು – ಎಲ್ಲ ಖಂಡಿತವಾಗಿಯೂ ಪದೇ ಪದೇ ನೆನಪಿಗೆ ಬರುತ್ತಿದ್ದಿರಬೇಕು.

ರಾಹುಲಜೀ ಎಂತಹ ಪರಿಸ್ಥಿತಿಯಲ್ಲಿಯೂ ಬರವಣಿಗೆ ಮಾಡಲು ಸಮರ್ಥರಿದ್ದರು. ಅವರ 'ಬಾಯಿಸವೀಂ ಸದೀ', 'ಸಿಂಹ ಸೇನಾಪತಿ', 'ವೋಲ್ಗಾ ಸೇ ಗಂಗಾ', 'ಮಾನವ ಸಮಾಜ', 'ವಿಶ್ವ ಕೀ ರೂಪರೇಖಾ', 'ವೈಜ್ಞಾನಿಕ ಭೌತಿಕ ವಾದ' ಮತ್ತು 'ದರ್ಶನ ದಿಗ್ದರ್ಶನ'ದಂತಹ ಅನೇಕ ಪುಸ್ತಕಗಳನ್ನು ಜೈಲಿನಲ್ಲಿದ್ದಾಗ ಬರೆದರು. ಸ್ವಾರಸ್ಯದ ಮಾತೆಂದರೆ ಅವರ ಈ ಪುಸ್ತಕಗಳೇ ಹೆಚ್ಚು ಜನಪ್ರಿಯವಾದವು. ಮುಖ್ಯವಾಗಿ ಈ ಪುಸ್ತಕಗಳು ಹೆಚ್ಚು ಭಾಷೆಗಳಿಗೆ ಅನುವಾದ ಕೂಡ ಆದವು. ರಾಹುಲರ ಇದೇ ಬಗೆಯ ಇನ್ನೊಂದು ಜನಪ್ರಿಯ ಪುಸ್ತಕ 'ಸಾಮ್ಯವಾದ ಹೀ ಕ್ಯೋಂ?'. ಇದನ್ನವರು ತನ್ನ ದ್ವಿತೀಯ ಟಿಬೇಟ್ ಯಾತ್ರೆಯ ಸಮಯ (1934) ಧಾರ್ಮಿಕ ಸಾಮಂತಶಾಹಿಯ ಕೇಂದ್ರವಾದ ಲಾಸಾದಲ್ಲಿ ಕುಳಿತು

ಬರೆದರು. ಅದೇ ವೇಳೆ 'ವಿನಯ ಪಿಟಕ'ದ ಹಿಂದೀ ಅನುವಾದವನ್ನೂ ಮಾಡಿದರು. 'ಮಜ್ಝಿಮ್ ನಿಕಾಯ'ದ ಅನುವಾದವನ್ನು ಎರಡನೇ ಲಧಾಖ್ ಯಾತ್ರೆಯ ವೇಳೆ ಮಾಡಿದ್ದರು. ಅವರು ಹೇರಳವಾಗಿ ಬರೆದರು, ವಿವಿಧ ರೀತಿಯಲ್ಲಿ ವಿವಿಧ ವಿಷಯಗಳ ಮೇಲೆ. ಇಷ್ಟೆಲ್ಲ ಪ್ರವಾಸ ಮಾಡತ್ತ ಇಷ್ಟೆಲ್ಲ ಬರೆಯಲು ಸಾಧ್ಯವಾಯಿತು ಹೇಗೆ ಎಂದು ಅನೇಕರಿಗೆ ಆಶ್ಚರ್ಯವಾಗುತ್ತದೆ. ಆದರೆ ನಿಜವಾಗಿ ಅವರಿಗದು ಸಾಧ್ಯವಾದದ್ದೇ ಈ ಅಸಂಖ್ಯ ಪ್ರವಾಸಗಳಿಂದಾಗಿ.

ವ್ಯಾಪಕವಾಗಿ ಓದುತ್ತ ಇದ್ದರೂ ಬರವಣಿಗೆಯಲ್ಲಿದ್ದ ಅವರಿಗೆ ಹೆಚ್ಚು ಪ್ರಯೋಜನಕ್ಕೆ ಬಂದದ್ದು ಪ್ರವಾಸ ಮಾಡುತ್ತ ಅವರು ಗಳಿಸಿದ ಜ್ಞಾನ ಹಾಗೂ ಅನುಭವಗಳೆಂಬುದು ಸಿದ್ಧ. ಅವರು ಶೋಕಿಗಾಗಿ ಸಂಚರಿಸಿದವರಲ್ಲ. ಅವರ ಪ್ರವಾಸಗಳಿಗೆ ಉದ್ದೇಶವಿತ್ತು. ಅದರಿಂದ ಅವರಿಗೆ ಪುಷ್ಟಿ ಸಿಗುತ್ತಿತ್ತು. ಅವರು ಸುಮಾರಾಗಿ ಸಮಗ್ರ ಏಶಿಯಾದಲ್ಲಿ ಸಂಚರಿಸಿದರು. ಇಂಗ್ಲೆಂಡ್ ಮತ್ತು ಯುರೋಪಿನ ಕೆಲ ದೇಶಗಳಲ್ಲೂ ಸುತ್ತಾಡಿದರು. ಇಪ್ಪತ್ತನೆಯ ಶತಮಾನದಲ್ಲಿ ಇತರ ಯಾವ ಭಾರತೀಯನೂ ಇಷ್ಟು ವ್ಯಾಪಕವಾಗಿ ಸಂಚಾರ ಮಾಡಿರಲಿಕ್ಕಿಲ್ಲ. ಇಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸ ಸಾಹಿತ್ಯವನ್ನು ಬರೆದಿರಲಿಕ್ಕಿಲ್ಲ. ಅಲೆಮಾರಿತನ ಅವರ ಬದುಕಿನ ಅಭಿನ್ನ ಅಂಗವೇ ಆಗಿ ಬಿಟ್ಟಿತ್ತು. ಮುಖ್ಯವಾಗಿ ಈ ಕಾರಣದಿಂದಲೇ ಅವರು ಜೀವನದಲ್ಲಿ ನಗೆ ಜಗಿಯುತ್ತ ಚುರುಕಾಗಿ ಮುನ್ನಡೆದರು. ಅವರ ವಿಚಾರಗಳಿಗೊಂದು ವ್ಯಾಪಕತೆ ಒದಗಿತು. ಅಲೆಮಾರಿತನವೇ ಅವರನ್ನು ಮಹಾಪಂಡಿತನನ್ನಾಗಿ ಮಾಡಿತು.

ಅವರ ಸುಮಾರು ಇಪ್ಪತ್ತು ಪುಸ್ತಕಗಳು (ಹಿಮಾಲಯ ಪರಿಚಯಮಾಲಾ ಮತ್ತು ಯಾತ್ರಾ ವಿವರಣೆ) ಪ್ರವಾಸಗಳಿಗೆ ನೇರ ಸಂಬಂಧಿಸಿವೆ. ದೇಶ ವಿದೇಶಗಳ ಐತಿಹಾಸಿಕ ಸ್ಥಳಗಳಿಗೆ ತಿರುತಿರುಗಿ ಪ್ರವಾಸ, ಪ್ರವಾಸದಲ್ಲಿ ಒಬ್ಬ ಪ್ರಾಚ್ಯವಿದನ ಆಳ ದೃಷ್ಟಿ, ಇವೆಲ್ಲದರಿಂದ 'ಸಿಂಹ ಸೇನಾಪತಿ', 'ಮಧುರ ಸ್ವಪ್ನ', 'ವಿಸ್ಮೃತ ಯಾತ್ರೀ' ಮತ್ತು 'ಜಯಯೌಧೇಯ'ದಂತಹ ಐತಿಹಾಸಿಕ ಕಾದಂಬರಿಗಳು ಯಶಸ್ವಿಯಾಗಿ ರೂಪುಗೊಂಡವು. ಟಿಬೆಟಿನ ನಾಲ್ಕು ಯಾತ್ರೆಗಳಲ್ಲಿ ಅವರು ಶೋಧಿಸಿ ತಂದ, ಅದುವರೆಗೆ ಲುಪ್ತವಾಗಿದ್ದ, ಭಾರತೀಯ ವಾಙ್ಮಯ ರತ್ನಗಳು ಅವರು ಭಾರತೀಯ ಸಂಸ್ಕೃತಿಗೆ ಕೊಟ್ಟ ಮಹಾನ್ ಕೊಡುಗೆ.

ಅಲೆಮಾರಿ ಜೀವನ ಅವರಿಗೆಷ್ಟು ಪ್ರಿಯವಾಗಿತ್ತೆಂದರೆ ಅವರು ಒಂದು ಹೊಸ 'ಘುಮಕ್ಕಡ್ ಶಾಸ್ತ್ರ' (ಸಂಚಾರಿ ಶಾಸ್ತ್ರ)ವನ್ನೇ ಬರೆದು ಬಿಟ್ಟರು. ಆದರೆ ಅಮೆರಿಕಾಕ್ಕೆ ಹೋಗಿ ಬರುವ ಇಚ್ಛೆ ಅವರಿಗೆ ಯಾವತ್ತೂ ಉಂಟಾಗಲಿಲ್ಲ. 1932 ರಲ್ಲಿ ಇಂಗ್ಲೆಂಡಿನಲ್ಲಿದ್ದಾಗ ಎಷ್ಟೇ ಒತ್ತಾಯ ಬಂದಿದ್ದರೂ ಕೂಡ ಅವರು ಅಲ್ಲಿಗೆ ಹೋಗಲು ಇಷ್ಟಪಡಲಿಲ್ಲ.

ಇಷ್ಟೆಲ್ಲ ಯಾತ್ರೆ ಮಾಡಿದರೂ ಅವರ ಒಂದು ಮಹತ್ವಪೂರ್ಣ ಯಾತ್ರೆಯ ಕನಸು ಮಾತ್ರ ಕೈಗೂಡಲಿಲ್ಲ. ಅದು, ಮುಖ್ಯ ಮಧ್ಯ ಏಶಿಯಾದ ಯಾತ್ರೆ. ಟಿಬೇಟಿನ ಪ್ರಥಮ ಪ್ರವಾಸಕ್ಕಿಂತಲೂ ಸಾಕಷ್ಟು ಮುಂಚೆಯೇ, 1926ರಲ್ಲಿ ಲಧಾಖ್‌ಗೆ ಹೋಗಿದ್ದಾಗ, ಚೀನೀ ತುರ್ಕಿಸ್ತಾನದ ಕಾಶಗರ್, ಯಾರ್ಕಂಡ್, ಖೋಟಾನ್ ಮುಂತಾದ ಸ್ಥಳಗಳಿಗೆ ಪ್ರವಾಸ ಮಾಡಬೇಕೆಂದು ಅವರಿಗೆ ಬಹಳ ಆಸೆಯಾಗಿತ್ತು. ಹೋಗಲು ಏರ್ಪಾಟೂ ಆಗಿತ್ತು. ಆದರೆ ಪಾಸ್ ಪೋರ್ಟ್ ಸಿಗುವ ಸಾಧ್ಯತೆ ಇಲ್ಲದೇ ಹೋಯಿತು.

ಲೆನಿನ್‌ಗ್ರಾಡ್‌ನಲ್ಲಿ ಇದ್ದಾಗಲೂ, 1945-47ರಲ್ಲಿ, ಸೋವಿಯತ್ ಮಧ್ಯ ಏಶಿಯಾ ಪ್ರವಾಸಕ್ಕಾಗಿ ಬಹಳ ಪ್ರಯತ್ನಿಸಿದ್ದರು. ಆದರೆ ಆಗ ಸೋವಿಯತ್ ಸರಕಾರ ಅನುಮತಿ ನೀಡಲಿಲ್ಲ. 1958ರಲ್ಲಿ ಚೀನಾ ಪ್ರವಾಸದಲ್ಲಿದ್ದಾಗಲೂ ತುಜ-ಹ್ವಾನ್‌ವರೆಗೆ ಹೋಗಲು ಸಾಧ್ಯವಾದದ್ದೇ ಬಹಳ ಕಷ್ಟದಿಂದ. ಹೀಗೆ ಚೀನೀ ತುರ್ಕಿಸ್ತಾನದ ಪೂರ್ವಗಡಿಯ ದರ್ಶನ ಮಾತ್ರ ಮಾಡಿ ಬಂದಂತಾಯಿತು. ಎರಡು ದೊಡ್ಡ ಭಾಗಗಳಲ್ಲಿ ರಾಹುಲಜೀ ಮಧ್ಯ ಏಶಿಯಾ ಇತಿಹಾಸವನ್ನು ವಿಸ್ತಾರವಾಗಿ ನಿರೂಪಿಸಿದರೂ ಮಧ್ಯ ಏಶಿಯಾದ ಹೃದಯಸ್ಥಲವನ್ನು ಅವರು ಪ್ರತ್ಯಕ್ಷ ನೋಡಲು ಆಗಲೇ ಇಲ್ಲ. ಇದಕ್ಕಾಗಿ ಖಂಡಿತವಾಗಿಯೂ ಅವರಲ್ಲಿ ತುಂಬ ಖೇದ ಉಳಿದಿರಲೇ ಬೇಕು.

ರಾಹುಲಜೀ ಅವರ ಪ್ರವಾಸಗಳು ದುಡ್ಡಿನ ಬಲದ ಮೇಲೆ ನಿಂತಿರಲಿಲ್ಲ. ವಸ್ತುತಃ 1948ರ ತನಕ ರುಪಾಯಿ ಪೈಸೆಗಳ ಬಗ್ಗೆ ಅವರು ಅಂಥದ್ದೇನೂ ವಿಶೇಷ ಚಿಂತೆ ಕೂಡ ಮಾಡಿದವರಲ್ಲ. ಶ್ರೀಲಂಕಾದ ವಿದ್ಯಾಲಂಕಾರ ವಿಹಾರದಲ್ಲಿ ಅಧ್ಯಾಪಕರಾಗಿ ಹೋದಾಗ (1927) ತಮಗೆ ಸಂಬಳ ಏನೂ ಬೇಡ; ಊಟ, ವಸತಿ, ಓದು ಮತ್ತು ಪುಸ್ತಕಗಳ ಅನುಕೂಲವಾದರೆ ಸಾಕು ಎಂದಿದ್ದರು.

ಟಿಬೇಟಿನಿಂದ ತಂದ ಹಸ್ತ ಲಿಪಿಗಳು, ಚಿತ್ರಪಟಗಳು ಮುಂತಾದ ಅನೇಕ ಅಮೂಲ್ಯ ವಸ್ತುಗಳನ್ನು ಮಾರಿ ಅವರು ಲಕ್ಷಾಂತರ ರುಪಾಯಿ ಗಳಿಸಲು ಸಾಧ್ಯವಿತ್ತು. ನಾಲಂದಾದಲ್ಲಿ ಒಂದು ವಿದ್ಯಾಪೀಠ ಸ್ಥಾಪನೆಗಾಗಿ ಕೆಲ ಚಿತ್ರಗಳನ್ನು ಮಾರಿಬಿಡುವ ನಿಶ್ಚಯವನ್ನು ಅವರು ಮಾಡಿಯೂ ಇದ್ದರು. ಆದರೆ ಅವುಗಳ ವಾಸ್ತವ ಮಹತ್ವದ ಸ್ಪಷ್ಟ ಅರಿವಾಗುತ್ತಲೆ ಅವುಗಳನ್ನೆಲ್ಲ ಪಾಟ್ನಾ ಸಂಗ್ರಹಾಲಯಕ್ಕೆ ಒಪ್ಪಿಸಿ ಬಿಟ್ಟರು. ಪ್ರಾಚ್ಯ ಮಹತ್ವವುಳ್ಳ ವಸ್ತುಗಳೆನ್ನೆಲ್ಲ, ತನ್ನ ಬಳಿ ಇರಿಸಿಕೊಳ್ಳದೆ ವಿವಿಧ ಸಂಗ್ರಹಾಲಯಗಳಿಗೆ ಒಪ್ಪಿಸಿದರು.

ಹಣ ಅಥವಾ ಸುಖ ಸೌಲಭ್ಯಗಳ ಮೋಹದಲ್ಲಿ ಅವರು ಎಂದೂ ಸಿಲುಕಿಕೊಳ್ಳಲಿಲ್ಲ. ಪರಸಾ ಮತ್ತು ತಿರುಮಲಿಶೈ ಮಠಗಳಲ್ಲಿನ ಆರಾಮದ ಜೀವನ ಕೂಡ ಅವರನ್ನು ಒಂದೆಡೆ ಕಟ್ಟಿ ಕೂಡಿಸಲಿಲ್ಲ. ಲೆನಿನ್‌ಗ್ರಾಡಿನ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಕೊನೆಯ ದಿನಗಳಲ್ಲಿ ದುಡ್ಡು ನೆರೆಯಂತೆ ತುಂಬಿ ಬಂದಿತ್ತು. ಆದರೆ ಅಲ್ಲಿದ್ದುಕೊಂಡು ಆ ನೆರೆಯಲ್ಲಿ ಕೊಚ್ಚಿಹೋಗದೆ ಅವರು ಸ್ವದೇಶಕ್ಕೆ ಮರಳಿದರು.

ದುಡ್ಡಿನ ವಿಷಯದಲ್ಲಿ ಅವರು ದೊಡ್ಡ ಸ್ವಾಭಿಮಾನಿಯಾಗಿದ್ದರು. ಸಮ್ಮೇಳನದ ಪಾರಿಭಾಷಿಕ ನಿರ್ಮಾಣ ಪ್ರಚಾರ ಕಾರ್ಯಕ್ಕಾಗಿ, ಸಮಿತಿಯ ಸಾಹಿತ್ಯ ಯೋಜನೆಗಾಗಿ ದುಡಿದರು. ಆದರೆ ಈ ಎರಡೂ ಸಂಸ್ಥೆಗಳಿಂದ ಯಾವ ವೇತನವನ್ನೂ ಅವರು ತೆಗೆದುಕೊಳ್ಳಲಿಲ್ಲ.

ರಾಹುಲರು ಯಾವ ಪಠ್ಯಪುಸ್ತಕಗಳನ್ನೂ ಬರೆಯಲಿಲ್ಲ. ಕೇವಲ ದುಡ್ಡಿಗಾಗಿ ತನ್ನ ಕೃತಿಗಳಲ್ಲಿ ಬದಲಾವಣೆಯನ್ನು ಮಾಡುವುದಾಗಲೀ, ಪ್ರಶಸ್ತಿಗಾಗಿ ಅವುಗಳನ್ನು ಎಲ್ಲಿಗೆ ಕಳಿಸುವುದಾಗಲೀ, ಅವರಿಗೆ ಸುತರಾಂ ಇಷ್ಟವಿರಲಿಲ್ಲ. ಪ್ರಥಮ ಪುಸ್ತಕ 'ಬುದ್ಧಚರ್ಯಾ' ಪ್ರೆಸ್ಸಿಗೆ ಹೋದಾಗ ಅವರಿಗೆ ದುಡ್ಡಿನ ಅಗತ್ಯ ಬಿತ್ತು. ಆಚಾರ್ಯ ನರೇಂದ್ರ ದೇವ ಅವರು ಬಾಬೂ ಶಿವಪ್ರಸಾದ ಗುಪ್ತರಿಗೆ ಶಿಫಾರಸು ಮಾಡಿದರು. ಶಿವಪ್ರಸಾದ ಗುಪ್ತರು ಡಾ। ಭಗವಾನ್‌ದಾಸರ ಅಭಿಪ್ರಾಯ ಕೇಳಿದರು. ಭಗವಾನ್‌ದಾಸರಾದರೋ, ಗ್ರಂಥವನ್ನು ಶಬ್ದಾನುವಾದ ರೂಪದ ಬದಲಿಗೆ ಪುರಾಣಗಳಂತೆ ಸ್ವತಂತ್ರ ಗ್ರಂಥಗಳಾಗಿ ಬರೆದು ಕೊಡಲಿ ಎಂದು ಅಭಿಪ್ರಾಯ ಪಟ್ಟರು. ರಾಹುಲರು ಇದಕ್ಕೆ ಪ್ರತಿಕ್ರಿಯಿಸುತ್ತ

ಹೀಗೆ ಬರೆದಿದ್ದಾರೆ. 'ಐತಿಹಾಸಿಕ ದೃಷ್ಟಿ ಮತ್ತು ಪ್ರಾಮಾಣಿಕತೆ ನನ್ನಲ್ಲಿ ಸಾಕಷ್ಟಿದ್ದುದರಿಂದ ಅವರ ಮಾತು ನನ್ನ ಮೇಲೆ ಏನು ತಾನೇ ಪರಿಣಾಮ ಮಾಡೀತು? ನಾನು 'ಬುದ್ಧಚರ್ಯಾ'ದ ರೂಪದಲ್ಲಿ ಬುದ್ಧ ಮತ್ತು ಬುದ್ಧಕಾಲೀನ ಭಾರತದ ಇತಿಹಾಸದ ಸಾಮಗ್ರಿಗಳನ್ನು ಮೌಲಿಕವಾಗಿ ಇಡಲು ಬಯಸಿದ್ದೆ. ಬಾಬೂ ಭಗವಾನದಾಸರ ಮಾತನ್ನು ಮಾನ್ಯ ಮಾಡುವುದಕ್ಕಿಂತ ಆ ಪುಸ್ತಕವನ್ನು ಬೆಂಕಿಗೆಸೆಯುವುದನ್ನೇ ಹೆಚ್ಚು ಇಷ್ಟಪಟ್ಟೇನು'.

ಇಂತಹದೇ ಇನ್ನೊಂದು ಪ್ರಸಂಗವನ್ನು ಆನಂದಜೀ ತಿಳಿಸಿದ್ದಾರೆ. ಅವರು ಜೈಲಿನಲ್ಲಿ ಬರೆದ 'ದರ್ಶನ ದಿಗ್ದರ್ಶನ' ಗ್ರಂಥದ ಪಾಂಡು ಲಿಪಿ ಅನಂದಜೀ ಅವರ ಬಳಿ ಇತ್ತು. ಅನಂದಜೀ ಅದರ ಪ್ರಕಾಶನಕ್ಕಾಗಿ ತುಂಬ ಪ್ರಯತ್ನ ಮಾಡುತ್ತಾ ಇದ್ದರು. ಬಂಗಾಳದ ಒಂದು ಹಿಂದೀ ಪ್ರೇಮಿ ಸಂಸ್ಥೆ ಪಾಂಡುಲಿಪಿಯ ಬರೆಹಗಳಿಗೆ ಪುರಸ್ಕಾರ ನೀಡುವ ಒಂದು ಯೋಜನೆ ಹಾಕಿಕೊಂಡಿತ್ತು. ಒಂದು ವೇಳೆ ಪುರಸ್ಕಾರ ಸಿಕ್ಕಿದರೆ ಪುಸ್ತಕವನ್ನು ಮುದ್ರಿಸಲು ಅನುಕೂಲವಾಗುವುದೆಂದು ಆನಂದಜೀ ಯೋಚಿಸಿ ರಾಹುಲರಿಗೆ ಬರೆದರು. ಅದಕ್ಕೆ ಉತ್ತರವಾಗಿ: 'ಪ್ರಿಯ ಆನಂದಜೀ,

ದುಡ್ಡಿನ ಬೆಲೆಯನ್ನು ನಾನೂ ಬಲ್ಲೆ. ಆದರೆ ನನ್ನ ಪಾಂಡು ಲಿಪಿಯನ್ನು ಪುರಸ್ಕಾರಕ್ಕಾಗಿ ಎಲ್ಲಿಗೂ ಕಳಿಸಬೇಡಿ'

ಅನಂದಜೀ ಅವರ ಟಿಪ್ಪಣಿ: 'ರಾಹುಲಜೀ ತಮ್ಮ ಕೃತಿಗಳನ್ನು ಇನ್ನೊಂದು ತಟ್ಟೆಯಲ್ಲಿ ಸಣ್ಣದಾಗಲೀ ದೊಡ್ಡದಾಗಲೀ ಥೈಲಿ ಇರಿಸಿದ ತಕ್ಕಡಿಯನ್ನೇರಲು ಎಂದೂ ಬಿಡಲಿಲ್ಲ'

ರಾಹುಲಜೀ ರಷ್ಯಾದಿಂದ ಮರಳಿದ ಎರಡು ವರ್ಷಗಳ ಒಳಗೇನೇ ಹೊಸ ಮನೆವಾರ್ತೆ ಮಾಡಿಕೊಂಡಂದಿನಿಂದ ಅವರಿಗೆ ಆರ್ಥಿಕ ಚಿಂತೆ ಕಾಡತೊಡಗಿತು. ಅಂದಿನಿಂದ ಅವರು ಬಾರಿಬಾರಿಗೂ ಹಣದ ಮುಗ್ಗಟ್ಟಿನ ಚಿಂತೆಯ ಪ್ರಸ್ತಾಪ ಮಾಡುತ್ತಾರೆ. ಮಗಳು ಮತ್ತು ಮಗ ಜನಿಸಿದ ಮೇಲಂತೂ ಅವರು ಇನ್ನಷ್ಟು ಚಿಂತಿತರಾದರು. ಜೀವನದ ಕೊನೆಯಲ್ಲಿ ಸುಮಾರು ಹತ್ತು ವರ್ಷ ಕುಟುಂಬದ ನಾಳಿನ ಆರ್ಥಿಕ ಭದ್ರತೆಯ ಚಿಂತೆಯಲ್ಲಿಯೇ ಕಳೆದರು.

ರಾಹುಲಜೀ ರಾಜನೀತಿಯಲ್ಲಿಯೂ, 1921ರಿಂದ 1944ರ ವರೆಗೆ, ನಡುವೆ ಕೆಲವರ್ಷಗಳನ್ನು ಬಿಟ್ಟು, ಮನಪೂರ್ವಕ ಭಾಗವಹಿಸಿದರು. ಬರೆಹ ಮತ್ತು ಸಂಶೋಧನೆಯನ್ನು ಆಯ್ದುಕೊಳ್ಳುವ ಮುಂಚೆಯೇ ಅವರು ರಾಜನೀತಿಯಲ್ಲಿ ಪ್ರವೇಶಿಸಿ ಆಗಿತ್ತು. ರಾಜಕೀಯ ದುಡಿಮೆಯಲ್ಲಿ, ಕಿಸಾನ್ ಮಜ್ದೂರರಿಗಾಗಿ ಸಂಘರ್ಷ ನಡೆಸುವುದರಲ್ಲಿ ಅವರು ಸುಖ ಕಾಣುತ್ತಿದ್ದರು. 1930ರ ಮಾತು. ತಮ್ಮ ಪ್ರಥಮ ಟಿಬೇಟ್ ಯಾತ್ರೆಯಿಂದ ಶ್ರೀಲಂಕೆಗೆ ಹಿಂದಿರುಗಿ ಭಿಕ್ಷುವಾಗಿದ್ದರು. ಆದರೆ ಭಾರತದಲ್ಲಿ ನಡೆಯುತ್ತಿದ್ದ ಸತ್ಯಾಗ್ರಹ ಆಂದೋಲನದಿಂದ ಹೀಗೆ ದೂರವಿರುವುದು ಅವರಿಗೆ ಅಸಹ್ಯವೆನಿಸ ತೊಡಗಿತ್ತು. ಆನಂದಜೀಯವರ ಕೋಣೆಗೆ ಹೋಗಿ 'ಭಾರತದಲ್ಲಿ ಯಜ್ಞ ನಡೆಯುತ್ತಿದೆ. ಅದಕ್ಕೆ ಸಮಿತ್ತುಗಳ ಕೊರತೆಯಾಗಬಾರದು' ಎಂದರು. ಇಬ್ಬರೂ ಭಾರತಕ್ಕೆ ಹಿಂದಿರುಗುವ ಯೋಜನೆ ಹಾಕಿಕೊಂಡರು.

ಮೂರನೇ ದಶಕದ ಮಧ್ಯದಲ್ಲಿಯೇ ರಾಹುಲರು ಬಿಹಾರದ ಒರ್ವ ಉನ್ನತ ನಾಯಕನಾಗಿ ಮೆರೆದಿದ್ದರು. ಅಖಿಲ ಭಾರತೀಯ ಕಾಂಗ್ರೆಸ್ ಕಮಿಟಿಯ ಸದಸ್ಯನಾಗಿಯೂ ಚುನಾಯಿತರಾಗಿದ್ದರು. ಸಂಶೋಧನಾ ಕಾರ್ಯದಲ್ಲಿ ಮಗ್ನರಾಗಿದ್ದರೂ ರಾಜನೈತಿಕ ಕಾರ್ಯದಲ್ಲಿ ದುಡಿಯುವ ತುಡಿತ

ಅವರಲ್ಲಿ ಇದ್ದೇ ಇತ್ತು. ತನ್ನ ಪ್ರಥಮ ಟಿಬೇಟ್‌ಯಾತ್ರೆಯಿಂದ ಕಲ್ಕತ್ತೆಗೆ ಮರಳಿದಾಗ 'ಬಡಾಬಜಾರಿನಲ್ಲಿ ಸತ್ಯಾಗ್ರಹಿಗಳ ಮೇಲೆ ಲಾಠೀಪ್ರವಾಹವಾಗುವುದನ್ನು ನೋಡಿದೆ. ಮನಸ್ಸು ಆ ಕಡೆ ಎಳೆಯತೊಡಗಿತು. ಆದರೆ ನಾನು ಟಿಬೇಟಿನಿಂದ ಸಂಗ್ರಹಿಸಿ ಇಪ್ಪತ್ತೊಂದು ಹೇಸರಗತ್ತೆಗಳ ಮೇಲೆ ಹೊರಿಸಿಕೊಂಡು ತಂದಿದ್ದ ಗ್ರಂಥರಾಶಿಯನ್ನು ಸಿಂಹಳಕ್ಕೆ ತಲುಪಿಸುವ ತನಕ ಈ ಆಸೆಯನ್ನು ಅದುಮಿಟ್ಟುಕೊಳ್ಳಲೇಬೇಕಿತ್ತು.' ರಾಹುಲರು ಆರು ತಿಂಗಳ ಬಳಿಕ ಭಾರತಕ್ಕೆ ಹಿಂದಿರುಗಿದರು, ಆಂದೋಲನದಲ್ಲಿ ಧುಮುಕಿದರು.

ಡಾ| ಕಾಶೀ ಪ್ರಸಾದ ಜೈಸ್ವಾಲ್ ಕೂಡ 'ರಾಹುಲಜೀ ತನ್ನ ಸಾಮಾಜಿಕ ಮತ್ತು ರಾಜನೈತಿಕ ಚಟುವಟಿಕೆಗಳಿಗೆ ಎಲ್ಲಕ್ಕಿಂತ ಹೆಚ್ಚು ಪ್ರಾಮುಖ್ಯತೆ ಕೊಡುತ್ತಿದ್ದರು. ರಾಹುಲ ಸಾಂಕೃತ್ಯಾಯನ ನಿಜಕ್ಕೂ ಜನತೆಯ ವ್ಯಕ್ತಿ' ಎಂದು ಬರೆದಿದ್ದಾರೆ. ಜೈಸ್ವಾಲರು ಅವರನ್ನು ರಾಜಕೀಯದಿಂದ ಬೇರ್ಪಡಿಸಲು ಬಹಳ ಯತ್ನಿಸಿದ್ದರು. ಆದರೆ ನಾಲ್ಕನೇ ಟಿಬೇಟ್ ಪ್ರವಾಸದ ನಂತರ ರಾಹುಲರು ಪುನಃ ಇನ್ನಷ್ಟು ತೀಕ್ಷ್ಣವಾಗಿ ಅದರಲ್ಲಿ ತೊಡಗಿದರು. ಗಂಗೋಟಕ್‌ನಿಂದ ಕಲ್ಕತ್ತಾ ತಲುಪಿದ ಮೊದಲ ದಿನವೇ 'ನಾನೀಗ ಕ್ರಿಯಾತ್ಮಕ ರಾಜಕೀಯದಲ್ಲಿ ಭಾಗವಹಿಸಲು ತೆರಳುತ್ತಿದ್ದೇನೆ' ಎಂದು ಘೋಷಿಸಿದರು. ಮುಂದೆ 'ನಾನು ಈ ಹಿಂದೆಯೂ ರಾಜಕೀಯದಲ್ಲಿ ನನ್ನ ಹೃದಯದ ವೇದನೆಯನ್ನು ದೂರಮಾಡಿಕೊಳ್ಳಲೆಂದು ಬಂದಿದ್ದೆ. ಬಡತನ ಮತ್ತು ಅಪಮಾನಗಳನ್ನು ದೊಡ್ಡ ಅಭಿಶಾಪವೆಂದು ಭಾವಿಸಿದ್ದೆ' ಎಂದು ಹೇಳಿದ್ದಾರೆ.

ರಾಹುಲರು ಕಮ್ಯೂನಿಸ್ಟ್ ಪಾರ್ಟಿಯ ಸದಸ್ಯರಾದರು. ಕಿಸಾನ್ ಸತ್ಯಾಗ್ರಹವನ್ನು ಆಯೋಜಿಸದರು. ಜೈಲಿಗೆ ಹೋದರು. ಜೈಲಿನಲ್ಲಿ ಹುಲುಸಾಗಿ ಬರವಣಿಗೆ ಮಾಡಿದರು. ರಾಜಕೀಯದೊಡನೆ ಸಂಬಂಧವಿರಿಸಿಕೊಂಡೂ ಸಾಕಷ್ಟು ಸಾಹಿತ್ಯ ರಚನೆ ಮಾಡಿದರು. 1947ರ ಆಗಸ್ಟ್‌ನಲ್ಲಿ ಸ್ವತಂತ್ರ ಭಾರತಕ್ಕೆ ಹಿಂದಿರುಗಿದ ಮೇಲೆ ಕೂಡ ರಾಜನೈತಿಕ ಕಾರ್ಯಕಲಾಪಗಳತ್ತ ಅವರಿಗಿದ್ದ ಆಕರ್ಷಣೆ ದೃಢವಾಗಿತ್ತು. ಆದರೆ ಸಮ್ಮೇಳನದ ಅಧ್ಯಕ್ಷರಾಗಿ ಚುನಾಯಿತರಾದ ಮೇಲೆ ಅವರ ಜೀವನ ಮಾರ್ಗ ಬದಲಾಯಿತು. ಆದರೂ ಅವರು ಸ್ಟಾಲಿನ್, ಲೆನಿನ್ ಕಾರ್ಲ್‌ಮಾರ್ಕ್ಸ್ ಹಾಗೂ ಮಾವೋ, ಅವರ ಜೀವನ ಚರಿತ್ರೆಗಳನ್ನು ಬರೆದರು. 'ಕಮ್ಯೂನಿಸ್ಟ್ ಕ್ಯಾ ಚಾಹತೇ ಹೈಂ?' ನಂತಹ ಅನೇಕ ಕರಪತ್ರಗಳನ್ನು ಬರೆಯುವ ಮುದ್ರಿಸುವ ಯೋಜನೆ ಕೂಡ ಮಾಡಿದ್ದರು.

ರಾಹುಲರು ಮುಂಬಯಿ ಸಮ್ಮೇಳನದ ಅಧ್ಯಕ್ಷ ಪದವಿಯಿಂದ ನೀಡಿದ ಭಾಷಣದಲ್ಲಿ 'ಇಸ್ಲಾಂನ ಭಾರತೀಯಕರಣ'ದ ವಿಚಾರದಲ್ಲಿ ಏನು ಹೇಳಿದ್ದರೋ ಅದನ್ನು ಆಗ ಪಾರ್ಟಿ ಅರ್ಥ ಮಾಡಿಕೊಂಡಿರಲಿಲ್ಲ. ರಾಹುಲರ ಭಾರತೀಯತೆ 'ಹಿಂದೂ ಭಾರತೀಯತೆ' ಆಗಿರಲಿಲ್ಲ. ಅವರು ಸಮಗ್ರ ಭಾರತೀಯ ಸಂಸ್ಕೃತಿಯನ್ನೇ ತಮ್ಮ ಪ್ರೀತಿಯ ಸಂಸ್ಕೃತಿಯನ್ನಾಗಿ ಗೌರವಿಸಿದವರು. ತಮ್ಮನ್ನು ಅದೇ ಭಾರತೀಯ ಸಂಸ್ಕೃತಿಯ ಒಬ್ಬ ಪ್ರತಿನಿಧಿಯನ್ನಾಗಿ, ಉತ್ತರಾಧಿಕಾರಿಯನ್ನಾಗಿ ಪರಿಗಣಿಸಿಕೊಂಡವರು. ಇಷ್ಟಾಗಿಯೂ ನಿರೀಶ್ವರವಾದಿಯಾಗಿದ್ದರು. ಅವರಿಗೆ ಬುದ್ಧನ ಮೇಲೆ ಪರಮ ಗೌರವವಿತ್ತು. ಸಾಮ್ಯವಾದಿಯಾಗಿದ್ದರು. ಧರ್ಮ ಜಾತಿ ಪಾತಿಗಳಿಂದ ಮೈಲುಗಟ್ಟಲೆ ದೂರವಿರುತ್ತಿದ್ದರು. ದೇಶದ ವಿವಿಧ ಪ್ರದೇಶಗಳನ್ನು ಮರಳಿ ಮರಳಿ ಸಂಚರಿಸಿ ಬಂದಿದ್ದರು. ಇತರ ದೇಶಗಳಿಗೂ ಹೋಗಿ ಬಂದಿದ್ದರು ಹಾಗೂ ಅಲ್ಲಿನ ಸಂಸ್ಕೃತಿಯನ್ನು ಹತ್ತಿರದಿಂದ ವೀಕ್ಷಿಸಿದ್ದರು,

ಪರೀಕ್ಷಿಸಿದ್ದರು. ಆದ್ದರಿಂದಲೇ ಭಾರತೀಯತೆಯನ್ನು ಅಥವಾ ಭಾರತೀಯ ಸಂಸ್ಕೃತಿಯನ್ನು ಅದರ ಸಮರ್ಪಕವಾದ ವ್ಯಾಪಕ ಅರ್ಥದಲ್ಲಿ ಸಮರ್ಥವಾಗಿ ಗ್ರಹಿಸಬಲ್ಲವರಾಗಿದ್ದರು.

ಭಾರತೀಯ ಸಂಸ್ಕೃತಿಯನ್ನು ಪ್ರೀತಿಸಿದ ಅವರಿಗೆ ಜನರ ಭಾಷೆಯಲ್ಲಿ ಮಾತಾಡುವುದು ಹಾಗೂ ಬರೆಯುವುದು ಬಹಳ ಇಷ್ಟದ ಸಂಗತಿಯಾಗಿತ್ತು. ಆದರೆ ಅವರ ಸಮಗ್ರ ಲೇಖನಗಳ ಹಾಗೂ ಸಮಸ್ತ ಯಾತ್ರೆಗಳ ಕುರಿತು ಯೋಚಿಸಿದಾಗ ಅವರು ಭಾರತದ ಮಾತ್ರವಲ್ಲ ಏಶಿಯಾದ ಒಬ್ಬ ಸಂಚಾರೀ–ರಾಜ, ಮಹಾ ಪಂಡಿತರ ರೂಪದಲ್ಲಿ ವಿಜೃಂಭಿಸುತ್ತಾರೆ.

ರಾಹುಲರು ನಿಜವಾಗಿಯೂ ಜೀವನಪೂರ್ತಿ ನೆಗೆಯುತ್ತಲೇ ಇದ್ದರು. ನೆಗೆನೆಗೆಯುತ್ತಲೇ ತಮ್ಮ ಹೆಸರು ಬದಲಿಸಿಕೊಂಡರು. ಉಡುಗೆ ಬದಲಿಸಿದರು, ಧಾರ್ಮಿಕ ಮಾನ್ಯತೆಗಳನ್ನು ಬದಲಿಸಿದರು. ಎಲ್ಲಿಯವರೆಗೆಂದರೆ ವಿಚಾರಗಳನ್ನೂ ಬದಲಿಸುತ್ತ ನಡೆದರು. ಅನೇಕರಿಗೆ ಇದರಿಂದ ಆಶ್ಚರ್ಯವಾಗುತ್ತಿದ್ದರೆ ಏನಂತೆ, ರಾಹುಲರಮಟ್ಟಿಗೆ ಇದು ನಿರಂತರ ಗತಿಶೀಲತೆ, ಪರಿವರ್ತನ ಶೀಲತೆ ಮತ್ತು ಒಂದು ಸಹಜ ಸ್ವಾಭಾವಿಕ ಸಂಗತಿಯಾಗಿತ್ತು. 'ನೌಕೆಯಂತೆ ತೀರದಲ್ಲಿ ಇಳಿಸಲಿಕ್ಕಾಗಿ ನಾನು ವಿಚಾರಗಳನ್ನು ಸ್ವೀಕರಿಸಿದೆ ಹೊರತು ತಲೆಯ ಮೇಲೇರಿಸಿಕೊಂಡು ತಿರುಗಲಿಕ್ಕಲ್ಲ' ಎಂಬ ಬುದ್ಧವಚನ ಅವರ ಆದರ್ಶವಾಗಿತ್ತು.

ರಾಹುಲಜೀಯವರು ಬಾರಿಬಾರಿಗೂ ನುಡಿಯುತ್ತಿದ್ದ ಈ ಆದರ್ಶ ವಾಕ್ಯ ನೆನಪಿನಲ್ಲಿರಲಿ. ಅವರ ಬುದ್ಧಿ ವೈಭವವನ್ನು ವಿಶಾಲ ವ್ಯಕ್ತಿತ್ವವನ್ನು ಅರಿತುಕೊಳ್ಳುವಲ್ಲಿ ಯಾವ ವಿಶೇಷ ಕಷ್ಟವೂ ಆಗದಿರಲಿ.

# ಸಂಕ್ಷಿಪ್ತ ಜೀವನ ಪರಿಚಯ

1893: 09 ಏಪ್ರಿಲ್ 1893 (ವೈಶಾಖ ಕೃಷ್ಣ ಅಷ್ಟಮಿ ರವಿವಾರ ವಿಕ್ರಮ ಸಂವತ್ಸರ 1950)ರಂದು ತಾಯಿಯ ತವರು ಗ್ರಾಮ ಪಂದಹಾ (ಆಜಮಗಢ ಜಿಲ್ಲೆ, ಉತ್ತರ ಪ್ರದೇಶ)ದಲ್ಲಿ ಜನನ. ಬಾಲ್ಯದ ಹೆಸರು: ಕೇದಾರನಾಥ. ಅಜ್ಜ (ತಾಯಿಯ ತಂದೆ): ರಾಮಶರಣ ಪಾಠಕ (1844-1913)ತಾಯಿ:ಕುಲವಂತೀ ದೇವೀ.

ತಂದೆ:ಕನ್ಶೆಲಾ (ಆಜಮಗಢ ಜಿಲ್ಲೆ) ಗ್ರಾಮವಾಸಿ ಗೋವರ್ಧನ ಪಾಂಡೆ. (1875-1920), ಸಾಂಕೃತ್ಯ-ಗೋತ್ರೀ ಸರಯೂ ಪಾರೀಣ ಬ್ರಾಹ್ಮಣ. ಅವರ ನಾಲ್ವರು ಪುತ್ರರು ಮತ್ತು ಒಬ್ಬಳು ಪುತ್ರಿಯ ಪೈಕಿ ಎಲ್ಲರಿಗಿಂತ ಹಿರಿಯ.

1899-1905: ರಾನೀ ಕೀ ಸರಾಯ್‌ನಲ್ಲಿ ಪ್ರಾರಂಭಿಕ ಓದು. ವಾರಣಾಸಿಗೆ ಪ್ರಥಮ ಯಾತ್ರೆ (1902). ಹನ್ನೊಂದು ವರ್ಷಕ್ಕೆ ವಿವಾಹ (1904)

1906-09: ನಿಜಾಮಾಬಾದ್‌ನ ಮಿಡಲ್ ಸ್ಕೂಲಿನಲ್ಲಿ. ಆ ಅವಧಿಯಲ್ಲಿಯೇ ಕಲ್ಕತ್ತಕ್ಕೆ 'ಪ್ರಥಮ ಉಡ್ಡಯನ' (1907) 'ದ್ವಿತೀಯ ಉಡ್ಡಯನ' (1909).

1910: ವೈರಾಗ್ಯದ ಭೂತ: ಅಯೋಧ್ಯಾ, ಹರಿದ್ವಾರ, ಗಂಗೋತ್ರಿ - ಜಮನೋತ್ರೀ ಮತ್ತು ಕೇದಾರನಾಥ ಬದರೀನಾಥ ಯಾತ್ರೆ, ಕಾಶಿಗೆ ಬಂದು ಓದು ಅರಂಭ, ಪ್ರಯಾಗದ ಯಾತ್ರೆ.

1911-12: ಕಾಶಿಯಲ್ಲಿ ಓದು

1912-13: ಪರಸಾ ಮಠ (ಬಿಹಾರ)ದಲ್ಲಿ ಸಾಧು ಹಾಗೂ ಮಹಂತರ ಉತ್ತರಾಧಿಕಾರಿ. ಹೊಸ ಹೆಸರು: ರಾಮ ಉದಾಅ ದಾಸ

1913: ಪರಸಾದಿಂದ ಪಲಾಯನ, ದಕ್ಷಿಣ ಭಾರತದೆಡೆಗೆ, ತಿರುಮಿಶೀ ಮಠದ ಉತ್ತರಾಧಿಕಾರ, ರಾಮೇಶ್ವರಂ, ಬೆಂಗಳೂರು, ವಿಜಯನಗರ, ಪುಣೆ-ಮುಂಬಯಿ-ನಾಸಿಕ, ಅಹಮದಾಬಾದ್ ಮುಂತಾದೆಡೆ ಸಂಚಾರ.

1914: ಮರಳಿ ಪರಸಾಕ್ಕೆ. ಅಯೋಧ್ಯೆಯಲ್ಲಿ ಮೂರು ತಿಂಗಳು.

1915: ಆರ್ಯ ಮುಸಾಫಿರ್ ವಿದ್ಯಾಲಯ, ಆಗ್ರಾದಲ್ಲಿ. ಪ್ರಥಮ ಲೇಖನದ ಪ್ರಕಟಣೆ.

1916: ಲಾಹೋರಿನಲ್ಲಿ ಅಧ್ಯಯನ. ಆರ್ಯ ಸಮಾಜದ ಪ್ರಚಾರಕ. ಲಕ್ನೋದಲ್ಲಿ. ಕಾಶಿಯಲ್ಲಿ ತಂದೆಯ ಅಂತಿಮ ದರ್ಶನ. ಪ್ರತಿಜ್ಞೆ: 'ಐವತ್ತು ವರ್ಷ ವಯಸ್ಸಿನ ತನಕ ಆಜಮಗಢ ಜಿಲ್ಲೆಯ ಗಡಿಯೊಳಗೆ ಹೆಜ್ಜೆಯಿಡುವುದಿಲ್ಲ'

1917-20: ಪಂಜಾಬ್‌ನಿಂದ ಬಂಗಾಳದ ತನಕ ಸಂಚಾರ. ಜೊತೆಗೇ ಲಾಹೋರ, ಚಿತ್ರಕೂಟ ಮತ್ತು ಕಾಶಿಯಲ್ಲಿ ಅಧ್ಯಯನ. ಬೌದ್ಧಧರ್ಮದತ್ತ ಒಲವು. ಲುಂಬಿನೀ, ಬೋಧಗಯಾ ಮುಂತಾದಕಡೆ ಯಾತ್ರೆ.

1920-21: ಇನ್ಫ್ಲೂಯೆನ್ಸ್ ತಿರುಮಿಯಲ್ಲಿ. ಕೊಡಗಿನಲ್ಲಿ ನಾಲ್ಕು ತಿಂಗಳು.

1921: ಆಸಹಯೋಗ ಆಂದೋಲನದ ಸಂದರ್ಭದಲ್ಲಿ ರಾಜಕೀಯ ಪ್ರವೇಶ. ಛಪರಾದಲ್ಲಿ ಸತ್ಯಾಗ್ರಹದ ಆಯೋಜನೆ. ನೆರೆಪೀಡಿತರ ಸೇವೆ.

1922: ಬಂಧನ. ಬಕ್ಸರ್ ಜೈಲಿನಲ್ಲಿ ಆರು ತಿಂಗಳು. 'ಬಾಯಿಸವೀಂ ಸದೀ' ಮತ್ತು 'ಕುರಾನ್-ಸಾರ್' ಬರೆಹ (ಸಂಸ್ಕೃತದಲ್ಲಿ) ಬಿಡುಗಡೆಯಾಗಿ ಛಪರಾ ಜಿಲ್ಲಾ ಕಾಂಗ್ರೆಸ್ ಮಂತ್ರಿ, ಗಯಾ ಕಾಂಗ್ರೆಸ್ಸಿನಲ್ಲಿ ಸಕ್ರಿಯ ಪಾತ್ರ.

1923-25: ನೇಪಾಳದಲ್ಲಿ ಒಂದೂವರೆ ತಿಂಗಳು. ಹಿಂದಿರುಗಿದೊಡನೆ ಬಂಧನ. ಹಜಾರೀಬಾಗ್ ಜೈಲಿನಲ್ಲಿ ಸುಮಾರು ಎರಡು ವರ್ಷ. ಧಾರಾಳ ಅಧ್ಯಯನ – ಬರವಣಿಗೆ. ಕಾನ್ಪುರ ಕಾಂಗ್ರೆಸ್ ಪ್ರತಿನಿಧಿ.

1926: ಮೇರಠ್‌ನಲ್ಲಿ ಹರಿನಾಮದಾಸ (ನಂತರರದ ಭಿಕ್ಷು ಆನಂದ ಕೌಸಲ್ಯಾಯನ) ಅವರೊಂದಿಗೆ ಪ್ರಥಮ ಭೇಟಿ. ಕಾಶ್ಮೀರ, ಲಡಾಖ್, ಪಶ್ಚಿಮಿ ಟಿಬೇಟ್,ಮತ್ತು ಕನೌರ್‌ಗೆ. ಛಪರಾದಲ್ಲಿ ರಾಜನೈತಿಕ ಕಾರ್ಯ. ಗೌಹತೀ – ಕಾಂಗ್ರೆಸ್‌ನ ಪ್ರತಿನಿಧಿ.

1922-28: ಶ್ರೀಲಂಕೆಯಲ್ಲಿ ಹತ್ತೊಂಭತ್ತು ತಿಂಗಳು ಅಧ್ಯಾಪನ-ಕಾರ್ಯ ಮತ್ತು ಬೌದ್ಧ ಸಾಹಿತ್ಯದ ಆಳ ಅಧ್ಯಯನ. ಆನಂದಜೀ ಕೂಡ ಶ್ರೀಲಂಕೆಗೆ ಬಂದರು. ಬೌದ್ಧ ಭಿಕ್ಷುವಾದರು.

1929-30: ಮರಳಿ ಭಾರತಕ್ಕೆ. ನೇಪಾಳದಲ್ಲಿ ಅಜ್ಞಾತವಾಸ. ಪ್ರಥಮ ಟಿಬೆಟ್ ಯಾತ್ರೆ. ಲಾಸಾದಲ್ಲಿ ಒಂಭತ್ತು ತಿಂಗಳು. ಮತ್ತೆ ಶ್ರೀಲಂಕಾ. ಬೌದ್ಧ ಭಿಕ್ಷುವಾದರು. ಹೊಸ ಹೆಸರು: ರಾಹುಲ ಸಾಂಕೃತ್ಯಾಯನ. 'ಬುದ್ಧಚರ್ಯಾ' ರಚನೆ.

1930-31: ಸತ್ಯಾಗ್ರಹಕ್ಕಾಗಿ ಭಾರತದಲ್ಲಿ. ಕರಾಚೀ ಕಾಂಗ್ರೆಸ್‌ನಲ್ಲಿ ಭಾಗವಹಿಸಿದ ಬಳಿಕ ದೇಶ ಯಾತ್ರೆ. ಮರಳಿ ಶ್ರೀಲಂಕೆಗೆ.

1932-33: ಆನಂದಜೀ ಜೊತೆ ಯುರೋಪು ಯಾತ್ರೆ. ಮರಳಿ ಭಾರತಕ್ಕೆ. ಎರಡನೇ ಬಾರಿ ಲಢಾಖ್‌ಗೆ.

1934: ಬಿಹಾರದ ಭೂಕಂಪ ಕ್ಷೇತ್ರದಲ್ಲಿ ಸೇವಾಕಾರ್ಯ. ಎರಡನೇ ಬಾರಿ ಟಿಬೇಟಿಗೆ.

1935: ಜಾಪಾನ್, ಕೊರಿಯಾ, ಮಂಚೂರಿಯಾ, ಸೋವಿಯತ್ ಮತ್ತು ಇರಾನ್ ಯಾತ್ರೆ. ಟೈಫಾಯ್ಡ್‌ನಿಂದ ಪಾರಾದರು.

1936: ನೇಪಾಳದಲ್ಲಿ.ಟಿಬೇಟಿಗೆ ಮೂರನೇ ಬಾರಿ. ಸಾಕ್ಯಾದಲ್ಲಿ ಮಹತ್ವ ಪೂರ್ಣ ತಾಳೆಗ್ರಂಥಗಳ ಶೋಧನೆ.

1937: ಪ್ರಯಾಗ ಮತ್ತು ಪಾಟ್ನಾದಲ್ಲಿ. ಡಾ|ಜೈಸ್ವಾಲರ ನಿಧನ. ಎರಡನೇ ಬಾರಿ ಇರಾನ್ ಮತ್ತು ಸೋವಿಯತ್ ರಷ್ಯಾಕ್ಕೆ. ಲೋಲಾಳೊಂದಿಗೆ ನಿಕಟತೆ.

1938: ಅಫಘಾನಿಸ್ತಾನದಲ್ಲಿ. ಭಾರತದಲ್ಲಿ. ಚತುರ್ಥ ಟಿಬೇಟ್ ಯಾತ್ರೆ.

1939: ಕಿಸಾನ್– ಮಜ್ದೂರರಿಗಾಗಿ ಸಂಘರ್ಷ. ಅಮವಾರೀ ಕಿಸಾನ್ ಸತ್ಯಾಗ್ರಹ, ತಲೆಗೆ ಲಾಠಿ ಏಟು, ಛಪರಾ ಮತ್ತು ಹಜಾರೀಬಾಗ್ ಜೈಲುಗಳಲ್ಲಿ, ಲೋಲಾಳಿಗೆ ಮಗ ಜನಿಸಿದ ಸುದ್ದಿ, ಭಿಕ್ಷು ಉಡುಗೆ ತ್ಯಾಗ, ಜೈಲಿನಿಂದ ಬಿಡುಗಡೆ, ಎರಡನೇ ಮಹಾಯುದ್ಧ ಆರಂಭ, ಬಿಹಾರದ ಕಮ್ಯುನಿಸ್ಟ್ ಪಾರ್ಟಿಯ ಸಂಸ್ಥಾಪಕ ಸದಸ್ಯ.

1940-42: ಪ್ರಾಂತೀಯ ಕಿಸಾನ್ ಸಮ್ಮೇಳನದ (ಮೋತೀ ಹಾರೀ) ಅಧ್ಯಕ್ಷ. ಅಖಿಲ

ಭಾರತೀಯ ಕಿಸಾನ್ ಸಮ್ಮೇಳನ ಮತ್ತು ಸಭೆಯ ಅಧ್ಯಕ್ಷನಾಗಿ ಆಯ್ಕೆ, ಬಂಧನ, ಹಜಾರೀಬಾಗ್ ಜೈಲು ಮತ್ತು ದೇವಲೀ ಕ್ಯಾಂಪ್‌ನಲ್ಲಿ ಇಪ್ಪತ್ತೊಂಭತ್ತು ತಿಂಗಳು, 'ವಿಶ್ವ ಕೀ ರೂಪರೇಖಾ', 'ಮಾನವ ಸಮಾಜ', 'ದರ್ಶನ ದಿಗ್ದರ್ಶನ', 'ವೈಜ್ಞಾನಿಕ ಭೌತಿಕವಾದ', 'ವೋಲ್ಗಾ ಸೇ ಗಂಗಾ' ಮುಂತಾದ ಪುಸ್ತಕಗಳ ಬರವಣಿಗೆ.

1943: ಐವತ್ತು ವರ್ಷ ಪ್ರಾಯ ಪೂರ್ಣವಾಗುತ್ತಲೂ ಮೂವತ್ತನಾಲ್ಕು ವರ್ಷಗಳ ಬಳಿಕ ತನ್ನ ಆಜಮುಗಢ ಜಿಲ್ಲೆಗೆ, ನಾಗರ್ಜುನರ ಜೊತೆ. ಉತ್ತರಾಖಂಡದ ಯಾತ್ರೆ. 'ನಯೆ ಭಾರತ್ ನಯೇ ನೇತಾ'ದ ಬರವಣಿಗೆ.

1944: ಸೋವಿಯತ್ ಯಾತ್ರೆಯ ತಯಾರಿ. ಆಂಧ್ರಪ್ರದೇಶ ಮತ್ತು ಕೇರಳ ಪ್ರವಾಸ. 'ಹಿಂದೀ ಕಾವ್ಯಧಾರಾ', 'ಜಯ ಯೌಧೇಯ' ಮುಂತಾದ ಗ್ರಂಥಗಳ ಲೇಖನ, ರಷ್ಯಾಕ್ಕೆ, ಇರಾನ್‌ನಲ್ಲಿ.

1945-47: ಇರಾನ್‌ನಲ್ಲಿ. ರಷ್ಯಾದಲ್ಲಿ ಇಪ್ಪತ್ತೈದು ತಿಂಗಳು. ಲೆನಿನ್‌ಗ್ರಾಡ್ ಯು.ವಿ.ಯಲ್ಲಿ ಪ್ರಾಧ್ಯಾಪಕ, ಲೋಲಾ ಮತ್ತು ಪುತ್ರ ಇಗೋರ್ ಜೊತೆಗೆ ಸಂಸಾರದ ಹೂಡಿಕೆ. 'ಮಧ್ಯ-ಏಶಿಯಾ ಕೇ ಇತಿಹಾಸ್' ಗ್ರಂಥಕ್ಕೆ ಸಾಮಗ್ರಿ ಸಂಗ್ರಹ, ಇಂಗ್ಲೆಂಡ್ ಮಾರ್ಗವಾಗಿ 1947 ಆಗಸ್ಟ್ 17ರಂದು ಮರಳಿ ಸ್ವದೇಶಕ್ಕೆ, ದೇಶ ಸಂಚಾರ, ಮುಂಬಯಿ ಹಿಂದೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ.

1948: ಸಾಹಿತ್ಯ ಯಾತ್ರೆ, ಸಮ್ಮೇಳನದ ಕಾರ್ಯ. ಪಾರಿಭಾಷಿಕ ಶಬ್ದ ನಿರ್ಮಾಣ ಕಾರ್ಯ, ಕಿನ್ನರ ದೇಶಕ್ಕೆ.

1949: 'ಬೌದ್ಧ ಸಂಸ್ಕೃತಿ'ಯ ಬರವಣಿಗೆ. ಕಾಲಿಂಪೊಂಗನಲ್ಲಿ ಪರಿಭಾಷಾ ಕಾರ್ಯ. ಹೈದರಾಬಾದ್ ಸಮ್ಮೇಳನದಲ್ಲಿ.

1950 ಹೊಸ ವೈವಾಹಿಕ ಬದುಕು. ಗೂಡಿನ ಹುಡುಕಾಟ: ಮೊದಲು ನೈನಿತಾಲ್‌ನಲ್ಲಿ, ನಂತರ ಮಸ್ಸೂರಿಯ ಸ್ವಂತ ಮನೆಯಲ್ಲಿ. ಕಮಲಾರೊಂದಿಗೆ ವಿವಾಹ.

1951: ರಾಷ್ಟ್ರಭಾಷಾ ಪ್ರಚಾರ ಸಮಿತಿಯ ಸಾಹಿತ್ಯ ಯೋಜನಾ ಕಾರ್ಯ. ಗಢವಾಲ್ ಪ್ರವಾಸ.

1952: ಮಸ್ಸೂರಿ ಮಜ್ದೂರ್ ಸಂಘದ ಮಂತ್ರಿ. 'ಗಢವಾಲ್', 'ಮಧ್ಯ ಏಶಿಯಾ ಕಾ ಇತಿಹಾಸ್' ಮುಂತಾದ ಬರವಣಿಗೆ.

1953: ನೇಪಾಳ ಯಾತ್ರೆ. 'ಸ್ಟಾಲಿನ್', 'ಲೆನಿನ್', 'ಕಾರ್ಲ್‌ಮಾರ್ಕ್ಸ್', 'ಬಹುರಂಗೀ ಮಧುಪುರೀ' ಮುಂತಾದ ಬರಹಗಳು. ಮಗಳು ಜಯಾಳ ಜನನ.

1954: ಹಿಮಾಚಲ ಪ್ರದೇಶದ ಯಾತ್ರೆ. ಸರಹಪಾದರ ದೋಹಾಕೋಶದ ಸಂಪಾದನೆ ಮತ್ತು ಛಾಯಾನುವಾದ .

1955: ಮಗ ಜೇತಾನ ಜನನ. ಪ್ರಯಾಗ ಮತ್ತು ವರ್ಧಾ ಪ್ರವಾಸ, 'ಸಂಸ್ಕೃತ ಕಾವ್ಯಧಾರಾ', 'ಚಂದ್ರಸಿಂಹ ಗಢವಾಲೀ' ಮುಂತಾದ ಬರವಣಿಗೆ.

1956: ಪ್ರಯಾಗ, ಪಾಟ್ನಾ, ಛಪರಾ, ಕಲ್ಕತ್ತೆಗಳಿಗೆ ಪ್ರವಾಸ, ಮೂವತ್ತು ವರ್ಷಗಳ ನಂತರ ಪರಸಾಕ್ಕೆ, 'ಮೇರೀ ಜೀವನ ಯಾತ್ರಾ' (4,5),'ಋಗ್ವೇದಿಕ ಆರ್ಯ', 'ಅಕ್ಬರ', 'ಜಿನಕಾ ಮೈ ಕೃತಜ್ಞ ಹೂಂ' ಮುಂತಾದ ಬರವಣಿಗೆ. ವರ್ಷಾಂತ್ಯದಲ್ಲಿ

ನೇಪಾಳ ಯಾತ್ರೆ. ಹಿಂದೀ ವಿಶ್ವಕೋಶದ ಸಂಪಾದಕ ಪದದ ಅನಿರ್ಣಯ ಸ್ಥಿತಿಯ ಕಾರಣ ಮಾನಸಿಕ ಕ್ಲೇಶ.

1957: ಆಜಮಗಢ ಪ್ರವಾಸ.

1958: ಮಸ್ಸೂರಿಯ ಸ್ವಂತ ಮನೆ ಮಾರಾಟ. ಅಲ್ಲಿಯೇ ಬಾಡಿಗೆ ಮನೆಯಲ್ಲಿ, ಸಾಹಿತ್ಯ ಎಕಾಡೆಮಿಯ ಪುರಸ್ಕಾರ, ಪಂದಹಾ-ಕನ್ನೈಲಾಕ್ಕೆ, ಕಾಶ್ಮೀರ ಪ್ರವಾಸ, ಚೀನಾ ಪ್ರವಾಸ, ಮರಳಿ ಡೆಹರಾಡೂನಿಗೆ.

1959: ಡೆಹರಾಡೂನಿನಲ್ಲಿ 'ಚೀನಾ ಮೇಂ ಕ್ಯಾ ದೇಖಾ'ದ ಬರವಣಿಗೆ. ಶ್ರೀಲಂಕಾದ ವಿದ್ಯಾಲಂಕಾರ ವಿಶ್ವವಿದ್ಯಾಲಯದಲ್ಲಿ ದರ್ಶನದ ಮಹಾಚಾರ್ಯ. ಪತ್ನಿ ಮತ್ತು ಮಕ್ಕಳು ಡಾರ್ಜಿಲಿಂಗ್‌ನಲ್ಲಿ.

1960: ಶ್ರೀಲಂಕಾದಲ್ಲಿ ಅಧ್ಯಾಪನ. 'ತಿಬತೀ – ಹಿಂದೀ ಕೋಶ' 'ಪಾಲೀ ಕಾವ್ಯಧಾರಾ' ಮುಂತಾದ ಬರವಣಿಗೆ. ಅಸ್ವಸ್ಥ

1961: ಡಾರ್ಜಲಿಂಗ್‌ಗೆ. ಮತ್ತೊಮ್ಮೆ ಶ್ರೀಲಂಕೆಗೆ. ಅಗೊಸ್ತಿನಲ್ಲಿ ಪುನಃ ಡಾರ್ಜಿಲಿಂಗಿಗೆ. ಕಲ್ಕತ್ತೆಯಲ್ಲಿ, ದಶಂಬರದಲ್ಲಿ ಸ್ಮೃತಿ ಲೋಪ.

1962 ಕಲ್ಕತ್ತೆಯ ಆಸ್ಪತ್ರೆಯಲ್ಲಿ ಚಿಕಿತ್ಸೆ. ಮಾಸ್ಕೋದಲ್ಲಿ ಏಳು ತಿಂಗಳು ಚಿಕಿತ್ಸೆ.

1963: 23 ಮಾರ್ಚ್, ಮರಳಿ ಡಾರ್ಜಿಲಿಂಗಿಗೆ. ಏಪ್ರಿಲ್ 14 ನಿಧನ.

# ರಾಹುಲ ವಾಙ್ಮಯ

## ಹಿಂದೀ

| ಪುಸ್ತಕ | | | ಲೇಖನ ಕಾಲ | ಅನುವಾದ |
|---|---|---|---|---|
| 1. | (1) | ಬಾಈಸವೀಂ ಸದೀ | 1923 | ಗುಜರಾತಿ, ಮರಾಠಿ, ಮಲಯಾಳಂ, ಬರ್ಮಿ, ಉರ್ದು |
| 2. | (2) | ಜೀನೇ ಕೇಲಿಯೇ | 1939 | ಬಂಗಾಳಿ |
| 3. | (3) | ಸಿಂಹ ಸೇನಾಪತಿ | 1942 | ಮರಾಠಿ, ಗುಜರಾತಿ, ಬರ್ಮಿ, ತೆಲುಗು, ಬಂಗಾಳಿ, ಉರ್ದು |
| 4. | (4) | ಜಯ ಯೌಧೇಯ | 1944 | ಮರಾಠಿ, ಗುಜರಾತಿ, ಬಂಗಾಳಿ,ತೆಲುಗು |
| 5. | (5) | ಮಧುರ ಸ್ವಪ್ನ | 1949 | ಗುಜರಾತಿ, ಬಂಗಾಳಿ |
| 6. | (6) | ರಾಜಸ್ಥಾನೀ ರಾನೀವಾಸ | 1952 | ತಮಿಳು |
| 7. | (7) | ವಿಸ್ಮೃತ ಯಾತ್ರೀ | 1953 | ಬಂಗಾಳಿ |
| 8. | (8) | ದಿವೋದಾಸ | 1960 | ಬಂಗಾಳಿ |
| 9. | (9) | ಸತ್ಮೀ ಕೆ ಬಚ್ಚೇ (ಕಥೆ) | 1935 | ಬಂಗಾಳಿ |
| 10. | (10) | ವೋಲ್ಗಾ ಸೆ ಗಂಗಾ (ಕಥೆ) | 1942 | ಮರಾಠಿ, ಗುಜರಾತಿ, ಮಲಯಾಳಂ, ತೆಲುಗು, ಒರಿಯಾ, ಕನ್ನಡ, ತಮಿಳು, ಉರ್ದು, ಬರ್ಮಿ, ಆಂಗ್ಲ, ರಷಿಯನ್, ನೇಪಾಳಿ, ಬಂಗಾಳಿ, ಸಿಂಧಿ, ಅಸ್ಸಾಮಿ |
| 11. | (11) | ಕನೈಲಾ ಕೀ ಕಥಾ (ಕಥೆ) | 1955-56 | ಬಂಗಾಳಿ |
| 12. | (12) | ಬಹುರಂಗೀ ಮಧುಪುರೀ (ಕಥೆ) | 1953 | |

| ಪುಸ್ತಕ | | ಲೇಖನ ಕಾಲ | | ಅನುವಾದ |
|---|---|---|---|---|
| | | **ಅನುವಾದ** | | |
| 13. | (1) | ಸೈತಾನ್ ಕಿ ಆಂಖ್ | 1923 | |
| 14. | (2) | ವಿಸ್ಮೃತಿ ಕೆ ಗರ್ಭ ಮೆಂ | 1923 | ಗುಜರಾತಿ, ತೆಲುಗು, ರಷ್ಯನ್, ಬಂಗಾಳಿ |
| 15. | (3) | ಜಾದೂ ಕಾ ಮುಲ್ಕ್ | 1923 | ಗುಜರಾತಿ, ಮಲಯಾಳಂ |
| 16. | (4) | ಸೋನೇ ಕಿ ಡಾಲ್ | | |
| 17. | (5) | ದಾಬುಂದಾ | 1967 | ಮಲಯಾಳಂ |
| 18. | | | | ಮಲಯಾಳಂ |
| | (8) | ಜೋ ದಾಸ್ ಥೇ | 1947 | |
| 19. | (7) | ಅನಾಥ್ | 1948 | |
| 20. | (8) | ಅದೀನಾ | 1951 | |
| 21. | (9) | ಸೂದ್‌ಕೋರ್ ಕಿ ಮೌತ್ | 1951 | |
| 22. | (10) | ಶಾದೀ | 1952 | |
| | | **ನಾಟಕ (ಭೋಜ್‌ಪುರಿ)** | | |
| 23. | (1) | ಜಪನಿಯಾ ರಾಸ್ಥ | 1942 | |
| 24. | (2) | ದೇಶ್ ರಚ್ಛಕ್ | 1942 | |
| 25. | (3) | ಜರ್ಮನ್ವಾ ಕೆ ಹಾರ್ ನಿಹಿಚಯ್ | 1942 | |
| 26. | (4) | ಈ ಹಮಾರ್ ಲಡಾಯೀ | 1942 | |
| 27. | (5) | ಘುನ್‌ಮುನ್ ನೇತಾ | 1942 | |
| 28. | (6) | ನಯಿಕೀ ದುನಿಯಾ | 1942 | |
| 29. | (7) | ಜೋಂಕ್ | 1942 | |
| 30. | (8) | ಮೆಹರಾರೂನ್ ಕಿ ದುರ್ದಸಾ | 1942 | |
| | | **ಆತ್ಮಕಥೆ, ಜೀವನ ಚರಿತ್ರೆ** | | |
| 31. | (1) | ಮೇರೀ ಜೀವನ್‌ಯಾತ್ರಾ ಭಾಗ-1 | 1940 | |
| 32. | (2) | " " ಭಾಗ-2 | 1944 | |
| 33. | (3) | " ಭಾಗ-3 (ರೂಸ್. ಮೆ ಪಚ್ಚೀಸ್ ಮಾಸ್) | 1951 | |
| 34. | (4) | ಮೇರೀ ಜೀವನ್‌ಯಾತ್ರಾ ಭಾಗ-4 | 1956 | |
| 35. | (5) | " " ಭಾಗ-5 | 1956 | |
| 36. | (6) | ನಯೇ ಭಾರತ್ ಕೇ ನಯೇ ನೇತಾ | 1942-43 | |

| ಪುಸ್ತಕ | | ಲೇಖನ ಕಾಲ | | ಅನುವಾದ |
|---|---|---|---|---|
| 37. | (7) | ಬಚ್‌ಪನ್ ಕಿ ಸ್ಮೃತಿಯಾಂ | 1953 | |
| 38. | (8) | ಅತೀತ್ ಸೆ ವರ್ತಮಾನ್ | 1953 | |
| 39. | (9) | ಸ್ತಾಲಿನ್ | 1953 | |
| 40. | (10) | ಲೆನಿನ್ | 1953 | |
| 41. | (11) | ಕಾರ್ಲ್ ಮಾರ್ಕ್ಸ್ | 1953 | |
| 42. | (12) | ಮಾವ್ಹೋ ತ್ಸೆ ತುಂಗ್ | 1953 | |
| 43. | (13) | ಸರದಾರ್ ಪೃಥ್ವೀಸಿಂಹ್ | 1944 | ಮರಾಠಿ, ಗುಜರಾತಿ |
| 44. | (14) | ಘುಮಕ್ಕಡ್ ಸ್ವಾಮಿ | 1956 | |
| 45. | (15) | ಮೇರೆ ಅಸಹಯೋಗ್ ಕೆ ಸಾಥೀ | 1956 | |
| 46. | (16) | ಜನ್ ಕಾ ಮೈ ಕೃತಜ್ಞ ಹೂಂ | 1956 | |
| 47. | (17) | ಚಂದ್ರಸಿಂಹ ಗಢವಾಲಿ | 1955 | |
| 48. | (18) | ಸಿಂಹ ಲ್ ಘುಮಕ್ಕಡ್ ಜಯವರ್ಧನ್ | 1960 | |
| 49. | (19) | ಸಿಂಹಲ್ ಕೆ ವೀರ್ ಪುರುಷ್ | 1960 | |
| 50. | (20) | ಕಪ್ತಾನ್ ಲಾಲ್ | 1960 | |
| | | **ಹಿಮಾಲಯ ದರ್ಶನ, ಯಾತ್ರಾ–ವಿವರಣೆ** | | |
| 51. | (1) | ದೋರ್ಜಲಿಂಗ್ ಪರಿಚಯ್ | 1949-50 | |
| 52. | (2) | ಕುಮಾಂವ್ | 1951 | |
| 53. | (3) | ಕಿನ್ನರ್ ದೇಶ್ ಮೇಂ | 1948 | ಬಂಗಾಳಿ |
| 54. | (4) | ಗಢ್‌ವಾಲ್ | 1950-52 | |
| 55. | (5) | ನೇಪಾಲ್ (ಅಪ್ರಕಟಿತ) | 1952-53 | |
| 56. | (6) | ಔನ್‌ಸಾರ್ – ಡೆಹರಾಡೂನ್ | 1953 | |
| 57. | (7) | ಹಿಮಾಚಲ್ ಪ್ರದೇಶ (ಅಪ್ರಕಟಿತ) | 1954 | |
| 58. | (8) | ಮೇರಿ ಲದಾಖ್ ಯಾತ್ರಾ | 1926 | |
| 59. | (9) | ಲಂಕಾ | 1927-28 | |
| 60. | (10) | ತಿಬ್ಬತ್ ಮೇಂ ಸವಾ ವರ್ಷ್ (ಪ್ರಥಮ ಯಾತ್ರೆ) | 1931 | ಬಂಗಾಳಿ |
| 61. | (11) | ಮೇರೀ ಯುರೋಪ್–ಯಾತ್ರಾ | 1932 | |
| 62. | (12) | ಮೇರೀ ತಿಬ್ಬತ್–ಯಾತ್ರಾ (ಮೂರನೇ ಯಾತ್ರೆ) | 1934 | |
| 63 | (13) | ಜಪಾನ್ | 1935 | |
| 64. | (14) | ಇರಾನ್ | 1935-36 | |

| ಪುಸ್ತಕ | | ಲೇಖನ ಕಾಲ | | ಅನುವಾದ |
|---|---|---|---|---|
| 65. | (15) | ರೂಸ್ ಮೆ ಪಚ್ಚೀಸ್ ಮಾಸ್ (ಮೇರೀ ಜೀವನ್-ಯಾತ್ರಾ : 3) | 1951 | |
| 66. | (16) | ಯಾತ್ರಾ ಕೆ ಪನ್ನೆ | 1951 | |
| 67. | (17) | ಏಶಿಯಾ ಕೆ ದುರ್ಗಮ್ ಭೂಖಂಡೋಂ ಮೇಂ | 1956 | |
| 68. | (18) | ಚೀನ್ ಮೇಂ ಕಮ್ಯೂನ್ | 1959 | |
| 69. | (19) | ಚೀನ್ ಮೇಂ ಕ್ಯಾ ದೇಖಾ? | 1959 | |
| 70. | (20) | ಸೋವಿಯತ್ ಭೂಮಿ | 1938 | |
| 71. | (21) | ಸೋವಿಯತ್ ಮಧ್ಯ-ಏಶಿಯಾ | 1947 | |
| 72. | (22) | ಘುಮಕ್ಕಡ್ ಶಾಸ್ತ್ರ | 1949 | |
| | | **ರಾಜನೀತಿ, ಸಾಮ್ಯವಾದ** | | |
| 73. | (1) | ಸಾಮ್ಯವಾದ್ ಹೀ ಕ್ಯೋಂ? | 1934 | ಮರಾಠಿ, ತಮಿಳು, ಬರ್ಮಿ, ಉರ್ದು |
| 74. | (2) | ದಿಮಾಗೀ ಗುಲಾಮಿ | 1937 | |
| 75. | (3) | ಕ್ಯಾ ಕರೇಂ? | 1937 | |
| 76. | (4) | ತುಮಾರಿ ಕ್ಷಯ್ | 1939 | |
| 77. | (5) | ಆಜ್ ಕೀ ಸಮಸ್ಯಾಯೇಂ | 1944 | |
| 78. | (6) | ಆಜ್ ಕೀ ರಾಜ್ ನೀತಿ | 1949 | |
| 79. | (7) | ಭಾಗೋಂ ನಹೀಂ, ದುನಿಯಾ ಕೋ ಬದ್‌ಲೋ | 1944 | ಗುಜರಾತಿ |
| 80. | (8) | ಕಮ್ಯೂನಿಸ್ಟ್ ಕ್ಯಾ ಚಾಹತೇ ಹೇಂ? | 1954 | |
| 81. | (9) | ರಾಮರಾಜ್ಯ ಔರ್ ಮಾರ್ಕ್ಸ್‌ವಾದ್ | 1957 | |
| | | **ವಿಜ್ಞಾನ ದರ್ಶನ** | | |
| 82. | (1) | ವಿಶ್ವ ಕಿ ರೂಪರೇಖಾ | 1941 | ಮಲಯಾಳಂ |
| 83. | (2) | ಮಾನವ್-ಸಮಾಜ್ | 1941 | ಬಂಗಾಳಿ,ಗುಜರಾತಿ, ಮಲಯಾಳಂ |
| 84. | (3) | ಮಾನ್ ಕೀ ಕಹಾನಿ (ಜಯಾ-ಜೇತಾರಿಗೆ ಪತ್ರ) | 1959-60 | |
| 85. | (4) | ದರ್ಶನ್-ದಿಗ್ದರ್ಶನ್ | 1941-42 | ಬಂಗಾಳಿ, ಮಲಯಾಳಂ, ಬರ್ಮಿ |
| 86. | | ವೈಜ್ಞಾನಿಕ್ ಭೌತಿಕವಾದ್ | 1942 | ಬಂಗಾಳಿ, ಮಲಯಾಳಂ |

| ಪುಸ್ತಕ | | ಲೇಖನ ಕಾ. | | ಅನುವಾದ |
|---|---|---|---|---|
| | | **ಪುರಾತತ್ತ್ವ** | | |
| 87. | (1) | ಪುರಾತತ್ತ್ವ ನಿಬಂಧಾವಲೀ | 1936 | |
| 88. | (2) | ಆಜಮ್‌ಗಢ್ ಕೀ ಪುರಾಕಥಾ (ಅಪ್ರಕಟಿತ) | 1957 | |
| | | **ಬೌದ್ಧ ಧರ್ಮ ಮತ್ತು ಸಂಸ್ಕೃತಿ ಹಾಗೂ ಇಸ್ಲಾಂ ಧರ್ಮ** | | |
| 89. | (1) | ಬುದ್ಧಚರ್ಯಾ | 1930 | |
| 90. | (2) | ಧಮ್ಮ ಪಾದ್ (ಪಾಳಿ-ಸಂಸ್ಕೃತ-ಹಿಂದಿ) | 1933 | |
| 91. | (3) | ಮಜ್ಝಿಮ್ ನಿಕಾಯ್ (ಅನುವಾದ) | 1933 | |
| 92. | (4) | ವಿನಯ ಪಿಟಕ್ (ಅನುವಾದ) | 1934 | |
| 93. | (5) | ಧೀರ್ಘ ನಿಕಾಯಾ (ಅನುವಾದ) | 1935 | |
| 94. | (6) | ಬೌದ್ಧ ಸಂಸ್ಕೃತಿ | 1949 | |
| 95. | (7) | ಬೌದ್ಧ ದರ್ಶನ್ | 1942 | |
| 96. | (8) | ಮಹಾಮಾನವ್ ಬುದ್ಧ | 1956 | |
| 97. | (9) | ತಿಬ್ಬತ್ ಮೇಂ ಬೌದ್ಧ ಧರ್ಮ | 1933 | |
| 98. | (10) | ಇಸ್ಲಾಂ ಧರ್ಮ ಕೀ ರೂಪ್‌ರೇಖಾ | 1923 | |
| | | **ಇತಿಹಾಸ** | | |
| 99. | (1) | ಮಧ್ಯ ಏಶಿಯಾ ಕಾ ಇತಿಹಾಸ್, ಭಾಗ-1 | | ಇಂಗ್ಲಿಷ್ 1951-52 |
| 100. | (2) | " " ಭಾಗ-2 | 1951-52 | |
| 101. | (3) | ಭಾರತ್ ಮೇಂ ಅಂಗ್ರೇಜೀ ರಾಜ್ ಕೆ ಸಂಸ್ಥಾಪಕ್ (ಅನುವಾದ) | 1955 | |
| 102. | (4) | ಋಗ್ವೇದಿಕ್ ಆರ್ಯ | 1956 | |
| 103. | (5) | ಅಕ್ಬರ್ | 1956 | |
| | | **ಸಾಹಿತ್ಯ** | | |
| 104. | (1) | ಸಾಹತ್ಯ ನಿಬಂಧಾವಲೀ ಪ್ರಕಾಶನ: | 1949 | |
| 105. | (2) | ರಾಹುಲ್ ನಿಬಂಧಾವಲೀ (ಸಾಹಿತ್ಯ) ಪ್ರಕಾಶನ: | 1970 | |
| 106. | (3) | ಹಿಂದಿ ಕಾವ್ಯಧಾರಾ (ಅಪಭ್ರಂಶ ಕಾವ್ಯಧಾರಾ) | 1944 | |

| ಪುಸ್ತಕ | | ಲೇಖನ ಕಾಲ | | ಅನುವಾದ |
|---|---|---|---|---|
| 107. | (4) | ಆದಿ ಹಿಂದೀ ಕೀ ಕಹಾನಿಯಾಂ ಔರ್ ಗೀತ್ | 1950 | |
| 108. | (5) | ದಖ್‌ನೀ ಹಿಂದೀ ಕಾವ್ಯಧಾರಾ | 1951 | |
| 109. | (6) | ಸರಹಪಾದ್: ದೋಖಾ-ಕೋಶ್ (ಹಿಂದೀ ಛಾಯಾನುವಾದ ಸಹಿತ) | 1954 | |
| 110 | (7) | ಹಿಂದೀ ಸಾಹಿತ್ಯಕಾ ಬೃಹದ್ ಇತಿಹಾಸ್, ಭಾಗ-16 (ಸಂಪಾದನೆ) | 1957 | |
| 111. | (8) | ಪಾಲಿ ಸಾಹಿತ್ಯ ಕಾ ಇತಿಹಾಸ್ | 1960 | |
| 112. | (9) | ತುಲಸೀ ರಾಮಾಯಣ್ (ಸಂಕ್ಷೇಪ್) | 1957 | |
| | | **ಕೋಶ** | | |
| 113. | (1) | ಶಾಸನ್ ಶಬ್ದಕೋಶ್ | 1948 | |
| 114. | (2) | ರಾಷ್ಟ್ರಭಾಷಾ ಕೋಶ್ ಭಾ | 1951 | |
| 115. | (3) | ತಿಬ್ಬತೀ ಹಿಂದೀ ಕೋಶ್ ಭಾಗ-1 (ಪ್ರಕಟಿತ) | 1960 | |
| | | ಭಾಗ-2 (ಅಪ್ರಕಟಿತ) | 1972 | |
| | | **ತಿಬ್ಬತೀ ಶಿಕ್ಷಣ** | | |
| 116. | (1) | ತಿಬ್ಬತೀ ಬಾಲಶಿಕ್ಷಾ | 1933 | |
| 117. | (2) | ಪಾಠಾವಲೀ, ಭಾಗ-1,2,3 | 1933 | |
| 118. | (3) | ತಿಬ್ಬತೀ ವ್ಯಾಕರಣ | 1933 | |
| | | **ಸಂಸ್ಕೃತ, ಪಾಲಿ, ಪ್ರಾಕೃತ (ಸಂಕಲನ, ಅನುವಾದ, ಸಂಪಾದನೆ)** | | |
| 119. | (1) | ಸಂಸ್ಕೃತ ಪಾಠಮಾಲಾ | 1928 | (ಸಂಸ್ಕೃತ-ಸಿಂಹಳ) |
| | | (ಐದು ಭಾಗ) | 1955 | (ಸಂಸ್ಕೃತ-ಹಿಂದಿ) |
| 120. | (2) | ಸಂಸ್ಕೃತ ಕಾವ್ಯಧಾರಾ | 1955-56 | |
| 121. | (3) | ಪಾಲಿ ಕಾವ್ಯಧಾರಾ | 1960 | |
| 122. | (4) | ಅಭಿದರ್ಮ್ ಕೋಶ (ವಸುಬಂಧು) ಟೀಕಾ (ಶಾಂತರಕ್ಷಿತ) | 1928 | |
| 123. | (5) | ವಾದನ್ಯಾಯ್ (ಧರ್ಮಕೀರ್ತಿ) | | |
| 124. | (6) | ಪ್ರಮಾಣವಾರ್ತಿಕಮ್ (ಧರ್ಮಕೀರ್ತಿ) | 1937 | |

| ಪುಸ್ತಕ | ಲೇಖನ ಕಾಲ | | ಅನುವಾದ |
|---|---|---|---|
| 125. (7) | ಅದ್ಯಧರ್ದ ಶತಕ (ಮಾತೃಚೇಟ) | | |
| 126. (8) | ವಿಗ್ರಹ ವ್ಯಾವರ್ತನೀ (ನಾಗಾರ್ಜುನ) | | |
| 127. (9) | ವಾರ್ತಿಕಾಲಂಕಾರ: (ಪ್ರಜ್ಞಾಕರಗುಪ್ತ) | 1953 | |
| 128. (10) | ಪ್ರಮಾಣವಾರ್ತಿಕ ಭಾಷ್ಯ | | |
| 129. (11) | ಪ್ರಮಾಣವಾರ್ತಿಕ ವೃತ್ತಿ | | |
| 130. (12) | ಪ್ರಮಾಣವಾರ್ತಿಕ ಸ್ವವೃತ್ತಿ ಟೀಕಾ | | |
| 131. (13) | ಹೇತುಬಿಂದು (ಧರ್ಮಕೀರ್ತಿ) | 1949 | |
| 132. (14) | ವಿಜ್ಞಾಪ್ತಿಮಾತ್ರತಾ ಸಿದ್ಧಿ: | | |
| 133. (15) | ವಿನಯ ಸೂತ್ರ (ಗುಣಪ್ರಭ) | | |
| 134. (16) | ಸಂಬಂಧ-ಪರೀಕ್ಷಾ (ಧರ್ಮಕೀರ್ತಿ) | | |
| 135. (17) | ನಿದಾನ-ಪರೀಕ್ಷಾ | | |
| 136. (18) | ಸೂತ್ರ-ಕೃತಾಂಗ | | |
| 137. (19) | ಮಹಾಪರಿಸರ್ವಾಣ ಸೂತ್ರ | | |
| | **ಇಂಗ್ಲಿಷ್** | | |
| 138. | Selected Essays of Rahul Sankrityayan | (ಪ್ರಕಾಶನ: 1984) | |